# ಕನ್ನಡ ವಿಶ್ವವಿದ್ಯಾಲಯ, ಹಂಪಿ.

(ವಿದ್ಯಾರಣ್ಯ - ಹಂಪಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ)







# ಹೊಸಗನ್ನಡ ಕಾವ್ಯ : ವ್ಯಕ್ತಿತ್ವ ಶೋಧದ ನೆಲೆಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ಪ್ರಬಂಧ)


ಸಂಶೋಧಕರು

ಶಿವಲಿಂಗೇಗೌಡ ಡಿ.

ನೋಂದಣಿ ಸಂಖ್ಯೆ : 1031/16.09.2011

ಮಾರ್ಗದರ್ಶಕರು

ಡಾ. ಹೆಚ್.ಟಿ. ಕೃಷ್ಣಮೂರ್ತಿ

ವಿಸ್ತರಣಾ ಕೇಂದ್ರ

ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ

ಹಿರೇಕೂಡಿಗೆ ಅಂಚೆ, ತೀರ್ಥಹಳ್ಳಿ ತಾ. ಶಿವಮೊಗ್ಗ ಜಿಲ್ಲೆ.

ಕನ್ನಡ ವಿಶ್ವವಿದ್ಯಾಲಯ, ಹಂಪಿ.

(ವಿದ್ಯಾರಣ್ಯ – ಹಂಪಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ)



# ಹೊಸಗನ್ನಡ ಕಾವ್ಯ : ವ್ಯಕ್ತಿತ್ವ ಶೋಧದ ನೆಲೆಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ಪ್ರಬಂಧ)

ಸಂಶೋಧಕರು

ಶಿವಲಿಂಗೇಗೌಡ ಡಿ.

ನೋಂದಣಿ ಸಂಖ್ಯೆ : 1031/16.09.2011

ಮಾರ್ಗದರ್ಶಕರು

ಡಾ. ಹೆಚ್.ಟಿ. ಕೃಷ್ಣಮೂರ್ತಿ

ವಿಸ್ತರಣಾ ಕೇಂದ್ರ

ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ

ಹಿರೇಕೂಡಿಗೆ ಅಂಚೆ, ತೀರ್ಥಹಳ್ಳಿ ತಾ. ಶಿವಮೊಗ್ಗ ಜಿಲ್ಲೆ.

## ಘೋಷಣಾ ಪತ್ರ

ಡಾ. ಹೆಚ್.ಟಿ.ಕೃಷ್ಣಮೂರ್ತಿ ಅವರ ಮಾರ್ಗದರ್ಶನದಲ್ಲಿ **ಹೊಸಗನ್ನಡ ಕಾವ್ಯ : ವ್ಯಕ್ತಿತ್ವ ಶೋಧದ ನೆಲೆಗಳು** ಎಂಬ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಿ, ಪಿಎಚ್.ಡಿ ಪದವಿಗಾಗಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇಲ್ಲಿಗೆ ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ, ವಿಸ್ತರಣಾ ಕೇಂದ್ರದ ಮೂಲಕ ಸಲ್ಲಿಸುತ್ತಿದ್ದೇನೆ. ಈ ಸಂಶೋಧನಾ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗವನ್ನು ಎಲ್ಲಿಯೂ ಪ್ರಕಟಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

**ಶಿವಲಿಂಗೇಗೌಡ ಡಿ.**
ಸಂಶೋಧಕರು

ಸ್ಥಳ : ವಿದ್ಯಾರಣ್ಯ
ದಿನಾಂಕ : 07.09.2017

# ಮಾರ್ಗದರ್ಶಕರ ಪ್ರಮಾಣ ಪತ್ರ

ಶಿವಲಿಂಗೇಗೌಡ ಡಿ. ಇವರು ನನ್ನ ಮಾರ್ಗದರ್ಶನದಲ್ಲಿ **ಹೊಸಗನ್ನಡ ಕಾವ್ಯ : ವ್ಯಕ್ತಿತ್ವ ಶೋಧದ ನೆಲೆಗಳು** ಎಂಬ ಸಂಶೋಧನಾ ಪ್ರಬಂಧವನ್ನು ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇಲ್ಲಿಗೆ ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ, ವಿಸ್ತರಣಾ ಕೇಂದ್ರದ ಮೂಲಕ ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ, ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಎಚ್.ಟಿ. ಕೃಷ್ಣಮೂರ್ತಿ
ಮಾರ್ಗದರ್ಶಕರು,

ಡಾ. ಎಚ್.ಟಿ. ಕ್ರಿಷ್ಣಮೂರ್ತಿ
ಮಾರ್ಗದರ್ಶಕರು
ಕನ್ನಡ ವಿ.ವಿ. ಕುಪ್ಪಳಿ ಕೇಂದ್ರ

ಸ್ಥಳ : ವಿದ್ಯಾರಣ್ಯ
ದಿನಾಂಕ : 07.09.2017

# ಹೊಸಗನ್ನಡ ಕಾವ್ಯ : ವ್ಯಕ್ತಿತ್ವ ಶೋಧದ ನೆಲೆಗಳು

ಪರಿವಿಡಿ

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

### ೧.೧ ಪ್ರವೇಶ

ಆಧುನಿಕ ಕನ್ನಡ ಕಾವ್ಯವೆಂಬುದು ಹಲವು ವಸ್ತು, ಕಾಳಜಿಗಳನ್ನು ಸಮರ್ಥವಾಗಿ ನಿಭಾಯಿಸಿದ ಒಂದು ಸೃಜನಶೀಲ ಪ್ರಕ್ರಿಯೆಯಾಗಿದೆ. ಇದು ಒಂದು ಧಾರೆಯಲ್ಲ. ವಿಭಿನ್ನ ವಸ್ತು, ಸಮಸ್ಯೆ, ಕಾಳಜಿ, ಗ್ರಹಿಕೆ, ತಿಳುವಳಿಕೆ, ಸಂಘರ್ಷಗಳನ್ನು ಎದುರಿಸಿದ ಸೃಜನಶೀಲ ಸಂಕೀರ್ಣ ಆಯಾಮವಾಗಿದೆ. ಇದು ಹಲವು ಪ್ರಭಾವ, ಪ್ರೇರಣೆಗಳೊಂದಿಗೆ ತನ್ನ ಅಸ್ಮಿತೆಯನ್ನು ಬಿಡದೆ, ಹೊಸ ಸವಾಲುಗಳನ್ನು ಎದುರು ಹಾಕಿಕೊಂಡು ವಿಭಿನ್ನವಾಗಿ ಬೆಳೆದುಬಂದಿದೆ. ಹಾಗೂ ಹಲವು ಪ್ರಯೋಗಗಳನ್ನು, ಶೋಧಗಳನ್ನು ನಿರಂತರವಾಗಿ ನಡೆಸಿಕೊಂಡು ಬಂದಿದೆ. ಇದು ನಿರ್ವಹಿಸಿದ ಅಸಂಖ್ಯಾತ ವಸ್ತುಗಳಲ್ಲಿ 'ವ್ಯಕ್ತಿತ್ವ' ಕುರಿತ ಶೋಧವೂ ಪ್ರಮುಖವಾದುದಾಗಿದೆ. ವ್ಯಕ್ತಿಗಳನ್ನು ವಸ್ತುವಾಗುಳ್ಳ ಕವಿತೆಗಳು ಹೊಸಗನ್ನಡ ಕಾವ್ಯದಲ್ಲಿ ಹೇರಳವಾಗಿವೆ. ಪರಂಪರೆಯ ಹಾಗೂ ಸಮಕಾಲೀನ ವ್ಯಕ್ತಿಗಳ ವ್ಯಕ್ತಿತ್ವವನ್ನು ಶೋಧಿಸಿಕೊಳ್ಳುವ ಮೂಲಕ ವರ್ತಮಾನದ ಸಾಂಸ್ಕೃತಿಕ ಬದುಕಿಗೆ ಬೇಕಾದ ಮಾದರಿ ವ್ಯಕ್ತಿತ್ವಗಳನ್ನು ರೂಪಿಸಿಕೊಡುವ, ವರ್ತಮಾನದ ಹಲವು ಸಾಂಸ್ಕೃತಿಕ ಸಮಸ್ಯೆ-ಸವಾಲುಗಳನ್ನು ಅಭಿವ್ಯಕ್ತಿಸುವ, ಪರಿಹಾರಗಳನ್ನು ಹುಡುಕುವ ಹಾಗೂ ಪ್ರತಿರೋಧವನ್ನು ಒಡ್ಡುವ ಸೃಜನಶೀಲ ಪ್ರಯತ್ನಗಳಾಗಿ ಇವು ಕಂಡುಬರುತ್ತವೆ. ವ್ಯಕ್ತಿಗಳನ್ನು ಕುರಿತ ಕವಿತೆಗಳನ್ನು ವ್ಯಕ್ತಿಚಿತ್ರ ಕವಿತೆಗಳೆಂದು ಗುರುತಿಸಲಾಗಿದೆ. ವಸ್ತು, ಧೋರಣೆಯ ದೃಷ್ಟಿಯಿಂದ ಕಾವ್ಯ ಪ್ರಕಾರದಲ್ಲೇ ಭಿನ್ನ ಪ್ರಕಾರವಾಗಿ ಗುರುತಿಸಿಕೊಳ್ಳಬಲ್ಲ ಈ ಬಗೆಯ ಕವಿತೆಗಳು ವಿಶಿಷ್ಟ ಕಾಳಜಿಗಳನ್ನು ಪ್ರಕಟಿಸುತ್ತಾ ಬಂದಿವೆ. ಮೇಲುನೋಟಕ್ಕೆ ವ್ಯಕ್ತಿಗಳ ವ್ಯಕ್ತಿತ್ವದ ಚಿತ್ರಣದಂತೆ ಕಂಡುಬರುವ ಕವಿತೆಗಳು ತಮ್ಮ ಆಂತರ್ಯದಲ್ಲಿ ಹಲವು ಶೋಧಗಳನ್ನು ನಡೆಸಿವೆ. ಇವು ವ್ಯಕ್ತಿತ್ವ ಮತ್ತು ವ್ಯವಸ್ಥೆಯ ಬಗೆಗೆ ಹಲವು ಪ್ರಶ್ನೆ, ಅನುಮಾನ, ಸಂಘರ್ಷ, ವಿರೋಧ, ಮೆಚ್ಚುಗೆ ಮುಂತಾದ ಭಾವಗಳನ್ನು ಹೊರಹಾಕಿರುವುದು ಕಂಡುಬರುತ್ತದೆ. ಏಕಕಾಲದಲ್ಲಿ ವ್ಯಕ್ತಿತ್ವವನ್ನೂ, ಎದುರಿಗಿರುವ ಸಾಂಸ್ಕೃತಿಕ ಬದುಕನ್ನೂ ಒಟ್ಟಿಗೇ ಶೋಧನೆಗೆ ಒಳಪಡಿಸುವ ಈ ಕವಿತೆಗಳು ಸಾಂಸ್ಕೃತಿಕವಾಗಿ ಮಹತ್ವಹೊಂದಿವೆ. ಪರಂಪರೆಯ ಉನ್ನತ ವ್ಯಕ್ತಿತ್ವಗಳೊಂದಿಗೆ ಸಮಕಾಲೀನ ರಾಜಕೀಯ ಚರಿತ್ರೆಯನ್ನು ಸಂಲಗ್ನಗೊಳಿಸಿ ಹೆಣೆಯುವ ವ್ಯಕ್ತಿತ್ವ ಶೋಧನೆ ಕಾವ್ಯದ ಸವಾಲಾಗಿಯೂ ಅಧ್ಯಯನದ ಪ್ರಮುಖ ವಿಷಯವಾಗಿದೆ. ಹಾಗಾಗಿ ವ್ಯಕ್ತಿಚಿತ್ರ ಕವಿತೆಗಳ ಅಧ್ಯಯನವೆಂಬುದು ಸಾಂಸ್ಕೃತಿಕ ಚರಿತ್ರೆಯ ಅಧ್ಯಯನದಷ್ಟೇ ಮಹತ್ವದ ಅಧ್ಯಯನವಾಗಬಲ್ಲದು.

ಆಧುನಿಕ ಕನ್ನಡ ಕಾವ್ಯದಲ್ಲಿ ವ್ಯಕ್ತಿಚಿತ್ರ ಕವಿತೆಗಳಿಗೆ ತಮ್ಮದೇ ಆದ ಸಾಂಸ್ಕೃತಿಕ ಮಹತ್ವವಿದೆ. ವ್ಯಕ್ತಿಗಳನ್ನು ಕುರಿತು ಏಕೆ ಕವಿತೆ ರಚಿಸುತ್ತಾರೆ ಎಂಬುದರಿಂದ ಹಿಡಿದು, ಯಾವ ವ್ಯಕ್ತಿಗಳನ್ನು ಕುರಿತು ಬರೆದಿದ್ದಾರೆ, ಅವರ ಯಾವ ವಿಚಾರ- ಸಂಗತಿಗಳಿಗೆ ಆದ್ಯತೆ ನೀಡಲಾಗಿದೆ, ಯಾವ ಮೌಲ್ಯ ಹಾಗೂ

ಸಮೂದಾಯಗಳ ಪ್ರತಿನಿಧಿಗಳನ್ನಾಗಿ ಬಳಸಿಕೊಳ್ಳಲಾಗಿದೆ? ವ್ಯಕ್ತಿತ್ವಗಳನ್ನು ಗ್ರಹಿಸಿರುವ, ಅಭಿವ್ಯಕ್ತಿಸಿರುವ ವಿಧಾನ ಯಾವುದು? ಅವುಗಳ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಮಹತ್ವವೇನು? ಎಂಬೆಲ್ಲಾ ಪ್ರಶ್ನೆಗಳಿಗೆ ಉತ್ತರಿಸಿಕೊಳ್ಳುವುದು ಮಹತ್ವದ ಸಂಗತಿಗಳಾಗಿರುತ್ತವೆ.

ವ್ಯಕ್ತಿಚಿತ್ರ ಕವಿತೆಗಳ ರಚನೆಯ ಸಂದರ್ಭದಲ್ಲಿ ಸಮರ್ಥ ವ್ಯಕ್ತಿಚಿತ್ರಣ ಸುಲಭದ ಕೆಲಸವಲ್ಲ. ಇದಕ್ಕೆ ಕೈ ಹಾಕುವ ಕವಿಗಳು ಸಾಮಾಜಿಕ ಕಳಕಳಿಯುಳ್ಳವರೂ, ಮಾನವೀಯ ಮಿಡಿತವುಳ್ಳವರೂ, ಸೂಕ್ಷ್ಮ ವಿಮರ್ಶನ ಪ್ರಜ್ಞೆಯುಳ್ಳವರೂ, ಪ್ರಾಮಾಣಿಕರೂ, ಔಚಿತ್ಯ ಪ್ರಜ್ಞೆಯುಳ್ಳವರೂ, ವ್ಯಕ್ತಿಯ ಬಗ್ಗೆ ಹಾಗೂ ತನ್ನ ಕಾಲದ ಸಾಂಸ್ಕೃತಿಕ ವಾತಾವರಣದ ಬಗ್ಗೆ ಆಳವಾದ ಅರಿವನ್ನು, ಸತ್ಯವನ್ನು ಹೇಳುವ ದಿಟ್ಟತನವನ್ನೂ ಒಳಗೊಂಡ ಸಾಂಸ್ಕೃತಿಕ ಚರಿತ್ರಾಕಾರರೂ ಆಗಿರಬೇಕಾಗುತ್ತದೆ. ಆಗ ಮಾತ್ರ ಶ್ರೇಷ್ಠವೆನ್ನಬಹುದಾದ ಕವಿತೆಗಳನ್ನು ನಿರೀಕ್ಷಿಸಲು ಸಾಧ್ಯ. ವ್ಯಕ್ತಿಚಿತ್ರ ಕವಿತೆಗಳ ರಚನೆಯಲ್ಲಿ ಹಾಸ್ಯ, ವಿಡಂಬನೆ, ಕೌತುಕ, ವಿಷಾದ, ವಿಸ್ಮಯ, ವಿಮರ್ಶೆ, ಪ್ರಶ್ನಿಸುವಿಕೆ, ಹೊಸ ಅರ್ಥಸಾಧ್ಯತೆಯ ರೂಪಕ ಸೃಷ್ಟಿ, ಭಾಷಿಕ ಪ್ರತಿಮೆಗಳನ್ನು ಕಟ್ಟಿಕೊಡುವ ಪ್ರಜ್ಞೆ ಇವೆಲ್ಲವೂ ಪ್ರಕಟಗೊಂಡಾಗ ಅಂತಹ ಕವಿತೆಗಳು ಸಾಹಿತ್ಯದ ಭಿನ್ನ ರಚನೆಗಳಾಗಿ ಮಹತ್ವ ಪಡೆಯುತ್ತವೆ. ವಸ್ತುವಿನ ದೃಷ್ಟಿಯಿಂದ ಒಂದು ಸಾಹಿತ್ಯ ಪ್ರಕಾರವಾಗಿ ಗಟ್ಟಿಯಾಗಿ ನಿಲ್ಲಬಹುದಾಗಿದ್ದ ಇಂತಹ ಬಹುತೇಕ ರಚನೆಗಳು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಕೇವಲ ಸಂದರ್ಭ ಪ್ರಚೋದಿತ ರಚನೆಗಳಾಗಿ ನಿಂತುಬಿಟ್ಟಿರುವುದು ಈ ಬಗೆಯ ಕವಿತೆಗಳ ಮಿತಿಯನ್ನು ತಿಳಿಸುತ್ತದೆ. ವ್ಯಕ್ತಿ ಎಂದಾಗಲೇ ಕಾವ್ಯದ ಅಭಿವ್ಯಕ್ತಿಗೆ ಒಂದು ಮಿತಿ ಬಂದುಬಿಡುತ್ತದೆ. ಅದನ್ನು ಭಾಷಿಕ ರಚನೆಯಲ್ಲಿ ವಿಕಾಸಶೀಲಗೊಳಿಸುವುದು ಸವಾಲೇ ಸರಿ. ಇದನ್ನು ಕವಿತೆಗಳು ಹೇಗೆ ನಿಭಾಯಿಸಿವೆ ಎಂಬುದನ್ನು ಕಂಡುಕೊಳ್ಳುವ ಅಗತ್ಯವಿದೆ. ಬಹುತೇಕ ಕವಿತೆಗಳು ವ್ಯಕ್ತಿಯ ನೆಲೆಯನ್ನು ಮೀರಿ ಒಂದು ಸಾಂಸ್ಕೃತಿಕ ಪ್ರಜ್ಞೆಯ ಅಭಿವ್ಯಕ್ತಿಗಳ ಮಾದರಿಗಳಾಗಿಯೂ, ಸಾಮಾಜಿಕ ಬದಲಾವಣೆಯ ತುಡಿತಗಳಾಗಿಯೂ, ಸಾಂಸ್ಕೃತಿಕ ಪ್ರತಿರೋಧದ ಅಭಿವ್ಯಕ್ತಿಗಳಾಗಿಯೂ ಮಹತ್ವ ಪಡೆದಿವೆ. ಇವುಗಳ ಅಧ್ಯಯನದಿಂದ ವ್ಯಕ್ತಿಗಳ ವ್ಯಕ್ತಿತ್ವದ ಬಹುಮುಖತೆಯನ್ನೂ, ಬದಲಾದ ಸಾಂಸ್ಕೃತಿಕ ಪರಿಸರದಲ್ಲಿ ಅವರನ್ನು ಗ್ರಹಿಸಬೇಕಾದ ದೃಷ್ಟಿಕೋನಗಳನ್ನೂ, ಅವರ ಬದುಕಿನ ವಿಶಿಷ್ಟತೆಯನ್ನೂ, ಬದುಕಿನ ಸಂದರ್ಭಗಳಿಗೆ ಮುಖಾಮುಖಿಯಾದ ಬಗೆಯನ್ನೂ ಅರಿಯಲು ಸಾಧ್ಯವಾಗುತ್ತದೆ. ಆ ಮೂಲಕ ಸಮಕಾಲೀನ ಸಮಾಜದ ವ್ಯಕ್ತಿತ್ವಗಳನ್ನು ರೂಪಿಸುವ ವಿಶಿಷ್ಟ ಕಾಳಜಿಗಳನ್ನು, ಅವರ ಸಾಮಾಜಿಕ ಕಳಕಳಿಯ ಹಿಂದಿನ ಒತ್ತಡಗಳನ್ನು, ಬದುಕನ್ನು ಶೋಧಕ್ಕೊಡ್ಡಿಕೊಂಡು ಕಂಡುಕೊಂಡ ಪರಿಹಾರ ಮಾರ್ಗಗಳನ್ನು, ಅವುಗಳ ಪ್ರಸ್ತುತತೆ ಮತ್ತು ಮಿತಿಗಳನ್ನು ವ್ಯಕ್ತಿಚಿತ್ರ ಕವಿತೆಗಳಿಂದ ಅರಿಯಲು ಸಾಧ್ಯ. ಹಾಗಾಗಿ ಈ ಕ್ಷೇತ್ರದಲ್ಲಿನ ಸಂಶೋಧನೆ ಹಲವು ಸಾಹಿತ್ಯ ಮತ್ತು ಸಾಂಸ್ಕೃತಿಕ ಮಹತ್ವದ ವಿಚಾರಗಳನ್ನು ಹೊರಗೆಳೆಯಬಲ್ಲದು.

ಆಧುನಿಕ ಕನ್ನಡ ಕಾವ್ಯವನ್ನು ಗಮನಿಸಿದಾಗ ಕಂಡುಬರುವ ವಿಶೇಷ ಅಂಶವೆಂದರೆ ವ್ಯಕ್ತಿಗಳನ್ನು ಕುರಿತ ಅಭಿವ್ಯಕ್ತಿ. ವ್ಯಕ್ತಿಗಳನ್ನು ಕುರಿತು ಬರೆಯದ ಕವಿಗಳೇ ಇಲ್ಲ ಎಂಬಷ್ಟರ ಮಟ್ಟಿಗೆ ವ್ಯಕ್ತಿಗಳನ್ನು ಕುರಿತ ಅಭಿವ್ಯಕ್ತಿಗಳಿವೆ. ಒಂದು ರೀತಿಯಲ್ಲಿ ಕಾವ್ಯ ಸಾಮರ್ಥ್ಯವನ್ನು ಪರೀಕ್ಷಿಸಲೆಂಬಂತೆ ವ್ಯಕ್ತಿಗಳನ್ನು ಕುರಿತು ಕವಿತೆಗಳನ್ನು ರಚಿಸಲಾಗಿದೆ. ವ್ಯಕ್ತಿ ವೈವಿಧ್ಯತೆ ಹಾಗೂ ಭಿನ್ನ ಶೋಧ ಕ್ರಮಗಳಿಂದ ಕೂಡಿದ ಈ ಅಭಿವ್ಯಕ್ತಿಗಳ ಆಶಯಗಳೂ ಭಿನ್ನವಾಗಿವೆ. ಹಾಗಾಗಿ ಆಧುನಿಕ ಕನ್ನಡ ಕಾವ್ಯ ನಿರ್ವಹಿಸಿರುವ ಎಲ್ಲ ವ್ಯಕ್ತಿಗಳನ್ನು ಕುರಿತ ಅಭಿವ್ಯಕ್ತಿಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಕಷ್ಟಸಾಧ್ಯ. ಹಾಗಾಗಿ ಕನ್ನಡ ಕಾವ್ಯ ಅತಿ ಹೆಚ್ಚಾಗಿ ಅನುಸಂಧಾನ

ನಡೆಸಿರುವ ನಮ್ಮ ಪರಂಪರೆಯ ಉನ್ನತ ವ್ಯಕ್ತಿತ್ವಗಳಾದ ಬುದ್ಧ, ಬಸವ, ಗಾಂಧಿ, ಅಂಬೇಡ್ಕರರನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳನ್ನು ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ಆಕರಗಳನ್ನಾಗಿ ನಿಗದಿಪಡಿಸಿಕೊಳ್ಳಲಾಗಿದೆ. ಈ ವ್ಯಕ್ತಿತ್ವಗಳನ್ನು ಆಧುನಿಕ ಕನ್ನಡ ಕಾವ್ಯ ಶೋಧನೆಗೆ ಒಳಪಡಿಸಿರುವ ವಿಧಾನಗಳನ್ನು, ಆ ವಿಧಾನಗಳನ್ನು ಪ್ರಭಾವಿಸಿರುವ ಸಾಮಾಜಿಕ ಮತ್ತು ರಾಜಕೀಯ ಶಕ್ತಿಗಳನ್ನು, ಅವುಗಳ ಕಾಳಜಿಗಳನ್ನು ಅರಿಯುವುದು ಪ್ರಸ್ತುತ ಅಧ್ಯಯನದ ಬಹುಮುಖ್ಯ ಉದ್ದೇಶವಾಗಿದೆ. ಈ ನಾಲ್ಕೂ ವ್ಯಕ್ತಿತ್ವಗಳನ್ನು ಪ್ರಾತಿನಿಧಿಕವಾಗಿ ಅಧ್ಯಯನಕ್ಕೆ ಒಳಪಡಿಸುವ ಮೂಲಕ ವ್ಯಕ್ತಿಚಿತ್ರ ಕವಿತೆಗಳ ಆಶಯ, ಕಾಳಜಿ, ಅಭಿವ್ಯಕ್ತಿ ಮುಂತಾದವುಗಳನ್ನು ಗುರುತಿಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

## ಅಧ್ಯಯನದ ಉದ್ದೇಶಗಳು :

ಪ್ರಸ್ತುತ ಸಂಶೋಧನಾ ಪ್ರಬಂಧದ ಮೂಲ ಉದ್ದೇಶ ಆಧುನಿಕ ಕನ್ನಡ ಕಾವ್ಯದಲ್ಲಿನ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಅವರನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳು ಆ 'ವ್ಯಕ್ತಿತ್ವ'ಗಳನ್ನು ಶೋಧಿಸಿರುವ ವಿಭಿನ್ನ ನೆಲೆಗಳನ್ನು ಅವುಗಳನ್ನು ಪ್ರಭಾವಿಸಿರುವ ಸಾಂಸ್ಕೃತಿಕ ಅಂಶಗಳನ್ನು ಗುರುತಿಸುವುದೇ ಆಗಿದೆ. ಆಧುನಿಕ ಕನ್ನಡ ಕಾವ್ಯದ ಎಲ್ಲಾ ಕಾಲಮಾನಗಳಲ್ಲಿಯೂ ವ್ಯಕ್ತಿಗಳನ್ನು ಕುರಿತ ಕವಿತೆಗಳು ಹೇರಳವಾಗಿಯೇ ರಚನೆಯಾಗಿವೆ. ಇವು ವ್ಯಕ್ತಿ ವೈವಿಧ್ಯತೆಯಿಂದ ಕೂಡಿರುವಂತೆಯೇ ವಿಭಿನ್ನ ಶೋಧನಾ ವಿಧಾನಗಳನ್ನು ಅನುಸರಿಸಿವೆ. ಹಾಗೆಯೆ ಇವು ಕೇವಲ ವ್ಯಕ್ತಿಗಳ ಗುಣ-ಸಾಧನೆಗಳ ಬಣ್ಣನೆಯ ಚಿತ್ರಣಗಳು ಮಾತ್ರವಾಗಿರದೆ ಸಮಕಾಲೀನ ಸಾಂಸ್ಕೃತಿಕ ಸಂದರ್ಭಗಳಿಗೆ ನೀಡಿದ ಪ್ರತಿಕ್ರಿಯೆ, ಪ್ರತಿರೋಧಗಳಾಗಿಯೂ ಇವೆ. ವ್ಯಕ್ತಿಗಳನ್ನು ಕುರಿತು ಕವಿತೆ ರಚಿಸುವ ತುರ್ತು, ಆ ನೆಪದಲ್ಲಿ ಸಮಕಾಲೀನ ಬದುಕನ್ನು ರೂಪಿಸಿಕೊಳ್ಳುವ ಕಾಳಜಿಗಳನ್ನು ವ್ಯಕ್ತಪಡಿಸುತ್ತಿರುವುದು, ಮೌಲ್ಯಯುತ ಬದುಕಿಗಾಗಿ ಹುಡುಕಾಟ ನಡೆಸುತ್ತಿರುವುದು ಇವೆಲ್ಲವೂ ಕವಿತೆಗಳನ್ನು ಆಳವಾಗಿ ಹಾಗೂ ಹಲವು ನೆಲೆಗಳಿಂದ ಗ್ರಹಿಸಬೇಕಾದುದನ್ನು ಒತ್ತಾಯಿಸುತ್ತವೆ. ಹಾಗಾಗಿ ನಮ್ಮ ಪರಂಪರೆಯ ಉನ್ನತ ವ್ಯಕ್ತಿತ್ವಗಳಾದ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಅವರುಗಳನ್ನು ಕನ್ನಡದ ಕವಿತೆಗಳು ಗ್ರಹಿಸಿರುವ ನೆಲೆಗಳನ್ನು ಕಂಡುಕೊಳ್ಳುವ ದೃಷ್ಟಿಯಿಂದ ನಡೆಸಲಾಗುತ್ತಿರುವ ಅಧ್ಯಯನಕ್ಕೆ ಮುಂದಿನ ಹಲವು ಉದ್ದೇಶಗಳನ್ನು ಇರಿಸಿಕೊಳ್ಳಲಾಗಿದೆ.

೧. ನಮ್ಮ ಪರಂಪರೆಯ ಪ್ರಭಾವಶಾಲಿ ವ್ಯಕ್ತಿತ್ವಗಳಾದ ಬುದ್ಧ, ಬಸವಣ್ಣ, ಗಾಂಧಿ, ಅಂಬೇಡ್ಕರರನ್ನು ಆಧುನಿಕ ಕನ್ನಡ ಕಾವ್ಯ ಗ್ರಹಿಸಿರುವ ವಿಧಾನಗಳಾವುವು? ಈ ವಿಧಾನಗಳು ಆ ವ್ಯಕ್ತಿತ್ವಗಳ ಯಾವ ಯಾವ ಮುಖಗಳನ್ನು ಕಟ್ಟಿಕೊಡಲು ಪ್ರಯತ್ನಿಸಿವೆ? ಎಂಬುವು ಕುತೂಹಲಕಾರಿ ಹಾಗೂ ಸಾಂಸ್ಕೃತಿಕ ಮಹತ್ವದ ಪ್ರಶ್ನೆಗಳಾಗಿವೆ. ಪರಂಪರೆಯ ವ್ಯಕ್ತಿತ್ವಗಳು ವರ್ತಮಾನದಲ್ಲಿ ಪಡೆದುಕೊಳ್ಳುತ್ತಿರುವ ರೂಪಾಂತರಗಳನ್ನು ಅರಿಯಬೇಕಾದ ದೃಷ್ಟಿಯಿಂದ ಉನ್ನತ ವ್ಯಕ್ತಿತ್ವಗಳನ್ನು ಗ್ರಹಿಸುವ ವಿಧಾನಗಳನ್ನು ರೂಪಿಸುವ, ನಿರ್ಬಂಧಿಸುವ ಸಾಮಾಜಿಕ-ಸಾಂಸ್ಕೃತಿಕ ಯಜಮಾನ್ಯ ಶಕ್ತಿಗಳನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಇದು ಸಮಕಾಲೀನ ಸಾಂಸ್ಕೃತಿಕ ರಾಜಕಾರಣಗಳನ್ನು, ಕಾವ್ಯದ ವೈಚಾರಿಕ ನಿಲುವುಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಸಹಕಾರಿಯಾಗಬಲ್ಲದು. ಇವುಗಳನ್ನು ಚರ್ಚೆಗೆ ಒಳಪಡಿಸುವ ಮೂಲಕ ಉತ್ತರಗಳನ್ನು ಕಂಡುಕೊಳ್ಳುವುದು ಈ ಅಧ್ಯಯನದ ಮುಖ್ಯವಾದ ಉದ್ದೇಶವಾಗಿದೆ.

೨. ಬದಲಾದ ಕಾಲ, ಸಂದರ್ಭದ ಹಿನ್ನೆಲೆಯಲ್ಲಿ ಯಾವುದೇ ವ್ಯಕ್ತಿತ್ವಗಳನ್ನು ಗ್ರಹಿಸುವ ವಿಧಾನಗಳು ಮಾತ್ರ ನಿರಂತರವಾಗಿ ಶೋಧಿತವಾಗುತ್ತಿರುತ್ತವೆ. ಕನ್ನಡ ಕಾವ್ಯ ಪರಂಪರೆಯಲ್ಲಿ ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸಲಾದ ಪ್ರಕ್ರಿಯೆಯನ್ನು, ಅದರ ಬೇರೆ ಬೇರೆ ನೆಲೆಗಳನ್ನು, ಅವುಗಳ ಉದ್ದೇಶಗಳನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ವರ್ತಮಾನದಲ್ಲಿ ಕಟ್ಟಿಕೊಡುವ ಈ ಸೃಜನಶೀಲ ಪ್ರಯತ್ನಗಳ ಹಿಂದೆ ಕೇವಲ ವ್ಯಕ್ತಿತ್ವಗಳನ್ನು ಬಣ್ಣಿಸುವ, ಪರಿಚಯಿಸುವ ಉದ್ದೇಶಗಳು ಮಾತ್ರ ಇವೆಯೇ ಅಥವಾ ಸಾಂಸ್ಕೃತಿಕವಾದ ಬೇರೆಯೇ ಆದ ಉದ್ದೇಶಗಳಿವೆಯೆ ಎಂಬುದನ್ನು ಹುಡುಕಿಕೊಳ್ಳುವ ಅಗತ್ಯವಿದೆ. ಇದನ್ನು ಕಂಡುಕೊಳ್ಳುವ ಉದ್ದೇಶ ಪ್ರಸ್ತುತ ಅಧ್ಯಯನಕ್ಕಿದೆ.

೩. ಈ ನಾಲ್ಕೂ ವ್ಯಕ್ತಿಗಳ ಬಗೆಗಿನ ವ್ಯಕ್ತಿಚಿತ್ರ ಕವಿತೆಗಳ ಆಸಕ್ತಿ ಯಾವ ಕಡೆಗೆ ಇದೆ, ಯಾವುದರ ಬಗೆಗೆ ಇಲ್ಲ. ಇದರ ಹಿಂದಿನ ಕಾರಣಗಳನ್ನು ಗುರುತಿಸಿಕೊಳ್ಳುವ ಅಗತ್ಯವಿದೆ. ಕವಿತೆಗಳಿಗೆ ವ್ಯಕ್ತಿಗಳಲ್ಲಿನ ಯಾವ ಮೌಲ್ಯಗಳು ಮುಖ್ಯವಾಗಿ ಕಂಡಿವೆ, ಯಾವು ಅಮುಖ್ಯವಾಗಿವೆ ಎಂಬುದನ್ನು ಕಂಡುಕೊಳ್ಳುವುದು ಸಾಹಿತ್ಯ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಮುಖ್ಯವಾಗಿದೆ. ಆ ಮೂಲಕ ಕವಿತೆಗಳು ಸಮಕಾಲೀನ ಸಮಾಜಕ್ಕೆ ರೂಪಿಸಿಕೊಡುತ್ತಿರುವ ವ್ಯಕ್ತಿತ್ವದ ಮಾದರಿಗಳಾವುವು? ಎಂಬುದನ್ನು ಕಂಡುಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

೪. ಬುದ್ಧ, ಬಸವಣ್ಣ, ಗಾಂಧಿ, ಅಂಬೇಡ್ಕರ್ ಯಾವ ಕಾರಣಕ್ಕಾಗಿ ಕನ್ನಡದ ಕವಿಗಳಿಗೆ ಮುಖ್ಯವಾಗಿ ಕಂಡಿದ್ದಾರೆ? ವರ್ತಮಾನದ ಯಾವ ಸಾಂಸ್ಕೃತಿಕ ವಿಚಾರಗಳ ಅಭಿವ್ಯಕ್ತಿಗೆ ಹಾಗೂ ಯಾವ ಸಾಮಾಜಿಕ-ರಾಜಕೀಯ ವಿಕೃತಿಗಳ ವಿಡಂಬನೆಗೆ ಬಳಕೆಯಾಗಿದ್ದಾರೆ ಎಂಬುದನ್ನು ಕಂಡುಕೊಳ್ಳುವ ಅಗತ್ಯವಿದೆ. ಏಕೆಂದರೆ ಪರಂಪರೆಯ ವ್ಯಕ್ತಿತ್ವಗಳನ್ನು ವರ್ತಮಾನದಲ್ಲಿ ಮುನ್ನೆಲೆಗೆ ತರುತ್ತಿರುವ ಪ್ರಯತ್ನಗಳ ಹಿಂದೆ ವರ್ತಮಾನದ ಸಾಂಸ್ಕೃತಿಕ ಬದುಕನ್ನು ಸುಧಾರಿಸುವ, ಸಾಮಾಜಿಕ ವ್ಯಕ್ತಿತ್ವಗಳನ್ನು ರೂಪಿಸುವ, ರಾಜಕಾರಣವನ್ನು ವಿಡಂಬಿಸುವ ಹೊಣೆಗಾರಿಕೆಗಳಿರುತ್ತವೆ. ಈ ರೀತಿಯ ಪ್ರಯತ್ನಗಳು ವ್ಯಕ್ತಿತ್ವಗಳ ಮಹತ್ವಗಳನ್ನಷ್ಟೇ ಸಾಬೀತುಪಡಿಸದೆ ನಮ್ಮ ಸಾಮಾಜಿಕ-ರಾಜಕೀಯ ವ್ಯವಸ್ಥೆಯ ಕರಾಳ ಮುಖಗಳನ್ನು ದರ್ಶಿಸುವ ಕೆಲಸವನ್ನೂ ಮಾಡುತ್ತಿರುತ್ತವೆ. ಕವಿತೆಗಳನ್ನು ವಿಶ್ಲೇಷಣೆಗೆ ಒಳಪಡಿಸುವ ಮೂಲಕ ಈ ಎಲ್ಲಾ ವಿಚಾರಗಳನ್ನು ಸಮಗ್ರವಾಗಿ ತಿಳಿಯುವ ಉದ್ದೇಶ ಪ್ರಸ್ತುತ ಅಧ್ಯಯನಕ್ಕಿದೆ.

೫. ಕಾವ್ಯದ ವ್ಯಕ್ತಿತ್ವ ನಿರ್ಮಾಣ ಪ್ರಕ್ರಿಯೆಯನ್ನು, ವ್ಯಕ್ತಿತ್ವಗಳನ್ನು ಕಟ್ಟಿಕೊಡಲು ಕನ್ನಡ ಕಾವ್ಯ ಸೃಷ್ಟಿಸಿಕೊಂಡಿರುವ ಪ್ರತಿಮೆ, ರೂಪಕಗಳನ್ನು, ಅವು ವ್ಯಕ್ತಿತ್ವಗಳ ಅನನ್ಯತೆ, ಮಹತ್ವ ಹಾಗೂ ಮಿತಿಗಳನ್ನು ಕಟ್ಟಿಕೊಡುವಲ್ಲಿ ಎಷ್ಟು ಸಹಕಾರಿಯಾಗಿವೆ ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸುವುದು ಅಧ್ಯಯನದ ಉದ್ದೇಶವಾಗಿದೆ.

೬. ಬುದ್ಧ, ಬಸವಣ್ಣ, ಗಾಂಧಿ, ಅಂಬೇಡ್ಕರ್ ಬಗೆಗೆ ಈಗಾಗಲೇ ಚಲಾವಣೆಯಲ್ಲಿರುವ ಪರಿಕಲ್ಪನೆಗಳು ಕವಿತೆಯಲ್ಲಿ ಹೇಗೆ ಬಳಕೆಯಾಗುತ್ತಿವೆ? ಅವುಗಳು ಚಾರಿತ್ರಿಕ ಸಂಗತಿಗಳ ಪುನರಾವರ್ತನೆಗಳೆ? ಅಥವಾ ಹೊಸತನ್ನು ಮಂಡಿಸುವ ಯತ್ನಗಳೇ? ಮತ್ತು ಆ ಮೂಲಕ ವ್ಯಕ್ತಿಚಿತ್ರ ಕವಿತೆಗಳು ಪ್ರತಿಪಾದಿಸುತ್ತಿರುವ ಹೊಸ ಆಲೋಚನೆಗಳಾವುವು? ಎಂಬುದನ್ನು ಕಂಡುಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

೭. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಇವರನ್ನು ನೆಪವಾಗಿರಿಸಿಕೊಂಡು ಕನ್ನಡ ಕಾವ್ಯ ಎತ್ತುತ್ತಿರುವ ಸಾಂಸ್ಕೃತಿಕ ಮತ್ತು ವೈಚಾರಿಕ ಪ್ರಶ್ನೆಗಳನ್ನು ಗುರುತಿಸಿಕೊಳ್ಳುವುದು ಹಾಗೂ ಯಾವ ಸಾಮಾಜಿಕ, ರಾಜಕೀಯ ಸನ್ನಿವೇಶವನ್ನು ಎದುರಿಸಲು ಇವರನ್ನು ಸ್ಫೂರ್ತಿಶಕ್ತಿಯನ್ನಾಗಿ ಬಳಸಿಕೊಳ್ಳಲಾಗಿದೆ ಎಂಬುದನ್ನು ಕವಿತೆಗಳ ವಿಸ್ತೃತ ಅಧ್ಯಯನದಿಂದ ಕಂಡುಕೊಳ್ಳುವುದು ಅಧ್ಯಯನದ ಉದ್ದೇಶವಾಗಿದೆ.

೮. ಪರಂಪರೆಯ ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸುವ ಮೂಲಕ ಕನ್ನಡ ಕಾವ್ಯ ಪ್ರಕಟಿಸುತ್ತಿರುವ ಸಾಮಾಜಿಕ-ರಾಜಕೀಯ ಹೊಣೆಗಾರಿಕೆಗಳನ್ನು ಅರಿಯುವುದು ಹಾಗೂ ತನ್ನ ಕಾಲದ ಸಾಂಸ್ಕೃತಿಕ ಬದುಕನ್ನು ಆದಷ್ಟೂ ಜೀವಪರವಾಗಿಟ್ಟುಕೊಳ್ಳಲು ಪ್ರಯತ್ನಿಸುತ್ತಿರುವ ಕನ್ನಡ ಕಾವ್ಯದ ತುಡಿತವನ್ನು ಗ್ರಹಿಸಿಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ.

೯. ವಸಾಹತುಶಾಹಿ ಪ್ರಜ್ಞೆ ನಮ್ಮಲ್ಲಿ ಚರಿತ್ರೆಯ ಬಗೆಗೆ ಬೆಳಸಿರುವ ಪಶ್ಚಿಮದ ದೃಷ್ಟಿಕೋನವು ಏಕಮುಖಿ ಹಾಗೂ ಘಟನಾಧಾರಿತವಾದುದಾಗಿದೆ. ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆಯಿಲ್ಲ ಎಂಬ ಟೀಕೆಯೊಂದಿಗೆ ಅವರು ನಮ್ಮಲ್ಲಿ ಬೆಳೆಸಿದ ಪಶ್ಚಿಮದ ತರತಮ ಧೋರಣೆಯಿಂದ ಕೂಡಿದ ಚಾರಿತ್ರಿಕ ಪ್ರಜ್ಞೆಗಿಂತ ಭಿನ್ನವಾದ ಚಾರಿತ್ರಿಕ ಪ್ರಜ್ಞೆ ಭಾರತೀಯರದ್ದು. ಘಟನೆ, ಕಾಲ, ಹಾಗೂ ರಾಜರ ವೈಭವದ ಬದುಕಿನ ಏಳುಬೀಳುಗಳ ಚಿತ್ರಣಗಳಿಗಿಂತ ಭಿನ್ನವಾಗಿ ಚರಿತ್ರೆಯೆಂದರೆ ಒಂದು ನಿರ್ದಿಷ್ಟ ಕಾಲ ಮತ್ತು ಪ್ರದೇಶದ ಮಾನವ ಬದುಕು ಕಂಡುಕೊಂಡ ಜ್ಞಾನ ಎಂಬ ನೆಲೆಯ ಪ್ರಜ್ಞೆಯನ್ನು ಬೆಳೆಸಿಕೊಂಡು ಬಂದಿದೆ. ಪರಂಪರೆಯ ಜ್ಞಾನ ನಿರಂತರವಾಗಿ ಮುಂದುವರಿಯುವ, ವಿಸ್ತರಣೆಯಾಗುವ, ರೂಪಾಂತರವಾಗುವ ಹಾಗೂ ಸಮಾಜವೊಂದು ಕಾಪಿಟ್ಟುಕೊಂಡು ಬರುತ್ತಿರುವ ಪ್ರಕ್ರಿಯೆಯನ್ನು ಅರಿಯುವುದೇ ಆಗಿದೆ. ಮಾನವ ನಾಗರಿಕತೆಯು ತನ್ನ ಪರಿಸರದೊಂದಿಗಿನ ಒಡನಾಟಗಳಿಂದ ಕಂಡುಕೊಂಡ ಜ್ಞಾನವನ್ನು ಮೌಖಿಕ ಪರಂಪರೆಯಲ್ಲಿ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ ಸಾಹಿತ್ಯ ಕಟ್ಟಿಕೊಡುವ ಚರಿತ್ರೆಯ ಸ್ವರೂಪ ಭಿನ್ನವಾಗಿರುತ್ತದೆ. ಪ್ರತಿಯೊಂದು ಕಾಲಘಟ್ಟದಲ್ಲೂ ಸಾಹಿತ್ಯಕೃತಿಯೊಂದು ತನ್ನ ಕಾಲದ ಸಾಂಸ್ಕೃತಿಕ ಚರಿತ್ರೆಯನ್ನು ಪುನಾರಚಿಸುವ ಪ್ರಕ್ರಿಯೆಯಲ್ಲಿ ತೊಡಗಿರುತ್ತದೆ. ವ್ಯಕ್ತಿಚಿತ್ರ ಕವಿತೆಗಳ ಮೂಲಕ ಕನ್ನಡ ಕಾವ್ಯ ಕಟ್ಟಿಕೊಡುತ್ತಿರುವ ಸಾಂಸ್ಕೃತಿಕ ಚರಿತ್ರೆಯ ಸ್ವರೂಪ ಯಾವ ಬಗೆಯದು ಎಂಬುದನ್ನು ಕಂಡುಕೊಳ್ಳಬೇಕಾದ ಅಗತ್ಯವಿದೆ.

೧೦. ಸಮಕಾಲೀನ ಸಾಂಸ್ಕೃತಿಕ ಸಮಸ್ಯೆ ಮತ್ತು ಸವಾಲುಗಳ ನಡುವೆ ಈ ವ್ಯಕ್ತಿತ್ವಗಳನಿಟ್ಟು ಗ್ರಹಿಸುವ ಸಂದರ್ಭದಲ್ಲಿ ವಿಸ್ತಾರತೆ-ಸಂಕುಚಿತತೆಯ ಸ್ವರೂಪವನ್ನು ಪಡೆದುಕೊಳ್ಳುತ್ತಿರುತ್ತವೆ. ಇದು ವ್ಯಕ್ತಿತ್ವಗಳನ್ನು ಅರಿಯುವ ವಿಶಿಷ್ಟ ಕ್ರಮವೂ ಹೌದು. ಹಾಗೂ ಸಮಕಾಲೀನ ಬದುಕನ್ನು, ಮನುಷ್ಯ ಸ್ವಭಾವಗಳನ್ನು ಅರಿಯುವ-ತಿದ್ದುವ ಪ್ರಯತ್ನಗಳೂ ಹೌದು. ಈ ವಿಶಿಷ್ಟ ಶೋಧದ ಕ್ರಮವನ್ನು ಕನ್ನಡ ಕಾವ್ಯ ನಿರ್ವಹಿಸಿರುವ ಬಗೆ ಹಾಗೂ ಅದರಿಂದ ಈ ವ್ಯಕ್ತಿತ್ವಗಳ ಗ್ರಹಿಕೆಗೆ ಆಗಿರುವ ಲಾಭಗಳನ್ನು ಕಂಡುಕೊಳ್ಳುವುದು ಅವಶ್ಯಕವಾಗಿದೆ.

೧೧. ವಸ್ತುವಿನ ದೃಷ್ಟಿಯಿಂದ ಕಾವ್ಯ ಪ್ರಕಾರದಲ್ಲೇ ವಿಶಿಷ್ಟ ಬಗೆಯಾಗಿ ತೋರುವ ವ್ಯಕ್ತಿಚಿತ್ರ ಕವಿತೆಗಳ ಸ್ವರೂಪ, ಅಭಿವ್ಯಕ್ತಿ ಕ್ರಮ, ಕಾಳಜಿಗಳು, ಅವುಗಳ ಸಾಧ್ಯತೆಗಳು-ಮಿತಿಗಳು, ಚರಿತ್ರೆಯ ಪುನಾರಚನೆಯ ಪ್ರಕ್ರಿಯೆಯಲ್ಲಿ ಅವುಗಳ ಪಾತ್ರ ಮುಂತಾದವುಗಳನ್ನು ಕವಿತೆಗಳ ವಿಶ್ಲೇಷಣೆಯ ಮೂಲಕ ಕಂಡುಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

೧೨. ಕನ್ನಡದ ಸೃಜನಶೀಲ ಮನಸ್ಸುಗಳನ್ನು ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಈ ನಾಲ್ಕೂ ವ್ಯಕ್ತಿತ್ವಗಳು ಯಾಕಾಗಿ ಇಷ್ಟು ದೊಡ್ಡ ಪ್ರಮಾಣದಲ್ಲಿ ಕಾಡಿದ್ದಾರೆ ಎಂಬುದು ಕುತೂಹಲಕಾರಿ ಸಂಗತಿ. ಕನ್ನಡ ಕಾವ್ಯ ತನ್ನ ಸಮಕಾಲೀನವಾದ ಯಾವ ಸಾಮಾಜಿಕ, ರಾಜಕೀಯ ನಡೆಗಳನ್ನು ಪ್ರತಿರೋಧಿಸಲು ಇವರನ್ನು ಬಳಸಿಕೊಂಡಿದೆ ಹಾಗೂ ಆ ಮೂಲಕ ಇದು ಒತ್ತಾಯಿಸುತ್ತಿರುವ ಸಮಾನತೆಯ ಆಶಯಗಳು ಯಾವ ಸ್ವರೂಪದವು ಎಂಬುದನ್ನು ಕಂಡುಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಮೇಲಿನ ಹಲವು ಉದ್ದೇಶಗಳನ್ನಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ಅಧ್ಯಯನದ ವ್ಯಾಪ್ತಿ :

ಪ್ರಸ್ತುತ ಅಧ್ಯಯನಕ್ಕೆ ಸ್ಪಷ್ಟತೆ ಹಾಗೂ ಖಚಿತತೆಗಳನ್ನು ರೂಪಿಸಿಕೊಳ್ಳುವ ಸಲುವಾಗಿ ಅದರ ವ್ಯಾಪ್ತಿಯನ್ನು ಮುಂದಿನಂತೆ ನಿರ್ದಿಷ್ಟಪಡಿಸಿಕೊಳ್ಳಲಾಗಿದೆ. **'ಆಧುನಿಕ ಕನ್ನಡ ಕಾವ್ಯ : ವ್ಯಕ್ತಿತ್ವ ಶೋಧದ ನೆಲೆಗಳು'** ಎಂಬ ವಿಷಯದ ಅಧ್ಯಯನವು **'ಆಧುನಿಕ ಕನ್ನಡ ಕಾವ್ಯ'** ಮತ್ತು **'ವ್ಯಕ್ತಿತ್ವ ಶೋಧ'** ಎಂಬ ಎರಡು ಆಯಾಮಗಳನ್ನು ಒಳಗೊಂಡಿದೆ.

ಆಧುನಿಕ ಕನ್ನಡ ಕಾವ್ಯ ಸಂದರ್ಭದಲ್ಲಿ ವ್ಯಕ್ತಿಗಳನ್ನು ಕುರಿತಾಗಿ ರಚನೆಗೊಂಡಿರುವ ಕವನಗಳು ಹೇರಳವಾಗಿವೆ. ವಿಭಿನ್ನ ಕ್ಷೇತ್ರ, ಸಮುದಾಯಗಳಿಗೆ ಸೇರಿದ, ತಮ್ಮ ಜೀವನ ಕ್ರಮದಿಂದ ಶ್ರೇಷ್ಠರೆನಿಸಿದ ಹಲವು ವ್ಯಕ್ತಿಗಳನ್ನು ಕುರಿತು ಕವಿತೆಗಳು ರಚನೆಗೊಂಡಿವೆ. ಚಾರಿತ್ರಿಕ, ಪೌರಾಣಿಕ, ಸಮಕಾಲೀನ ವ್ಯಕ್ತಿಗಳನ್ನು ಕುರಿತಂತೆ ಕವಿತೆಗಳು ರಚನೆಗೊಂಡಿವೆ. ಇವರಲ್ಲಿ ಸಾಂಸ್ಕೃತಿಕವಾಗಿ, ನೈತಿಕವಾಗಿ ಮಹತ್ವವುಳ್ಳ ವ್ಯಕ್ತಿಗಳು, ಸುಧಾರಕರು, ಸಾಮಾಜಿಕ-ರಾಜಕೀಯ-ಧಾರ್ಮಿಕ ಬದಲಾವಣೆಗಾಗಿ ಕ್ರಾಂತಿಕಾರಕ ಹೋರಾಟಗಳನ್ನು ರೂಪಿಸಿದವರು, ತಮ್ಮಷ್ಟಕ್ಕೆ ಮೌಲಿಕ ಬದುಕನ್ನು ಬದುಕಿದವರು, ಅಲಕ್ಷ್ಯಕ್ಕೆ ಒಳಗಾದವರು, ಶೋಷಣೆಗೆ-ಅನ್ಯಾಯಗಳಿಗೆ ಒಳಗಾದವರು, ತಮ್ಮ ವ್ಯಕ್ತಿತ್ವವನ್ನು ವಿಕಾಸಶೀಲವಾಗಿ ಬೆಳೆಸಿಕೊಂಡವರು, ಸಾಮಾಜಿಕ- ರಾಜಕೀಯ ಬಂಡಾಯಗಾರರು ಹೀಗೆ ಮಾನವ ನಾಗರೀಕತೆಯ ವೈವಿಧ್ಯಮಯ ವ್ಯಕ್ತಿಗಳು ಕಾವ್ಯದ ವಸ್ತುವಾಗಿದ್ದಾರೆ. ಇವುಗಳ ಆಶಯಗಳೂ, ಶೋಧನೆಯ ನೆಲೆಗಳೂ ಭಿನ್ನವಾಗಿವೆ. ಈ ಎಲ್ಲಾ ವ್ಯಕ್ತಿಗಳ ವ್ಯಕ್ತಿತ್ವವನ್ನು ಕುರಿತ ಕವಿತೆಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು ಹಾಗೂ ಏಕಸೂತ್ರಕ್ಕೆ ಒಳಪಡಿಸುವುದು ಒಂದು ಪ್ರಬಂಧದ ವ್ಯಾಪ್ತಿಯಲ್ಲಿ ಕಷ್ಟದ ಕೆಲಸ. ಹಾಗಾಗಿ ಕನ್ನಡ ಕಾವ್ಯ ಮೇಲಿಂದ ಮೇಲೆ ಎದುರಾಗಿರುವ, ತೀವ್ರವಾಗಿ ಸ್ಪಂದಿಸಿರುವ, ತನ್ನ ಕಾಲದ ಎಲ್ಲಾ ಸಾಂಸ್ಕೃತಿಕ ಆಗು-ಹೋಗುಗಳಿಗೂ ಪ್ರತಿಕ್ರಿಯಿಸಲು ಸಾಕ್ಷಿಪ್ರಜ್ಞೆಯಾಗಿ ಇರಿಸಿಕೊಂಡಿರುವ ವ್ಯಕ್ತಿಗಳನ್ನು ಕುರಿತ ಕವಿತೆಗಳನ್ನು ಪ್ರಾತಿನಿಧಿಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗಾಗಿ ವೈಯಕ್ತಿಕವಾಗಿ ತಮ್ಮ ವ್ಯಕ್ತಿತ್ವವನ್ನು ವಿಕಾಸಗೊಳಿಸಿಕೊಳ್ಳುವುದರ ಜೊತೆಗೆ ತಮ್ಮ ಕಾಲದಲ್ಲಿ ಸಾಮಾಜಿಕ ಪರಿವರ್ತನೆಗಾಗಿ ಹೋರಾಡಿದ, ಸಮಕಾಲೀನ ಜಗತ್ತಿನಲ್ಲಿ ವೈಚಾರಿಕತೆಯನ್ನು ಬಿತ್ತಿದ, ಬದುಕನ್ನು ಸುಧಾರಿಸಲು ಪ್ರಯತ್ನಿಸಿದ, ಸಾಮಾಜಿಕ ವ್ಯಕ್ತಿತ್ವಗಳನ್ನು ವಿಕಾಸಶೀಲವಾಗಿ ಬೆಳೆಸುವ ನಿಟ್ಟಿನಲ್ಲಿ ಗಾಢವಾಗಿ ಚಿಂತಿಸಿದ ಹಾಗೂ ಹಲವು ಪ್ರಯೋಗಗಳಿಗೆ ತಮ್ಮ ಬದುಕನ್ನೇ ಮುಡುಪಾಗಿಟ್ಟ, ನೊಂದವರ, ಶೋಷಿತರ, ತಬ್ಬಲಿತನವನ್ನು ಅನುಭವಿಸುತ್ತಿರುವವರ ದನಿಗಳಾಗಿ ಮಿಡಿದ ವ್ಯಕ್ತಿತ್ವಗಳಾದ **ಬುದ್ಧ, ಬಸವ, ಗಾಂಧಿ ಮತ್ತು ಅಂಬೇಡ್ಕರ್ ಕುರಿತ ಆಧುನಿಕ ಕನ್ನಡ ಕಾವ್ಯದಲ್ಲಿ ರಚನೆಯಾಗಿರುವ ವ್ಯಕ್ತಿಚಿತ್ರ ಕವಿತೆಗಳನ್ನು** ಅಧ್ಯಯನದ ವ್ಯಾಪ್ತಿಗೆ ಮಿತಿಗೊಳಿಸಿಕೊಳ್ಳಲಾಗಿದೆ. ಈ ವ್ಯಕ್ತಿತ್ವಗಳು ಕನ್ನಡ ಕವಿಗಳನ್ನು ಬಹಳವಾಗಿ ಕಾಡಿದ್ದಾರೆ. ಆಧುನಿಕ ಕನ್ನಡ



see page 280

ಕಾವ್ಯದಲ್ಲಿ ಈ ನಾಲ್ಕೂ ವ್ಯಕ್ತಿಗಳನ್ನು ಕುರಿತು ಅತಿ ಹೆಚ್ಚು ಕವಿತೆಗಳು ಕಂಡುಬರುತ್ತವೆ. ಇವರು ಕಾಲಾತೀತ ಮತ್ತು ದೇಶಾತೀತವಾಗಿ ಚಿಂತಿಸಿದ, ಹೋರಾಡಿದ, ಬದುಕಿದ ವ್ಯಕ್ತಿಗಳಾಗಿದ್ದಾರೆ. ಇಂಥ ವ್ಯಕ್ತಿತ್ವಗಳೊಂದಿಗೆ ಅನುಸಂಧಾನ ನಡೆಸಿರುವ ಕನ್ನಡ ಕಾವ್ಯ ಯಾವ ಮೌಲ್ಯಗಳಿಗಾಗಿ ಹುಡುಕಾಟ ನಡೆಸುತ್ತಿದೆ ಎಂಬುದನ್ನು ಕಂಡುಕೊಳ್ಳಲು ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಬುದ್ಧ, ಬಸವ, ಗಾಂಧಿ ಮತ್ತು ಅಂಬೇಡ್ಕರ್ ನಮ್ಮನ್ನು ಇವತ್ತಿಗೂ ಹಲವು ಕಾರಣಗಳಿಂದ ಮೇಲಿಂದ ಮೇಲೆ ಕಾಡುವ ವ್ಯಕ್ತಿತ್ವಗಳಾಗಿರುವುದರ ಜೊತೆಗೆ ಆಧುನಿಕ ಜಗತ್ತಿನ ಹಲವು ಸಮಸ್ಯೆಗಳಿಗೆ ಇವರಲ್ಲೇ ಉತ್ತರವನ್ನು ಕಂಡುಕೊಳ್ಳುವ, ಮುಖಾಮುಖಿಯಾಗುವ ಸಂದರ್ಭಗಳು ಏರ್ಪಡುತ್ತಿವೆ. ಹಾಗಾಗಿ ಈ ನಾಲ್ಕೂ ವ್ಯಕ್ತಿತ್ವಗಳನ್ನು ಕನ್ನಡದ ಸಾಂಸ್ಕೃತಿಕ ಪ್ರಜ್ಞೆ ಅರಗಿಸಿಕೊಂಡಿರುವುದನ್ನು ಕವಿತೆಗಳ ಹಿನ್ನೆಲೆಯಲ್ಲಿ ನೋಡುವ ಪ್ರಯತ್ನ ಮಾಡಲಾಗಿದೆ. ಇವರನ್ನು ಬೇರೆ ಬೇರೆ ಕಾಲಘಟ್ಟದಲ್ಲಿ, ಭಿನ್ನ ಸಮುದಾಯದ, ಭಿನ್ನ ತಾತ್ವಿಕತೆಯಿಂದ ಬಂದ ಕವಿಗಳು ಶೋಧನೆಗೆ ಒಳಪಡಿಸಿರುವ ವಿಧಾನಗಳು ವಿಭಿನ್ನವಾಗಿವೆ. ವ್ಯಕ್ತಿತ್ವ ಶೋಧನೆಯ ವಿಧಾನಗಳು ವ್ಯಕ್ತಿತ್ವಗಳನ್ನು ಕಟ್ಟಿಕೊಡುವಲ್ಲಿ ಪ್ರಧಾನ ಪಾತ್ರವಹಿಸುತ್ತವೆ. ಹಾಗಾಗಿ ಶೋಧನಾ ನೆಲೆಗಳನ್ನು ಗುರುತಿಸಿಕೊಳ್ಳುವ ಅವಶ್ಯಕತೆ ಇದೆ. ಏಕೆಂದರೆ ಈ ವಿಧಾನಗಳು ಸಾಮಾಜಿಕ, ರಾಜಕೀಯ, ಸಾಂಸ್ಥಿಕ ನಿಯಂತ್ರಕ ಶಕ್ತಿಗಳಿಂದ ಪ್ರಭಾವಿತವಾಗಿರುತ್ತವೆ. ಹಾಗಾಗಿ ವ್ಯಕ್ತಿತ್ವ ಸಾಹಿತ್ಯ ಕೃತಿಗಳ ಚರಿತ್ರೆಯ ಪುನಾರಚನೆಯ ಪ್ರಕ್ರಿಯೆಯ ವಿಧಾನಗಳನ್ನು ಗ್ರಹಿಸಿಕೊಳ್ಳುವ ದೃಷ್ಟಿಯಿಂದ ಇಂಥ ಅಧ್ಯಯನಗಳು ಮಹತ್ವ ಪಡೆಯಲಿವೆ.

ವ್ಯಕ್ತಿಗಳ ವ್ಯಕ್ತಿತ್ವವನ್ನು ನೋಡುವ ನೋಟಕ್ರಮಗಳೆ ಆ ವ್ಯಕ್ತಿತ್ವವನ್ನು ಅರಿಯುವ, ವಿಸ್ತರಿಸುವ, ಮರುಕಟ್ಟುವ ಕ್ರಿಯಾಶೀಲ ಪ್ರಕ್ರಿಯೆಗಳಾಗಿರುತ್ತವೆ. ಈ ಹಿನ್ನೆಲೆಯಲ್ಲಿ 'ವ್ಯಕ್ತಿತ್ವಶೋಧ' ಎಂಬ ಪರಿಕಲ್ಪನೆಯ ವ್ಯಾಪ್ತಿ ಕಾವ್ಯವು ವ್ಯಕ್ತಿತ್ವಗಳನ್ನು ಅನುಸಂಧಾನಕ್ಕೆ ಒಳಪಡಿಸಿರುವ ನೋಟಕ್ರಮಗಳು ಎಂಬ ಅರ್ಥದಲ್ಲಿ ಬಳಸಿಕೊಳ್ಳಲಾಗಿದೆ. ವ್ಯಕ್ತಿತ್ವ ಶೋಧಕ್ಕೆ ಆಧುನಿಕ ಕನ್ನಡ ಕಾವ್ಯ ಸಂದರ್ಭದಲ್ಲಿ **ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್** ಕುರಿತು ಪ್ರಕಟಗೊಂಡಿರುವ **ವ್ಯಕ್ತಿಚಿತ್ರ ಕವಿತೆ**ಗಳನ್ನು ಮಾತ್ರ ಪ್ರಧಾನ ಆಕರಗಳನ್ನಾಗಿ ಪರಿಗಣಿಸಲಾಗಿದೆ.

### ಅಧ್ಯಯನದ ಮಹತ್ವ :

ಬುದ್ಧ, ಬಸವ, ಗಾಂಧಿ, ಅಂಬೇಡ್ಕರರನ್ನು ಕುರಿತ ಹೊಸಗನ್ನಡ ಕಾವ್ಯದಲ್ಲಿನ ವ್ಯಕ್ತಿಚಿತ್ರ ಕವಿತೆಗಳು ನಡೆಸಿರುವ 'ವ್ಯಕ್ತಿತ್ವ ಶೋಧದ ನೆಲೆ'ಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನದ ಈ ಅಧ್ಯಯನವು ಹಲವು ದೃಷ್ಟಿಗಳಿಂದ ಮಹತ್ವ ಪಡೆದಿದೆ. ಈ ನಾಲ್ಕೂ ವ್ಯಕ್ತಿತ್ವಗಳನ್ನು ಪ್ರಾತಿನಿಧಿಕವಾಗಿ ಇಟ್ಟುಕೊಂಡು ಅಧ್ಯಯನಕ್ಕೆ ಒಳಪಡಿಸುತ್ತಿರುವ ಸಂಶೋಧನಾ ಅಧ್ಯಯನವು ಕನ್ನಡದ ಒಟ್ಟು ವ್ಯಕ್ತಿಚಿತ್ರ ಕವಿತೆಗಳ ರಚನೆಯ ಹಿಂದಿನ ಒತ್ತಡಗಳನ್ನು, ಅವುಗಳ ಕಾಳಜಿಗಳನ್ನು, ಅವುಗಳ ಸ್ವರೂಪ, ಸಾಧ್ಯತೆ, ಮಿತಿ ಹಾಗೂ ವಿಶಿಷ್ಟತೆಗಳನ್ನು ಗುರುತಿಸಿಕೊಳ್ಳುವ ಪ್ರಯತ್ನಮಾಡುತ್ತದೆ. ಹಾಗಾಗಿ ವಸ್ತುವಿನ ದೃಷ್ಟಿಯಿಂದ ವಿಶಿಷ್ಟ ಪ್ರಕಾರವಾಗಿ ನಿಲ್ಲಬಲ್ಲಂತ ವ್ಯಕ್ತಿಚಿತ್ರ ಕವಿತೆಗಳ ಸ್ವರೂಪ, ವಿಶಿಷ್ಟ ಕಾಳಜಿಗಳನ್ನು ಗುರುತಿಸುವುದರಿಂದ ಈ ಅಧ್ಯಯನ ಮಹತ್ವ ಪಡೆದಿದೆ.

ವ್ಯಕ್ತಿಚಿತ್ರ ಕವಿತೆಗಳ ಅಧ್ಯಯನಕ್ಕೆ ಒಂದು ವಿಶಿಷ್ಟ ಸಾಂಸ್ಕೃತಿಕ ಮಹತ್ವವಿದೆ. ಕವಿಗಳು ವ್ಯಕ್ತಿಗಳನ್ನು ಕಾವ್ಯದ ವಸ್ತುವಾಗಿ ಆಯ್ಕೆ ಮಾಡಿಕೊಂಡು ಕವನ ರಚನೆ ಮಾಡಿರುವ ಹಿಂದಿನ ಒತ್ತಡಗಳನ್ನು ಅಧ್ಯಯನ

ಮಾಡಲು ಸಾಧ್ಯವಿರುವುದರಿಂದ ಇಲ್ಲಿ ಸಾಹಿತ್ಯದ ಕಾರಣಗಳಷ್ಟೇ ಅಲ್ಲದೆ ಸಾಹಿತ್ಯೇತರ ಕಾರಣಗಳೂ ಕೂಡ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತವೆ. ಇದರಿಂದಾಗಿ ವ್ಯಕ್ತಿಚಿತ್ರ ಕವಿತೆಗಳು ಸಹಜವಾಗಿಯೇ ಸಾಂಸ್ಕೃತಿಕ ಅಧ್ಯಯನದ ಮಹತ್ವವನ್ನು ಪಡೆಯುತ್ತವೆ. ಕಳೆದ ಒಂದು ಶತಮಾನದಲ್ಲಿ ರಚನೆಗೊಂಡಿರುವ ವ್ಯಕ್ತಿಚಿತ್ರ ಕವಿತೆಗಳು ನಮ್ಮ ಪರಂಪರೆಯ ಹಾಗೂ ಸಮಕಾಲೀನ ಉನ್ನತ ವ್ಯಕ್ತಿಗಳು ಮತ್ತು ವರ್ತಮಾನದ ಬದುಕಿನೊಂದಿಗೆ ಒಂದು ಭಾವ ಸಂಬಂಧವನ್ನು ಬೆಸೆಯುವಲ್ಲಿ ನಿರತವಾಗಿರುವುದನ್ನು ಗಮನಿಸಬಹುದು.

ವ್ಯಕ್ತಿಚಿತ್ರ ಕವಿತೆಗಳು ಚರಿತ್ರೆಯ ಸಾಂಪ್ರದಾಯಿಕ ದೃಷ್ಟಿಕೋನಗಳನ್ನು ಪಲ್ಲಟಿಸಿ ಬಹುತ್ವದ ಸಾಂಸ್ಕೃತಿಕ ಆಯಾಮಗಳನ್ನು ಮುನ್ನೆಲೆಗೆ ತರುವ ಪ್ರಯತ್ನವನ್ನು ಮಾಡುತ್ತವೆ. ಯಾವ ವ್ಯಕ್ತಿಯೂ, ಬದುಕೂ, ಆಲೋಚನೆಗಳೂ ನಿಕೃಷ್ಟವಲ್ಲ. ಅವೆಲ್ಲವೂ ಚಾರಿತ್ರಿಕ ಮಹತ್ವವನ್ನು ಹೊಂದಬಲ್ಲವು ಎಂಬುದನ್ನು ಈ ಕವಿತೆಗಳು ಸಾಬೀತುಪಡಿಸುತ್ತಿವೆ.. ಎಲ್ಲರಿಗೂ ತಮ್ಮ ತಮ್ಮ ವಿಶಿಷ್ಟ ಕ್ಷೇತ್ರಗಳಲ್ಲಿ ತಮ್ಮ ಕತೃತ್ವ ಶಕ್ತಿಯನ್ನು ಮೆರೆಯುವ ಸಾಮರ್ಥ್ಯ ಇದ್ದೇ ಇರುತ್ತದೆ. ಆದರೆ ಅವಕಾಶಗಳು ಮುಕ್ತವಾಗದೆ ಇರಬಹುದು. ಹಾಗಾಗಿ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಸರ್ವರ ಬದುಕಿಗೂ ಅಸ್ತಿತ್ವವನ್ನು ದೊರಕಿಸಿಕೊಡುವ ಪ್ರಜ್ಞೆ, ಅವರ ಆಲೋಚನೆಗಳಿಗೆ ಮಾನ್ಯತೆಯನ್ನು ತರುವಲ್ಲಿ ದನಿಗೂಡಿಸುವ ಆಶಯವನ್ನು ಕವಿತೆಗಳು ಒಳಗೊಂಡಿವೆ. ಅಗೋಚರವಾದ, ನಿರ್ಲಕ್ಷ್ಯಕ್ಕೊಳಗಾದ, ಬೇಕಂತಲೆ ಅಲಕ್ಷಿಸಿದ ಸಮುದಾಯದ ಪ್ರತಿನಿಧಿಗಳನ್ನು ಚರಿತ್ರೆಯ ಮುನ್ನೆಲೆಗೆ ತಂದಿರುವ ಪ್ರಯತ್ನಗಳನ್ನು ಇಲ್ಲಿ ಕಾಣಬಹುದು. ಹಾಗಾಗಿ ವ್ಯಕ್ತಿಚಿತ್ರ ಕವಿತೆಗಳಿಗೆ ಸಾಂಸ್ಕೃತಿಕ ಮತ್ತು ಚಾರಿತ್ರಿಕ ಮಹತ್ವವಿದೆ.

ಬೇರೆ ಬೇರೆ ಜ್ಞಾನಶಾಖೆಗಳ ವೈಚಾರಿಕ ವಿಧಾನಗಳು ನಮಗೆ ಒದಗಿಸುವ ಸತ್ಯಗಳೂ ಕೂಡ ಕಾವ್ಯವೆಂಬ ವಿಶಿಷ್ಟ ಪ್ರಕಾರದಲ್ಲಿ ಬೇರೆ ಬೇರೆ ಹೊಳಹುಗಳನ್ನು ಕೊಡಬಲ್ಲವು. ಈ ನಿಟ್ಟಿನಲ್ಲಿ ವ್ಯಕ್ತಿಗಳನ್ನು ಕುರಿತ ಕವಿತೆಗಳು ವ್ಯಕ್ತಿತ್ವಗಳ ಬಗೆಗೆ ಹಾಗೂ ಸಮಕಾಲೀನ ಸಾಂಸ್ಕೃತಿಕ ಬದುಕಿನ ಬಗೆಗೆ ಕೊಡುವ ಹೊಳಹುಗಳು ವಿಶಿಷ್ಟವಾಗಿರುತ್ತವೆ. ನಮ್ಮ ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ಶೋಧಿಸಿಕೊಳ್ಳುವ ಮೂಲಕ ವರ್ತಮಾನದ ಸಾಂಸ್ಕೃತಿಕ ಅಗತ್ಯಗಳನ್ನು ಪೂರೈಸಿಕೊಳ್ಳುವ ವಿಶಿಷ್ಟ ಕಾಳಜಿಗಳನ್ನು ವ್ಯಕ್ತಮಾಡಿವೆ. ಇವುಗಳನ್ನು ಕಂಡುಕೊಳ್ಳುವುದು ಸಾಂಸ್ಕೃತಿಕ ಚರಿತ್ರೆಯ ಪುನಾರಚನೆಯ ದೃಷ್ಟಿಯಿಂದ ಅಗತ್ಯವಾದುದಾಗಿದೆ.

ಸಾಂಪ್ರದಾಯಿಕ ಚರಿತ್ರೆಯ ಗ್ರಹಿಕೆಯ ಕ್ರಮಗಳನ್ನು ಸಾಹಿತ್ಯ ಸಂರಚನೆಗಳು ಪುನಾರಚನೆಗೆ ಒಳಪಡಿಸುವ ವಿಧಾನಗಳನ್ನು, ಚಾರಿತ್ರಿಕ ವ್ಯಕ್ತಿತ್ವಗಳ ಬಗೆಗಿರುವ ಗ್ರಹಿಕೆಗಳು ಕವಿತೆಗಳಲ್ಲಿ ಮರುನಿರೂಪಣೆಗೊಳ್ಳುವ ವಿಧಾನವನ್ನು ಅರಿಯಲು ವ್ಯಕ್ತಿಚಿತ್ರ ಕವಿತೆಗಳ ಅಧ್ಯಯನ ಸಹಾಯಕವಾಗುತ್ತದೆ. ಕವಿತೆಗಳು ಏಕಕಾಲದಲ್ಲಿ ವ್ಯಕ್ತಿತ್ವ ಶೋಧವೂ, ಸಮಕಾಲೀನ ಸಾಂಸ್ಕೃತಿಕ ಬದುಕಿನ ನಡೆಯ ಶೋಧವೂ, ಸ್ವ ಮತ್ತು ಸಾಮಾಜಿಕ ವ್ಯಕ್ತಿತ್ವಗಳ ಆತ್ಮಶೋಧವೂ ಆಗಿರುತ್ತವೆ. ಈ ತ್ರಿವಳಿ ಶೋಧಗಳು ಸಾಹಿತ್ಯದ ಸಾಂಸ್ಕೃತಿಕ ಹೊಣೆಗಾರಿಕೆಗಳನ್ನು, ಜೀವಪರ ಕಾಳಜಿಗಳನ್ನು, ಪರಂಪರೆಯನ್ನು ಪ್ರಕಟಿಸುತ್ತಾ ವರ್ತಮಾನವನ್ನೂ ಒಟ್ಟಿಗೇ ಅರಿಯುವ ಪ್ರಯತ್ನಗಳನ್ನು ಮಾಡುತ್ತಿರುತ್ತವೆ. ಕನ್ನಡ ಕವಿತೆಗಳ ಈ ವಿಶಿಷ್ಟ ಪ್ರಯತ್ನಗಳ ಪ್ರಕ್ರಿಯೆಗಳನ್ನು ಪ್ರಸ್ತುತ ಅಧ್ಯಯನ ಗುರುತಿಸುವುದರಿಂದ ಈ ಅಧ್ಯಯನ ಮಹತ್ವ ಪಡೆದಿದೆ.

ಸಮಾಜಕ್ಕಾಗಿ, ಮನುಕುಲದ ಒಳಿತಿಗಾಗಿ ಎಲ್ಲವನ್ನೂ ತ್ಯಾಗಮಾಡುವ, ಹೋರಾಟಕ್ಕಿಳಿಯುವ, ವಿಶಿಷ್ಟವಾಗಿ ಚಿಂತಿಸುವ, ಸಾವಿಗೂ ಹೆದರದ ವ್ಯಕ್ತಿಯ ಶಕ್ತಿಯ ಮೂಲ ಹಾಗೂ ತಮ್ಮ ಸಜ್ಜನಿಕೆ-ತ್ಯಾಗಗಳಿಂದ ಕ್ರೂರ ಸಾಮಾಜಿಕ ವ್ಯವಸ್ಥೆಯಲ್ಲಿ, ಮನುಷ್ಯರಲ್ಲಿ ಉತ್ತಮಿಕೆಯನ್ನು ಮೂಡಿಸುವ ವ್ಯಕ್ತಿತ್ವಗಳ ಆಂತರಿಕ ಶಕ್ತಿ ಯಾವುದು ಎಂಬುದನ್ನು ಅರಿಯುವ ಈ ಪ್ರಯತ್ನಗಳು ವ್ಯಕ್ತಿಗಳ ಮೌಲ್ಯಯುತ ಬದುಕಿನ ಬದ್ಧತೆಯ ಕಡೆಗೆ ನಮ್ಮ ಕುತೂಹಲವನ್ನು ಕೇಂದ್ರೀಕರಿಸುತ್ತವೆ. ಸಮಕಾಲೀನ ಒತ್ತಡಗಳಿಗೆ ಪ್ರತಿಕ್ರಿಯಿಸುವ ಕವಿಗಳು ತಮ್ಮ ಪ್ರತಿಕ್ರಿಯೆಗೆ ಒಂದು ನೈತಿಕ, ಸೈದ್ಧಾಂತಿಕ ಆಧಾರವಾಗಿ ಉನ್ನತ ವ್ಯಕ್ತಿತ್ವಗಳನ್ನು ಬಳಸಿಕೊಂಡಿದ್ದಾರೆ. ಇವು ಸಾಹಿತ್ಯದ ಒಂದು ಪ್ರಕಾರವಾದ ಕವಿತೆಗಳಲ್ಲಿ ಬಳಕೆಯಾಗಿರುವ ವಿಶಿಷ್ಟತೆಯನ್ನು ಗುರುತಿಸುವ ಅವಕಾಶ ಇರುವುದರಿಂದ ಇಂತಹ ಅಧ್ಯಯನವು ಮಹತ್ವ ಪಡೆದಿದೆ.

ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸಿರುವ ಕವಿತೆಗಳು ಕೇವಲ ಆ ವ್ಯಕ್ತಿತ್ವಗಳ ವಿಶಿಷ್ಟತೆಯನ್ನು ಗುರುತಿಸುವ ಕೆಲಸವನ್ನಷ್ಟೇ ಮಾಡದೆ ವರ್ತಮಾನದ ಹಲವು ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯ ಜೀವವಿರೋಧಿ ನಡೆಯನ್ನೂ, ಶೋಷಣೆ, ಅನ್ಯಾಯ, ಜಾತಿಹಿಂಸೆ, ಅನೈತಿಕತೆ, ಭ್ರಷ್ಟತೆ, ವ್ಯಕ್ತಿ ಮತ್ತು ಸಮಾಜದಲ್ಲಿ ಮೌಲ್ಯಗಳ ಕುಸಿತ ಹಾಗೂ ಈ ವ್ಯಕ್ತಿತ್ವಗಳ ಮೂಲಕ ನಡೆಸಲಾಗುತ್ತಿರುವ ಸಾಂಸ್ಕೃತಿಕ ರಾಜಕಾರಣಗಳನ್ನು ವಿಡಂಬಿಸುವ, ಪ್ರತಿರೋಧಿಸುವ ವಿಶಿಷ್ಟ ಪ್ರಯತ್ನಗಳೂ ಆಗಿವೆ. ಆಧುನಿಕ ಕನ್ನಡ ಕಾವ್ಯದಲ್ಲಿನ ಈ ಪ್ರಕ್ರಿಯೆಗಳನ್ನು, ವಿಶಿಷ್ಟ ಕಾಳಜಿಗಳನ್ನು ಅರ್ಥಮಾಡಿಕೊಳ್ಳಲು ಸಹಕಾರಿಯಾಗುವುದರಿಂದ ಈ ಅಧ್ಯಯನ ಮಹತ್ವ ಪಡೆದಿದೆ.

**ಅಧ್ಯಯನದ ಹಿಂದಿನ ತಾತ್ವಿಕ ನೆಲೆಗಳು :**

ಸಾಹಿತ್ಯಕ್ಕೆ ತನ್ನ ಕಾಲದ ಬದುಕನ್ನು ವಿಮರ್ಶಿಸುವ, ರೂಪಿಸುವ ಜವಾಬ್ದಾರಿಗಳು ಇರುತ್ತವೆ. ಇದು ಸಾಹಿತ್ಯದ ಸಾಮಾಜಿಕ ಹೊಣೆಗಾರಿಕೆಯನ್ನು ತಿಳಿಸುತ್ತದೆ. ಪರಂಪರೆಯ ಉನ್ನತ ವ್ಯಕ್ತಿತ್ವಗಳೊಂದಿಗೆ ಮುಖಾಮುಖಿಯಾಗುವುದರ ಮುಖಾಂತರ ತನ್ನ ಕಾಲದ ಸಾಂಸ್ಕೃತಿಕ ಬದುಕನ್ನು ಅರಿಯುವ ಮತ್ತು ರೂಪಿಸುವ ಜವಾಬ್ದಾರಿಯುತ ಕೆಲಸವನ್ನು ಸಾಹಿತ್ಯ ನಿರ್ವಹಿಸುತ್ತಿರುತ್ತದೆ. ಸೃಜನಶೀಲ ಮನಸ್ಸುಗಳು ತಮ್ಮ ಪರಿಸರದ, ಪರಂಪರೆಯ ಸಾಂಸ್ಕೃತಿಕ ನಾಯಕರುಗಳನ್ನು ಸಾಹಿತ್ಯದ ಮುಖಾಂತರವಾಗಿ ರೂಪಿಸಿಕೊಡುವ ಕೆಲಸವನ್ನು ಮಾಡುತ್ತಿರುತ್ತವೆ. ಈ ನಿಟ್ಟಿನಲ್ಲಿ ಕಾಲಾತೀತವಾಗಿ ನಿಲ್ಲಬಲ್ಲ ಉನ್ನತ ವ್ಯಕ್ತಿತ್ವಗಳನ್ನು ವರ್ತಮಾನದಲ್ಲಿ ಮರುಗ್ರಹಿಸಿಕೊಳ್ಳುವ ಮುಖಾಂತರ ವರ್ತಮಾನದ ಹಲವಾರು ಸಾಂಸ್ಕೃತಿಕ ಸಮಸ್ಯೆಗಳಿಗೆ ಪರಿಹಾರಗಳನ್ನು ಹುಡುಕುವ, ಪ್ರತಿರೋಧವನ್ನು ಒಡ್ಡುವ ಪ್ರಯತ್ನ ಮಾಡುತ್ತಿರುತ್ತವೆ. ವ್ಯಕ್ತಿಗಳ ಬದುಕು, ಚಿಂತನೆ, ಹೋರಾಟದ ಮಹತ್ವವನ್ನು ಗುರುತಿಸುವ ಮುಖಾಂತರವಾಗಿ ಬೇರೆಲ್ಲಾ ಜ್ಞಾನಶಾಖೆಗಳಿಗಿಂತ ಭಿನ್ನವಾಗಿ ಆ ವ್ಯಕ್ತಿತ್ವಗಳನ್ನು ಕಂಡರಿಸುವ ಕೆಲಸವನ್ನು ಮಾಡುತ್ತಿರುತ್ತವೆ. ಜಾತಿಹಿಂಸೆ, ಭ್ರಷ್ಟ ರಾಜಕಾರಣ, ನೈತಿಕ ಅಧಃಪತನ, ಮೌಲ್ಯಗಳ ನಾಶ, ಶೋಷಣೆ, ವ್ಯವಸ್ಥೆಯ ಸಾಂಸ್ಕೃತಿಕ ರಾಜಕಾರಣ, ಜಾಗತೀಕರಣ, ಜಾಗತಿಕ ಯುದ್ಧ-ಹಿಂಸೆಗಳಂತಹ ಭೀಕರ ಸನ್ನಿವೇಶದ ಸಂದರ್ಭದಲ್ಲಿ ಜಗತ್ತಿನ ಮುಂದೆ ಇರುವ ಅಂತಿಮ ಆಯ್ಕೆಗಳ ಬಗೆಗೆ, ಪರಿಹಾರಗಳ ಬಗೆಗೆ ಈ ಉನ್ನತ ವ್ಯಕ್ತಿತ್ವಗಳ ಮುಖಾಂತರವಾಗಿ ಕವಿತೆಗಳು ಗಂಭೀರವಾಗಿ ಚಿಂತಿಸುತ್ತವೆ. ಈ ತರಹದ ವ್ಯಕ್ತಿತ್ವಗಳೊಂದಿಗಿನ ಅನುಸಂಧಾನದ ಮೂಲಕ ಕಾವ್ಯವೆಂಬ ಸಂಸ್ಥೆ ಲೋಕ ಸ್ವಾಸ್ಥ್ಯವನ್ನು ಕಾಪಾಡುವ ಅನೇಕ

ಪ್ರಕ್ರಿಯೆಗಳನ್ನು ಪ್ರಕಟಿಸುತ್ತಿರುತ್ತದೆ. ಇಂಥ ಸಂದರ್ಭಗಳಲ್ಲಿ ಅತ್ಯುತ್ತಮ ಕಾವ್ಯವೊಂದು ತನ್ನ ಸುತ್ತಲಿನ ಅಶುದ್ಧತೆಯನ್ನು, ಕೊಳಕು, ಕ್ರೌರ್ಯಗಳನ್ನು ತನ್ನೊಳಗೆ ತಂದುಕೊಂಡೆ ಅವುಗಳನ್ನು ಪ್ರತಿರೋಧಿಸುವ, ಮೀರುವ ಶಕ್ತಿ ಮೂಲಗಳನ್ನು ಹುಡುಕುತ್ತಿರುತ್ತದೆ. ಕಾವ್ಯದ ಈ ಶಕ್ತಿಯನ್ನು ಡಿ.ಆರ್. ನಾಗರಾಜ್ ಅವರು ಹೀಗೆ ಗುರುತಿಸುತ್ತಾರೆ. "ಛಿದ್ರೀಕೃತ ವ್ಯಕ್ತಿತ್ವ ನಿರ್ಮಾಣವೇ ಈ ನಾಗರೀಕತೆಯ ಪ್ರಮುಖ ಲಕ್ಷಣವಾಗಿರುವಾಗ ಅಖಂಡತೆ, ಐಕ್ಯತೆ ಸಾಧಿಸುವುದು ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳುವ ಲಕ್ಷಣ ಎಂದು ಭಾವಿಸಿದ್ದೇನೆ. ಎಷ್ಟೇ ಆಗಲಿ ಕಾವ್ಯ ಆ ರೀತಿಯ ಅಖಂಡತೆಯ ಅಭಿವ್ಯಕ್ತಿ ತಾನೆ".[7] ವರ್ತಮಾನದ ಜಗತ್ತಿನ ಸ್ವಾಸ್ಥ್ಯವನ್ನು ಕಾಪಾಡುವ ವಿಶಿಷ್ಟ ಕಾಳಜಿ ಮತ್ತು ಹೊಣೆಗಾರಿಕೆಗಳನ್ನು ಕಾವ್ಯ ಹೊತ್ತಿರುತ್ತದೆ. ಇಂಥ ಪ್ರಕ್ರಿಯೆಯ ಭಾಗವಾಗಿಯೇ ಪರಂಪರೆಯ, ವರ್ತಮಾನದ ಉನ್ನತ ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸುವ ಕೆಲಸ ಮಾಡುತ್ತಿರುತ್ತದೆ. ವ್ಯಕ್ತಿತ್ವಗಳ ಅನನ್ಯತೆಯನ್ನು, ಮಿತಿಗಳನ್ನು ಗುರುತಿಸಿಕೊಳ್ಳುವ ಮೂಲಕ ಅವರ ಹೋರಾಟ, ಚಿಂತನೆಗಳ ಪ್ರಸ್ತುತತೆಯನ್ನು, ವರ್ತಮಾನದ ಸಮಸ್ಯೆಗಳ ವಿರುದ್ಧ ಹೋರಾಡಲು ಬೇಕಾದ ದಾರಿಗಳನ್ನು ಹುಡುಕುತ್ತಿರುತ್ತದೆ.

ನಾವು ಬದುಕುತ್ತಿರುವ ಸಾಂಸ್ಕೃತಿಕ ವಾತಾವರಣವನ್ನು ಅರ್ಥೈಸಿಕೊಳ್ಳುವ, ವಿಡಂಬಿಸುವ, ಪ್ರತಿರೋಧಿಸುವ ಪ್ರಯತ್ನಗಳನ್ನು ಸಾಹಿತ್ಯ ಮಾಡುತ್ತಿರುತ್ತದೆ. ಹಾಗಾಗಿ ಸಾಹಿತ್ಯ ವಿಮರ್ಶೆಯಂತ ಪ್ರಕ್ರಿಯೆಗಳಿಗೂ ಕೂಡ ಇಂಥ ವಿಶಿಷ್ಟ ಅವಕಾಶಗಳಿವೆ. ಏಕೆಂದರೆ ನಾವು ಬದುಕುತ್ತಿರುವ ಪರಿಸರ ಹಲವು ಜೀವವಿರೋಧಿ ಹಾಗೂ ವಿಧ್ವಂಸಕಾರಿ ಕೃತ್ಯಗಳಿಂದ ತುಂಬಿಹೋಗಿದೆ. ಅದನ್ನು ನೋಡಿ ಸಹಿಸದ ಮಾನವೀಯ ಕಳಕಳಿಯುಳ್ಳ ಮನಸ್ಸುಗಳು ಅವುಗಳನ್ನು ಅರ್ಥಮಾಡಿಕೊಳ್ಳುವ, ವಿಮರ್ಶೆಗೆ ಒಡ್ಡುವ ಪ್ರಯತ್ನವನ್ನು ಮಾಡುತ್ತಿರುತ್ತವೆ. ಆಧುನಿಕ ಕನ್ನಡ ಕಾವ್ಯ ಕೂಡ ಇಂಥ ವಿಶಿಷ್ಟ ಪ್ರಯತ್ನದಲ್ಲಿ ತೊಡಗಿರುವುದನ್ನು ಕಾಣಬಹುದು.

ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಈ ನಾಲ್ಕು ವ್ಯಕ್ತಿಗಳ ಆಲೋಚನೆ, ಹೋರಾಟ, ಕಳಕಳಿಗಳಲ್ಲಿ ಶಾಂತಿ, ಸಮಾನತೆ, ಜೀವಪರತೆಯ ಕಾಳಜಿಗಳಿವೆ. ನೊಂದವರ–ಅನ್ಯಾಯಕ್ಕೆ ಒಳಗಾದವರ ದನಿಯಾದ, ಸಾಮಾಜಿಕ ಪಲ್ಲಟಗಳಿಗಾಗಿ ಹೋರಾಡಿದ, ಮೌಲಿಕ ಹಾಗೂ ನೈತಿಕವಾಗಿ ಬದುಕುವ ಮೂಲಕ ತಮ್ಮ ಕಾಲದ ಸಮಾಜವನ್ನು ಪ್ರಭಾವಿಸಿದ ವ್ಯಕ್ತಿತ್ವಗಳಾಗಿದ್ದಾರೆ. ಇಂಥ ವ್ಯಕ್ತಿತ್ವಗಳ ಎದುರಿಗೆ ತಾವು ಅನುಭವಿಸಿದ ನೋವು, ಸಂಕಟ, ಅಪಮಾನ, ಹತಾಶೆಗಳನ್ನು ಹೇಳಿಕೊಳ್ಳುವ, ಬಿಡುಗಡೆಗಾಗಿ ಹಂಬಲಿಸುವ, ಸಮಾನತೆಯ ಕನಸನ್ನು, ನೆಮ್ಮದಿಯ ನಾಳೆಗಳನ್ನು ನಿರೀಕ್ಷಿಸುವ ಹಲವು ಅಭಿವ್ಯಕ್ತಿಗಳನ್ನು ಕಾಣಬಹುದು. ಇವು ಸಾಮಾಜಿಕ ಮತ್ತು ರಾಜಕೀಯ ಕ್ರೌರ್ಯಗಳ ಹಲವು ಮುಖಗಳನ್ನು, ಅವುಗಳ ಹಿಂದಿನ ಶೋಷಕ ಶಕ್ತಿಗಳನ್ನು, ಅವುಗಳ ಪ್ರಾಬಲ್ಯವನ್ನು ಗುರುತಿಸುವ ಪ್ರಯತ್ನಗಳಾಗಿವೆ. ಆಧುನಿಕ ಕನ್ನಡ ಕಾವ್ಯ ಈ ವಿಶಿಷ್ಟ ಪ್ರಯತ್ನದಲ್ಲಿ ತೊಡಗಿದೆ. ಇವುಗಳ ಅರಿಯುವಿಕೆ, ವಿಶ್ಲೇಷಣೆಯ ದೃಷ್ಟಿಯಿಂದ ಕಾವ್ಯ ವಿಮರ್ಶೆಯ ಪ್ರಸ್ತುತತೆಯಿದೆ.

ಎಲ್ಲ ಬಗೆಯ ಅಸಮಾನತೆ, ಶೋಷಣೆ, ಅನ್ಯಾಯಗಳನ್ನು ಪ್ರತಿರೋಧಿಸುತ್ತಲೇ ಬಂದಿರುವ ಕನ್ನಡ ಕಾವ್ಯ ಆಧುನಿಕ ಜಗತ್ತಿನ ಹಲವು ವಿಕಾರಗಳನ್ನು, ಅವುಗಳ ಜೀವವಿರೋಧಿ ನಡೆಗಳನ್ನೂ ವಿರೋಧಿಸುತ್ತದೆ. ಬಂಡವಾಳಶಾಹಿ ಕ್ರೌರ್ಯ, ಜಾಗತೀಕರಣದ ಪರಿಣಾಮ, ಯುದ್ಧ, ಹಿಂಸೆ, ಜಾತಿ ಶೋಷಣೆ, ರಾಜಕಾರಣದ ಅಮಾನವೀಯ ಮುಖಗಳನ್ನು ತೆರೆದಿಡುವ ಮೂಲಕ ಸಮಕಾಲೀನ ಬದುಕಿನ ವಿಮರ್ಶೆಯಲ್ಲಿ ತನ್ನನ್ನು

ಪ್ರಾಮಾಣಿಕವಾಗಿ ತೊಡಗಿಸಿಕೊಂಡಿದೆ. ಇವೆಲ್ಲದರ ಅಭಿವ್ಯಕ್ತಿಗಾಗಿ ಆಧುನಿಕ ಕನ್ನಡ ಕಾವ್ಯ ತನ್ನ ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ಅಸ್ತ್ರವಾಗಿ ಬಳಸಿಕೊಂಡಿದೆ. ಆ ವ್ಯಕ್ತಿತ್ವಗಳ ಭರವಸೆಯ ಬೆಳಕಿನಲ್ಲಿ ವರ್ತಮಾನದ ಬದುಕನ್ನು ಸುಧಾರಿಸುವ, ರೂಪಿಸಿಕೊಳ್ಳುವ ತುಡಿತವನ್ನು ವ್ಯಕ್ತಪಡಿಸಿದೆ. ಇವೆಲ್ಲವುಗಳ ಅರ್ಥೈಸಿಕೊಳ್ಳುವಿಕೆ ಕನ್ನಡ ಕಾವ್ಯದ ಶಕ್ತಿ ಮತ್ತು ಕಾಳಜಿಗಳನ್ನು ಅರಿಯುವ ದೃಷ್ಟಿಯಿಂದ ಮಹತ್ವ ಪಡೆದಿದೆ.

ಕನ್ನಡ ಕಾವ್ಯ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ವ್ಯಕ್ತಿತ್ವಗಳ ಪ್ರಭಾವಕ್ಕೆ ಒಳಗಾಗಿದೆ. ಈ ವ್ಯಕ್ತಿತ್ವಗಳು ಕನ್ನಡದ ಕವಿಗಳನ್ನು ಬಹಳವಾಗಿ ಕಾಡಿದ್ದಾರೆ. ಇವರು ಯಾವುದೇ ಜಾತೀಯತೆ, ಬೇಧವಿಲ್ಲದೆ ಈ ದೇಶದ ಜನರ ಸಂಸ್ಕೃತಿಯನ್ನು, ಆತ್ಮಸಾಕ್ಷಿಯನ್ನು ರೂಪಿಸುವಲ್ಲಿ ಪ್ರಧಾನ ಪಾತ್ರವಹಿಸಿದವರು. ಹಾಗಾಗಿಯೇ ನಮ್ಮ ಕವಿಗಳು ಸಮಕಾಲೀನ ಬದುಕಿನ ಸಮಸ್ಯೆಗಳಿಗೆ ಪರಿಹಾರಗಳನ್ನು ಅವರಲ್ಲಿ ಹುಡುಕಲು ಪ್ರಯತ್ನಿಸುತ್ತಿದ್ದಾರೆ. ಇಲ್ಲವೇ ಅವರಲ್ಲಿ ದೂರುತ್ತಲಿದ್ದಾರೆ. ಸಮುದಾಯದ ಒಳಿತಿಗಾಗಿ, ಉದ್ಧಾರಕ್ಕಾಗಿ ಬದುಕಿದ ವ್ಯಕ್ತಿತ್ವಗಳ ಎದುರಿಗೆ ದೂರುವಿಕೆ, ಮೊರೆಹೋಗುವಿಕೆ, ತಮ್ಮ ಉದ್ಧಾರಕ್ಕಾಗಿ ಜನ್ಮವೆತ್ತಿ ಬರುವಂತೆ ಹಂಬಲಿಸುವುದು ಕಾವ್ಯದ ಮಾನವೀಯ ಕಳಕಳಿಯನ್ನು ತೋರಿಸುತ್ತದೆ. ಒಟ್ಟಾರೆ ಬುದ್ಧನ ಚಿಂತನೆ, ಪ್ರತಿಪಾದನೆಗಳು ಮುಂದೆ ಬಸವಣ್ಣ, ಗಾಂಧಿ, ಅಂಬೇಡ್ಕರ್ ಅವರುಗಳಲ್ಲಿ ಮರುಹುಟ್ಟು ಪಡೆಯುವುದನ್ನು ಕಾಣಬಹುದು. ಬುದ್ಧನಿಂದ ಆರಂಭವಾದ ವೈಚಾರಿಕತೆ, ವೈದಿಕಶಾಹೀ ವಿರೋಧ, ಸಾಂಪ್ರದಾಯಿಕತೆ-ಜಡತೆಯ ಬಗೆಗಿನ ಪ್ರತಿರೋಧ, ಶಾಂತಿ-ಸಮಾನತೆಯ ಆಶಯಗಳು, ನಿಸರ್ಗ ವಿವೇಕದ ಜೀವನ ಕ್ರಮಗಳು ಈ ನಾಗರೀಕತೆಯ ಉನ್ನತ ವ್ಯಕ್ತಿತ್ವಗಳಲ್ಲಿ ನಿರಂತರವಾಗಿ ಮುಂದುವರೆದುಕೊಂಡು ಬಂದಿವೆ. ಆ ಆಶಯಗಳನ್ನು ವರ್ತಮಾನದಲ್ಲಿ ಸಾಕಾರಗೊಳಿಸುವ ವಿಶಿಷ್ಟ ಪ್ರಯತ್ನವನ್ನು ಆಧುನಿಕ ಕನ್ನಡ ಕಾವ್ಯ ಮಾಡಿದೆ.

ಆಧುನಿಕ ಕನ್ನಡ ಕಾವ್ಯ ಹಲವು ವಿಶಿಷ್ಟ ಅನುಭವ ಹಾಗೂ ಪ್ರಭಾವಗಳಿಂದ ರೂಪುಗೊಂಡು ಸಮೃದ್ಧವಾಗಿರುವ ಸಾಹಿತ್ಯ ಪ್ರಕಾರ. ಇದು ತನ್ನ ಶಕ್ತಿ ಮತ್ತು ಮಿತಿಯೊಂದಿಗೆ ಜೀವಪರ ದನಿಯನ್ನು ಎತ್ತುತ್ತಾ ಬಂದಿದೆ. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಈ ನಾಲ್ಕೂ ವ್ಯಕ್ತಿತ್ವ ಮತ್ತು ಆಶಯಗಳನ್ನು ಅರಿಯುವ ಹಾಗೂ ಸಮಕಾಲೀನ ಬದುಕಿಗೆ ತಂದುಕೊಳ್ಳುವ ಪ್ರಯತ್ನವನ್ನು ನಿರಂತರವಾಗಿ ಮಾಡುತ್ತಾ ಬಂದಿದೆ. ಈ ಪ್ರಕ್ರಿಯೆಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಸಂಶೋಧನಾ ಅಧ್ಯಯನದ ಹಿನ್ನೆಲೆಯಲ್ಲಿದೆ.

### ಅಧ್ಯಯನ ವಿಧಾನ :

ಆಧುನಿಕ ಕನ್ನಡ ಕಾವ್ಯದಲ್ಲಿ ರಚನೆಯಾಗಿರುವ ವ್ಯಕ್ತಿಚಿತ್ರ ಕವಿತೆಗಳು ವ್ಯಕ್ತಿಗಳ ವ್ಯಕ್ತಿತ್ವದ ವಿಶಿಷ್ಟ ಗುಣ, ಸಾಧನೆಗಳನ್ನು ಮಾತ್ರ ಚಿತ್ರಿಸದೆ ಅವರನ್ನು ನೆಪವಾಗಿರಿಸಿಕೊಂಡು ಹಾಗೂ ಅವರನ್ನು ಅಸ್ತ್ರವಾಗಿಸಿಕೊಂಡು ಸಮಕಾಲೀನ ಸಾಂಸ್ಕೃತಿಕ ಸಮಸ್ಯೆ-ಸವಾಲು, ಬಿಕ್ಕಟ್ಟುಗಳೊಂದಿಗೆ ಮುಖಾಮುಖಿಯಾಗಿವೆ. ವರ್ತಮಾನದ ಸಾಮಾಜಿಕ, ರಾಜಕೀಯ ಅಗತ್ಯಗಳನ್ನು ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ಶೋಧಿಸಿಕೊಳ್ಳುವ ಮೂಲಕ ಪೂರೈಸಿಕೊಳ್ಳುವ ವಿಶಿಷ್ಟ ಪ್ರಯತ್ನವನ್ನು ಮಾಡಿವೆ. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಅವರನ್ನು ಕುರಿತ ಕವಿತೆಗಳು ಅವರ ಜೀವನ- ಸಾಧನೆ-ವ್ಯಕ್ತಿತ್ವದ ವಿಶಿಷ್ಟ ಗುಣಗಳನ್ನು ಗುರುತಿಸುವ ಜೊತೆಗೆ ಸಮಕಾಲೀನ ಸಾಮಾಜಿಕ, ರಾಜಕೀಯ ವ್ಯವಸ್ಥೆಯ ಕ್ರೌರ್ಯಗಳನ್ನು, ವಿಕೃತ ರಾಜಕಾರಣಗಳನ್ನು, ಅನ್ಯಾಯ, ಶೋಷಣೆಗಳನ್ನು

ಪ್ರತಿರೋಧಿಸುವ ಕೆಲಸವನ್ನೂ ಮಾಡಿವೆ. ಇವರ ಮೂಲಕ ನಮ್ಮ ವ್ಯವಸ್ಥೆಯ ಹಲವು ಹುಳುಕುಗಳನ್ನು, ಕರಾಳ ಮುಖಗಳನ್ನು ತೆರೆದಿಡುವ ಕೆಲಸ ಮಾಡಿವೆ. ಈ ವ್ಯಕ್ತಿತ್ವಗಳ ಎದುರಿಗೆ ಸ್ವ ಮತ್ತು ಸಮಷ್ಠಿಯ ಆತ್ಮವಿಮರ್ಶೆಯಲ್ಲಿ ತೊಡಗುವ ಮೂಲಕ ತಪ್ಪುಗಳನ್ನು ತಿದ್ದಿಕೊಳ್ಳುವ ಪ್ರಾಮಾಣಿಕತೆಯನ್ನು ಮೆರೆಯಲಾಗಿದೆ. ವರ್ತಮಾನದ ಸಾಂಸ್ಕೃತಿಕ ಸಮಸ್ಯೆ-ಸವಾಲುಗಳ ನಡುವೆ ಈ ವ್ಯಕ್ತಿತ್ವಗಳನ್ನೂ, ಸಮಾಜವನ್ನೂ ಒಟ್ಟಿಗೇ ಇಟ್ಟು ಅರಿಯುವ ವಿಶಿಷ್ಟ ಪ್ರಯತ್ನವನ್ನು ಮಾಡಿವೆ. ಬದಲಾದ ಕಾಲ, ಸಂದರ್ಭ, ಆಲೋಚನೆಗಳು ವ್ಯಕ್ತಿತ್ವಗಳನ್ನು ಗ್ರಹಿಸುವ, ಎದುರಾಗುವ ವಿಧಾನವನ್ನು ಪ್ರಭಾವಿಸುತ್ತಿರುತ್ತವೆ. ಈ ಹಿನ್ನೆಲೆಯಲ್ಲಿ ವ್ಯಕ್ತಿತ್ವಗಳನ್ನು ಶೋಧಿಸುವ ವಿಧಾನಗಳೂ ನಿರಂತರವಾಗಿ ಬದಲಾವಣೆ ಕಂಡಿವೆ. ಈ ಶೋಧ ಕ್ರಮಗಳು ನಮ್ಮ ಸಾಮಾಜಿಕ, ರಾಜಕೀಯ ವ್ಯವಸ್ಥೆಯ ಬಗೆಗೆ ಹಲವು ಸಾಂಸ್ಕೃತಿಕ ಪ್ರಶ್ನೆಗಳನ್ನು ಹುಟ್ಟುಹಾಕುತ್ತಿವೆ. ಹಾಗಾಗಿ ವ್ಯಕ್ತಿಚಿತ್ರ ಕವಿತೆಗಳಿಗೆ ಕೇವಲ ಚಾರಿತ್ರಿಕ ಮಹತ್ವವಷ್ಟೇ ಅಲ್ಲದೆ ಸಾಂಸ್ಕೃತಿಕ ಮಹತ್ವವೂ ಇದೆ. ಈ ಕವಿತೆಗಳು ತಮ್ಮ ಕಾಲದ ಸಾಂಸ್ಕೃತಿಕ ಬದುಕಿಗೆ ನೀಡಿದ ತೀವ್ರ ಪ್ರತಿಕ್ರಿಯೆಗಳೂ ಹಾಗೂ ವ್ಯವಸ್ಥೆಯ ವಿರುದ್ಧ ಎತ್ತಿದ ಸಾಂಸ್ಕೃತಿಕ ಪ್ರಶ್ನೆಗಳೂ ಆಗಿವೆ. ಪರಂಪರೆಯ ವ್ಯಕ್ತಿತ್ವಗಳೊಂದಿಗೆ ವರ್ತಮಾನದ ನಡೆಯನ್ನು ರೂಪಿಸಿಕೊಳ್ಳುವ ವಿಶಿಷ್ಟ ಪ್ರಯತ್ನಗಳಾಗಿ ಇವು ಕಂಡುಬರುತ್ತವೆ. ಹಾಗಾಗಿ ಆಧುನಿಕ ಕನ್ನಡ ಕಾವ್ಯ ಈ ಎಲ್ಲಾ ಹೊಣೆಗಾರಿಕೆಗಳನ್ನು ಹೊರುತ್ತಿರುವುದರಿಂದ ಈ ಎಲ್ಲಾ ಅಂಶಗಳನ್ನು ವಿಸ್ತೃತವಾಗಿ ಚರ್ಚಿಸಲು ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಸಾಂಸ್ಕೃತಿಕ ಅಧ್ಯಯನ ವಿಧಾನವನ್ನು ಅನುಸರಿಸಲಾಗಿದೆ.

**ಕೊನೆ ಟಿಪ್ಪಣಿ.**

೧. ಶಕ್ತಿ ಶಾರದೆಯ ಮೇಳ, ಡಿ.ಆರ್. ನಾಗರಾಜ್,· ಪು. .ಸಂ. ೧೨

# ಅಧ್ಯಾಯ ೨

## ಇದುವರೆಗೆ ನಡೆದಿರುವ ಅಧ್ಯಯನಗಳ ವಿಮರ್ಶಾತ್ಮಕ ಸಮೀಕ್ಷೆ

ಹೊಸಗನ್ನಡ ಕಾವ್ಯದಲ್ಲಿ ಬುದ್ಧ, ಬಸವಣ್ಣ, ಗಾಂಧಿ ಮತ್ತು ಅಂಬೇಡ್ಕರ್ ಅವರುಗಳನ್ನು ಕುರಿತ ನೂರಾರು ಕವಿತೆಗಳು ಕಾಣಸಿಗುತ್ತವೆ. ಕನ್ನಡ ಕವಿಗಳು ನೇರವಾಗಿಯೋ, ಪ್ರಾಸಂಗಿಕವಾಗಿಯೋ ಇವರನ್ನು ಕುರಿತು ಕವಿತೆ ರಚಿಸಿರುವುದರಿಂದ ಈ ವ್ಯಕ್ತಿತ್ವಗಳನ್ನು ಕುರಿತ ಕವಿತೆಗಳು ದೊಡ್ಡ ಪ್ರಮಾಣದಲ್ಲೆ ದೊರೆಯುತ್ತವೆ. ಹೊಸಗನ್ನಡ ಕಾವ್ಯದ ಎಲ್ಲಾ ಕಾಲಘಟ್ಟಗಳಲ್ಲೂ ಇವರನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳು ರಚನೆಯಾಗಿದ್ದು, ಅವು ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸಿರುವ ನೆಲೆಗಳು, ಅವುಗಳ ತಾತ್ವಿಕ ನಿಲುವುಗಳು, ಅಭಿವ್ಯಕ್ತಿಸಿರುವ ಸಾಂಸ್ಕೃತಿಕ ವಿಚಾರಗಳು ಹಲವು. ದೊಡ್ಡ ಪ್ರಮಾಣದಲ್ಲಿ ರಚನೆಯಾಗಿರುವ ವ್ಯಕ್ತಿಚಿತ್ರ ಕವಿತೆಗಳ ಆಶಯ ಮತ್ತು ಧೋರಣೆಗಳು ಕೂಡ ಕವಿಗಳ ಗ್ರಹಿಕೆ ಮತ್ತು ಆಲೋಚನೆಗೆ ಸಂಬಂಧಿಸಿದಂತೆ, ಆಯಾ ಕಾಲದ ಸಾಂಸ್ಕೃತಿಕ ಒತ್ತಡಗಳಿಗೆ ತಕ್ಕಂತೆ ಭಿನ್ನ ರೂಪಗಳಲ್ಲಿ ಅಭಿವ್ಯಕ್ತಿ ಪಡೆದಿವೆ. ಕನ್ನಡ ಕವಿಗಳು ಈ ನಾಲ್ಕೂ ವ್ಯಕ್ತಿತ್ವಗಳೊಂದಿಗೆ ಹೇಗೆ ಅನುಸಂಧಾನ ನಡೆಸಿದ್ದಾರೆ? ಇದು ಆ ವ್ಯಕ್ತಿತ್ವಗಳನ್ನು ಅರಿಯುವ ಪ್ರಯತ್ನವೋ ಅಥವಾ ಸಮಕಾಲೀನ ಸಾಂಸ್ಕೃತಿಕ ಬದುಕನ್ನು ತಿದ್ದುವ, ತಮ್ಮ ತಿಳುವಳಿಕೆಯ ಬೇರುಗಳನ್ನು ಅವರಲ್ಲಿ ಕಂಡುಕೊಳ್ಳುವ ಪ್ರಯತ್ನಗಳೋ ಎಂಬ ಹಲವು ಕುತೂಹಲಕಾರೀ ಪ್ರಶ್ನೆಗಳು ಕಾಡದೆ ಇರಲಾರವು. ಈ ನಿಟ್ಟಿನಲ್ಲಿ ಬುದ್ಧ, ಬಸವ, ಗಾಂಧಿ ಮತ್ತು ಅಂಬೇಡ್ಕರ್ ಕುರಿತ ವ್ಯಕ್ತಿಚಿತ್ರ ಕವಿತೆಗಳನ್ನು ಕುರಿತ ಅಧ್ಯಯನಗಳು ಇಲ್ಲಿಯವರೆಗೆ ಯಾವ ನೆಲೆಯಲ್ಲಿ ನಡೆದಿವೆ? ಅವುಗಳ ಹಿಂದಿನ ತಾತ್ವಿಕ ನಿಲುವುಗಳಾವುವು? ಎಂಬುದನ್ನು ಕಂಡುಕೊಳ್ಳುವುದು ಸಮಕಾಲೀನ ಸಾಹಿತ್ಯಾಧ್ಯಯನದ ತುರ್ತುಗಳಲ್ಲೊಂದು. ಏಕೆಂದರೆ ಚಾರಿತ್ರಿಕ ವ್ಯಕ್ತಿತ್ವಗಳಾದ ಇವರು ದೇಶದ ಸಾಂಸ್ಕೃತಿಕ ಬದುಕನ್ನು ಪ್ರಭಾವಿಸುತ್ತಾ, ರೂಪಿಸುತ್ತಾ ಬಂದಿದ್ದಾರೆ. ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ವ್ಯವಸ್ಥೆಯಲ್ಲಿ ಬಹುದೊಡ್ಡ ಪಲ್ಲಟಗಳನ್ನು ತರಲು ಹೋರಾಡಿದವರು ಇವರು. ನಮ್ಮ ಸಾಂಸ್ಕೃತಿಕ ಬದುಕನ್ನೂ, ಸಾಹಿತ್ಯವನ್ನೂ, ಚಳುವಳಿಗಳನ್ನೂ, ಆಲೋಚನಾ ಪ್ರಜ್ಞೆಯನ್ನೂ ಪ್ರಭಾವಿಸುತ್ತಲೇ ಇರುವ, ಮತ್ತೆ ಮತ್ತೆ ಮುಖಾಮುಖಿಯಾಗಲೇಬೇಕಾದ ವ್ಯಕ್ತಿತ್ವಗಳಾಗಿದ್ದಾರೆ. ಹಾಗಾಗಿ ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಇದುವರೆವಿಗೂ ಈ ವ್ಯಕ್ತಿಗಳನ್ನು ಕುರಿತ ಕವಿತೆಗಳ ಬಗೆಗೆ ನಡೆದಿರುವ ಸಂಶೋಧನೆ, ಚರ್ಚೆ, ವಿಮರ್ಶೆ, ವಿಶ್ಲೇಷಣೆಗಳನ್ನು ಗಮನಿಸಿ ಪ್ರಸ್ತುತ ಸಂಶೋಧನಾ ಅಧ್ಯಯನದ ತಾತ್ವಿಕತೆ ಮತ್ತು ವಿಧಾನವನ್ನು ನಿರ್ಧರಿಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಬುದ್ಧ, ಬಸವಣ್ಣ, ಗಾಂಧಿ ಮತ್ತು ಅಂಬೇಡ್ಕರರನ್ನು ಕುರಿತ ಕವಿತೆಗಳ ಬಗೆಗಿನ ಇದುವರೆಗಿನ ಅಧ್ಯಯನಗಳು ಪ್ರಾಸಂಗಿಕ ಮತ್ತು ಸಂಶೋಧನಾ ಉದ್ದೇಶಗಳೆಂಬ ಎರಡು ನೆಲೆಗಳಲ್ಲಿ ನಡೆದಿವೆ. ಕವನಗಳನ್ನು ಕುರಿತ ಬಹುಪಾಲು ಚರ್ಚೆ ಕವನ ಸಂಕಲನಗಳಿಗೆ ಬರೆದ ಮುನ್ನುಡಿ, ಬೆನ್ನುಡಿ, ಪದ್ಯಗಳ ವಿಶ್ಲೇಷಣೆ, ವಿಮರ್ಶೆ,

ಅಭಿನಂದನಾ ಗ್ರಂಥ ಹಾಗೂ ಸಂಶೋಧನಾ ಪ್ರಬಂಧ ಮುಂತಾದವುಗಳ ಮುಖಾಂತರ ನಡೆದಿರುವುದು ಕಂಡುಬರುತ್ತದೆ. ಈ ಅಧ್ಯಯನಗಳು ಹೆಚ್ಚಿನ ಸಂದರ್ಭದಲ್ಲಿ ಒಬ್ಬ ಕವಿಯ ಒಟ್ಟು ಸಾಹಿತ್ಯವನ್ನೊ, ಆಶಯ ಪ್ರಧಾನ ಅಧ್ಯಯನದ ಭಾಗವಾಗಿಯೋ ಅಥವಾ ಒಂದು ಸಾಹಿತ್ಯ ಪಂಥ, ಸಿದ್ಧಾಂತವನ್ನು ಕುರಿತಂತೆ ನಡೆದಿರುವ ಚರ್ಚೆ, ವಿಮರ್ಶೆ, ವಿಶ್ಲೇಷಣೆ, ಸಂಶೋಧನೆಗಳ ಸಂದರ್ಭದಲ್ಲಿ ನಡೆದಂತವುಗಳಾಗಿವೆ. ಇಲ್ಲಿ ವ್ಯಕ್ತಿಚಿತ್ರ ಕವಿತೆಗಳನ್ನೇ ಪ್ರಧಾನವಾಗಿ 'ವ್ಯಕ್ತಿತ್ವ' ಕೇಂದ್ರಿತ ನೆಲೆಯಲ್ಲಿ ನೋಡಿದ ಉದಾಹರಣೆಗಳು ಕಡಿಮೆ. ಬದಲಾಗಿ ಸಾಂದರ್ಭಿಕ ಆಶಯಗಳಿಗೆ ತಕ್ಕಂತೆ ಚರ್ಚಿತವಾದವುಗಳಾಗಿವೆ. ಹಾಗಾಗಿ ಇವೆಲ್ಲವೂ ಪ್ರಾಸಂಗಿಕ ಅಧ್ಯಯನಗಳಾಗಿವೆಯೆ ಹೊರತು ಹೊಸಗನ್ನಡ ಕಾವ್ಯದಲ್ಲಿ ಈ ನಾಲ್ಕು ವ್ಯಕ್ತಿಗಳ ಬಗೆಗೆ ಬಂದಿರುವ ಒಟ್ಟು ಕವಿತೆಗಳನ್ನು ಪ್ರಧಾನವಾಗಿ ಇಟ್ಟುಕೊಂಡು ವಿಮರ್ಶೆ ಅಥವಾ ಸಂಶೋಧನೆಗಳು ನಡೆದಿರುವುದಿಲ್ಲ. ಅಲ್ಲದೆ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಈ ನಾಲ್ಕೂ ವ್ಯಕ್ತಿತ್ವಗಳನ್ನು ಕನ್ನಡ ಕಾವ್ಯ ಶೋಧನೆಗೆ ಒಳಪಡಿಸಿರುವ ನೆಲೆಗಳನ್ನು, ಅವುಗಳನ್ನು ನಿಯಂತ್ರಿಸಿರುವ ಸಾಂಸ್ಕೃತಿಕ ಯಜಮಾನ್ಯ ಶಕ್ತಿಗಳನ್ನು ಅರಿಯುವ ದೃಷ್ಟಿಯಿಂದ ಮಾಡಿರುವ ಅಧ್ಯಯನಗಳು ಕಂಡುಬರುವುದಿಲ್ಲ.

ಇದುವರೆಗೆ ಈ ನಾಲ್ಕೂ ವ್ಯಕ್ತಿಗಳ ಬಗೆಗಿನ ವ್ಯಕ್ತಿಚಿತ್ರ ಕವಿತೆಗಳನ್ನು ಕುರಿತಂತೆ ನಡೆದಿರುವ ಅಧ್ಯಯನಗಳನ್ನು ಅವುಗಳ ಉದ್ದೇಶ, ವಿಧಾನ ಮತ್ತು ಆಶಯಗಳನ್ನು ಆಧರಿಸಿ ನಾಲ್ಕು ಬಗೆಗಳಲ್ಲಿ ವಿಂಗಡಿಸಿಕೊಂಡು ವಿಶ್ಲೇಷಿಸಲಾಗಿದೆ.

೧. ಆರಾಧನೆ – ಆಸ್ವಾದನೆ ಪ್ರಧಾನ ಅಧ್ಯಯನ.
೨. ಪ್ರಭಾವ – ಪ್ರೇರಣೆ ಪ್ರಧಾನ ಅಧ್ಯಯನ.
೩. ಸಾರಾಂಶ ಮತ್ತು ವಿವರಣೆ ಪ್ರಧಾನ ಅಧ್ಯಯನ.
೪. ಸಾಂಸ್ಕೃತಿಕ ಅಧ್ಯಯನ.

**೧. ಆರಾಧನೆ ಮತ್ತು ಆಸ್ವಾದನೆ ಪ್ರಧಾನ ಅಧ್ಯಯನ** : ವ್ಯಕ್ತಿಗಳನ್ನು ಮನುಷ್ಯತನವನ್ನು ಮೀರಿದ ಒಂದು ಶಕ್ತಿಯಾಗಿ ದೈವೀಕರಿಸಿ ನೋಡುವ ಮನೋಧೋರಣೆಗಳು ಆರಾಧನೆ ಮತ್ತು ಆಸ್ವಾದನೆ ಪ್ರಧಾನ ಅಧ್ಯಯನದ ಹಿಂದೆ ಕೆಲಸ ಮಾಡಿವೆ. ಅದರಲ್ಲೂ ವ್ಯಕ್ತಿಗಳು ಜಾತಿ, ಧರ್ಮದ ನಾಯಕರೆಂಬಂತೆ ಬಿಂಬಿಸಲ್ಪಟ್ಟಾಗ ಅವು ಕೀರ್ತಿಸುವಿಕೆಯ ಅತಿರೇಕದಲ್ಲಿ ಬಂದು ನಿಲ್ಲುತ್ತವೆ. ವ್ಯಕ್ತಿಗಳನ್ನು ಆರಾಧಿಸುವ ನೆಲೆಯನ್ನು ಮೀರಿ ನೋಡಬಹುದಾದ ಅನೇಕ ಮಾರ್ಗಗಳಿವೆ. ಆ ಮಾರ್ಗಗಳ ಮೂಲಕ ವ್ಯಕ್ತಿಗಳನ್ನು ಎದುರುಗೊಳ್ಳುವ, ಅರ್ಥಮಾಡಿಕೊಳ್ಳುವ, ವಿಮರ್ಶಿಸುವ ಹಲವು ಪ್ರಯತ್ನಗಳು ಕವಿತೆಗಳಲ್ಲಿ ನಡೆಯುತ್ತಿರುತ್ತವೆ. ವ್ಯಕ್ತಿಗಳ ಬಗೆಗಿನ ಕವಿತೆಯೊಂದು ಕೇವಲ ವ್ಯಕ್ತಿಯ ಹೊಗಳಿಕೆಯ ನೆಲೆಯಲ್ಲಿಯೇ ನಿಲ್ಲಲಾರದು. ಕವಿತೆಯ ಪ್ರತಿಮೆ, ರೂಪಕ, ಧ್ವನಿ ಶಕ್ತಿಯನ್ನು ಸೂಕ್ಷ್ಮವಾಗಿ ವಿವೇಚಿಸಿದಾಗ ಕವಿತೆಗಳು 'ವ್ಯಕ್ತಿ'ನೆಲೆಯನ್ನು ಮೀರಿ ಸಾಂಸ್ಕೃತಿಕ ಸಂಕಥನಗಳಾಗಿ ಮಹತ್ವವನ್ನು ಪಡೆಯುವ ಬಹುಮುಖ್ಯ ಆಕರಗಳಾಗಬಲ್ಲವು. ಅಲ್ಲದೆ ಪರಂಪರೆಯ ವ್ಯಕ್ತಿತ್ವಗಳನ್ನು ಸಾಂಪ್ರದಾಯಿಕ ಮತ್ತು 'ವ್ಯಕ್ತಿಪೂಜೆ'ಯ ನೆಲೆಯಲ್ಲಿಯೇ ಗ್ರಹಿಸುವಂತೆ ಒತ್ತಾಯಿಸಿರುವ, ಪ್ರಭಾವಿಸಿರುವ ಸಾಮಾಜಿಕ, ರಾಜಕೀಯ ಶಕ್ತಿಗಳನ್ನು ಅರ್ಥೈಸಿಕೊಳ್ಳುವುದು ಸಾಂಸ್ಕೃತಿಕ ಮಹತ್ವದ ಅಧ್ಯಯನವೂ ಆಗಬಲ್ಲದು.

ಬಹುದೊಡ್ಡ ಕಾಲದ ಅಂತರದಲ್ಲಿ ದೊಡ್ಡ ಪ್ರಮಾಣದಲ್ಲಿ ಕನ್ನಡ ಸಾಹಿತ್ಯ ಈ ನಾಲ್ಕೂ ವ್ಯಕ್ತಿತ್ವಗಳನ್ನು ಮುಖಾಮುಖಿಯಾಗಿದೆ, ಮರುನಿರೂಪಿಸಿದೆ ಎಂದರೆ ಈ ಪ್ರಕ್ರಿಯೆಯ ಹಿಂದೆ ಗಹನವಾದ ತನ್ನ ಕಾಲದ ಸಾಂಸ್ಕೃತಿಕ ಪ್ರಶ್ನೆಗಳು, ಪ್ರತಿಕ್ರಿಯೆಗಳಿರುತ್ತವೆ ಎಂಬುದನ್ನು ಗಮನಿಸಬೇಕಾಗುತ್ತದೆ.

ಆದರೆ ವ್ಯಕ್ತಿಗಳ ಬಗೆಗೆ ಬಂದಿರುವ ಕವಿತೆಗಳನ್ನು ಕೇವಲ ವ್ಯಕ್ತಿಗಳಿಗೆ ಸಲ್ಲಿಸಿದ 'ನುಡಿಕಾಣಿಕೆ'ಗಳೆಂಬಂತೆ ಗ್ರಹಿಸಿರುವ ಅಧ್ಯಯನಗಳೂ ಸಾಕಷ್ಟಿವೆ. ಇಂಥ ಅಧ್ಯಯನಗಳು ಕವಿತೆಗಳಲ್ಲಿರುವ ಆರಾಧನಾ ಗುಣವನ್ನಷ್ಟೇ ಪ್ರಶಂಸನಾತ್ಮಕವಾಗಿ ಹಾಗೂ ಆಸ್ವಾದನಾ ನೆಲೆಯಲ್ಲಿ ನೋಡಿವೆ. ಅಲ್ಲದೆ ವ್ಯಕ್ತಿಗಳನ್ನು ಕುರಿತು ಬಂದಿರುವ ಕವಿತೆಗಳನ್ನು ಸಂಕಲನ ರೂಪದಲ್ಲಿ ಹೊರತರುವ ಹಾಗೂ ವ್ಯಕ್ತಿಗಳನ್ನು ಕುರಿತು ಕವಿತೆ ರಚಿಸುವಂತೆ ಪ್ರೇರೇಪಿಸುವ ಸಾಂಸ್ಥಿಕ ಕೆಲಸಗಳ ಉದ್ದೇಶಗಳೂ ಬಹುತೇಕ 'ಆರಾಧನಾ' ಮತ್ತು 'ಪ್ರಚಾರ' ದೃಷ್ಟಿಕೋನಗಳಿಂದ ಕೂಡಿದವುಗಳೇ ಆಗಿವೆ. ಹಾಗಾಗಿ ಅಂತಹ ಸಂಕಲನಗಳ ಕವಿತೆಗಳನ್ನೂ ಒಳಗೊಂಡಂತೆ ಮುನ್ನುಡಿಗಳು, ಸಂಪಾದಕರ ನುಡಿಗಳು ಬಹುತೇಕ ಆರಾಧನಾ ಮತ್ತು ಪ್ರಶಂಸೆಯ ನೆಲೆಯವೇ ಆಗಿವೆ. ಬಸವಣ್ಣನನ್ನು ಕುರಿತು ಬಂದಿರುವ ಕವಿತೆಗಳ ಸಂಕಲನ ಹಾಗೂ ವಿಮರ್ಶೆಗಳು ಬಹುತೇಕ ಈ ನೆಲೆಯವಾಗಿವೆ. ಇದಕ್ಕೆ ಬಸವಣ್ಣನನ್ನು ದೈವೀಕರಿಸಿ ನೋಡಿರುವ ಹಾಗೂ ಒಂದು ಜಾತಿ, ಧರ್ಮದ ನಾಯಕನೆಂಬಂತೆ ನೋಡಿರುವ 'ಅಭಿಮಾನ' ಮತ್ತು 'ಭಾವುಕ' ಮನಸ್ಥಿತಿಗಳು ಕಾರಣವಾಗಿವೆ.

ಬಸವಣ್ಣನ ಬಗೆಗೆ ಬಂದಿರುವ ಕವಿತೆಗಳ ಸಂಕಲನ 'ಸಂಗಮ'ವನ್ನು ಹೊರತಂದ ಬಸವ ಸಮಿತಿಯು ಸಂಕಲನದ ಬಗೆಗೆ ಹೇಳುವ ಮಾತು ಹೀಗಿದೆ. " 'ಸಂಗಮ'ವು ಕನ್ನಡ ನಾಡಿನ ಹಿರಿಯ ಕಿರಿಯ ಕವಿಗಳು ಬಸವಣ್ಣನವರನ್ನು ಕುರಿತು ಬರೆದ ಅಪೂರ್ವವಾದ ನುಡಿನಮನಗಳು".[1] ಇಲ್ಲಿ ಬಳಸಲಾಗಿರುವ 'ನುಡಿನಮನಗಳು' ಎಂಬ ಪದವೇ ಇಡೀ ಕವಿತೆಗಳನ್ನು ನೋಡಿರುವ ಮತ್ತು ನೋಡಬೇಕಾಗಿರುವ ದೃಷ್ಟಿಕೋನವನ್ನು ನಿರ್ದೇಶಿಸುತ್ತದೆ. ಹಾಗೆಯೇ ಸಂಪಾದಕರ ನುಡಿಯಲ್ಲಿ ಇಡೀ ಸಂಕಲನದ ಸಂಪಾದನೆಯ ಉದ್ದೇಶ ಮತ್ತು ಕವಿತೆಗಳ ಆಶಯಗಳನ್ನು ಕುರಿತು ಹೇಳುವ ಮಾತುಗಳು ಸಹ ಆರಾಧನಾ ನೆಲೆಯಿಂದಲೇ ಕೂಡಿವೆ. "ಶತಮಾನಗಳುರುಳಿದರೂ ಜನರಲ್ಲಿ ಬಸವಣ್ಣನವರ ಬಗೆಗಿನ ಗೌರವ ಕುಗ್ಗಿಲ್ಲ. ಅವರ ಸಾಧನೆಯನ್ನು ಕುರಿತು ತಮ್ಮ ಮೆಚ್ಚುಗೆಯನ್ನು ನಾನಾ ರೀತಿಯಲ್ಲಿ ವ್ಯಕ್ತಮಾಡಿದ್ದಾರೆ. ಅವರ ಮಾನವ ಹಿತಾಸಕ್ತಿಯ ವಿಚಾರಗಳ ಪ್ರಸ್ತುತತೆಯನ್ನು ಉತ್ಸಾಹದಿಂದ ಕವನಿಸಿದ್ದಾರೆ. ಹೀಗೆ ಈ ಕವಿಕಾಣಿಕೆ ನಮ್ಮ ಹಿರಿಯ ಮತ್ತು ಕಿರಿಯ ಕವಿಗಳ ಸುಂದರ ಅಭಿವ್ಯಕ್ತಿಯಾಗಿದೆ. ಬಸವೇಶ್ವರರ ದಿವ್ಯ ವ್ಯಕ್ತಿತ್ವದೆದುರು ನಮ್ಮ ನಾಡಿನ ಕವಿಗಳು ಹಚ್ಚಿಟ್ಟ ಸೊಡರುಗಳಿವು. ಓದುಗರ ಎದೆಯಲ್ಲಿ ಅಭಿಮಾನದ ಬೆಳಕನ್ನು ಹರಡಲಿ ಎಂದು ಆಶಿಸುತ್ತೇವೆ".[2] ಈ ಅಭಿಪ್ರಾಯಗಳು ಬಸವಣ್ಣನನ್ನು ಕುರಿತ ಕವಿತೆಗಳನ್ನು 'ವ್ಯಕ್ತಿ ಮೆಚ್ಚುಗೆ'ಯಾಗಿ, 'ಕವಿಕಾಣಿಕೆ'ಗಳನ್ನಾಗಿ, 'ಅಭಿಮಾನದ ನುಡಿ'ಗಳನ್ನಾಗಿ ಮಾತ್ರ ನೋಡಿವೆ ಹಾಗೂ ಹಾಗೆ ನೋಡಲು ಒತ್ತಾಯಿಸುತ್ತವೆ. ಇಲ್ಲಿ 'ಹಚ್ಚಿಟ್ಟ ಸೊಡರುಗಳಿವು' ಎಂಬ ಹೇಳಿಕೆ ಕವಿತೆಗಳನ್ನು 'ವ್ಯಕ್ತಿ ಪೂಜೆ'ಯ ನೆಲೆಯಲ್ಲಿ ನೋಡಿರುವ ಬಗೆಯನ್ನು ಧ್ವನಿಸುತ್ತದೆ.

'ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ' ಎಂಬ ಕೃತಿಯಲ್ಲಿ ಜಿ. ಕೃಷ್ಣಪ್ಪ ಬೇಂದ್ರೆಯವರ ಬಸವಣ್ಣನನ್ನು ಕುರಿತ 'ವೃಷಭೋರೋರವೀತ' ಕವಿತೆಯ ಬಗ್ಗೆ ವಿಮರ್ಶಿಸುತ್ತಾ ಇಡೀ ಕವಿತೆಯನ್ನು ಪ್ರಶಂಸನಾ

ನೆಲೆಯಲ್ಲಿ ನೋಡಿದ್ದಾರೆ. ಬೇಂದ್ರೆ ಬಸವಣ್ಣನನ್ನು 'ಮಹಾತ್ಮ' ನನ್ನಾಗಿ ನೋಡಿದ್ದಾರೆ ಎಂದು ಹೇಳುವ ಲೇಖನ, ಪದ್ಯದ ಸಾಲುಗಳನ್ನು ಉಲ್ಲೇಖಿಸುತ್ತದೆಯೇ ಹೊರತು ಪದ್ಯದ ವಿಶ್ಲೇಷಣೆಯನ್ನಾಗಲೀ, ವಿಮರ್ಶೆಯನ್ನಾಗಲೀ ಮಾಡಲು ಹೋಗಿಲ್ಲ. ಈ ಲೇಖನ ಕೇವಲ ಮಾಹಿತಿ ಪ್ರಧಾನವಾಗಿ ಮಾತ್ರ ಬಂದಿದೆ. "ವೇದ ಉಪನಿಷತ್ತುಗಳ ಸಾರ ತಿಳಿದು, ಎಲ್ಲ ಮಾನವರೂ ಒಂದೇ ಎಂಬ ತತ್ವವನ್ನು ಅನುಷ್ಠಾನಗೊಳಿಸಲು, ಸಾಮಾಜಿಕ ಕ್ರಾಂತಿಯನ್ನುಂಟು ಮಾಡಿದವರು ಬಸವಣ್ಣ, ಕಾಯಕತತ್ವದಿಂದ ದಾರ್ಶನಿಕತ್ವದತ್ತ ಸಾಗುವ ಶ್ರೀ ಸಾಮಾನ್ಯ ಪಡೆ ನಿರ್ಮಿಸಿದವರು ಬಸವಣ್ಣ. ಅಂತಹ ಕ್ರಾಂತಿಕಾರಿಯು ಬೇಂದ್ರೆಯವರಿಗೆ ಮಹಾತ್ಮ ಆಗಿದ್ದಾರೆ. ಅವರು 'ಮಹಾತ್ಮ ಬಸವಣ್ಣನವರ ಜೀವನ ಮನನದಿಂದ' ಎಂದು ಹೇಳಿ 'ವೃಷಭೋರೋರವೀತ' ಕವನ ರಚಿಸಿದ್ದಾರೆ. ಭೂತದಯೆಯ ಸಾಕ್ಷಾತ್ಕಾರದಲ್ಲಿ ಮಿಂದ ಬಸವಣ್ಣ ಸಮಾನತೆಯ ಹರಿಕಾರ ಎಂಬುದನ್ನು ಬೇಂದ್ರೆ ಈ ಕವನದಲ್ಲಿ ಸಾರಿದ್ದಾರೆ."[3]. ಈ ಅಭಿಪ್ರಾಯಗಳು ಕವಿತೆಯ ಹೊರಗೆ ನಿಂತು ಮಾತನಾಡುತ್ತವೆಯೋ ಹೊರತು ಕವಿತೆಯ ಒಳಗೆ ಪ್ರವೇಶಿಸಿ ಮಾತನಾಡುವುದಿಲ್ಲ. ಬೇಂದ್ರೆ ಬಸವಣ್ಣನನ್ನು 'ಮಹಾತ್ಮನನ್ನಾಗಿ' ಕಂಡಿದ್ದಾರೆ ಎಂದು ಹೇಳಿ ಕವಿತೆಯನ್ನು ವ್ಯಕ್ತಿ ಪ್ರಶಂಸೆಯಿಂದ ನೋಡಿದ್ದಾರೆ. ಅದಕ್ಕೆ ಪೂರಕವಾಗಿ 'ವೃಷಭೋರೋರವೀತ' ಮತ್ತು 'ಬಸವ ಬಯಲಾದ' ಕವಿತೆಗಳ ಸಾಲುಗಳನ್ನಷ್ಟೇ ಉಲ್ಲೇಖಿಸುತ್ತಾರೆ. ಈ ಎರಡೂ ಕವಿತೆಗಳನ್ನು ವಿಮರ್ಶಿಸಲು ಹೋಗುವುದಿಲ್ಲ.

'ಕನ್ನಡ ಸಾಹಿತ್ಯದಲ್ಲಿ ಗಾಂಧಿ' ಎಂಬ ಲೇಖನದಲ್ಲಿ ಎಂ. ರಾಮದಾಸ್ ಅವರು ಗಾಂಧಿಯ ಪ್ರಭಾವೀ ವ್ಯಕ್ತಿತ್ವದ ಬಗೆಗೆ ಮಾತನಾಡುತ್ತಾ ಕನ್ನಡವನ್ನು ಒಳಗೊಂಡಂತೆ ಎಲ್ಲಾ ಭಾಷಾ ಸಾಹಿತ್ಯದ ಮೇಲೆ ಆಗಿರುವ ಗಾಂಧಿಯ ಪ್ರಭಾವವನ್ನು ಗುರುತಿಸುತ್ತಾರೆ. ಮುಂದುವರಿದು ಕನ್ನಡ ಕವಿಗಳು ಗಾಂಧಿಯನ್ನು ಕುರಿತು ಬರೆದಿರುವ ಕವಿತೆಗಳ ಬಗೆಗೆ ಮಾತನಾಡುತ್ತಾ ಹೀಗೆ ಹೇಳುತ್ತಾರೆ. "ಪೂಜ್ಯ ಭಾವದಿಂದ, ನಮ್ರತೆಯಿಂದ, ಮೆಚ್ಚುಗೆಯಿಂದ ಮತ್ತು ಆಶ್ಚರ್ಯದಿಂದ ಕೂಡಿದ ಭಾಷೆಯಲ್ಲಿ ಮಹಾತ್ಮರ ಬಗ್ಗೆ ತಮ್ಮ ಅಭಿಪ್ರಾಯವನ್ನು ಅಭಿವ್ಯಕ್ತಗೊಳಿಸುವಲ್ಲಿ ಕನ್ನಡ ಸಾಹಿತಿಗಳು ಇತರ ಭಾಷೆಗಳ ಸಾಹಿತಿಗಳಿಗಿಂತ ಹಿಂದೆ ಬೀಳಲಿಲ್ಲ. ಗಾಂಧೀಜಿಯವರನ್ನು ಕುರಿತ ಮೊದಲ ಉಲ್ಲೇಖಗಳು ಅವರ ಪ್ರಶಂಸೆಯನ್ನು ಒಳಗೊಂಡಿವೆ."[4] ಎಂದು ಹೇಳಿ ಕನ್ನಡ ಕವಿಗಳು ಗಾಂಧಿಯನ್ನು ಕುರಿತು ಪ್ರಶಂಸೆ, ಮೆಚ್ಚುಗೆ ವ್ಯಕ್ತಪಡಿಸಿರುವ ಪದ್ಯ ಭಾಗಗಳ ಮಾಹಿತಿಗಳನ್ನು ಮಾತ್ರ ನೀಡುತ್ತಾರೆ. " ಮಾಸ್ತಿ ವೆಂಕಟೇಶ್ ಅಯ್ಯಂಗಾರರು ಮಹಾತ್ಮರನ್ನು ಕಂಡ ಅನುಭವವನ್ನು ಕವನವೊಂದರಲ್ಲಿ ವರ್ಣಿಸಿದ್ದಾರೆ. ಅದು ಮಹಾತ್ಮರಿಗೆ ಸಲ್ಲಿಸಿರುವ ಪ್ರಾಮಾಣಿಕವಾದ, ಬಿಚ್ಚು ಮನಸ್ಸಿನ ಶ್ರದ್ಧಾಂಜಲಿ

ಇಂದು ನಮ್ಮ ಮಹಾತ್ಮ
ಗಾಂಧಿಯನು ನೋಡಲಿಕೆ
ಬಂದೆವಿಲ್ಲಿಗೆ ಲೋಕ
ಬಾಂಧವನ ದರುಶನಕೆ
ಜನರ ಸೇವೆಯಲ್ಲಿ ಮಯ್
ಸೋತವನಿವನೆಂದರು
ಸೋತವನ ಮಯ್ಯೆ ಇದು
ಈತ ಸೋತಿಹನೆನಲು
ಗೆಲಿದವರು ಎಲ್ಲಿ ? . . . .ಪರಮೇಶ್ವರ ಭಟ್ಟರು ಗಾಂಧೀಜಿಯನ್ನು ಹೀಗೆ ವರ್ಣಿಸುತ್ತಾರೆ

ಹೊನಲಂತೆ ಅಲರಂತೆ ಎಲರಂತೆ ಅರಿಲಂತೆ

ಜೇನಂತೆ ಹಾಲಂತೆ ಪೀಯೂಷವೆಂತಂತೆ
ನಿನ್ನ ನುಡಿ ನಿನ್ನ ನಡೆ . . . [38]

ಹೀಗೆ ಇಡೀ ಲೇಖನದಲ್ಲಿ ಗಾಂಧಿ ಕುರಿತು ಬಂದಿರುವ ಕವಿತೆಗಳನ್ನು ಪ್ರಶಂಸೆಯ ನೆಲೆಯಲ್ಲಿ ಹಾಗೂ ಮಾಹಿತಿ ನೆಲೆಯಲ್ಲಿ ನೋಡಲಾಗಿದೆಯೇ ಹೊರತು ಕವಿತೆಗಳ ವಿಶ್ಲೇಷಣೆಯನ್ನಾಗಲೀ, ವಿಮರ್ಶೆಯನ್ನಾಗಲೀ ಮಾಡಿರುವುದಿಲ್ಲ. ಪ್ರಶಂಸೆಗಳಿದ್ದರೂ ಅದಕ್ಕೆ ಕಾರಣವಾದ ಒತ್ತಡಗಳನ್ನು ತಿಳಿಯುವುದಾಗಲೀ, ಪ್ರಶಂಸೆಯನ್ನು ಮೀರಿ ಗಾಂಧಿ ವ್ಯಕ್ತಿತ್ವದ ಘನತೆಯನ್ನು ಗುರುತಿಸುವ ಕವಿತೆಗಳ ಸೂಕ್ಷ್ಮತೆಯನ್ನು ಕಂಡುಕೊಳ್ಳುವ ಪ್ರಯತ್ನಗಳನ್ನಾಗಲೀ ಲೇಖನ ಮಾಡಿಲ್ಲ. ಕೇವಲ ಮೆಚ್ಚುಗೆ ಹಾಗೂ ಮಾಹಿತಿಯ ನೆಲೆಯಲ್ಲಿಯೇ ನಿಂತುಬಿಡುತ್ತದೆ. ಕವಿತೆಗಳಲ್ಲಿ ಪ್ರಶಂಸೆಯ ಭಾಗಗಳನ್ನಷ್ಟೇ ಹುಡುಕಿ ತೆಗೆದು ತೋರಿಸುವ ಕೆಲಸವನ್ನು ಈ ಲೇಖನ ಮಾಡಿದೆ. ಅಂದರೆ ವ್ಯಕ್ತಿಚಿತ್ರ ಕವಿತೆಗಳನ್ನು ಕೇವಲ ವ್ಯಕ್ತಿ ಪ್ರಶಂಸೆಯ, ಆರಾಧನೆಯ ನೆಲೆಯಲ್ಲಿ ಮಾತ್ರ ನೋಡುವ ಪ್ರಯತ್ನ ಮಾಡಲಾಗಿದೆ. ಮಾಸ್ತಿಯವರ 'ಗಾಂಧಿಯವರ ದರ್ಶನ' ಕವಿತೆಯನ್ನು ಉಲ್ಲೇಖಿಸುವಾಗ ಅದನ್ನು 'ಮಹಾತ್ಮರಿಗೆ ಸಲ್ಲಿಸಿರುವ ಪ್ರಾಮಾಣಿಕವಾದ, ಬಿಚ್ಚು ಮನಸ್ಸಿನ ಶ್ರದ್ಧಾಂಜಲಿ' ಎಂದು ವಿಶ್ಲೇಷಿಸಿದ್ದಾರೆ. ಗಾಂಧಿ ಬದುಕಿದ್ದಾಗಲೇ ಗಾಂಧಿಗೆ ಶ್ರದ್ಧಾಂಜಲಿಯನ್ನು ಅರ್ಪಿಸಿದಂತೆ ಕವಿತೆಯನ್ನು ತಪ್ಪಾಗಿ ಭಾವಿಸಿಕೊಂಡು ಇಲ್ಲಿ ವಿಶ್ಲೇಷಿಸಲಾಗಿದೆ. ಹೀಗೆ ವ್ಯಕ್ತಿಚಿತ್ರ ಕವಿತೆಗಳನ್ನು ಕೇವಲ ಪ್ರಶಂಸೆ ಮತ್ತು ಆರಾಧನಾ ನೆಲೆಯಿಂದ ನೋಡಿರುವ ಪ್ರಯತ್ನಗಳು ವ್ಯಕ್ತಿಚಿತ್ರ ಕವಿತೆಗಳ ಸೀಮಿತ ಉದ್ದೇಶವನ್ನಷ್ಟೇ ಗ್ರಹಿಸಿವೆ. ಅವುಗಳ ಸಾಹಿತ್ಯಿಕ, ಸಾಂಸ್ಕೃತಿಕ ಮಹತ್ವವನ್ನು ಅರಿಯುವ ಪ್ರಯತ್ನವನ್ನು ಮಾಡಿಲ್ಲ.

೨. **ಪ್ರಭಾವ – ಪ್ರೇರಣೆ ಪ್ರಧಾನ ಅಧ್ಯಯನ**: ಈ ನಾಲ್ಕೂ ವ್ಯಕ್ತಿತ್ವ ಮತ್ತು ವಿಚಾರಗಳು ಸಾಹಿತ್ಯ ಮತ್ತು ಸಾಹಿತ್ಯ ಚಳುವಳಿಯ ಮೇಲೆ ಬೀರಿರುವ ಪ್ರಭಾವ ಪ್ರೇರಣೆಗಳನ್ನು ಪ್ರಧಾನವಾಗಿಟ್ಟುಕೊಂಡು ನಡೆಸಿರುವ ಅಧ್ಯಯನಗಳನ್ನು ಈ ಬಗೆಯಲ್ಲಿ ಗುರುತಿಸಬಹುದು. ಇಂಥ ಅಧ್ಯಯನಗಳಲ್ಲಿ ಮುಖ್ಯವಾದುದು ಪ್ರಹ್ಲಾದ್ ಅಗಸನಕಟ್ಟೆಯವರ 'ದಲಿತ ಬಂಡಾಯ ಕಾವ್ಯ ಮತ್ತು ವಿಚಾರವಾದಗಳು' ಎಂಬ ಸಂಶೋಧನಾ ಪ್ರಬಂಧ. ಇದರಲ್ಲಿ ಅಂಬೇಡ್ಕರ್, ಗಾಂಧಿ, ಲೋಹಿಯಾ, ಮಾರ್ಕ್ಸ್‌ರ ವಿಚಾರಗಳು ಕನ್ನಡದ ಬಂಡಾಯ – ದಲಿತ ಕಾವ್ಯದ ಮೇಲೆ ಬೀರಿರುವ ಪ್ರಭಾವವನ್ನು ಗುರುತಿಸುತ್ತಲೇ, ಬಂಡಾಯ – ದಲಿತ ಕಾವ್ಯದ ಅಭಿವ್ಯಕ್ತಿಯ ಸ್ವರೂಪವನ್ನು ವಿಮರ್ಶಿಸಲಾಗಿದೆ. ಅಂಬೇಡ್ಕರ್–ಗಾಂಧಿಯ ಚಿಂತನೆ, ವಿಚಾರಗಳು ದಲಿತ–ಬಂಡಾಯ ಕಾವ್ಯದ ಮೇಲೆ ಬೀರಿರುವ ಪ್ರಭಾವವನ್ನು ಹಾಗೂ ಆ ಕಾವ್ಯಗಳು ಈ ವ್ಯಕ್ತಿಗಳ ಚಿಂತನೆಗಳನ್ನು ತಮ್ಮ ಹೋರಾಟದ ಅಸ್ತ್ರಗಳನ್ನಾಗಿ ಬಳಸಿಕೊಂಡಿರುವ ಬಗೆಯನ್ನು ವಿಶ್ಲೇಷಿಸುವ ಪ್ರಯತ್ನ ಈ ಅಧ್ಯಯನದಲ್ಲಿ ನಡೆದಿದೆ. ದಲಿತ – ಬಂಡಾಯ ಕಾವ್ಯದ ಸಂದರ್ಭದಲ್ಲಿ ಬಂದ ಗಾಂಧಿ, ಅಂಬೇಡ್ಕರ್, ಬುದ್ಧ, ಬಸವಣ್ಣ ಮುಂತಾದವರನ್ನು ಕುರಿತ ಕವಿತೆಗಳನ್ನು ಈ ಸಂಶೋಧನಾ ಪ್ರಬಂಧದಲ್ಲಿ ಅವರ ವಿಚಾರಗಳ ಪ್ರಭಾವದ ಹಿನ್ನೆಲೆಯಲ್ಲಿ ನೋಡಲಾಗಿದೆ. ಸಿದ್ಧಲಿಂಗಯ್ಯನವರ 'ಅಂಬೇಡ್ಕರ್' ಕವಿತೆ ಕುರಿತು ವಿಮರ್ಶಿಸುತ್ತಾ "ಇದು ಖ್ಯಾತ ದಲಿತ ಕವಿ ಸಿದ್ಧಲಿಂಗಯ್ಯನವರು ಇಪ್ಪತ್ತೈದು ವರ್ಷಗಳ ಹಿಂದೆ ಅಂಬೇಡ್ಕರರನ್ನು ಕುರಿತು ಬರೆದ ಒಂದು ಪ್ರಸಿದ್ಧ ಪದ್ಯ. ಈ ಪದ್ಯವನ್ನು ಸೂಕ್ಷ್ಮ ವಿಶ್ಲೇಷಣೆಗೆ, ಪ್ರಾಯೋಗಿಕ ವಿಮರ್ಶೆಗೆ ಒಡ್ಡಿದರೆ ಈ ಇಪ್ಪತ್ತೈದು ವರ್ಷಗಳಲ್ಲಿ ಅಂಬೇಡ್ಕರರ ವಿಚಾರಗಳು ಉಂಟುಮಾಡಿರುವ ಸಂಚಲನ, ಅರಿವು, ಜಾಗೃತಿ ಮತ್ತು ಈಗ ಅದು ನಿಂತು ಬಿಟ್ಟಿದೆಯೇ ಎಂಬ ವಿಷಾದದ ಪ್ರಶ್ನೆ ಅಡಗಿದಂತಿದೆ. ಇದನ್ನು ಅಂಬೇಡ್ಕರ್ ವಿಚಾರಗಳ ಪ್ರಭಾವಳಿಯಲ್ಲಿ

ಕನ್ನಡದಲ್ಲಿ ಎಪ್ಪತ್ತರ ದಶಕದಲ್ಲಿ ಕಾಣಿಸಿಕೊಂಡ ದಲಿತ ಮತ್ತು ಬಂಡಾಯ ಕಾವ್ಯಕ್ಕೂ ಅನ್ವಯಿಸಿ ಚರ್ಚೆಯ ದಿಕ್ಕನ್ನು ಬೆಳೆಸಬಹುದು."[5] ಇದೇ ಹಿನ್ನೆಲೆಯಲ್ಲಿ ಎಲ್. ಹನುಮಂತಯ್ಯನವರ 'ಬಾಬಾ ಸಾಹೇಬ' ಕವಿತೆಯನ್ನು ಕೂಡ ವಿಶ್ಲೇಷಿಸಿದ್ದಾರೆ. ಮುಂದುವರೆದು ಚಂಪಾ ಅವರ ಗಾಂಧಿ ಕುರಿತ 'ಗಾಂಧಿ ಸ್ಮರಣೆ', 'ಅತಿಥಿ', ಕವಿತೆಗಳನ್ನು ತುರ್ತು ಪರಿಸ್ಥಿತಿಯ ಸರ್ವಾಧಿಕಾರದ ಪ್ರತಿಭಟನೆಯ ಕಾವ್ಯಗಳೆಂದು ಕರೆದು ಈ ಪ್ರತಿಭಟನೆಯ ಮೇಲೆ ಗಾಂಧಿ ಮತ್ತು ಲೋಹಿಯಾ ವಿಚಾರಗಳ ಪ್ರಭಾವವನ್ನು ಗುರುತಿಸುತ್ತಾರೆ. ಅಲ್ಲದೆ ಚಂಪಾ ಅವರ ಬಸವಣ್ಣನ ಕುರಿತಾದ 'ಬಸವ' ಕವಿತೆಯನ್ನು ಕುರಿತಂತೆ "ಲೋಹಿಯಾವಾದದ ಮೂಲ ನೆಲೆಗಟ್ಟು ವಿಚಾರವಾದ. ಯಾವುದನ್ನೂ ಪೂರ್ವಪರೀಕ್ಷೆಗಳಿಲ್ಲದೆ ಹುಂಬುತನದಿಂದ ಅಂಗೀಕರಿಸಬಾರದು ಎಂಬುದು ಅದರ ದೃಢ ನಂಬುಗೆ, ಮನುಷ್ಯ ಮನುಷ್ಯರ ನಡುವೆ ಅಸಮಾನತೆಯನ್ನು ಹುಟ್ಟುಹಾಕುವ ದೈವ, ಗುರು, ಮಠ, ಇವೆಲ್ಲವನ್ನು ಪ್ರತಿಭಟಿಸಬೇಕು ಎಂಬ ಕರೆಕೊಡುತ್ತದೆ. ಹೀಗಾಗಿ ಲೋಹಿಯಾವಾದವು ಕವಿಗಳಲ್ಲಿ ಶೋಷಣೆಯ ಕೇಂದ್ರಗಳಾದ ಮಠ, ಮಾನ್ಯ, ಗುಡಿ, ಗುಂಡಾರ, ದೈವಗಳು ತೀವ್ರ ಪರೀಕ್ಷೆಗೆ ಒಳಪಡುತ್ತವೆ. ಚಂಪಾ ಅವರು ತಮ್ಮ ವಿಮರ್ಶೆಯ ರಕ್ಷೆಯಿಂದ 'ಬಸವಣ್ಣ'ನನ್ನು ಹೊರಗಿಡಲಿಲ್ಲ"[6] ಎನ್ನುವ ಲೇಖಕರ ಮಾತುಗಳು ದಲಿತ ಬಂಡಾಯ ಸಂದರ್ಭದಲ್ಲಿ ಬಂದ ಅಂಬೇಡ್ಕರ್, ಗಾಂಧಿ, ಬಸವಣ್ಣರನ್ನು ಕುರಿತ ಕವಿತೆಗಳ ಅಭಿವ್ಯಕ್ತಿಯ ಹಿಂದೆ ಅವರ ವಿಚಾರವಾದಗಳ ಪ್ರಭಾವವನ್ನು ಹುಡುಕುವ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ.

ದಲಿತ ಬಂಡಾಯ ಕಾವ್ಯದ ಮೇಲೆ ಗಾಂಧಿಯ ಪ್ರಭಾವವನ್ನು ಗುರುತಿಸುತ್ತಾ " ದಲಿತ ಮತ್ತು ಬಂಡಾಯ ಕವಿಗಳು ಗಾಂಧಿಯನ್ನು ಎಲ್ಲಾ ಬಗೆಯ ಸರ್ವಾಧಿಕಾರವನ್ನು, ಶಕ್ತ ರಾಜಕಾರಣವನ್ನು, ಕೋಮುವಾದಿ ರಾಜಕಾರಣವನ್ನು ವಿರೋಧಿಸುವ ಅಸ್ತ್ರವನ್ನಾಗಿ ಕಂಡುಕೊಂಡಿದ್ದಾರೆ. ಅದರಲ್ಲೂ ತುರ್ತು ಪರಿಸ್ಥಿತಿಯ ಕರಾಳ ದಿನಗಳಲ್ಲಂತೂ ಇಬ್ಬರು ಗಾಂಧಿಗಳು ನಮ್ಮ ಬರಹಗಾರರನ್ನು ವಿರುದ್ಧಾತ್ಮಕ ನೆಲೆಗಳಲ್ಲಿ ಡಯಲೆಕ್ಟಿಕಲ್ ರೂಪದಲ್ಲಿ ತೀವ್ರವಾಗಿ ಕಾಡಿದ್ದನ್ನು ನಾವು ನೋಡಬಹುದು"[8] ಎನ್ನುವ ಮಾತುಗಳು ಸಾಹಿತ್ಯ ಚಳುವಳಿಯ ಮೇಲೆ ಗಾಂಧಿ ವಿಚಾರಗಳ ಪ್ರಭಾವದ ಹಿನ್ನೆಲೆಯಲ್ಲಿ ನೋಡಿರುವುದನ್ನು ತಿಳಿಸುತ್ತವೆ. ಚಂಪಾರ 'ಗಾಂಧಿಸ್ಮರಣೆ', 'ಅತಿಥಿ', ಅಲ್ಲಮ ಪ್ರಭು ಬೆಟ್ಟದೂರರ 'ತಾತನನ್ನುದ್ದೇಶಿಸಿ', 'ಗುಲಾಬಿಮಂದಿರ', 'ಗಾಂಧಿ ಕವಿತೆಗಳು', ಸರಜೂ ಕಾಟ್ಕರರ 'ಗಾಂಧಿ ಸಿಕ್ಕ', 'ಗಾಂಧಿ ಗಿಡ' ಕವಿತೆಗಳು, ಚಂದ್ರಶೇಖರ ತಾಳ್ಯರ 'ಗಾಂಧಿಯ ಮುದಿ ಚಿತ್ರ ಮತ್ತು ನಾನು', ವಿ. ಮುನಿವೆಂಕಟಪ್ಪರ 'ಈ ದೇಶದ ಗಾಂಧಿ', ಸಿದ್ಧಲಿಂಗಯ್ಯರ 'ಗಾಂಧಿ', ಮೂಡ್ನಕೂಡು ಚಿನ್ನಸ್ವಾಮಿಯವರ 'ಗಾಂಧಿ ಇದ್ದಿದ್ದರೆ', ಆರ್.ಮೋಹನ ನಾಗಮ್ಮನವರ 'ಗಾಂಧಿ ಸ್ಮರಣೆ', ಸತ್ಯಾನಂದ ಪಾತ್ರೋಟರ 'ಪಂಚೆಯುಡುಗೆಯ ಮುದುಕ', 'ಬರಬ್ಯಾಡೋ ಅಜ್ಜ', ಕವಿತೆಗಳು, ರಂಜಾನ್ ದರ್ಗಾರ 'ನನಗೆ ಗಾಂಧಿ ಆಗುವ ಇಚ್ಛೆ', ಜಗದೀಶ ಮಂಗಳೂರುಮಠ ಅವರ 'ದೀಪ ನಂದಿದೆ', ಬಂಜಗೆರೆ ಜಯಪ್ರಕಾಶರ 'ಗಾಂಧಿ ಮಾರ್ಗ', ಕೆ. ಷರಿಪಾರ 'ಗಾಂಧಿಗೊಂದು ಪ್ರಶ್ನೆ', ಎಂ.ಎಸ್.ವೇದಾರ 'ಪುಟ್ಟ ಪುಢಾರಿಗೊಂದು ಉಪದೇಶ', ಶಶಿಕಲಾ ವೀರಯ್ಯಸ್ವಾಮಿಯವರ 'ಕಸ್ತೂರಿ ಬಾಯಿ', ಎಸ್. ಮಾಲತಿಯವರ 'ಗಾಂಧೀಜಿಯಿಂದ ಗಾಂಧಿವರೆಗೆ . . . .?' ಬಸವರಾಜ ಸಬರದರ 'ಬೆಂಕ್ಯಾಗ ಹೂವು ಅರಳ್ಯಾವ' ಮುಂತಾದ ಕವಿತೆಗಳನ್ನು ದಲಿತ ಬಂಡಾಯ ಕಾವ್ಯದ ಮೇಲೆ ಆದ ಗಾಂಧಿ ವಿಚಾರಗಳ ಪ್ರಭಾವದ ಹಿನ್ನೆಲೆಯಲ್ಲಿ ವಿಮರ್ಶಿಸಲಾಗಿದೆ.

ಹಾ.ಮಾ.ನಾಯಕರು ಸಂಪಾದಿಸಿರುವ 'ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ' ಕೃತಿಯು ಗಾಂಧಿ ಶತಮಾನೋತ್ಸವದ ನೆನಪಿಗೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರವು ಏರ್ಪಡಿಸಿದ್ದ ವಿಚಾರ ಗೋಷ್ಠಿಯಲ್ಲಿ ಮಂಡಿತವಾದ ಪ್ರಬಂಧಗಳ ಸಂಕಲನವಾಗಿದ್ದು ಇಲ್ಲಿ 'ಗಾಂಧಿ' ಕುರಿತ ಕನ್ನಡ ಕವಿತೆಗಳ ವಿಶ್ಲೇಷಣೆ ನಡೆದಿದೆ. ಇಲ್ಲಿ ಗಾಂಧಿಯನ್ನು ಕುರಿತ ಕವಿತೆಗಳನ್ನು ಕನ್ನಡ ಸಾಹಿತ್ಯದ ಮೇಲೆ ಆದ ಗಾಂಧಿಯ ಪ್ರಭಾವದ ಹಿನ್ನೆಲೆಯಲ್ಲಿ ನೋಡಲಾಗಿದೆ. ವಿಚಾರ ಗೋಷ್ಠಿಯ ಪ್ರಾಸ್ತಾವಿಕ ನುಡಿಗಳಲ್ಲಿ ಹಾ.ಮಾ.ನಾ ಇದನ್ನು ಸ್ಪಷ್ಟಪಡಿಸುತ್ತಾರೆ. "ಗಾಂಧೀಜಿ ಕೇವಲ ರಾಷ್ಟ್ರನಿರ್ಮಾಪಕರಾಗಿರಲಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಅವರು ರಾಷ್ಟ್ರೀಯ ಭಾವೈಕ್ಯದ ಸಂಕೇತವಾಗಿದ್ದರು, ಜೊತೆಗೆ ಬಹುಕಾಲದ ಅಸಡ್ಡೆ ತಾತ್ಸಾರಗಳಿಗೆ ಪಾತ್ರವಾಗಿದ್ದ ಭಾರತೀಯ ಭಾಷೆಗಳಿಗೆ ಶಕ್ತಿಯನ್ನು, ಆತ್ಮ ಪ್ರತ್ಯಯವನ್ನು ತಂದುಕೊಟ್ಟವರು ಗಾಂಧೀಜಿ ಎಂಬುದನ್ನು ನಾವು ಮರೆಯುವಂತಿಲ್ಲ. ಆದುದರಿಂದ ರಾಷ್ಟ್ರದ ಎಲ್ಲ ಭಾಷೆಗಳನ್ನು ಒಂದು ವೇದಿಕೆಯ ಮೇಲೆ ತಂದು ಪ್ರತಿಯೊಂದಕ್ಕೂ ಗಾಂಧೀಜಿಯವರಿಂದ ಸಂದ ಕೊಡುಗೆಯೇನು? ಎಂದು ಚರ್ಚಿಸುವುದು ತುಂಬಾ ಅರ್ಥವತ್ತಾದ ಯೋಜನೆ. ರಾಷ್ಟ್ರದ ರಾಜಕೀಯ ಹಾಗೂ ಅರ್ಥಶಾಸ್ತ್ರಗಳ ಮೇಲೆ ಗಾಂಧೀಜಿಯವರ ಪ್ರಭಾವದ ಪರಿಣಾಮ ಏನೇ ಇರಲಿ, ನಮ್ಮ ಸಾಹಿತ್ಯಗಳ ಮೇಲೆ ಅವರ ಪ್ರಭಾವ ಗಾಢವಾದುದೆಂಬುದರಲ್ಲಿ ಸಂದೇಹವಿಲ್ಲ. ಶತಮಾನಗಳ ದೀರ್ಘ ಇತಿಹಾಸವನ್ನುಳ್ಳ ನಮ್ಮ ಭಾಷೆಗಳಿಗೆ ಒಂದು ಪರಿಣಾಮಕಾರಿ ತಿರುವನ್ನು ಕೊಟ್ಟ ಕೀರ್ತಿ ಗಾಂಧೀಜಿಯವರದ್ದು"[೯]. ಮುಂದುವರಿದು ಗಾಂಧೀಜಿ ಸಾಹಿತ್ಯದಲ್ಲಿ ಹೇಗೆ ಚಿತ್ರಿತವಾಗಿದ್ದಾರೆ ಎಂಬುದನ್ನು ಕೈಲಾಸಂ, ಕುವೆಂಪು ಅವರ ಕವಿತೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತಾರೆ. ಇಲ್ಲಿ ಗಾಂಧೀ ವ್ಯಕ್ತಿತ್ವ ಕವಿಗಳನ್ನು ಹೇಗೆ ಪ್ರಭಾವಿಸಿದೆ ಹಾಗೂ ಕನ್ನಡ ಕವಿಗಳು ಗಾಂಧಿಯನ್ನು ಅಭಿವ್ಯಕ್ತಿಸಿರುವ ಕ್ರಮ ಯಾವುದು ಎಂಬ ನೆಲೆಯಲ್ಲಿ ನೋಡಲಾಗಿದೆ.

'ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ' ಕೃತಿಯಲ್ಲಿ ಕನ್ನಡ ಸಾಹಿತ್ಯದ ಮೇಲೆ ಗಾಂಧಿ ಪ್ರಭಾವವನ್ನು ಕುರಿತ ಅನಂತಮೂರ್ತಿಯವರ ಲೇಖನ ನವೋದಯ ಸಾಹಿತ್ಯದ ಮೇಲೆ ಗಾಂಧೀವಾದದ ಪ್ರಭಾವವನ್ನು ತಾತ್ವಿಕವಾಗಿ ವಿಶ್ಲೇಷಣೆಗೆ ಒಳಪಡಿಸುತ್ತದೆ. ಈ ಲೇಖನದಲ್ಲಿ ಅನಂತಮೂರ್ತಿಯವರು ಮಾರ್ಕ್ಸ್‌ವಾದ 'ಮ್ಯಾನ್ಸ್ ಫೇಟ್', 'ಫಾಂಟ ಮಾರಾ'ದಂತಹ ಕೃತಿಗಳ ಹುಟ್ಟಿಗೆ ಕಾರಣವಾದಂತೆ, ಗಾಂಧಿವಾದವು ಅಂತಹ ಯಾವ ಗಂಭೀರ ಕೃತಿಗಳ ಹುಟ್ಟಿಗೂ ಕಾರಣವಾಗಿಲ್ಲ ಎಂಬುದನ್ನು ಗುರುತಿಸುತ್ತಾರೆ. ಅವರ ಪ್ರಕಾರ "ಗಾಂಧೀಜಿಯವರ ಜೀವನ ತತ್ವ ಅನುಭಾವಪರವಾದ ಅಲೌಕಿಕ ದೃಷ್ಟಿಯದಲ್ಲ, ಸದ್ಯದ ಜೀವನಕ್ಕೆ ನೆರವಾಗಬಲ್ಲ ಧಾರ್ಮಿಕ ರೀತಿಯದ್ದು. ಗಾಂಧೀಜಿಗೆ ಸೌಂದರ್ಯ ಒಂದು ಮೌಲ್ಯವಲ್ಲ: ರವೀಂದ್ರರಂತೆ ಗಾಂಧೀಜಿ ರೂಪಾರಾಧಕರಲ್ಲ, ನಮ್ಮ ಅಸ್ತಿತ್ವಕ್ಕೆ ಸಂಬಂಧಪಟ್ಟ ವಾಸ್ತವತೆಗಳನ್ನು ವ್ಯಕ್ತಿ ಸಾಮಾಜಿಕವಲ್ಲದ ರೀತಿಯಲ್ಲಿ ಏಕಾಂಗಿಯಾಗಿ ಮೀರಿ ನಿಲ್ಲುವ ಅರವಿಂದರ ರೀತಿಯ ತಪಸ್ಸಿಗೂ ಗಾಂಧಿವಾದದಲ್ಲಿ ಎಡೆಯಿಲ್ಲ. ಆದ್ದರಿಂದ ನಮ್ಮ ನವೋದಯಕಾಲದ ಬರಹಗಾರರನೇಕರು ಹೃತ್ಪೂರ್ವಕವಾಗಿ ಗಾಂಧಿವಾದದಿಂದ ಆಕರ್ಷಿತರಾಗಲಿಲ್ಲ ಎಂದು ನನ್ನ ಅಭಿಪ್ರಾಯ. ನವೋದಯದ ನಮ್ಮ ಕವಿಗಳು ನಿಜವಾಗಿಯೂ ಪ್ರಭಾವಿತವಾದದ್ದು ರಾಮಕೃಷ್ಣರ ಮತ್ತು ಅರವಿಂದರ ತತ್ವಗಳಿಂದಲೇ ಎನ್ನಬಹುದು"[೧೦] ಎನ್ನುವ ಮಾತುಗಳು ನವೋದಯ ಮತ್ತು ಪ್ರಗತಿಶೀಲ ಸಾಹಿತ್ಯದ ಮೇಲೆ ಗಾಂಧಿ ಯಾವ ಪ್ರಭಾವವನ್ನೂ ಬೀರಲಿಲ್ಲ. ನವೋದಯ, ಪ್ರಗತಿಶೀಲ ಸಾಹಿತ್ಯದ ಭಾವುಕ ಮತ್ತು ವಾಸ್ತವ

ಸತ್ಯದ ನೆಲೆಗಳಿಗೆ ಗಾಂಧೀಜಿಯವರ ಜೀವನದೃಷ್ಟಿ ಇಕ್ಕಟ್ಟಿನದಾಗಿ ಕಂಡಿರಬಹುದು ಎಂಬುದರ ಕಡೆಗೆ ಗಮನ ಸೆಳೆಯುತ್ತದೆ.

ಮುಂದುವರಿದು ಕಾರಂತರು ಗಾಂಧಿವಾದಿಗಳಲ್ಲದಿದ್ದರೂ ಅವರೊಬ್ಬರೇ ಗಾಂಧಿವಾದದ ಜೊತೆ ತಮ್ಮ ಕೃತಿಗಳಲ್ಲಿ ನಿಜವಾದ ಸಂವಾದ ನಡೆಸಿಕೊಂಡು ಬಂದವರೆಂದು ಹೇಳುತ್ತಾ ಏಕೆ ಉಳಿದ ಕವಿಗಳಿಗೆ ಗಾಂಧಿವಾದ ಒಂದು ಶೋಧದ ಪ್ರಕ್ರಿಯೆಯಾಗಲಿಲ್ಲ ಎಂಬುದಕ್ಕೆ ಹೀಗೆ ಉತ್ತರಿಸುತ್ತಾರೆ. "ಕಾರಂತರು – ಗಾಂಧೀವಾದವನ್ನು ಅಪಕ್ವ ಆದರ್ಶವೆಂದು, ಅಪಾಯಕಾರಿಯೆಂದು ಕಾಣುತ್ತಾರಾದರೂ – ಗಾಂಧೀವಾದವನ್ನು ಗಂಭೀರವಾಗಿ ಪರಿಗಣಿಸಿದ ಲೇಖಕರು ಇವರೊಬ್ಬರೆ. ಪಾವನ ದೃಷ್ಟಿಯ ಉಳಿದ ಅನೇಕ ಮುಗ್ಧ ಲೇಖಕರಿಗೆ ಗಾಂಧೀವಾದ ಸ್ವಂತದ ಮತ್ತು ತಮ್ಮ ಹೊರಗಿನ ನಿಜಗಳಿಗೆ ಯಾವ ಸಂಬಂಧವನ್ನೂ ಕಲ್ಪಿಸಿಕೊಳ್ಳದ ಭಾವಾತಿರೇಕದ ಆದರ್ಶವಾದವಾಯಿತು. ಗಾಂಧೀವಾದದ ಹೆಸರಿನಲ್ಲಿ ಮಡಿವಂತಿಕೆ, ಮೂರ್ಖ ಪುರಾತನವಾದ, ಕಾಮಕ್ಕೆ ಸಂಬಂಧಿಸಿದ ಸಂಕೋಚಗಳು ಮತ್ತೆ ತಲೆಯೆತ್ತುವಂತಾಯಿತು".[೧೧] ಈ ಅಭಿಪ್ರಾಯಗಳು ಏಕೆ ಗಾಂಧಿ ಕನ್ನಡ ಕಾವ್ಯದಲ್ಲಿ ಕೇವಲ ಪ್ರಶಂಸೆ, ಆದರ್ಶದ ನೆಲೆಯಲ್ಲಿಯೇ ಚಿತ್ರಿತಗೊಂಡಿದ್ದಾರೆ? ಗಾಂಧೀವಾದದ ತೀವ್ರ ಶೋಧದ ಗೋಜಿಗೆ ಹೋಗದಿರುವುದು ಏಕೆ? ಎಂಬ ಪ್ರಶ್ನೆಗಳಿಗೆ ತಾತ್ವಿಕ ಕಾರಣಗಳನ್ನು ನೀಡುತ್ತವೆ.

ಹೆಚ್.ಡಿ. ಉಮಾಶಂಕರರ 'ದಲಿತ ಕಾವ್ಯ: ಕಾವ್ಯ ಮತ್ತು ಸಮಾಜ' ಎಂಬ ಸಂಶೋಧನಾ ಪ್ರಬಂಧವು ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಕುರಿತ ಕವಿತೆಗಳನ್ನು ದಲಿತ ಕಾವ್ಯ ಮತ್ತು ಹೋರಾಟಗಳ ಹಿಂದಿನ ಸ್ಫೂರ್ತಿಶಕ್ತಿಗಳನ್ನಾಗಿ ವಿಶ್ಲೇಷಣೆಗೆ ಒಳಪಡಿಸಿದೆ. ದುಡಿಯುವ ವರ್ಗದ ದೃಷ್ಟಿಕೋನದ ಮೂಲಕ ಈ ವ್ಯಕ್ತಿತ್ವಗಳು ಹೇಗೆ ಬಿಂಬಿತರಾಗಿದ್ದಾರೆ ಮತ್ತು ದಲಿತ ಕಾವ್ಯ ಹೇಗೆ ಇವರಿಂದ ಸ್ಫೂರ್ತಿ ಪಡೆದಿದೆ ಎಂಬ ನೆಲೆಯಲ್ಲಿ ವಿಮರ್ಶಿಸಲಾಗಿದೆ. ಹಾಗೂ ದಲಿತ ಕಾವ್ಯದ ದುಡಿಯುವ ವರ್ಗದ ದೃಷ್ಟಿಕೋನ ನಿರ್ಮಾಣದ ಹಿಂದೆ ಈ ವ್ಯಕ್ತಿತ್ವಗಳ ಪ್ರಭಾವ, ಸ್ಫೂರ್ತಿಯನ್ನು ಕವಿತೆಗಳ ವಿಶ್ಲೇಷಣೆಯ ಮೂಲಕ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

**೩. ಸಾರಾಂಶ ಮತ್ತು ವಿವರಣೆ ಪ್ರಧಾನ ಅಧ್ಯಯನ :** ಬುದ್ಧ, ಬಸವಣ್ಣ, ಗಾಂಧಿ ಅಂಬೇಡ್ಕರ್ ಕುರಿತ ಕವಿತೆಗಳನ್ನು, ಅವುಗಳ ಹುಟ್ಟಿನ ಹಿಂದಿನ ಸಾಂಸ್ಕೃತಿಕ ಒತ್ತಡಗಳನ್ನು ಗ್ರಹಿಸುವುದಾಗಲಿ, ವ್ಯಕ್ತಿತ್ವಗಳನ್ನು ತೀವ್ರಶೋಧಕ್ಕೆ ಒಳಪಡಿಸುವ ಕ್ರಿಯೆಗಳನ್ನಾಗಲಿ, ಸಮಕಾಲೀನ ಸಮಸ್ಯೆಗಳಿಗೆ ಪ್ರತಿಕ್ರಿಯೆ, ಪ್ರತಿರೋಧಗಳೆಂದಾಗಲಿ ಅಥವಾ ಇನ್ನಾವುದೇ ವಿಶಿಷ್ಟ ತಾತ್ವಿಕ ಒಳನೋಟಗಳಿಂದಾಗಲಿ ವಿಮರ್ಶೆಗೆ ಒಳಪಡಿಸದೆ ಕೇವಲ ಕವಿತೆಗಳನ್ನು ಸಾರಾಂಶೀಕರಿಸಿ ನೋಡುವ, ವಿವರಣೆ ರೂಪದ ವಿಮರ್ಶೆ ಹಾಗೂ ಅಧ್ಯಯನಗಳು ನಡೆದಿವೆ. ಇಂತಹ ವಿಮರ್ಶೆಗಳಿಂದ ಯಾವ ಸಾಹಿತ್ಯಿಕ, ತಾತ್ವಿಕ ಪ್ರಯೋಜನಗಳೂ ಲಭಿಸಲಾರವು.

'ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ' ಎಂಬ ಕೃತಿಯಲ್ಲಿ ದೇ.ಜವರೇಗೌಡರು ಗಾಂಧೀಜಿ ಕುರಿತು ನವೋದಯ ಕಾವ್ಯದಲ್ಲಿ ಬಂದಿರುವ ಕವಿತೆಗಳನ್ನು ಸಾರಾಂಶೀಕರಿಸಿ ನೋಡಿದ್ದಾರೆ. ಕುವೆಂಪು ಅವರ 'ಶ್ರೀರಾಮಪುರದಲ್ಲಿ ಗಾಂಧೀಜಿ' ಕವಿತೆಯ ಬಗೆಗೆ ಬರೆಯುತ್ತಾ. "ಈ ಮಹಾನ್ ವ್ಯಕ್ತಿಯ ಬಗ್ಗೆ ನಮ್ಮ

ಹೃದಯದಲ್ಲಿ ಗೌರವಾದರಗಳ ಭಾವನೆಯನ್ನು ಹುಟ್ಟಿಸುವುದಕ್ಕೆ ಈ ಸಂಗತಿಗಳೇ ಕಾರಣವಾಗಿವೆ. ಸಮಗ್ರ ರಾಷ್ಟ್ರವೇ ಸ್ವಾತಂತ್ರ್ಯೋದಯದ ಉತ್ಸವವನ್ನು ಆಚರಿಸುವ ಉತ್ಸಾಹದಲ್ಲಿ ಮೈಮರೆತಿದ್ದಾಗ, ವ್ಯಥೆಯ ಬೀಡಾಗಿದ್ದ ಗಡಿನಾಡಿನಲ್ಲಿ ಗಾಂಧೀಜಿ ಶಾಂತಿ ಮತ್ತು ತಾಳ್ಮೆಯಿಂದ ನಡೆದುಕೊಳ್ಳಬೇಕೆಂದು ಹಿತವಚನವನ್ನೀಯುತ್ತ ಇದ್ದರು. ಈ ಶಾಂತಿದೂತ ಈ ಕೆಳಕಂಡ ರಚನೆಗೆ ಪ್ರೇರಣೆಯಾಗಿ ನಿಲ್ಲುತ್ತಾರೆ.

ಮರೆವುದೆಂತಾ ನಮ್ಮ ಸ್ವಾತಂತ್ರ್ಯ ಶಿಲ್ಪಿಯಂ
ದಿವ್ಯದಿನದೀ ಶುಭಮುಹೂರ್ತದಲ್ಲಿ?
ಮರೆವುದೆಂತಯ್ ಭುವನ ಗೌರವ ಮಹಾತ್ಮನಂ
ಸ್ವಾತಂತ್ರ್ಯದೀ ಸುಪ್ರಭಾತದಲ್ಲಿ?
ಹೆಜ್ಜೆ ಹೆಜ್ಜೆಯಿನಿಡಿಸಿ ಕೈಹಿಡಿದು ನಡೆಗಲಿಸಿ
ಬಿಡುಗಡೆಗೆ ತಂದ ಆ ತಂದೆಯೆಲ್ಲಿ? . . . . .

ಇದು ಅವರ ಜೀವನದ ಅತ್ಯುತ್ತಮ ಭಾಗವಾಗಿದ್ದರೂ ಇದ್ದಕ್ಕಿದಂತೆ ಘಟಿಸಿದ ಅವರ ಕೊಲೆಯಲ್ಲಿ ಅವರ ಜೀವನದ ಚರಮಶಿಖರ ಕಾಣಲಿತ್ತು".[೧೨] ಹೀಗೆ ಸಾರಾಂಶೀಕರಿಸಿದ ಇಂಥ ಅಭಿಪ್ರಾಯಗಳು ಕವಿತೆಗಳನ್ನು ಸಾರಗ್ರಹಣದ ನೆಲೆಯಲ್ಲಿ ಮಾತ್ರ ನೋಡುತ್ತವೆಯೇ ಹೊರತು ಕವಿತೆಯ ಸೂಕ್ಷ್ಮ ಧ್ವನಿಗಳನ್ನು ಕಂಡುಕೊಳ್ಳಲಾರವು.

ದೊಡ್ಡರಂಗೇಗೌಡ ಅವರ 'ಕನ್ನಡ ನವೋದಯ ಕಾವ್ಯ ಒಂದು ಪುನರ್ ಮೌಲ್ಯಮಾಪನ' ಕೃತಿಯಲ್ಲಿ 'ನವೋದಯ ಕಾವ್ಯದಲ್ಲಿ ದಾಖಲಾದ ಮಹಾತ್ಮಗಾಂಧಿ ಅವರ ವ್ಯಕ್ತಿತ್ವದ ಚಿತ್ರಣ' ಎಂಬ ವಿಮರ್ಶೆ ಗಾಂಧಿ ಕುರಿತ ನವೋದಯ ಕವಿತೆಗಳನ್ನು ಪ್ರಶಂಸೆಯ ನೆಲೆಯಲ್ಲಿ, ಸಾರಾಂಶರೂಪದಲ್ಲಿ ನೋಡಿದೆ. "ಗಾಂಧಿ ಮಹಾತ್ಮನ ವ್ಯಕ್ತಿತ್ವದ ಅವಲೋಕನವೇ ಕನ್ನಡ ನವೋದಯ ಕಾವ್ಯದಲ್ಲಿ ಹೆಪ್ಪುಗಟ್ಟಿದೆ. ಗಾಂಧೀಜಿಯನ್ನು ಕುರಿತು ಬರೆಯದ ರಮ್ಯ ಕವಿಯೇ ಇಲ್ಲವೇನೋ! ಇದು ಆಧುನಿಕ ಕವಿಗಳ ಇತ್ಯಾತ್ಮಕ ದೃಷ್ಟಿಕೋನವನ್ನೇ ಪರೋಕ್ಷವಾಗಿ ಸೂಚಿಸುತ್ತದೆ........ ಇಡೀ ಜಗತ್ತಿನ ಜನರನ್ನು ತನ್ನ ವ್ಯಕ್ತಿತ್ವದಿಂದ ಹಾಗೂ ವಿಚಾರಧಾರೆಯಿಂದ ಸೆಳೆದ ಮಹಾನ್ ಚೇತನ ಮೋಹನದಾಸ ಕರಮಚಂದ ಗಾಂಧಿ. ಅಂಥ ಅಸೀಮ ಪ್ರಭಾವದ ಅನನ್ಯ ಇರುವಿಕೆಯ ಅಪರೂಪದ ವ್ಯಕ್ತಿ ಮಹಾತ್ಮ ಗಾಂಧೀಜಿ ಅವರನ್ನು ಕನ್ನಡ ಕವಿಗಳು ಹೇಗೆ ಕಂಡಿದ್ದಾರೆಂಬ ಕುತೂಹಲವೇ ಈ ಲೇಖನದ ಆಶಯ. ಜೀವಿ ಕುಲಕರ್ಣಿ ಗಾಂಧೀಜಿಯನ್ನು ಕುರಿತು ಬರೆದಿರುವುದು ಆಕರ್ಷಕವಾಗಿದೆ.

ಹಿಂದಕ್ಕೆ ಬುದ್ಧ ಮಾಡಿದ ಕಾರ್ಯ
ಕ್ರಿಸ್ತ ಮಾಡಿದ ಕಾರ್ಯ
ಮತ್ತೆ ನಡೆಸಿದನೊಬ್ಬ ಭರತ ಭೂಮಿಯಲಿ
ಮೃನ್ಮಯ ದೇಹದಲಿ
ಚಿನ್ಮಯ ದೀಪವನು ಹೊತ್ತಿಸಿದ ಅವತಾರಿ !
ಅವರೇ . . . . ಗಾಂಧೀಜಿ.

ಗಾಂಧೀಜಿಯ ದಾರಿ ಆದರ್ಶದ ದಾರಿ. ಹಿಂಸೆಯನ್ನು ಗೆಲ್ಲಲಿಕ್ಕೆ ಅಹಿಂಸೆಯೇ ಅಸ್ತ್ರ; ದ್ವೇಷವನ್ನು ತೊಲಗಿಸಲು ಪ್ರೀತಿಯೇ ಶಸ್ತ್ರ; ದರ್ಪವನು ತೊಲಗಿಸಲು ಸತ್ಯಾಗ್ರಹದ ಮಂತ್ರ"[೧೩] ಹೀಗೆ ಗಾಂಧೀಜಿಯನ್ನು ಕುರಿತ ಅನೇಕ ನವೋದಯ ಕವಿತೆಗಳನ್ನು ಸಾರಾಂಶ ರೂಪದಲ್ಲಿ, ಆದರ್ಶದ ನೆಲೆಯಲ್ಲಿ ವಿವರಿಸಿದ್ದಾರೆ. ನವೋದಯ ಕಾವ್ಯದ ಮೇಲೆ ಗಾಂಧೀವಾದದ ಪ್ರಭಾವವನ್ನಾಗಲೀ, ನವೋದಯ ಸಾಹಿತ್ಯ ಗಾಂಧಿಯನ್ನು ನೋಡುತ್ತಿರುವ, ಶೋಧಕ್ಕೆ ಒಳಗುಮಾಡುತ್ತಿರುವ ಪ್ರಕ್ರಿಯೆಯನ್ನಾಗಲೀ, ಅದರ ಮಿತಿ, ಶಕ್ತಿಗಳನ್ನಾಗಲೀ ತಾತ್ವಿಕವಾಗಿ ವಿಮರ್ಶೆಗೆ

ಒಳಪಡಿಸಿರುವುದಿಲ್ಲ. ಹೋ. ಶ್ರೀನಿವಾಸಯ್ಯ ಅವರ 'ಕುವೆಂಪು ಕಂಡ ಗಾಂಧಿ', ದೇ.ಜ.ಗೌ. ಅವರ 'ಕುವೆಂಪು ಕಂಡಂತೆ ಗಾಂಧೀಜಿ', ಎಂಬ ವಿಮರ್ಶಾ ಲೇಖನಗಳೂ ಕೂಡ ಈ ನೆಲೆಯವೇ ಆಗಿವೆ.

'ಬುದ್ಧ ಭಾರತ' ಕೃತಿಯಲ್ಲಿ 'ಬುದ್ಧ ಚಿಂತನೆ : ಕನ್ನಡ ಕವಿಗಳು ಕಂಡಂತೆ' ಎಂಬ ಲೇಖನದಲ್ಲಿ ಟಿ.ಎಂ. ಭಾಸ್ಕರ್ ಬುದ್ಧನನ್ನು ಕುರಿತ ಕವಿತೆಗಳನ್ನು ಸಾರಾಂಶ ರೂಪದಲ್ಲಿ ವಿವರಿಸುತ್ತಾರೆ. "ವಿಚಾರ ಕ್ರಾಂತಿಯ ಹರಿಕಾರ ರಾಷ್ಟ್ರಕವಿ ಕುವೆಂಪು ಅವರು ತಮ್ಮ 'ಬುದ್ಧದೇವ' ಕವನದಲ್ಲಿ ಗೌತಮ ಬುದ್ಧನ ವಿಚಾರ ಕ್ರಾಂತಿಯಿಂದ ಮಾನವನಲ್ಲಿಯ ಶುಷ್ಕ ಭಾವನೆಗಳು ಹೇಗೆ ಸುಟ್ಟು ಹೋಗುತ್ತವೆಂಬುದನ್ನು ಹೇಳುತ್ತಾ ನಮ್ಮೆಲ್ಲರಿಗೂ ಸನ್ಮತಿಯ ನಾಗರೀಕತೆಯು ಬೇಕೆಂದು ಹೇಳಿದ್ದಾರೆ. ಜನಪದ ಜೀವನದ ಕವಿಯಾದ ದ.ರಾ.ಬೇಂದ್ರೆಯವರು ತಮ್ಮ 'ಬುದ್ಧ' ಕವನದಲ್ಲಿ ಬುದ್ಧನು ಜ್ಞಾನವನ್ನು ಸಂಪಾದಿಸಲು ನಡೆಸಿದ ಹೋರಾಟ ಮತ್ತು ಪ್ರಯತ್ನಗಳನ್ನು ಕುರಿತು ವಿವರಿಸಿದ್ದಾರೆ. ಶಬ್ದ ನಾದ ಧ್ವನಿಯ ಸದ್ದ ಮೀರಿದ್ದ, ಇಲ್ಲ ಎಂಬುದ ಕೊನೆಗೆ ಆತ್ಮ ಶುದ್ಧ ಇದ್ದರೇನಿರದಿದ್ದರೇನೆನಲು ಗೆದ್ದ". ಇಲ್ಲಿ ಕುವೆಂಪು, ಬೇಂದ್ರೆ ಅವರ 'ಬುದ್ಧ'ನನ್ನು ಕುರಿತ ಕವಿತೆಗಳನ್ನು ಸಾರಾಂಶದ ನೆಲೆಯಲ್ಲಿ ವಿವರಿಸಿರುವುದು ಕಂಡುಬರುತ್ತದೆ. ಮುಂದುವರಿದು; "ಹುಟ್ಟು ಸಾವು ನಿಸರ್ಗದ ವ್ಯಾಪಾರ ಎಂದು ಹೇಳಿದ ಗೌತಮ ಬುದ್ಧ ಪ್ರತಿಯೊಂದು ಜೀವರಾಶಿಗಳಿಗೂ ಒಂದು ಅಂತ್ಯ ಎಂಬುದಿದೆ ಎಂದು ತಿಳಿದುಕೊಂಡಿದ್ದನು. ಶಾಶ್ವತ ಸುಖ, ಶಾಂತಿಯನ್ನು ಅರಸುತ್ತ ರಾಜ ವೈಭೋಗವನ್ನು ತೊರೆದು ಕಾಡಿಗೆ ಪ್ರಯಾಣ ಬೆಳೆಸಿದನು. ಅಲ್ಲೆಲ್ಲ ಮಾರನು ಬುದ್ಧನ ಎದುರಿಗೆ ತಂದೊಡ್ಡಿದ ವಿಷಯ ವಾಸನೆಗಳಿಂದ ಜಯಿಸಿ ಪಾರಾದನೆಂಬುದನ್ನು ಕವಿ ಕೆ. ಎಸ್. ನರಸಿಂಹಸ್ವಾಮಿ ಅವರು ತಮ್ಮ 'ಬುದ್ಧ ಸ್ಮಿತ' ಕವನದಲ್ಲಿ ಬಹಳ ಸುಂದರವಾಗಿ ವಿವರಿಸಿದ್ದಾರೆ."[೧೪] ಈ ವಿವರಗಳು ಕವಿತೆಗಳನ್ನು ಕೇವಲ ಸರಳವಾಗಿ ಗ್ರಹಿಸಿರುವುದಷ್ಟೇ ಅಲ್ಲ ತಪ್ಪು ಗ್ರಹಿಕೆ ಹಾಗೂ ವ್ಯಾಖ್ಯಾನಗಳೂ ಆಗಿವೆ. ಈ ರೀತಿಯ ಅಧ್ಯಯನಗಳು ಯಾವ ಹೊಸ ಗ್ರಹಿಕೆಗಳನ್ನೂ ಶೋಧಿಸಿಕೊಡಲಾರವು. ಕನ್ನಡ ಕವಿಗಳಿಗೆ ಬುದ್ಧ ಹೇಗೆ ಮತ್ತು ಏಕಾಗಿ ಮುಖ್ಯವಾಗಿದ್ದಾನೆ ಎಂದಾಗಲೀ, ಬುದ್ಧನ ವ್ಯಕ್ತಿತ್ವ ಕುರಿತ ಶೋಧ ಹೇಗೆ ನಡೆದಿದೆ ಎಂದಾಗಲೀ, ಕವಿಗಳು ಬುದ್ಧನನ್ನು ನೆಪವಾಗಿಸಿಕೊಂಡು ಯಾವ ಬಗೆಯ ಸಮಸ್ಯೆ, ಸವಾಲುಗಳನ್ನು ಎದುರುಗೊಂಡಿದ್ದಾರೆ ಎಂದಾಗಲೀ ಆಲೋಚಿಸಲು ಹೋಗುವುದಿಲ್ಲ.

ವಿ. ಮುನಿವೆಂಕಟಪ್ಪ ಅವರ 'ಸ್ವಾಭಿಮಾನದ ಬೀಡಿಗೆ' ಕವನ ಸಂಕಲನದ ಬಗೆಗೆ ಈಚನೂರು ಕುಮಾರ್ ಬರೆದ 'ಸ್ವಾಭಿಮಾನದ ಬೀಡಿಗೆ ಕರೆದ ದಲಿತ ಕವಿ' ಎಂಬ ವಿಮರ್ಶಾ ಲೇಖನ ಮುನಿವೆಂಕಟಪ್ಪರ 'ಅಂಬೇಡ್ಕರ್' ಕವಿತೆಯ ಮಾಹಿತಿಯನ್ನಷ್ಟೇ ನೀಡುತ್ತದೆ. ಮತ್ತು ಎನ್.ಸಿ. ವೆಂಕಟರಾಜುರ 'ಅವ್ವ' ಕವನ ಸಂಕಲನದ ಮುನ್ನುಡಿಯಲ್ಲಿ ಅರ್ಜುನಗೊಳಸಂಗಿ ಅವರ 'ಅಂಬೇಡ್ಕರ್' ಕವಿತೆಯ ಬಗೆಗೆ 'ದಲಿತರ ಪ್ರಚಲಿತ ಸಮಸ್ಯೆಗಳನ್ನು ಚರ್ಚಿಸುತ್ತದೆ' ಎಂದಷ್ಟೇ ಹೇಳುತ್ತಾರೆ. ಕವಿತೆಯ ವಿಮರ್ಶೆ, ವಿಶ್ಲೇಷಣೆಯ ಕಡೆಗಾಗಲೀ, ಅದರ ಇನ್ನಿತರ ಒಳನೋಟಗಳ ಕಡೆಗಾಗಲೀ ಗಮನಹರಿಸುವುದಿಲ್ಲ. ವ್ಯಕ್ತಿಚಿತ್ರ ಕವಿತೆಗಳನ್ನು ಕುರಿತ ಬಹುಪಾಲು ವಿಮರ್ಶೆಗಳು ಈ ನೆಲೆಯಲ್ಲಿಯೇ ಇವೆ. ಇದರಿಂದ ವ್ಯಕ್ತಿಚಿತ್ರ ಕವಿತೆಗಳನ್ನು ವಿಮರ್ಶೆಯ ಸಂದರ್ಭದಲ್ಲಿ ಗಂಭೀರವಾಗಿ ಪರಿಗಣಿಸದಿರುವುದು ಸ್ಪಷ್ಟವಾಗುತ್ತದೆ. ವ್ಯಕ್ತಿಚಿತ್ರ ಕವಿತೆಗಳನ್ನು ಸಾರಾಂಶ, ಮಾಹಿತಿ, ಪ್ರಶಂಸೆ, ವಿವರ ಪ್ರಧಾನ ನೆಲೆಗಳಿಂದಲೇ ಹೆಚ್ಚಾಗಿ ನೋಡುವ ಪ್ರಯತ್ನಗಳಾಗಿವೆ. ಅದರಾಚೆಗೆ ಕವಿತೆಗಳನ್ನು ಸಾಂಸ್ಕೃತಿಕ ಮಹತ್ವದ ದೃಷ್ಟಿಯಿಂದ ನೋಡುವ ಪ್ರಯತ್ನಗಳು ಆಗಬೇಕಾಗಿದೆ.

**೪. ಸಾಂಸ್ಕೃತಿಕ ಅಧ್ಯಯನ :** ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಕುರಿತ ಕವಿತೆಗಳನ್ನು ನುಡಿಕಾಣಿಕೆ, ವ್ಯಕ್ತಿಪ್ರಶಂಸೆ ಮತ್ತು ಸಾರಾಂಶ ಪ್ರಧಾನ ಚರ್ಚೆಗಳನ್ನು ಮೀರಿ ಅವುಗಳನ್ನು ಸಾಂಸ್ಕೃತಿಕ ಮಹತ್ವದ ಹಿನ್ನೆಲೆಯಲ್ಲಿ ನೋಡಿರುವ ಅಧ್ಯಯನಗಳು ಅಲ್ಪ ಪ್ರಮಾಣದಲ್ಲಿ ನಡೆದಿವೆ. ವ್ಯಕ್ತಿಚಿತ್ರ ಕವಿತೆಗಳು ಕೇವಲ ವ್ಯಕ್ತಿಗಳ ಜೀವನ ವಿವರ ಹಾಗೂ ವ್ಯಕ್ತಿಗಳ ಸಾಧನೆ-ಶ್ರೇಷ್ಠತೆಯ ಹೊಗಳಿಕೆಗಳು ಮಾತ್ರವಾಗಿರದೆ; ಅವು ಸಮಕಾಲೀನ ಸಾಂಸ್ಕೃತಿಕ ಬದುಕಿನ ವಿಮರ್ಶೆಗಳೂ ಆಗಿವೆ. ಪರಂಪರೆಯ ವ್ಯಕ್ತಿತ್ವಗಳೊಂದಿಗೆ ಮುಖಾಮುಖಿಯಾಗುವುದರ ಮೂಲಕ ಆ ವ್ಯಕ್ತಿತ್ವಗಳನ್ನು ಅರಿಯುವ ಹಾಗೂ ವರ್ತಮಾನಕ್ಕೆ ತಂದುಕೊಳ್ಳುವ ಪ್ರಯತ್ನಗಳೂ ಹೌದು. ವರ್ತಮಾನದ ಸಾಂಸ್ಕೃತಿಕ ಬದುಕನ್ನು ರೂಪಿಸಿಕೊಳ್ಳುವ ವಿಶಿಷ್ಟ ಕಾಳಜಿಗಳೂ ಹೌದು. ಈ ನಿಟ್ಟಿನಲ್ಲಿ ವ್ಯಕ್ತಿಚಿತ್ರ ಕವಿತೆಗಳನ್ನು ಸಾಂಸ್ಕೃತಿಕ ವಿಮರ್ಶೆಗೆ ಒಳಪಡಿಸಿರುವ ಪ್ರಯತ್ನಗಳು ಮಹತ್ವ ಪಡೆಯುತ್ತವೆ. ಈ ಬಗೆಯ ವಿಮರ್ಶೆಗಳು ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರಶ್ನೆಗಳನ್ನು ಎತ್ತುವುದರಿಂದ ಮತ್ತು ಸಮಕಾಲೀನ ರಾಜಕಾರಣದ ಹಲವು ಸಮಸ್ಯೆ-ಸವಾಲುಗಳನ್ನು ಕುರಿತು ಚರ್ಚಿಸುವುದರಿಂದ ಈ ಬಗೆಯ ಕವಿತೆಗಳಿಗೆ ಸಾಹಿತ್ಯಿಕ ಮಹತ್ವವಷ್ಟೇ ಅಲ್ಲದೆ ಸಾಂಸ್ಕೃತಿಕ ಮಹತ್ವ ಕೂಡ ಇದೆ.

ಗಾಂಧಿಯನ್ನು ಕುರಿತ ಕವಿತೆಗಳ ಸಂಕಲನ 'ಗಾಂಧಿ ಎಂಬುವ ಹೆಸರು' ಕೃತಿಯ ಸಂಪಾದಕರಾದ ಚಂದ್ರಶೇಖರ ಪಾಟೀಲ ಮತ್ತು ಶಶಿಕಲಾ ವೀರಯ್ಯಸ್ವಾಮಿ ಅವರ 'ಸಂಪಾದಕರ ಮಾತು' ಲೇಖನ ಈ ನಿಟ್ಟಿನಲ್ಲಿ ವಿಶಿಷ್ಟವಾದದ್ದು. ಗಾಂಧೀಜಿ ಕುರಿತ ಕವಿತೆಗಳನ್ನು ಸಾಂಪ್ರದಾಯಿಕ ಹಾಗೂ ಮೆಚ್ಚುಗೆಯ ನೆಲೆಯಲ್ಲಿ ನೋಡುತ್ತಿದ್ದ ನೋಟಕ್ರಮಗಳನ್ನು ಮೀರಿ ಅವುಗಳನ್ನು ಸಮಕಾಲೀನ ಸಾಂಸ್ಕೃತಿಕ ರಾಜಕಾರಣಕ್ಕೆ ಪ್ರತಿಕ್ರಿಯೆಗಳನ್ನಾಗಿ ನೋಡಲು ಪ್ರಯತ್ನಿಸುತ್ತಾರೆ. "ಇಂಥವನ ವೈಯಕ್ತಿಕ ಬದುಕಿನ ಎಳೆಗಳು ನಮ್ಮ ದೇಶದ ಬದುಕಿನ ಎಳೆಗಳೊಂದಿಗೆ ತಳುಕು ಬೀಳುತ್ತಲೇ ಹೋಗುತ್ತಿರುವುದು 'ಗಾಂಧಿ' ಎನ್ನುವ ಬಿಂಬ ಸಾವಿರ ಕಣ್ಣುಗಳಲ್ಲಿ ಸಾವಿರ ತೆರನಾಗಿ ರೂಪುಗೊಳ್ಳಲು ಕಾರಣ. ಇಂಡಿಯಾಕ್ಕೆ ಸ್ವಾತಂತ್ರ್ಯ ಸಿಕ್ಕು ವರುಷ ತುಂಬುವುದರೊಳಗೇ ಹಿಂದೂ ಮತಾಂಧನೊಬ್ಬನಿಂದ ಗಾಂಧಿ ಕೊಲೆಯಾದದ್ದು, ಗಾಂಧಿ ಎಂಬುವ ಹೆಸರು ಅಂಗಡಿ – ರೋಡು – ಬಜಾರು – ಮೈದಾನ – ಪಾರ್ಕುಗಳಿಗೆ ತಗುಲಿಕೊಂಡಿದ್ದು, ತುರ್ತು ಪರಿಸ್ಥಿತಿಯಲ್ಲಿ ಗಾಂಧಿಯ ಮೂರು ಮಂಗಗಳು ಮೈತಾಳಿದ್ದು, 'ಗಾಂಧಿ' ಎಂಬ ಅಡ್ಡ ಹೆಸರಿನವರು ಗಾಂಧಿಯನ್ನು ಒಂದು ಕಾರ್ಟೂನನ್ನಾಗಿ ಮಾಡಿದ್ದು, ಸತ್ಯಾಗ್ರಹದ ಸಂಕೇತವಾಗಿದ್ದ ಗಾಂಧಿ ಟೊಪ್ಪಿಗೆ ದುಷ್ಟ ದುರಾಗ್ರಹಿಗಳ ತುರಾಯಿಯಾದದ್ದು, ಇಂದು ಸಾಮ್ಯವಾದ, ಬಂಡವಾಳವಾದಗಳು ಅಪ್ರಸ್ತುತವಾಗಿ ಮತ್ತೆ ಗಾಂಧಿವಾದ ಪ್ರಸ್ತುತವಾಗತೊಡಗಿದ್ದು, ಇವೆಲ್ಲ ಇಂಡಿಯಾದ ಅನೇಕ ಭಾಷೆಗಳ ಸೃಜನಶೀಲ ಸಂವೇದನಾಶೀಲ ಮನಸ್ಸುಗಳಲ್ಲಿ ಕಾಲಕಾಲಕ್ಕೆ ಅವರವರ ಭಾವಕ್ಕೆ ಅವರವರ ದರುಶನಕ್ಕೆ ತಕ್ಕಂತೆ ಸಾಹಿತ್ಯ ಕೃತಿಗಳಾಗಿ ರೂಪುಗೊಂಡಿವೆ"[೧೪] ಎನ್ನುತ್ತಾರೆ. ಗಾಂಧಿ ನಂತರದ ಭಾರತದಲ್ಲಿ ಗಾಂಧಿ ಏನೆಲ್ಲಾ ರಾಜಕಾರಣಗಳಿಗೆ ಒಳಗಾಗಿದ್ದಾರೆ ಎಂಬುದರ ವಿಮರ್ಶೆಯೊಂದಿಗೆ ಆ ರಾಜಕಾರಣದ ಪರಂಪರೆಯನ್ನೂ ಅದರ ಅಪಾಯದ ನಡೆಯನ್ನೂ ಗುರುತಿಸುವ, ಅದರ ಪ್ರತಿರೋಧದ ನೆಲೆಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಇದು ಗಾಂಧಿಯ ವ್ಯಕ್ತಿತ್ವ ಇಂದು ಪಡೆದಿರುವ ರೂಪಾಂತರಗಳ ಬಗೆಗೆ ಕವಿತೆಗಳು ವ್ಯಕ್ತಪಡಿಸುತ್ತಿರುವ ವಿಷಾದ, ನೋವುಗಳನ್ನು ಸೃಜನಾತ್ಮಕ ಅಭಿವ್ಯಕ್ತಿಯ ಹಿನ್ನೆಲೆಯಲ್ಲಿ ಗುರುತಿಸುವ ಪ್ರಾಮಾಣಿಕ ಪ್ರಯತ್ನ ಎನ್ನಬಹುದು. ಮುಂದುವರಿದು "ಈ ಕೃತಿ

'ಗಾಂಧಿ' ಎಂಬ ವ್ಯಕ್ತಿಯನ್ನು ಕುರಿತ ಕವನಗಳ ಗುಚ್ಛ ಎಂಬುದಕ್ಕಿಂತ ಗಾಂಧಿ ಎಂಬ ಸಂಕೇತದೊಂದಿಗೆ ಇಂಡಿಯಾದ ಪ್ರಜ್ಞೆಗಳು ಹೊಂದಿರುವ ಸಂಕರ್ಷ– ಸಂಘರ್ಷಗಳ ಸಮೂಹವಾಗಿದೆ. ಕನ್ನಡ ಕವಿಗಳು ಗಾಂಧಿಯನ್ನು ವ್ಯಕ್ತಿಯಾಗಿ ಕಂಡದ್ದಕ್ಕಿಂತ ಹೆಚ್ಚಾಗಿ ಮೌಲ್ಯಗಳ ಸಂಕೇತವಾಗಿ ಕಂಡದ್ದೇ ವಿಶೇಷ. ಅಥವಾ ಸಮಷ್ಟಿಯ ಎಲ್ಲ ಹತಾಶೆ, ನೋವು, ರೊಚ್ಚು, ಪಾಪ–ಪ್ರಜ್ಞೆಗಳಿಗೆ 'ಗಾಂಧಿ' ಒಂದು ಅಭಿವ್ಯಕ್ತಿಯ ಮಾರ್ಗವಾಗಿದ್ದರು ಎನ್ನಬಹುದೇ?"[೧೬] ಈ ಅಭಿಪ್ರಾಯಗಳು ವ್ಯಕ್ತಿಚಿತ್ರ ಕವಿತೆಗಳ ಹುಟ್ಟಿನ ಹಿಂದೆ ಇರುವ ಸಾಂಸ್ಕೃತಿಕ ಒತ್ತಡಗಳನ್ನು ಗುರುತಿಸುತ್ತಲೇ ಅವುಗಳನ್ನು ಸಮಕಾಲೀನ ಸಾಂಸ್ಕೃತಿಕ ಸಮಸ್ಯೆ–ಸವಾಲುಗಳಿಗೆ ಸೃಜನಶೀಲ ಪ್ರತಿಕ್ರಿಯೆ, ಪ್ರತಿಭಟನೆಗಳನ್ನಾಗಿ ನೋಡಬೇಕಾದ ಒತ್ತಾಸೆಯನ್ನು ಮಾಡುತ್ತವೆ.

ಬರಗೂರು ರಾಮಚಂದ್ರಪ್ಪ ಅವರ 'ಜಿ.ಎಸ್.ಎಸ್. ಕವನಗಳಲ್ಲಿ ಗಾಂಧಿ' ಎಂಬ ಲೇಖನ ಗಾಂಧಿ ವ್ಯಕ್ತಿತ್ವವನ್ನು ಗ್ರಹಿಸುವಲ್ಲಿ ಕವಿಯ ಮನೋಧೋರಣೆಯಲ್ಲಾದ ವಿಕಾಸವನ್ನು ಕುರಿತು ವಿವೇಚಿಸುತ್ತದೆ. ಜಿ.ಎಸ್.ಎಸ್. ಗಾಂಧೀಜಿ ಕುರಿತು ಬೇರೆ ಬೇರೆ ಕಾಲಘಟ್ಟಗಳಲ್ಲಿ 'ಕಂಡದ್ದು ಮೂರು ಸಲ', 'ಅನಾವರಣವಾಯಿತಂತೆ', 'ಗಾಂಧಿ', 'ಗಾಂಧಿ ಶತಮಾನೋತ್ಸವ' ಎಂಬ ನಾಲ್ಕು ಕವಿತೆಗಳನ್ನು ರಚಿಸಿದ್ದಾರೆ. ಬರಗೂರು ಈ ಲೇಖನದಲ್ಲಿ ಗಾಂಧಿಯನ್ನು ಚಿತ್ರಿಸುವಿಕೆಯಲ್ಲಿ ಜಿ.ಎಸ್.ಎಸ್.ರ ಮನೋಧೋರಣೆಯಲ್ಲಿ ಆದ ವಿಕಾಸವನ್ನು ಪ್ರಧಾನವಾಗಿಟ್ಟುಕೊಂಡು ವಿವೇಚಿಸುತ್ತಾರೆ. ಗಾಂಧಿಯನ್ನು ನೋಡುವ ಪ್ರಶಂಸೆಯ, ಸಾಂಪ್ರದಾಯಿಕ ಮನಸ್ಥಿತಿಗಳು ಕವಿತೆಯಿಂದ ಕವಿತೆಗೆ ಬದಲಾಗುತ್ತಾ ವ್ಯಂಗ್ಯ, ವಿಡಂಬನೆ, ಮೊನಚುಗಳು ಕಾಣಿಸಿಕೊಳ್ಳುತ್ತಾ ಬರುವುದನ್ನು ಗುರುತಿಸುತ್ತಾರೆ. ಹೀಗೆ 'ಗಾಂಧಿ'ಯನ್ನು ನೋಡುವ ಕವಿಯ ಮನಸ್ಥಿತಿಯಲ್ಲಾದ ಬದಲಾವಣೆ, ವಿಕಾಸವನ್ನು ಗುರುತಿಸುತ್ತಾ ಜಿ.ಎಸ್.ಎಸ್. ಎಲ್ಲೂ ಗಾಂಧಿಯನ್ನು ಪ್ರಶ್ನಿಸುವುದಿಲ್ಲ ಎನ್ನುತ್ತಾರೆ. ಅವರ ಅಭಿಪ್ರಾಯ ಹೀಗಿದೆ. "ಜಿ.ಎಸ್.ಎಸ್. ಅವರು ತಮ್ಮ ಕವನಗಳಲ್ಲಿ ಸಮಕಾಲೀನ ಸಂದರ್ಭವನ್ನು ಗಾಂದಿ ವ್ಯಕ್ತಿತ್ವದಲ್ಲಿಟ್ಟು ಪರೀಕ್ಷಿಸಿದ್ದಾರೆ. ಹೀಗೆ ಮಾಡುವಾಗ ಗಾಂಧಿ ಎಲ್ಲೂ ಯಾವ ಕಾರಣಕ್ಕೂ ಪ್ರಶ್ನಾರ್ಹರಾಗುವುದಿಲ್ಲ. ಪ್ರಶ್ನೆಗಾಗಿ ಪ್ರಶ್ನಿಸಬೇಕೆಂದು ನನ್ನ ಅಭಿಪ್ರಾಯವಲ್ಲ. ಸಮಕಾಲೀನ ಸ್ಥಿತಿಯನ್ನು ಅವರ ವ್ಯಕ್ತಿತ್ವದ ನಡುವೆ ಪರೀಕ್ಷಿಸಿದಂತೆ ಆ ವ್ಯಕ್ತಿತ್ವ, ವಿಚಾರಗಳ ಮೊತ್ತವನ್ನು ಸಮಕಾಲೀನ ಸಮಾಜಕ್ಕೆ ಸೂಕ್ತವೆನಿಸಬಹುದಾದ ತಾತ್ವಿಕ ಧೋರಣೆಗೆ ಉಜ್ಜಿನೋಡುವುದು ಇವತ್ತು ಹೆಚ್ಚು ಲಾಭಪ್ರದವಾದುದು. ಇಂಥ ಕಡೆ, ವ್ಯಕ್ತಿತ್ವದ ವೈಭವೀಕರಣ ಮಾತ್ರವಾಗುವ ಅಪಾಯ ತಪ್ಪಿ ವಿಚಾರಗಳ ಘರ್ಷಣೆಗೆ ಅವಕಾಶವಾಗಿ ವ್ಯಾಪ್ತಿ ದೊಡ್ಡದಾಗುತ್ತದೆ. ಇದು ಅಗತ್ಯವೂ ಹೌದು"[೧೭] ಈ ಅಭಿಪ್ರಾಯ ವ್ಯಕ್ತಿತ್ವಗಳನ್ನು ಕವಿತೆಗಳ ಮೂಲಕ ಚಿತ್ರಿಸುವ ಹಾಗೂ ಅಂಥ ಕವಿತೆಗಳನ್ನು ನೋಡುವ ನೋಟಕ್ರಮಗಳಲ್ಲಿನ ದೋಷಗಳನ್ನು ಗುರುತಿಸುತ್ತಲೇ ಬದಲಾಗಬೇಕಾದ ದೃಷ್ಟಿಕೋನ, ಮನಸ್ಥಿತಿಗಳ ಬಗೆಗೂ ಗಮನಸೆಳೆಯುತ್ತದೆ.

ಬುದ್ಧನನ್ನು ಕುರಿತ ಕವಿತೆಗಳ ಸಂಕಲನ 'ಮಹಾಮೌನ' ಕೃತಿಗೆ ಮುನ್ನುಡಿಯನ್ನು ಬರೆದ ಕೆ.ವಿ.ತಿರುಮಲೇಶರ ಲೇಖನವೂ ಸಾಂಸ್ಕೃತಿಕ ಮಹತ್ವವುಳ್ಳ ವಿಮರ್ಶೆಯಾಗಿದೆ. ಬುದ್ಧನನ್ನು, ಬುದ್ಧನಿಗೆ ಸಂಬಂಧಿಸಿದ ಕಥಾನಕಗಳನ್ನು ಸೃಜನಶೀಲವಾಗಿ ಬಳಸಿಕೊಳ್ಳಬಹುದಾದ ಸಾಧ್ಯತೆಗಳನ್ನು, ಆಧುನಿಕ ಸಂವೇದನೆಗಳೊಂದಿಗೆ ಮುಖಾಮುಖಿಯಾಗುವ ವಿಶಿಷ್ಟ ಬಗೆಯನ್ನು ಕವಿತೆಗಳಲ್ಲಿ ಗುರುತಿಸುತ್ತಾರೆ. "ಬುದ್ಧನ ಜೀವನ ಹಾಗೂ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಕತೆಗಳೂ ಕೂಡ ನಮ್ಮ ಮನಸ್ಸನ್ನು ರೂಪಿಸಿವೆ. ಉದಾಹರಣೆಗೆ ಕಿಸಾಗೊತಮಿ, ಆಮ್ರಪಾಲಿ, ಅಂಗುಲಿಮಾಲ, ಮುಂತಾದ ಪಾತ್ರಗಳು ಬರುವ ಕತೆಗಳು,

ಅಶ್ವಘೋಷ ಹೇಳಿದ ಕತೆಗಳು, ಬುದ್ಧನೇ ಹೇಳಿದನೆನ್ನಲಾದ ನೀತಿಕತೆಗಳು, ಅನೇಕಾನೇಕ ಜಾತಕ ಕತೆಗಳು, ಈ ಎಲ್ಲಾ ಸೇರಿಯೇ ನಮ್ಮ ಕಲ್ಪನೆಯ ಬುದ್ಧ ತಯಾರಾದದ್ದು. ಈ ಕತೆಗಳಿಗೂ, ಚಾರಿತ್ರಿಕ ಗೌತಮನಿಗೂ ಅದೆಷ್ಟರ ಸಂಬಂಧವಿತ್ತು ಎನ್ನುವುದು ಸಂಶೋಧಕರಿಗೆ ಬಿಟ್ಟ ವಿಷಯ. ಕತೆಗಳು ಕೇವಲ ಕತೆಗಳೆನ್ನುವ ಮಾತ್ರಕ್ಕೆ ಅವುಗಳ ಪ್ರಾಧಾನ್ಯತೆಗೇನೂ ಚ್ಯುತಿ ಬರುವುದಿಲ್ಲ. ಯಾಕೆಂದರೆ ಕವಿ ಕಲ್ಪನೆ ಬೇರೆ, ವೈಚಾರಿಕತೆ ಬೇರೆ. ಕವಿಕಲ್ಪನೆ ಲೋಕದ ಜೊತೆ ನಮಗಿರುವ ಭಾವನಾತ್ಮಕ ಸಂಬಂಧಗಳ ಕುರಿತಾದುದು. ಇತಿಹಾಸ, ವಿಜ್ಞಾನ, ತತ್ವಜ್ಞಾನ ಮುಂತಾದ ವೈಚಾರಿಕ ವಿಧಾನಗಳು ನಮಗೊದಗಿಸುವ ಸತ್ಯಗಳು ಕೂಡ ಕಾವ್ಯದ ಕುಲುಮೆಯಲ್ಲಿ ಬೇರೆ ಹೊಳಹನ್ನು ಕೊಡಬಹುದು. ಅದಿಲ್ಲದಿದ್ದರೆ ಕಾವ್ಯವೆಂಬ ನಮ್ಮ ಸಾಂಸ್ಕೃತಿಕ ಮಗ್ಗುಲಿಗೆ ಅರ್ಥವೇ ಇಲ್ಲ. ಹಾಗಿದ್ದರೂ ಈ ಚಲಾವಣೆಯಲ್ಲಿರುವ ಪರಿಕಲ್ಪನೆಗಳು ನಮ್ಮ ನಮ್ಮ ಕವಿತೆಗಳಲ್ಲಿ ಯಾವ ರೀತಿಯಲ್ಲಿ ಉಪಯೋಗವಾಗುತ್ತವೆ ಎನ್ನುವುದು ಬಹುಮುಖ್ಯವಾದ ಸಂಗತಿಯಾಗುತ್ತದೆ. ಇದನ್ನೇ ನಾವು ಮತ್ತೆ ಮತ್ತೆ ಹೇಳುತ್ತಾ ಬರುತ್ತೇವೆಯೇ? ಎಂದರೆ ನಮ್ಮ ಕವಿತೆಗಳು ಪರ್ಯಾಯ ರೂಪಗಳೇ? ಅಥವಾ ಏನಾದರೂ ಹೊಸತನ್ನು ಹೇಳುವ ಯತ್ನವೇ?"[೧೮] ಎನ್ನುವ ಮಾತುಗಳು ವ್ಯಕ್ತಿಗಳನ್ನು ಕುರಿತ ಕವಿತೆ ರಚನೆ ಮತ್ತು ಕವಿತೆಗಳ ಓದು ಹೇಗೆ ಸೃಜನಶೀಲವಾದ ಪ್ರಕ್ರಿಯೆಯಾಗಬೇಕೆಂಬುದನ್ನು ಹೇಳುತ್ತವೆ. ಇದೇ ಕೃತಿಯ ಸಂಪಾದಕರಾದ ಲಿಂಗಣ್ಣ ಗೋನಾಲರ ಲೇಖನವೂ ಕೂಡ ಬುದ್ಧನನ್ನು ಕುರಿತ ಕವಿತೆಗಳನ್ನು ಸಮಕಾಲೀನ ಸಾಂಸ್ಕೃತಿಕ ಪ್ರಜ್ಞೆಯಿಂದ ನೋಡಬೇಕಾದ ಅಗತ್ಯವನ್ನು ಒತ್ತಾಯಿಸುತ್ತದೆ. "ಬುದ್ಧನನ್ನು ಸಮಕಾಲೀನ ಚಿಂತನೆಗೆ ಪ್ರಸ್ತುತಗೊಳಿಸಿ ಬರೆಯುವ ಪ್ರಯತ್ನಗಳು ನಡೆದಿವೆ. ಅಲ್ಲದೆ ಸಮಕಾಲೀನ ವಿದ್ಯಮಾನಗಳೊಂದಿಗೆ ಬುದ್ಧನನ್ನು ಇಟ್ಟುನೋಡುವುದು, ಹೊಸ ದೃಷ್ಟಿಕೋನದಲ್ಲಿ ಬುದ್ಧನನ್ನು ಗ್ರಹಿಸುವ ಪ್ರಯತ್ನಗಳನ್ನು ಈ ಕವನಗಳಲ್ಲಿ ಕಾಣುತ್ತೇವೆ."[೧೯] ಈ ಮಾತುಗಳು ಬುದ್ಧನ ವ್ಯಕ್ತಿತ್ವವನ್ನು ಕೇವಲ ಪ್ರಶಂಸೆಯಿಂದ ಮಾತ್ರ ನೋಡದೆ ಸಮಕಾಲೀನ ಪ್ರಶ್ನೆಗಳಿಂದ ಮುಖಾಮುಖಿಯಾಗುವ ಮೂಲಕ ಶೋಧಿಸಿರುವ ಕವಿತೆಗಳ ವಿಶಿಷ್ಟತೆಯನ್ನು ಗುರುತಿಸುತ್ತವೆ.

'ಅಂಬೇಡ್ಕರ್ ಕವಿತೆಗಳು' ಕೃತಿಯ ಪ್ರಸ್ತಾವನೆ ಮಾತುಗಳಲ್ಲಿ ಎಲ್. ಹನುಮಂತಯ್ಯ ಅಂಬೇಡ್ಕರ್ ಬಗೆಗಿನ ಕವಿತೆಗಳನ್ನು ಕುರಿತು ವಿಮರ್ಶಿಸುತ್ತಾರೆ. ಅವರು ಅಂಬೇಡ್ಕರ್ ಬಗೆಗಿನ ಕವಿತೆಗಳ ರಚನೆಯ ಹಿಂದಿನ ಒತ್ತಡಗಳನ್ನು ಹುಡುಕುತ್ತಲೇ ಆ ಕವಿತೆಗಳ ಒಟ್ಟು ತುಡಿತಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಾರೆ. "ಕಾವ್ಯ ಹುಟ್ಟುವುದು ತೀವ್ರ ವಿಷಾದದಿಂದ, ಆದರೆ ಹತಾಶೆಯಿಂದಲ್ಲ. ಜೀವನದ ಬಗೆಗಿನ ಅದಮ್ಯ ಪ್ರೀತಿಯಿಂದ, ಆದರೆ ನಿರಾಸಕ್ತಿಯಿಂದಲ್ಲ, ಅಸಮಧಾನ ಮತ್ತು ಅಸಮಾನತೆ ತುಂಬಿರುವ ಸಮಾಜವೇ ಕಾವ್ಯ ಬಿತ್ತುವ, ಫಲವತ್ತಾದ ಭೂಮಿ. ಅಲ್ಲಿ ಬೆಳೆ ತೆಗೆಯುವ ಕವಿಗಳು ಆ ಸಮಾಜದ ವಕ್ತಾರರಾಗಿ ಮಾತನಾಡುತ್ತಾರೆ. ಅದರ ಆರೋಗ್ಯಕ್ಕೆ, ಆರೋಗ್ಯಪೂರ್ಣ ಮನಸ್ಸುಗಳಿಗಾಗಿ ತುಡಿಯುತ್ತಾರೆ. ಅಂತಹ ದುಗುಡ ತುಂಬಿದ ಮನಸ್ಸುಗಳಿಂದ, ಬದಲಾವಣೆಗೆ ಹೋರಾಡಿದ ನಾಯಕನ ಕುರಿತು ಕಂಬನಿದುಂಬಿ ಹಾಡುತ್ತಾರೆ. ಹೃದಯ ತುಂಬಿ ಪಿಸುಗುಡುತ್ತಾರೆ. ಗುಡುಗಿ ಮಿಂಚುತ್ತಾರೆ. ಮಿಂಚಿ ಬೆಳಕಾಗುತ್ತಾರೆ"[೨೦] ಎನ್ನುತ್ತಾರೆ. ಮುಂದುವರಿದು "ಇಲ್ಲಿನ ಕವಿಗಳು ಅಂಬೇಡ್ಕರ್ ಕುರಿತು ಬರೆಯುತ್ತಿರುವಾಗಲೇ ಆ ಸಮಾಜವನ್ನು ಕುರಿತು ಅದರ ಇತಿಹಾಸ, ವರ್ತಮಾನಗಳನ್ನು ಕುರಿತು ಬರೆದಿದ್ದಾರೆ. ಅಂಬೇಡ್ಕರ್ ಕನಸಿದ ಸಮಾಜದ ಕಡೆಗೆ ಬೊಟ್ಟುಮಾಡಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಯಾವ ಮಾನವೀಯ ಪ್ರೀತಿಗಾಗಿ ಅಂಬೇಡ್ಕರ್ ಹಂಬಲಿಸಿದರೋ ಆ ವಿಚಾರಧಾರೆಯ

ಜೊತೆ ಹೆಜ್ಜೆ ಹಾಕಿದ್ದಾರೆ. ಈ ಕವಿಗಳ ಕಾವ್ಯ ಧೋರಣೆ ಅಂಬೇಡ್ಕರ್ ಅಧ್ಯಯನಕ್ಕಿಂತಲೂ ತಮ್ಮ ತಮ್ಮ ಸಾಮಾಜಿಕ ಸ್ತರಗಳಲ್ಲಿ ನಿಂತು ಅವರನ್ನು ಅರ್ಥಮಾಡಿಕೊಂಡ ಬಗೆಯೇ ಮುಖ್ಯವಾಗಿರುವುದನ್ನು ಕಾಣಬಹುದು."[೨೧] ಈ ಅಭಿಪ್ರಾಯಗಳು ಅಂಬೇಡ್ಕರ್ ಕುರಿತ ಕವಿತೆಗಳನ್ನು ಕೇವಲ ವ್ಯಕ್ತಿ ಕೇಂದ್ರಿತವಾಗಿ ನೋಡದೆ ಕವಿತೆಯ ಹುಟ್ಟಿನ ಹಿಂದಿನ ಸಾಂಸ್ಕೃತಿಕ ಒತ್ತಡಗಳ ಮೂಲಕ ನೋಡುವ ಹಾಗೂ ಕವಿತೆಗಳನ್ನು ಸಮುದಾಯದ, ಸಮಕಾಲೀನ ಸಮಾಜದ ಎಲ್ಲ ಬಗೆಯ ತಲ್ಲಣಗಳ ಅಭಿವ್ಯಕ್ತಿಯಾಗಿ ನೋಡುವ, ಹಾಗೆ ನೋಡುತ್ತಲೇ ತಮ್ಮ ನಾಯಕನನ್ನು ಅರಿಯುವ, ಒರೆಗೆ ಹಚ್ಚಿ ನೋಡುವ ವಿಶಿಷ್ಟ ಪ್ರಯೋಗಗಳಾಗಿ ಮೂಡಿಬಂದಿರುವುದನ್ನು ಗುರುತಿಸುತ್ತಾರೆ. ಹೀಗೆ ವ್ಯಕ್ತಿಚಿತ್ರ ಕವಿತೆಗಳನ್ನು ಓದುವ, ನೋಡುವ ನೋಟಕ್ರಮಗಳಿಗೆ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಮಹತ್ವವಿದೆ. ಏಕೆಂದರೆ ಇವು ವ್ಯಕ್ತಿಗಳನ್ನು ಗ್ರಹಿಸುತ್ತಲೇ ಅವರು ಸಮಾಜಕ್ಕೆ ನೀಡಿದ ಕೊಡುಗೆಗಳನ್ನು, ಅದನ್ನು ಸಮುದಾಯ ಸ್ವೀಕರಿಸಿದ ಬಗೆಗಳನ್ನು ಒರೆಗೆ ಹಚ್ಚಿ ನೋಡುವ ಪ್ರಯತ್ನಗಳಾಗಿರುತ್ತವೆ. ಇದು ವ್ಯಕ್ತಿತ್ವಗಳನ್ನು ಒಂದು ನಿರ್ದಿಷ್ಟ ಮನೋಭೂಮಿಕೆಯಿಂದ ಆಚೆ ಇಟ್ಟು ನೋಡಲು ಸಹಕಾರಿಯಾಗಬಲ್ಲದು.

ನಟರಾಜ್ ಹುಳಿಯಾರ್ ಬುದ್ಧನನ್ನು ಕುರಿತ ಕವಿತೆಗಳಲ್ಲಿ ಸಮಕಾಲೀನ ವಾತಾವರಣದ ಪ್ರಕ್ಷುಬ್ಧತೆ, ಹಿಂಸೆ, ಕ್ರೌರ್ಯಗಳ ಜಾಗದಲ್ಲಿ ಬುದ್ಧನ ನಗೆ ಮತ್ತು ಕರುಣೆಗಳನ್ನು ಬಿತ್ತುವ ಪ್ರಯತ್ನಗಳನ್ನು ಗುರುತಿಸುತ್ತಾರೆ. "ಭಾರತದಿಂದ ಬುದ್ಧನನ್ನು ಓಡಿಸಿದವರು ಅಣುಬಾಂಬ್ ಸ್ಫೋಟಕ್ಕೆ 'ಬುದ್ಧ ನಗುತ್ತಾನೆ'ಎಂದು ಹೆಸರಿಟ್ಟು ಕೇಕೆಹಾಕುತ್ತಿರುವ ಈ ಮತೀಯವಾದದ ಘಟ್ಟದಲ್ಲಿ ಆಧುನಿಕ ಕನ್ನಡ ಕವಿಗಳ ಈ ನೂರಾರು ಕವನಗಳು ಸೂಸುತ್ತಿರುವ ಬುದ್ಧನ ನಗೆ ಹಾಗೂ ಕರುಣೆ ಈ ಕಾಲದ ಕಣ್ಣುಗಳಾಗಲಿ."[೨೨] ಬುದ್ಧನನ್ನು ಕುರಿತ ಕವಿತೆಗಳು ಕೇವಲ ಬುದ್ಧನ ಬಗೆಗೆ ಮಾತನಾಡದೆ ಸಮಕಾಲೀನ ವಾತಾವರಣದ ಎಲ್ಲ ಬಗೆಯ ಅಮಾನವೀಯ ಮತ್ತು ಜೀವವಿರೋಧಿ ಚಟುವಟಿಕೆಗಳಿಗೆ ಪ್ರತಿಕ್ರಿಯೆಯಾಗಿಯೂ ಹಾಗೂ ಬುದ್ಧನ ಜೀವ ಪ್ರೀತಿಯ ಸಂದೇಶಗಳ ವಾಹಕಗಳಾಗಿಯೂ ಕೆಲಸ ಮಾಡುತ್ತಿರುತ್ತದೆ ಎಂಬ ನೆಲೆಯಲ್ಲಿ ಕವಿತೆಗಳನ್ನು ನೋಡಿದ್ದಾರೆ.

ಬಂಜಗೆರೆ ಜಯಪ್ರಕಾಶ್‌ರ ಕವನ ಸಂಕಲನ 'ಕಳೆದ ಕಾಲದ ಪ್ರೇಯಸಿಯರಿಗೆ 'ಕೃತಿಯ ಮುನ್ನುಡಿಯಲ್ಲಿ 'ಯಶೋಧರಾ ಕನವರಿಕೆ', ಮತ್ತು 'ಬೋಧಿವೃಕ್ಷದಡಿ ದುಃಸ್ವಪ್ನ'ಗಳ ಬಗೆಗೆ ನಟರಾಜ್ ಹುಳಿಯಾರ್ ಮಾಡುವ ವಿಮರ್ಶೆ ಸಾಂಸ್ಕೃತಿಕ ನೆಲೆಯದ್ದು. "ಬುದ್ಧನನ್ನು ಮತ್ತೆ ಮತ್ತೆ ಹುಡುಕಿಕೊಳ್ಳುವ ಜೇಪಿಗೆ ಬೋಧಿವೃಕ್ಷದಡಿಯಲ್ಲಿ ಬಿದ್ದ ದುಃಸ್ವಪ್ನದಲ್ಲಿ ಕಾಣುವುದು 'ಪ್ರತಿಮನೆಯ ಬಾಗಿಲಿಗೆ ಚುಮುಕಿಸಿದ ರಂಗೋಲಿ' ಅಥವಾ 'ಹೊಳೆವ ಇಬ್ಬನಿಯಂತೆ' ಕಂಡ 'ಮದ್ದು ಗುಂಡಿನ ರಾಶಿ' ಹೀಗೆ ಬುದ್ಧನ ಹಾದಿಯನ್ನು, ಬುದ್ಧನ ಅನುಯಾಯಿಗಳನ್ನು ಜೇಪಿ ಸಂದೇಹದಿಂದಲೇ ನೋಡುತ್ತಿರುವಾಗಲೂ ಬುದ್ಧನ ವ್ಯಕ್ತಿತ್ವ ಕುರಿತ ವಿಶಿಷ್ಟ ಆರಾಧನೆ ಕೂಡ ಇರುವುದನ್ನು ಮರೆಯಲಾಗದು"[೨೩] ಎನ್ನುವುದು ಕವಿತೆಯ ಶಕ್ತಿ ಮತ್ತು ದೌರ್ಬಲ್ಯಗಳನ್ನು ಒಟ್ಟಿಗೇ ಗುರುತಿಸುವ ಕೆಲಸವನ್ನು ಮಾಡುತ್ತದೆ.

'ಸಂಗಮ'ಕೃತಿಯ ಮುನ್ನುಡಿಯಲ್ಲಿ ಜಿ.ಎಸ್.ಶಿವರುದ್ರಪ್ಪ ಬಸವಣ್ಣನನ್ನು ಕುರಿತ ಕವನಗಳನ್ನು ವಿಮರ್ಶಿಸುತ್ತಾ, ಈ ಕವಿತೆಗಳನ್ನು ಸ್ವವಿಮರ್ಶೆ ಮತ್ತು ಸಮಾಜ ವಿಮರ್ಶೆಯ ಪ್ರಯತ್ನಗಳನ್ನಾಗಿ ನೋಡುತ್ತಾರೆ. ಈ ಪ್ರಯತ್ನಗಳು ಸುಧಾರಕನ ನೆಲೆಯಲ್ಲಿ ನಡೆಯದೆ ತನ್ನ ಆತ್ಮೋದ್ಧಾರದ ಆಸಕ್ತಿಯಿಂದ ನಡೆದವುಗಳೆನ್ನುತ್ತಾರೆ. "ಹಿಂದಿನ ಮಹಾವ್ಯಕ್ತಿಗಳ ಸ್ಮರಣೆಯನ್ನು ಮಾಡಿಕೊಡುವ ವಿಶಿಷ್ಟ ಸಂದರ್ಭಗಳಲ್ಲಿಯಂತೂ ಅಂಥ ಮಹಾ

ವ್ಯಕ್ತಿಗಳ ಸಾಧನೆ – ಸಿದ್ಧಿಗಳ ಬಗೆಗೆ ವಿಶೇಷವಾದ ಭಕ್ತಿಗೌರವವೂ, ಇಂಥ ಮಹನೀಯರು ಹುಟ್ಟಿ ಬೆಳೆದ ಪರಿಸರದಲ್ಲಿರುವ ನಮ್ಮ ಬದುಕು ಎಂಥ ಅಧೋಗತಿಗಿಳಿದಿದೆಯಲ್ಲ ಎಂಬ ವಿಷಾದವೂ ವಿಶೇಷವಾಗಿ ಅಭಿವ್ಯಕ್ತವಾಗಿ ಸಮಕಾಲೀನ ಜೀವನದ ಬಗೆಗೆ ಒಂದು ಸಾತ್ವಿಕ ವ್ಯಗ್ರತೆ ಪ್ರಕಟವಾಗುತ್ತದೆ. ಈ ವ್ಯಗ್ರತೆ ಪ್ರಕಟವಾಗುವುದು ತನ್ನ ಕಾಲವನ್ನು ಅಥವಾ ಸುತ್ತಣ ಬದುಕನ್ನು ಕುರಿತು, ಸುಧಾರಕನ ನೆಲೆಯಲ್ಲಿ ನಿಂತು ಟೀಕಿಸುವ ಉದ್ದೇಶದಿಂದ ಅಲ್ಲ, ಮೂಲತಹ ತನ್ನನ್ನು ಕುರಿತ ಉದ್ಧಾರದ ಆಸಕ್ತಿಯಿಂದ ಮತ್ತು ಬದುಕಿನ ಶ್ರೇಯಸ್ಸಿನಲ್ಲಿ ವ್ಯಕ್ತಿಗಳಿಗಿರುವ ಶ್ರದ್ಧೆಯಿಂದ. ಮಹಾವ್ಯಕ್ತಿತ್ವದ ಸ್ಮರಣೆಯ ಒರೆಗಲ್ಲಿನಲ್ಲಿ ತನ್ನನ್ನು ಮತ್ತು ತನ್ನ ಸುತ್ತಣ ಬದುಕನ್ನು ಒರೆದು ನೋಡುವ ಪ್ರಯತ್ನ ಇದು. ಬಸವಣ್ಣನವರಂಥ ಮಹಾವ್ಯಕ್ತಿತ್ವದ ಸ್ಮರಣೆಯ ಒರೆಗಲ್ಲಿನಲ್ಲಿ ನಮ್ಮ ಸಮಕಾಲೀನ ಕವಿಗಳು ತಮ್ಮನ್ನು ತಮ್ಮ ಸುತ್ತಣ ಬದುಕನ್ನು ಹೇಗೆ ತೀಡಿ ನೋಡಿದ್ದಾರೆ ಎಂಬುದನ್ನು ಈ ಕವಿತೆಗಳಲ್ಲಿ ಗುರುತಿಸಬಹುದು".[೨೪] ಇಲ್ಲಿ ಜಿ.ಎಸ್.ಎಸ್. 'ಕವಿಗಳು ಬಸವಣ್ಣನನ್ನು ಮಹಾವ್ಯಕ್ತಿತ್ವವೆಂದು ಕರೆದು ಅವರ ಸ್ಮರಣೆಯಲ್ಲಿ ತಮ್ಮನ್ನೂ, ಸಮಾಜವನ್ನೂ ವಿಮರ್ಶೆಗೆ ಒಳಪಡಿಸಿದ್ದಾರೆ' ಎನ್ನುತ್ತಾರೆ. ಆದರೆ ಇದು ಕವಿತೆಗಳ ಒಂದು ಮುಖವನ್ನು ಮಾತ್ರ ಗ್ರಹಿಸಿ ನೋಡುವ ಕ್ರಮವಾಗಿದೆಯೇ ಹೊರತು ಕವಿತೆಗಳ ಒಟ್ಟು ಆಶಯ, ಅಭಿವ್ಯಕ್ತಿಯ ಸಾಧ್ಯತೆಗಳನ್ನು ಗುರುತಿಸುವುದಿಲ್ಲ. ಸಮಾಜವನ್ನೂ, ತಮ್ಮನ್ನೂ ವಿಮರ್ಶಿಸಿಕೊಳ್ಳುವ ಹಿಂದೆ ಕೇವಲ ವೈಯಕ್ತಿಕ ವಿಕಾಸದ ಆಸಕ್ತಿಯೊಂದೇ ಕೆಲಸ ಮಾಡುತ್ತಿರುವುದಿಲ್ಲ. ಸಮಕಾಲೀನ ವಾತಾವರಣಕ್ಕೆ ಕನ್ನಡಿಯಾಗುವ ಮತ್ತು ದಂಡವೂ ಆಗುವ ಶಕ್ತಿ ಕವಿತೆಗಳಿಗಿರುತ್ತದೆ. ಕವಿತೆಗಳು ಸಮಕಾಲೀನ ವಿದ್ಯಮಾನಗಳಿಗೆ ಕುರುಡಾಗಿರುವುದಿಲ್ಲ. ಈ ನಿಟ್ಟಿನಲ್ಲಿ ಕವಿತೆಗಳ ಹೊಣೆಗಾರಿಕೆಯನ್ನು ನೋಡಬೇಕಾದ ಅಗತ್ಯವಿದೆ.

ಎಂ.ಡಿ.ಒಕ್ಕುಂದರ "ಬೇಂದ್ರೆಯವರ 'ಶ್ರದ್ಧಾಂಜಲಿ' ಹಾಗೂ ಕೋಮುವಾದದ ವಿರೋಧಿ ಸೃಜನಾತ್ಮಕ ನೆಲೆ" ಎಂಬ ಲೇಖನ ಬೇಂದ್ರೆ ಗಾಂಧೀಜಿಯವರನ್ನು ಕುರಿತು ಬರೆದ ಕವಿತೆಗಳ ಉತ್ತಮ ವಿಮರ್ಶೆಯಾಗಿದೆ. "ಗಾಂಧಿ ಹತ್ಯೆಯ ಆಘಾತವನ್ನು ತನ್ನ ಸೃಜನಶೀಲತೆಯ ಬಹುಮುಖ್ಯ ರೂಪಕವಾಗಿ ಸ್ವೀಕರಿಸುವುದು, ಗಾಂಧಿ ಮತ್ತು ಗೋಡ್ಸೆಯ ವೈರುಧ್ಯಗಳನ್ನು ನಿರಂತರವಾಗಿ ಮುಖಾಮುಖಿಯಾಗಿಸುವುದು, ಜನತೆಯ ತಲ್ಲಣ ಸಂಕಟಗಳನ್ನು ಮರಳಿ ಮರಳಿ ಅಭಿವ್ಯಕ್ತಿಸುವುದು, ಸೌಹಾರ್ದತೆಯ ಗಾಂಧೀ ಚಿಂತನೆಗಳನ್ನು ಎತ್ತಿಹಿಡಿಯುವುದು ಬೇಂದ್ರೆಯವರ ಗಾಂಧಿ ಕವಿತೆಗಳ ಲಕ್ಷಣಗಳಾಗಿವೆ. ಕವಿಯೊಬ್ಬ ಕೋಮುವಾದದ ವಿರುದ್ಧ ತೋರಿದ ಪ್ರಖರ ರಾಜಕೀಯ ಪ್ರತಿಭಟನೆಯ ಕಾವ್ಯಾತ್ಮಕ ಮಾದರಿ ಇದು".[೨೫] ಕೋಮುವಾದದ ಮತ್ತು ಅದರ ಪರಿಣಾಮವಾದ ಹಿಂಸೆಗೆ ಬೇಂದ್ರೆಯವರ ರಾಜಕೀಯ ಪ್ರತಿಕ್ರಿಯೆಗಳಾಗಿ ಕವಿತೆಯನ್ನು ನೋಡಿರುವುದನ್ನು ಈ ಮಾತುಗಳು ತಿಳಿಸುತ್ತವೆ. ಜೊತೆಗೆ ಬೇಂದ್ರೆಯವರ 'ಶ್ರದ್ಧಾಂಜಲಿ' ಕವಿತೆಯನ್ನು ಮುಖ್ಯವಾಗಿಸಿಕೊಂಡು, ಬೇಂದ್ರೆ ವಸಾಹತುಶಾಹಿ ಹಾಗೂ ವಸಾಹತ್ತೋತ್ತರ ಬದುಕಿಗೆ ನೀಡಿದ ರಾಜಕೀಯ ಪ್ರತಿಕ್ರಿಯೆಯ ವಿನ್ಯಾಸವನ್ನು ರೂಪಿಸುವ ಪ್ರಯತ್ನ ಮಾಡಿದ್ದಾರೆ. ಬೇಂದ್ರೆಯವರ ಗಾಂಧಿ ಕುರಿತ ಹದಿನೆಂಟು ಕವಿತೆಗಳನ್ನು ಅವರ ರಾಜಕೀಯ ಪ್ರಜ್ಞೆ ಹಾಗೂ ನಿಲುವುಗಳ ಅಭಿವ್ಯಕ್ತಿಯ ನೆಲೆಯಲ್ಲಿ ವಿಮರ್ಶೆ ಮಾಡುತ್ತಾರೆ.

ಹೀಗೆ ಬುದ್ಧ, ಬಸವ, ಗಾಂಧಿ ಮತ್ತು ಅಂಬೇಡ್ಕರ್ ಅವರುಗಳನ್ನು ಕುರಿತ ಆಧುನಿಕ ಕನ್ನಡ ಕವಿತೆಗಳನ್ನು ಕುರಿತು ಈಗಾಗಲೇ ಮೇಲೆ ಉಲ್ಲೇಖಿಸಲಾದ ನೆಲೆಗಳಲ್ಲಿ ಚರ್ಚೆ, ಅಧ್ಯಯನಗಳು ನಡೆದಿವೆ. ಈ

ಅಧ್ಯಯನಗಳ ಮಿತಿ ಮತ್ತು ಹೊಸ ಒಳನೋಟಗಳು ಈ ಕ್ಷೇತ್ರದಲ್ಲಿ ಕೈಗೊಳ್ಳಬಹುದಾದ ಹೊಸ ಅಧ್ಯಯನಗಳಿಗೆ ದಾರಿಕಾಣಿಸಬಲ್ಲವು. ಮೇಲೆ ಉಲ್ಲೇಖಿಸಲಾದ ನೆಲೆಗಳಲ್ಲಿ ಕವಿತೆಗಳನ್ನು ಬೇರೆ ಬೇರೆ ಉದ್ದೇಶ, ದೃಷ್ಟಿಕೋನಗಳಿಂದ ನೋಡಲಾಗಿದೆ. ಈ ನಾಲ್ಕು ವ್ಯಕ್ತಿಗಳನ್ನು ಕುರಿತ ಕವಿತೆಗಳನ್ನು ಒಟ್ಟಿಗೇ ಸಾಹಿತ್ಯ-ಸಾಂಸ್ಕೃತಿಕ ದೃಷ್ಟಿಯಿಂದ ನೋಡಿದ ಅಧ್ಯಯನಗಳು ಕಂಡುಬರುವುದಿಲ್ಲ. ಒಬ್ಬೊಬ್ಬ ವ್ಯಕ್ತಿಯನ್ನು ಕುರಿತ ಕವಿತೆಗಳನ್ನು ಕಾಲ ಕೇಂದ್ರಿತವಾಗಿಯೋ, ಕವಿಕೇಂದ್ರಿತವಾಗಿಯೋ, ಸಾಹಿತ್ಯ ಪಂಥ ಕೇಂದ್ರಿತವಾಗಿಯೋ ಚರ್ಚಿಸಲಾಗಿದೆ. ಒಬ್ಬ ವ್ಯಕ್ತಿಯನ್ನೇ ಪ್ರಧಾನವಾಗಿಟ್ಟುಕೊಂಡು ಆಧುನಿಕ ಕನ್ನಡ ಕಾವ್ಯ ಹೇಗೆ ನೋಡಿದೆ ಎಂಬ ನೆಲೆಯಲ್ಲಾಗಲೀ, ಅಥವಾ ಈ ನಾಲ್ಕು ವ್ಯಕ್ತಿಗಳ ಬಗೆಗಿನ ಕವಿತೆಗಳನ್ನು ಒಟ್ಟಿಗೆ ಆಧುನಿಕ ಕನ್ನಡ ಕಾವ್ಯ ಹೇಗೆ ನಿರ್ವಹಿಸಿದೆ ಎಂದಾಗಲೀ ಸಂಶೋಧನೆಗಳು ನಡೆದಿರುವುದು ಕಂಡುಬರುವುದಿಲ್ಲ. ಈ ಬಗೆಯ ಅಧ್ಯಯನಗಳು ಕೇವಲ ಬಿಡಿ ವಿಮರ್ಶೆಗಳು, ಮುನ್ನುಡಿ, ಬೆನ್ನುಡಿ ಹಾಗೂ ಸಂಶೋಧನೆಯ ಆಂಶಿಕ ಭಾಗಗಳಷ್ಟೇ ಆಗಿರುವುದರಿಂದ ಈ ನಾಲ್ಕೂ ವ್ಯಕ್ತಿಗಳನ್ನು ಕುರಿತ ಆಧುನಿಕ ಕನ್ನಡ ಕಾವ್ಯದ ಅಧ್ಯಯನ ಈ ವ್ಯಕ್ತಿತ್ವಗಳ ಬಗೆಗೆ ಹಾಗೂ ಆಧುನಿಕ ಕನ್ನಡ ಕಾವ್ಯದ ವಿಶ್ವಾತ್ಮಕ ಕಾಳಜಿಗಳ ಬಗೆಗೆ ಬಹುಮುಖ್ಯ ಒಳನೋಟಗಳನ್ನು ನೀಡಬಲ್ಲದು ಎಂಬ ಭರವಸೆಯೊಂದಿಗೆ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಬುದ್ಧ, ಬಸವಣ್ಣ, ಗಾಂಧಿ, ಅಂಬೇಡ್ಕರ್ ಈ ನಾಲ್ಕೂ ವ್ಯಕ್ತಿಗಳು ಕೇವಲ ವ್ಯಕ್ತಿಗಳಾಗಿ ಉಳಿದಿಲ್ಲ. ಅವರು ವ್ಯಕ್ತಿತ್ವಗಳಾಗಿ, ಸಾಂಕೇತಿಕ ಮೌಲ್ಯಗಳಾಗಿ ಜನರ ಪ್ರಜ್ಞೆಯಲ್ಲಿ ಉಳಿದು ಬಂದಿದ್ದಾರೆ. ಜನಜೀವನದ ಎಲ್ಲಾ ಮಜಲುಗಳನ್ನು ಗಾಢವಾಗಿ ಪ್ರಭಾವಿಸುತ್ತಾ ಬಂದಿದ್ದಾರೆ. ಹಾಗಾಗಿಯೇ ಕನ್ನಡ ಕಾವ್ಯ ದೊಡ್ಡ ಮಟ್ಟದಲ್ಲಿ, ಗಾಢವಾಗಿ ಇವರೊಂದಿಗೆ ಸಂವಾದಿಸಿದೆ, ಮುಖಾಮುಖಿಯಾಗಿದೆ. ಮಾನವ ಕುಲಕ್ಕೆ ಆತಂಕ, ಆಘಾತಗಳು ಎದುರಾದಾಗಲೆಲ್ಲ ನಮ್ಮ ಕವಿಗಳು ನೆನಪು ಮಾಡಿಕೊಂಡಿರುವುದು, ಮೊರೆಹೋಗಿರುವುದು, ಸಂವಾದಿಸಿರುವುದು ಈ ಉನ್ನತ ವ್ಯಕ್ತಿತ್ವಗಳೊಂದಿಗೆ.

ಹೀಗೆ ಕನ್ನಡದ ಮನಸ್ಸುಗಳನ್ನು ಗಾಢವಾಗಿ ಕಾಡಿರುವ ಈ ನಾಲ್ಕು ವ್ಯಕ್ತಿತ್ವಗಳನ್ನು ಆಧುನಿಕ ಕನ್ನಡ ಕಾವ್ಯ ಶೋಧನೆಗೆ ಒಳಪಡಿಸಿರುವ ನೆಲೆಗಳಾಗುವುವು? ಎಂಬುದು ಕುತೂಹಲದ ಹಾಗೂ ಗಂಭೀರವಾದ ಪ್ರಶ್ನೆಯೇ ಆಗಿದೆ. ಈ ನಿಟ್ಟಿನಲ್ಲಿ ಸಂಶೋಧನೆಗಳು ನಡೆದಿರದ ಕಾರಣ **ಹೊಸಗನ್ನಡ ಕಾವ್ಯ : ವ್ಯಕ್ತಿತ್ವ ಶೋಧದ ನೆಲೆಗಳು** ಎಂಬ ಶೀರ್ಷಿಕೆಯ ಅಡಿಯಲ್ಲಿ ಸಂಶೋಧನೆಯನ್ನು ಕೈಗೊಳ್ಳಲಾಗಿದೆ. ಒಂದು ವಿಶಿಷ್ಟ ಕಾವ್ಯ ಪ್ರಕಾರವಾಗಿ ಬೆಳೆಯುತ್ತಿರುವ ವ್ಯಕ್ತಿಚಿತ್ರ ಕವಿತೆಗಳಿಗೆ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಮಹತ್ವವಿದೆ. ಅವುಗಳ ಸ್ವರೂಪ, ಶಕ್ತಿ, ಮಿತಿ ಮತ್ತು ಸಾಧ್ಯತೆಗಳನ್ನು ಗುರುತಿಸಿಕೊಂಡು ಬೆಳೆಸಬೇಕಾದ ಅಗತ್ಯವಿದೆ. ಅವುಗಳ ಹುಟ್ಟಿನ ಹಿಂದಿನ ಸಾಂಸ್ಕೃತಿಕ ಒತ್ತಡಗಳನ್ನು, ಅವುಗಳ ಕಾಳಜಿಗಳನ್ನು, ವ್ಯಕ್ತಿತ್ವವನ್ನು ಶೋಧನೆಗೆ ಒಳಪಡಿಸುವ ರೀತಿಯ ವಿಶಿಷ್ಟತೆಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು ಕನ್ನಡ ಕಾವ್ಯದ ವಿಶಿಷ್ಟತೆಗಳನ್ನು ಗುರುತಿಸಿಕೊಳ್ಳುವ ದೃಷ್ಟಿಯಿಂದ ಮಹತ್ವದ ಅಧ್ಯಯನವಾಗಬಲ್ಲದು.

**ಕೊನೆ ಟಿಪ್ಪಣಿ :**

೧. ಸಂಗಮ. (ಸಂ) ಟಿ.ಆರ್ ಮಹದೇವಯ್ಯ, ಸಿ.ಎಂ. ಕುಂದಗೋಳ, ಪು. ಸಂ. ೧
೨. ಅದೇ, ಪು. ಸಂ. ೧೦
೩. ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ, ಜಿ. ಕೃಷ್ಣಪ್ಪ. ಪು. ಸಂ. ೨೩
೪. ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ. (ಸಂ) ಹಾ.ಮಾ.ನಾ. ಕನ್ನಡ ಸಾಹಿತ್ಯದಲ್ಲಿ ಗಾಂಧಿ. ಎಂ. ರಾಮದಾಸ್. ಪು. ಸಂ. ೧೨೬
೫. ಅದೇ, ಪು. ಸಂ. ೧೨೭
೬. ಬಂಡಾಯ ದಲಿತ ಕಾವ್ಯಗಳ ಮೇಲೆ ವಿಚಾರ ವಾದಗಳ ಪ್ರಭಾವ. ಪ್ರಹ್ಲಾದ ಅಗಸನಕಟ್ಟೆ, ಪು. ಸಂ. ೧೨೨
೭. ಅದೇ, ಪು. ಸಂ. ೩೦೦
೮. ಅದೇ, ಪು. ಸಂ. ೩೪೫
೯. ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ (ಸಂ) ಹಾ. ಮಾ. ನಾ. ಸ್ವಾಗತ ಭಾಷಣ, ಪು. ಸಂ. ೯
೧೦. ಅದೇ, ಪು. ಸಂ. ೧೬೪
೧೧. ಅದೇ, ಪು. ಸಂ. ೧೬೪
೧೨. ಅದೇ, ಪು. ಸಂ. ೨೯
೧೩. ಕನ್ನಡ ನವೋದಯ ಕಾವ್ಯ - ಒಂದು ಪುನರ್ ಮೌಲ್ಯಮಾಪನ, ದೊಡ್ಡರಂಗೇಗೌಡ, ಪು. ಸಂ. ೪೫೯
೧೪. ಬುದ್ಧ ಭಾರತ (ಸಂ) ಮುನಿವೆಂಕಟಪ್ಪ, ಪು.ಸಂ. ೩೧೪
೧೫. ಗಾಂಧಿ ಎಂಬುವ ಹೆಸರು - (ಸಂ) ಚಂದ್ರಶೇಖರ ಪಾಟೀಲ, ಶಶಿಕಲಾ ವೀರಯ್ಯಸ್ವಾಮಿ, ೯
೧೬. ಅದೇ, ೮
೧೭. ಸಾಹಿತ್ಯ ಮತ್ತು ರಾಜಕಾರಣ, ಬರಗೂರು ರಾಮಚಂದ್ರಪ್ಪ, ಪು. ಸಂ. ೧೭೦
೧೮. ಮಹಾಮೌನ (ಸಂ) ಲಿಂಗಣ್ಣ ಗೋನಾಲ, ಪು. ಸಂ. ೧೪
೧೯. ಅದೇ, ಪು. ಸಂ. ೧೫
೨೦. ಅಂಬೇಡ್ಕರ್ ಕವಿತೆಗಳು (ಸಂ) ಎಲ್ ಹನುಮಂತಯ್ಯ, ಪು ಸಂ. ೮.
೨೧. ಅದೇ, ಪು.ಸಂ. ೯
೨೨. ಮಹಾಮೌನ (ಸಂ) ಲಿಂಗಣ್ಣ ಗೋನಾಲ, ಬೆನ್ನುಡಿ, ಡಾ. ನಟರಾಜ್ ಹುಳಿಯಾರ್
೨೩. ಕಳೆದ ಕಾಲದ ಪ್ರೇಯಸಿಯರಿಗೆ, ಡಾ. ಬಂಜಗೆರೆ ಜಯಪ್ರಕಾಶ್, ಪು. ಸಂ. ೯
೨೪. ಸಂಗಮ (ಸಂ) ಟಿ.ಆರ್. ಮಹದೇವಯ್ಯ, ಡಾ.ಸಿ.ಎಂ.ಕುಂದಗೋಳ, ಪು. ಸಂ. ೭
೨೫. ಹೊಸತು, ಮಾಸ ಪತ್ರಿಕೆ, ಸಂಪುಟ-೧೩, ಸಂಚಿಕೆ-೭, ಫೆಬ್ರವರಿ ೨೦೧೨, ಪು. ೩೦

## ಅಧ್ಯಾಯ ೩

## ವ್ಯಕ್ತಿತ್ವ ಶೋಧ : ಪರಿಕಲ್ಪನೆಯ ಚರ್ಚೆ

'ವ್ಯಕ್ತಿತ್ವ'ವೆಂಬುದು ಮನುಷ್ಯ ಕೇಂದ್ರಿತವಾಗಿ ನಿರ್ವಚನೆಗೊಳ್ಳುತ್ತಿರುವ ಬಹುಮುಖ್ಯವಾದ ಪರಿಕಲ್ಪನೆಯಾಗಿದೆ. ಬೇರೆ ಬೇರೆ ಜ್ಞಾನಶಾಖೆಗಳು ಈ ಪರಿಕಲ್ಪನೆಯನ್ನು ತಮ್ಮದೇ ಆದ ಅಗತ್ಯ, ಉದ್ದೇಶಗಳಿಗೆ ಅನುಗುಣವಾಗಿ ವ್ಯಾಖ್ಯಾನಿಸಿಕೊಳ್ಳುತ್ತಿವೆ. ಆದರೆ ಸಾಹಿತ್ಯ ಪ್ರಕಾರವು ವ್ಯಕ್ತಿತ್ವವನ್ನು ನಿರ್ವಚಿಸುವ ಬಗೆ ಉಳಿದೆಲ್ಲಾ ಜ್ಞಾನಶಾಖೆಗಳಿಗಿಂತ ಭಿನ್ನ ಹಾಗೂ ವಿಶಿಷ್ಟವಾದುದಾಗಿರುತ್ತದೆ. ಏಕೆಂದರೆ ಸಾಹಿತ್ಯ ಯಾವುದೇ ವ್ಯಕ್ತಿತ್ವವನ್ನು ಸಾಂಸ್ಕೃತಿಕ ನೆಲೆಯಲ್ಲಿ ಗ್ರಹಿಸಲು ಪ್ರಯತ್ನಿಸುತ್ತಿರುತ್ತದೆ. ಹಾಗೂ ಆಳವಾದ ಒಳನೋಟಗಳಿಂದ ಕೂಡಿರುವಂತದ್ದಾಗಿರುತ್ತದೆ. ಹಾಗಾಗಿ ಸಾಹಿತ್ಯ ಮನುಷ್ಯ ನಾಗರೀಕತೆಯ ವ್ಯಕ್ತಿತ್ವಗಳನ್ನು ಕುರಿತಂತೆ ನಡೆಸಿರುವ ಜಿಜ್ಞಾಸೆ ಹಾಗೂ ವ್ಯಕ್ತಿತ್ವಗಳನ್ನು ತನ್ನ ಪರಂಪರೆ ಮತ್ತು ವರ್ತಮಾನದ ಸಾಂಸ್ಕೃತಿಕ ಬದುಕಿನಿಂದ ಶೋಧಿಸಿಕೊಳ್ಳುತ್ತಿರುವ ಪ್ರಕ್ರಿಯೆಗಳು ವ್ಯಕ್ತಿತ್ವದ ನಿರ್ವಚನದ ಜೊತೆಗೆ ಸಾಂಸ್ಕೃತಿಕ ಚರಿತ್ರೆಯೊಂದನ್ನು ಕಟ್ಟಿಕೊಡುತ್ತಿರುವ ಪ್ರಯತ್ನದ ಭಾಗವೂ ಆಗಿರುವಂತದ್ದಾಗಿದೆ.

ವ್ಯಕ್ತಿಗಳ ಬದುಕು, ಚಿಂತನೆ, ಹೋರಾಟ, ಮಾನವೀಯ, ನೈತಿಕ ಮೌಲ್ಯಗಳು, ತಾಯ್ತನದ ಗುಣಗಳು ವೈಯಕ್ತಿಕವಾಗಿ ವ್ಯಕ್ತಿಗಳ ಜೀವನವನ್ನು ಸಾರ್ಥಕಗೊಳಿಸಿದರೆ; ಇಂಥ ವ್ಯಕ್ತಿಗಳ ಶ್ರೇಷ್ಠ ಮೌಲ್ಯಗಳು ಸಮಕಾಲೀನ ಮತ್ತು ಕಾಲಾನಂತರದ ಸಾಮಾಜಿಕರ ಪ್ರಜ್ಞೆಯಲ್ಲಿ ಉಜ್ವಲ 'ವ್ಯಕ್ತಿತ್ವ'ಗಳಾಗಿ ಉಳಿದುಬಿಡುತ್ತವೆ. ಸಮಾಜ ಇಂಥ ವ್ಯಕ್ತಿತ್ವಗಳನ್ನು ಸದಾ ನೆನಪಿಸಿಕೊಳ್ಳುತ್ತಾ, ರೂಪಿಸಿಕೊಳ್ಳುತ್ತಾ, ಸಂವಾದಿಸುತ್ತಾ ಜೀವಂತವಾಗಿಟ್ಟುಕೊಳ್ಳಲು ಪ್ರಯತ್ನಿಸುತ್ತಿರುತ್ತದೆ. ಇಂಥ ವ್ಯಕ್ತಿತ್ವಗಳೊಂದಿಗೆ ಅನುಸಂಧಾನ ನಡೆಸುತ್ತಾ ಅವರನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿರುತ್ತದೆ. ವ್ಯಕ್ತಿತ್ವಗಳ ಬೆಳಕಿನಲ್ಲಿ ವರ್ತಮಾನದ ಸಾಮಾಜಿಕ ವ್ಯಕ್ತಿತ್ವಗಳನ್ನು ರೂಪಿಸಿಕೊಂಡು ಮುನ್ನಡೆಯುವ ಹಂಬಲವನ್ನು ವ್ಯಕ್ತಪಡಿಸುತ್ತಿರುತ್ತದೆ. ಹೀಗೆ ಸಮಕಾಲೀನ ಮತ್ತು ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ಸಮಾಜವೊಂದು ತನ್ನದೇ ಆದ ಅಗತ್ಯಗಳಿಗಾಗಿ ಶೋಧಿಸಿಕೊಳ್ಳುತ್ತಾ, ಮರು ಸೃಷ್ಟಿಸಿಕೊಳ್ಳುತ್ತಾ ವರ್ತಮಾನವನ್ನೂ, ಪರಂಪರೆಯನ್ನೂ, ವ್ಯಕ್ತಿತ್ವಗಳನ್ನೂ ಒಟ್ಟಿಗೇ ಗ್ರಹಿಸುವ ಪ್ರಯತ್ನ ಮಾಡುತ್ತಿರುತ್ತದೆ. ವರ್ತಮಾನದ ಹಲವು ಸಮಸ್ಯೆ, ಸವಾಲು, ಬಿಕ್ಕಟ್ಟು, ತಲ್ಲಣಗಳನ್ನು ಪರಂಪರೆಯ ಉನ್ನತ ವ್ಯಕ್ತಿತ್ವಗಳ ನೈತಿಕ ಶಕ್ತಿಯೊಂದಿಗೆ ಮುಖಾಮುಖಿಯಾಗುವ ಮೂಲಕ ಅವುಗಳನ್ನು ಎದುರಿಸುವ, ಬಿಡುಗಡೆಯ ದಾರಿಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಿರುತ್ತದೆ. ಹೀಗೆ ಸಾಂಸ್ಕೃತಿಕ ಬದುಕು ತನ್ನ ಒಡಲಿಂದಲೇ ಉನ್ನತ ಸಾಂಸ್ಕೃತಿಕ

ಮಹತ್ವದ ವ್ಯಕ್ತಿತ್ವಗಳನ್ನು ರೂಪಿಸಿಕೊಳ್ಳುತ್ತಾ ಇರುತ್ತದೆ. ಇದಕ್ಕೆ ಸಾಹಿತ್ಯ ಕೃತಿಗಳು ಶೋಧಿಸಿಕೊಳ್ಳುತ್ತಿರುವ ಉನ್ನತ ವ್ಯಕ್ತಿತ್ವಗಳೇ ಸಾಕ್ಷಿ. ವ್ಯಕ್ತಿಚಿತ್ರ ಕವಿತೆಗಳನ್ನೂ ಇದೇ ನೆಲೆಯ ಪ್ರಯತ್ನಗಳಾಗಿ ಗ್ರಹಿಸಬೇಕಾಗುತ್ತದೆ.

ಸಾಹಿತ್ಯದ ವ್ಯಕ್ತಿತ್ವ ಶೋಧದ ಪ್ರಕ್ರಿಯೆಯು ವ್ಯಕ್ತಿತ್ವಗಳ ಮಾನವೀಯ ಮುಖಗಳ ಹುಡುಕುವಿಕೆ, ವ್ಯಕ್ತಿತ್ವ ವಿಕಾಸ ಪ್ರಕ್ರಿಯೆಯನ್ನು ಹಾಗೂ ಅವುಗಳ ಸಾಮಾಜಿಕ ಪ್ರಭಾವಗಳನ್ನು ಗುರುತಿಸುವ ನೆಲೆಯಲ್ಲಿದೆ. ತನ್ನ ಸಮಕಾಲೀನ ಮತ್ತು ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ಶೋಧಿಸಿಕೊಳ್ಳುವ ಮೂಲಕ ಸಾಂಸ್ಕೃತಿಕ ಚರಿತ್ರೆಯ ರಚನೆಯಲ್ಲಿ ತೊಡಗಿರುತ್ತದೆ. ಈ ಅರ್ಥದಲ್ಲಿ ಚರಿತ್ರೆ ಎಂದರೆ ಮಾನವ ವ್ಯಕ್ತಿತ್ವಗಳ ವಿಕಾಸಶೀಲ ಕಥಾನಕವೆನ್ನಬಹುದು. ವ್ಯಕ್ತಿತ್ವವೊಂದು ತನ್ನ ವಿಕಾಸ ಪಥದ ಅತ್ಯುಚ್ಚ ಸ್ಥಿತಿಯಲ್ಲಿ ಸಾಮಾಜಿಕ ಸ್ಥಿತಿಯಲ್ಲಿ ದೈವವಾಗಿ ರೂಪಾಂತರಗೊಂಡ, ಮನುಷ್ಯತ್ವದ ಎತ್ತರಕ್ಕೆ ಏರಿದ ಉದಾಹರಣೆಗಳು ನಾಗರೀಕತೆಯ ಉದ್ದಕ್ಕೂ ಸಿಗುತ್ತವೆ. ವೈದಿಕ, ಜೈನ ಮತ್ತು ಶೈವ ತಾತ್ವಿಕತೆಗಳು ಜೀವವು ತನ್ನ ವಿಕಾಸ ಪಥದಲ್ಲಿ ದೈವವಾಗಿ, ತೀರ್ಥಂಕರರಾಗಿ ರೂಪಾಂತರ ಹೊಂದುವುದನ್ನು ಪ್ರತಿಪಾದಿಸುತ್ತವೆ. ಹೀಗೆ ಸಾಮಾನ್ಯ ಮನುಷ್ಯನೊಬ್ಬ ತನ್ನ ಒಂದು ಜೀವಿತದಲ್ಲೇ ಏರಬಹುದಾದ ಎತ್ತರ, ಪಡೆಯಬಹುದಾದ ವಿಸ್ತಾರಗಳಿಗೆ ಮಿತಿಗಳಿರುವುದಿಲ್ಲ. 'ಹನುಮದ್ವಿಕಾಸಕ್ಕೆ ಇಲ್ಲ ಎಲ್ಲೆ' ಎಂದು ಅಡಿಗರು ಹೇಳುವ ಹಾಗೆ ಮಾನವ ನಾಗರೀಕತೆಯಲ್ಲಿ ಈ ಬಗೆಯ ವಿಕಾಸ ಹೊಂದಿದ ಹಲವು ವ್ಯಕ್ತಿತ್ವಗಳನ್ನು ಕಾಣಬಹುದು. ಇಂಥ ವ್ಯಕ್ತಿತ್ವಗಳು ತಮ್ಮೊಳಗಿನ ಜೀವಪರ ತುಡಿತ ಹಾಗೂ 'ಮಾನವದಯಾಮೃತ' ಗುಣಗಳಿಂದ ಮೌಲ್ಯಯುತ ವ್ಯಕ್ತಿತ್ವಗಳಾಗಿ, ಸಮೂದಾಯದ ಪ್ರತಿನಿಧಿಗಳಾಗಿ, ನಾಯಕರಾಗಿ, ಸುಧಾರಕರಾಗಿ ಕಂಡುಬರುತ್ತಾರೆ. ಸಮೂದಾಯವೊಂದು ಇಂಥ ವ್ಯಕ್ತಿತ್ವಗಳನ್ನು ಮರುರೂಪಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ತೊಡಗಿರುತ್ತದೆ. ಅಡಿಗರ 'ನನ್ನ ಅವತಾರ' ಕವಿತೆ ಎಲ್ಲರಂತೆ ಸಾಮಾನ್ಯ ಮನುಷ್ಯರಾಗಿ ಹುಟ್ಟಿ, ಸಾಮಾನ್ಯ ಮನುಷ್ಯರ ಹಾಗೆ ಬದುಕಿ ತಮ್ಮ ಪರಿಸರದ ಜನರನ್ನು ಉದ್ದರಿಸಲು ತಮ್ಮನ್ನು ತಾವು ತೆತ್ತುಕೊಂಡು; ಅಸಾಮಾನ್ಯ ವ್ಯಕ್ತಿತ್ವಗಳಾಗಿ, ದೇವರೇ ಆಗಿ, 'ಅಪ್ಪಟ ಚಿನ್ನ'ವಾಗಿ ಅಮರರಾದ ವ್ಯಕ್ತಿತ್ವಗಳ ವಿಕಾಸ ಪಥವನ್ನು ಗುರುತಿಸುತ್ತದೆ. ಇವರೆಲ್ಲ ಅಸಮಾನ್ಯ ವ್ಯಕ್ತಿತ್ವಗಳಾಗಿ ಕಂಡಿರುವುದು ಅವರ ಮಾನವತೆಯ ಬಗೆಗಿನ ಅಪಾರ ಕರುಣೆಯಿಂದ. ಹೀಗೆ ಅಸಾಮಾನ್ಯ ವ್ಯಕ್ತಿತ್ವಗಳು ತಮ್ಮ ಒಂದು ಜೀವಿತದಲ್ಲೇ ಅಷ್ಟು ಎತ್ತರಕ್ಕೆ ಏರಿದ ಪರಿಯನ್ನು ಕಣ್ಣಾರೆ ಕಂಡರೂ, ಅವರ ಒಡನಾಡಿದರೂ, ಅವರ 'ಮಾನವ ಕರುಣಾಮೃತ'ವನ್ನು ಸವಿದರೂ ಸಾಮಾನ್ಯ ವ್ಯಕ್ತಿತ್ವಗಳು ಮಾತ್ರ ಆರಕ್ಕೆ ಏರದೆ, ಮೂರಕ್ಕೆ ಇಳಿಯದೆ ಆ ಉನ್ನತ ವ್ಯಕ್ತಿತ್ವಗಳ ಮುಂದೆ ಕುಬ್ಜರಾಗಿಯೂ, ಬರಿ 'ಕರಿಕಬ್ಬಿಣ'ವಾಗಿಯೂ ಉಳಿದುಬಿಟ್ಟಿರುವ ದುರಂತ ವ್ಯಂಗ್ಯವಾಗಿ ಕವಿತೆಯಲ್ಲಿ ಚಿತ್ರಿತವಾಗಿದೆ. ಹೀಗೆ ಎತ್ತರಕ್ಕೆ ಏರಲು ಪ್ರಯತ್ನಿಸದೆ ಮನುಷ್ಯ ಸಹಜ ನಡವಳಿಕೆ ದೌರ್ಬಲ್ಯಗಳಲ್ಲೆ ಮುಳುಗಿಹೋಗಿ ತಾವು ಬದುಕುತ್ತಿರುವ ಪರಿಸರವನ್ನು ಅತ್ಯಂತ ದುರಂತಸ್ಥಿತಿಗೆ ಕೊಂಡೊಯ್ದ ಹಲವು ಉದಾಹರಣೆಗಳಿವೆ. ಮಾನವ ಚರಿತ್ರೆಯಲ್ಲಿ ಅತ್ಯಂತ ಪ್ರಕ್ಷುಬ್ಧ ಸಂದರ್ಭಗಳಲ್ಲೆಲ್ಲಾ ಅಂಥ ವಾತಾವರಣದಿಂದಲೇ ಮಾನವೀಯ ವ್ಯಕ್ತಿತ್ವಗಳ ಹುಟ್ಟು ಆಗುತ್ತಿರುತ್ತದೆ. ಸಮಾಜ ಸುಧಾರಕರು, ಧರ್ಮ ಸುಧಾರಕರು, ರಾಜಕೀಯ ನೇತಾರರು, ಆಧ್ಯಾತ್ಮವಾದಿಗಳು ಮುಂತಾದವರು ಆಯಾ ಕಾಲಘಟ್ಟದ ಸಾಮಾಜಿಕ, ಧಾರ್ಮಿಕ, ಆರ್ಥಿಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು, ಜನರನ್ನು ಜಗದ ಜಂಜಡಗಳಿಂದ ಬಿಡುಗಡೆಗೊಳಿಸಲು ಪ್ರಯತ್ನಿಸಿದ್ದಾರೆ. ಕ್ರಿಸ್ತ, ಬುದ್ಧ, ಪೈಗಂಬರ್, ಮಹಾವೀರ, ಬಸವಣ್ಣ, ಗಾಂಧಿ, ಅಂಬೇಡ್ಕರ್ ಮುಂತಾದವರನ್ನು ಈ ಸಾಲಿನಲ್ಲಿ ಹೆಸರಿಸಬಹುದು.

ಇಂಥ ವ್ಯಕ್ತಿಗಳು ಸಾರ್ಥಕ ಮತ್ತು ಆದರ್ಶವೆನಿಸುವುದು ಅವರ ವ್ಯಕ್ತಿತ್ವ ಪರಿಪೂರ್ಣವಾಗಿತ್ತು, ಅವರು ಮನುಷ್ಯ ಸಹಜ ದೌರ್ಬಲ್ಯಗಳನ್ನು ಮೀರಿದ್ದರು ಎಂಬ ಕಾರಣಕ್ಕಾಗಿ ಮಾತ್ರ ಅಲ್ಲ. ಅವೆಲ್ಲವುಗಳ ನಡುವೆಯೂ ಮಾನವತೆಯನ್ನು ಉದ್ಧರಿಸಲು, ಮೇಲೆತ್ತಲು ಕಾಲ, ದೇಶಾತೀತವಾಗಿ ಚಿಂತಿಸಿದರು, ಹೋರಾಡಿದರು, ತಮ್ಮನ್ನು ತಾವು ತೆತ್ತುಕೊಂಡರು ಎಂಬ ಕಾರಣಕ್ಕೆ. ಇಂಥ ವ್ಯಕ್ತಿತ್ವಗಳಲ್ಲಿ ಎರಡು ಬಗೆಗಳನ್ನು ಕಾಣಬಹುದು. ಮೊದಲನೆಯವು ತಮ್ಮ ಮಟ್ಟದಲ್ಲೇ ವೈಚಾರಿಕವಾಗಿ, ಮಾನವೀಯವಾಗಿ, ಎಲ್ಲ ಬಗೆಯ ಸಾಂಸ್ಥಿಕ ಒತ್ತಡಗಳನ್ನು, ತಿರಸ್ಕಾರಗಳನ್ನು ಮೀರಿ ಬದುಕಿದ ವ್ಯಕ್ತಿತ್ವಗಳು. ಎರಡನೆ ಬಗೆಯ ವ್ಯಕ್ತಿತ್ವಗಳು ವೈಯಕ್ತಿಕ ನೆಲೆಯನ್ನು ಮೀರಿ ಸಾಮುದಾಯಿಕ ಬದುಕಿನಲ್ಲಿ ಬಹುದೊಡ್ಡ ಪಲ್ಲಟವನ್ನು ತರಲು ಪ್ರಯತ್ನಿಸಿದವರು. ಈ ಎರಡೂ ಬಗೆಯ ವ್ಯಕ್ತಿತ್ವಗಳೂ ಮಾನವ ನಾಗರೀಕತೆಯ ಜಡತ್ವವನ್ನು ತೊಡೆದು ಚಲನಶೀಲಗೊಳಿಸುವ ಪ್ರಕ್ರಿಯೆಯಲ್ಲಿ ಅತ್ಯಂತ ಕ್ರಿಯಾಶೀಲವಾಗಿ, ಪ್ರಯೋಗಶೀಲವಾಗಿ ತೊಡಗಿಸಿಕೊಂಡವರಾಗಿದ್ದಾರೆ. ಉನ್ನತ ವ್ಯಕ್ತಿತ್ವಗಳು ತಾವು ಬದುಕಿದ್ದ ಕಾಲಘಟ್ಟದ ವ್ಯವಸ್ಥೆಯ ಜಡತೆ, ಕ್ರೌರ್ಯ, ಮೌಢ್ಯ, ಅಸಮಾನತೆ, ಶೋಷಣೆಗಳನ್ನು ವಿರೋಧಿಸಿದವರು. ಜೊತೆಗೆ ತಮ್ಮ ಕಾಲದ ಸಾಂಸ್ಕೃತಿಕ ಬದುಕಿನ ಪರಿವರ್ತನೆಗಾಗಿ ಹಾಗೂ ಅವುಗಳ ಜಾಗದಲ್ಲಿ ಪರ್ಯಾಯಗಳನ್ನು ತರಲು ಬಹಳ ಗಂಭೀರವಾಗಿ ಮತ್ತು ಪ್ರಾಮಾಣಿಕವಾಗಿ ಪ್ರಯತ್ನಿಸಿದವರು. ಹಾಗೂ ಕಾಲ, ದೇಶಾತೀತವಾಗಿ ತಮ್ಮ ಸಮುದಾಯದ ಆಂತರ್ಯದಲ್ಲಿ ತಮ್ಮ ಗಾಢ ಪ್ರಭಾವವನ್ನು ಉಳಿಸಿಕೊಂಡವರಾಗಿದ್ದಾರೆ. ನಾಗರೀಕತೆಯ ಅತ್ಯುಚ್ಚ ಸ್ಥಿತಿಯಲ್ಲಿದ್ದೇವೆ ಎಂದು ನಾವು ಹೆಮ್ಮೆಪಡುತ್ತಿದ್ದರೂ ಕೂಡ ಇಂದಿನ ನಾಗರೀಕ ಸಮಾಜ ತಾನು ಎದುರಿಸುತ್ತಿರುವ ನವೀನ ಬಗೆಯ ಸಮಸ್ಯೆಗಳ ಪರಿಹಾರಕ್ಕಾಗಿ ಉನ್ನತ ವ್ಯಕ್ತಿತ್ವಗಳ ಕಡೆಗೆ ಹಿಂತಿರುಗಿ ನೋಡಲೇಬೇಕಾಗಿದೆ, ನೋಡುತ್ತಿದೆ ಕೂಡ. ಆಧುನಿಕ ಭೋಗಜೀವನ ತಂದೊಡ್ಡಿರುವ ಬಿಕ್ಕಟ್ಟುಗಳಿಗೆ ಪರಿಹಾರವಾಗಿ ಈ ಉನ್ನತ ವ್ಯಕ್ತಿತ್ವಗಳ ಚಿಂತನೆ, ಪ್ರತಿಪಾದನೆ ಮತ್ತು ಬದುಕನ್ನು ಶೋಧಿಸುವ ಪ್ರಕ್ರಿಯೆಯಲ್ಲಿ ಸೃಜನಶೀಲ ಮನಸ್ಸುಗಳು ತೊಡಗಿರುವುದನ್ನು ಕಾಣಬಹುದು. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಮುಂತಾದ ಚಿಂತಕರನ್ನು ಈ ದೃಷ್ಟಿಯಿಂದ ಮರುಗ್ರಹಿಕೆಗೆ ಒಳಪಡಿಸುತ್ತಿರುವುದು, ವರ್ತಮಾನದಲ್ಲಿ ನಿಂತು ನಿಕಶಕ್ಕೆ ಒಡ್ಡುತ್ತಿರುವುದು ಆರೋಗ್ಯಪೂರ್ಣ ನಾಗರೀಕತೆಯ ವಿಕಾಸಕ್ಕೆ ಹೆಚ್ಚು ಪ್ರಯೋಜನಕಾರಿ ಆಗಬಲ್ಲದು. ಆಗ ಮಾತ್ರ ವ್ಯಕ್ತಿತ್ವಗಳು ಯಾವುದಕ್ಕಾಗಿ ಹೋರಾಡಿದರೋ, ಚಿಂತಿಸಿದರೋ ಅವುಗಳ ಪ್ರಸ್ತುತತೆಯನ್ನು, ಮಹತ್ವವನ್ನು ಅರಿಯಲು ಸಾಧ್ಯ. ಇಂದಿನ 'ನವನಾಗರೀಕ ಸಮಾಜಗಳು' ತಾವು ಅಭಿವೃದ್ಧಿ ಎಂದು ಭಾವಿಸಿರುವ ಪರಿಕಲ್ಪನೆಗಳ ಹಿಂದಿನ ಜೀವವಿರೋಧಿ ನಿಲುವುಗಳು ತಂದೊಡ್ಡಿರುವ ಹಲವು ಬಗೆಯ ಆತಂಕಗಳನ್ನು, ಮಾನವ ನಾಗರೀಕತೆಯನ್ನು ಇನ್ನೂ ಕಾಡುತ್ತಿರುವ ಹಲವು ಸಮಸ್ಯೆಗಳನ್ನು ನಿವಾರಿಸಿಕೊಂಡು ಸಮಾನತೆಯ ಮಾನವೀಯ ಬದುಕನ್ನು ಮುಂದಿನ ಪೀಳಿಗೆಗೆ ನೀಡುವ ಪ್ರಯತ್ನವಾಗಿಯೂ ಇಂತಹ ವ್ಯಕ್ತಿತ್ವಗಳ ಶೋಧನೆ ಮಹತ್ವ ಪಡೆಯುತ್ತದೆ.

ಸಾಹಿತ್ಯ ಗತಿಶೀಲ ಬದುಕಿನ ಕಲಾತ್ಮಕ ಮರುಸೃಷ್ಟಿ. ಇದು ಮಾನವ ಬದುಕಿನ ಗತಿಶೀಲತೆಯ ಬಗೆಯನ್ನು, ಸಂಘರ್ಷ- ಬಿಕ್ಕಟ್ಟುಗಳನ್ನು, ಸೌಂದರ್ಯ ಮತ್ತು ವಿಕಾರಗಳನ್ನು ಸೂಕ್ಷ್ಮವಾಗಿ ವಿವೇಚಿಸುತ್ತಲೇ ಜೀವಪರ ನಿಲುವನ್ನು ಪ್ರಕಟಿಸುತ್ತಿರುತ್ತದೆ. ಇಂಥ ಸಾಹಿತ್ಯದ ಪ್ರಕ್ರಿಯೆಯೆಂಬುದೇ ಹಲವು ಬಗೆಯ ವ್ಯಕ್ತಿತ್ವಗಳ ನಿಕಶದಿಂದ 'ಆದರ್ಶ ವ್ಯಕ್ತಿತ್ವ'ಗಳ ನಿರ್ಮಾಣ ಹಾಗೂ ಪರಿವರ್ತನೆಯಾಗಿದೆ. ಪ್ರತಿಯೊಂದು ಕಾಲಘಟ್ಟದ ಸಾಹಿತ್ಯವೂ ತನ್ನ ಪರಂಪರೆಯ ಹಾಗೂ ಸಮಾಜದ ವ್ಯಕ್ತಿತ್ವಗಳನ್ನು ಶೋಧಿಸುವ ಪ್ರಾಮಾಣಿಕ

ಕೆಲಸಮಾಡುತ್ತಿರುತ್ತದೆ. ಈ ಶೋಧನೆಯ ಮುಖಾಂತರವಾಗಿಯೇ ತನ್ನ ಕಾಲದ ಸಾಂಸ್ಕೃತಿಕ ಬದುಕಿನ ಸ್ವಾಸ್ಥ್ಯಕ್ಕೆ ಅಗತ್ಯವಾದ ವ್ಯಕ್ತಿತ್ವಗಳನ್ನು ರೂಪಿಸಿಕೊಡುವ ಪ್ರಕ್ರಿಯೆಯಲ್ಲಿ ತೊಡಗಿರುತ್ತದೆ. ಆ ಮೂಲಕ ಕಾಲ ದೇಶಾತೀತವಾಗಿ ಉಳಿಯಬಲ್ಲ ಮಾನವೀಯ ನೆಲೆಯ ವ್ಯಕ್ತಿತ್ವಗಳ ಉನ್ನತ ಮೌಲ್ಯಗಳನ್ನು ತನ್ನ ನಾಗರೀಕತೆಯ ಒಡಲಿನಿಂದ ಶೋಧಿಸಿಕೊಡುತ್ತಿರುತ್ತದೆ.

ಚರಿತ್ರೆಯ ಕಾಲಘಟ್ಟಗಳಲ್ಲಿ ಮಾನವ ನಾಗರೀಕತೆಯ ಅವಶ್ಯಕತೆ, ನಿರೀಕ್ಷೆ, ನಂಬಿಕೆ, ಮೌಲ್ಯಗಳಿಗೆ ಬದ್ಧವಾಗಿ ಸಾಹಿತ್ಯ ವ್ಯಕ್ತಿತ್ವಗಳ ಶೋಧ ಹಾಗೂ ಮರು ಸೃಷ್ಟಿಯಲ್ಲಿ ತೊಡಗಿರುವುದನ್ನು ಕಾಣಬಹುದು. ಶೌರ್ಯ ಪರಾಕ್ರಮಗಳೆ ಪ್ರಧಾನ ಮೌಲ್ಯವಾಗಿರುವ ಕಾಲಘಟ್ಟದಲ್ಲಿ ವೀರ ವ್ಯಕ್ತಿತ್ವಗಳಿಗೆ ಮನ್ನಣೆ. ನೈತಿಕ ಮೌಲ್ಯ, ತ್ಯಾಗ, ದಾನ, ವೈರಾಗ್ಯ ಮುಂತಾದ ಉನ್ನತ ಗುಣಗಳಿಗೆ ಮಹತ್ವವಿರುವ ಕಾಲದಲ್ಲಿ ಆ ರೀತಿಯ ವ್ಯಕ್ತಿತ್ವಗಳ ಚಿತ್ರಣ, ಭಕ್ತಿಯೇ ಪ್ರಧಾನ ಮೌಲ್ಯವಾಗಿರುವ ಕಾಲದಲ್ಲಿ 'ಭಕ್ತ ವ್ಯಕ್ತಿತ್ವ'ಗಳ ಚಿತ್ರಣ ಪ್ರಧಾನವಾಗಿರುವುದನ್ನು ಕಾಣಬಹುದು. ಇದಲ್ಲದೆ ಜೀವಪರ, ಮಾನವೀಯ ಅಂತಃಕರಣವುಳ್ಳ ಸಾಹಿತ್ಯ ಒಂದು ಸಮಾಜದ ಹಲವು ಬಗೆಯ ವ್ಯಕ್ತಿತ್ವಗಳನ್ನು, ಅವುಗಳ ಮಹತ್ವವನ್ನು ನಿರಂತರವಾಗಿ ವಿಶ್ಲೇಷಣೆಗೆ ಒಳಪಡಿಸುತ್ತಿರುತ್ತದೆ. ಹಾಗೂ ಒಂದು ಸಮಾಜದ ಸಾಂಸ್ಕೃತಿಕ ಬದುಕಿನ ಪರಿಪೂರ್ಣತೆಗೆ ಅವಶ್ಯಕವಾದ ಸಾಂಸ್ಕೃತಿಕ ಪ್ರತಿಭೆಗಳನ್ನು ಮುನ್ನೆಲೆಗೆ ತರುವ ಕೆಲಸ ಮಾಡುತ್ತಿರುತ್ತದೆ. ಅಲ್ಲದೆ ಅಲಕ್ಷಿತ ಸಮುದಾಯದ ವ್ಯಕ್ತಿತ್ವಗಳು, ಅಸಮಾನತೆಗೆ, ಶೋಷಣೆಗೆ ಒಳಗಾಗಿ ಚರಿತ್ರೆಯ ಕತ್ತಲೆಯಲ್ಲಿ ಮರೆಯಾದ ವ್ಯಕ್ತಿತ್ವಗಳಿಗೆ ದನಿಯಾಗಿ ಹಲವು ವ್ಯಕ್ತಿತ್ವಗಳನ್ನು ಸಾಹಿತ್ಯ ಮುನ್ನೆಲೆಗೆ ತರುವ ಕೆಲಸಮಾಡುತ್ತಿರುತ್ತದೆ.

ಸಾಂಪ್ರದಾಯಿಕ ಚರಿತ್ರೆಯ ಪುಟಗಳಲ್ಲಿ ಸಿಗಲಾರದ ವೈವಿಧ್ಯಮಯ ವ್ಯಕ್ತಿತ್ವಗಳು, ಆ ವ್ಯಕ್ತಿತ್ವಗಳ ಸಂಘರ್ಷಮಯ ಬದುಕು ಮತ್ತು ಸಮಸ್ಯೆ – ಸವಾಲುಗಳು ನಮಗೆ ಸಾಹಿತ್ಯ ಕೃತಿಗಳಿಂದ ಲಭ್ಯವಾಗುತ್ತವೆ. ಇವು ಮಾನವ ಚರಿತ್ರೆಯ ಗಾಯಗಳನ್ನು– ಪರಿಹಾರಗಳನ್ನು ಒಟ್ಟೊಟ್ಟಿಗೆ ದಾಖಲಿಸುತ್ತಿರುತ್ತವೆ. ಸಾಹಿತ್ಯ ಜನಪರವಾದ, ಜೀವಪರ ತುಡಿತವುಳ್ಳ, ವೈಚಾರಿಕ ಮತ್ತು ಮಾನವೀಯ ವ್ಯಕ್ತಿತ್ವಗಳನ್ನು ಮಾತ್ರ ತನ್ನ ಸಮುದಾಯದ ಸಾಂಸ್ಕೃತಿಕ ನಾಯಕ ಅಥವಾ ವಾರಸುದಾರನನ್ನಾಗಿ ರೂಪಿಸಿಕೊಡುವ ಕೆಲಸ ಮಾಡುತ್ತಿರುತ್ತದೆ. ಇಲ್ಲಿ ಸಾಹಿತ್ಯದ ವೈಚಾರಿಕ ಪ್ರಜ್ಞೆ ಮತ್ತು ಸಾಮಾಜಿಕ ಕಾಳಜಿಗಳನ್ನು ಗಮನಿಸಬೇಕು. ಮಹದೇಶ್ವರ, ಮಂಟೇಸ್ವಾಮಿ ಮುಂತಾದ ಸಾಂಸ್ಕೃತಿಕ ನಾಯಕರುಗಳನ್ನು ಸಮೂದಾಯಗಳು ರೂಪಿಸಿಕೊಂಡ ಬಗೆಯನ್ನು ಈ ಹಿನ್ನೆಲೆಯಿಂದ ನೋಡಬಹುದು.

ಸಾಹಿತ್ಯವನ್ನು ಸಾಂಸ್ಕೃತಿಕ ಚರಿತ್ರೆಯ ಅಭಿವ್ಯಕ್ತಿಯನ್ನಾಗಿ, ಕಾಲದೇಶಾತೀತ ಮಾನವೀಯ ವ್ಯಕ್ತಿತ್ವಗಳ ಶೋಧವಾಗಿ ನೋಡುತ್ತಿರುವುದರ ಹಿನ್ನೆಲೆ ಅದಕ್ಕಿರುವ ಸಾಮಾಜಿಕ ಹೊಣೆಗಾರಿಕೆಯೇ ಆಗಿದೆ. ಇಂಥ ಹೊಣೆಗಾರಿಕೆಯನ್ನು ಹೊತ್ತ ಸೃಜನಶೀಲ ಸಾಹಿತ್ಯ ತನ್ನ ಕಾಲದ ಬದುಕನ್ನು ಮೌಲ್ಯಯುತವಾಗಿ ರೂಪಿಸಿಕೊಡುವ ದನಿಯಾಗಿ ಕೆಲಸ ಮಾಡುತ್ತಿರುತ್ತದೆ. ತನ್ನ ಕಾಲದ ಅನ್ಯಾಯ, ಅಕ್ರಮ, ಶೋಷಣೆ, ಅಸಮಾನತೆ, ಅನಿಷ್ಟ ಪದ್ಧತಿಗಳು, ಮೌಢ್ಯ, ಕ್ರೌರ್ಯ ಇವುಗಳನ್ನೆಲ್ಲಾ ನೈಜತೆಯಲ್ಲಿ, ಅದರೆಲ್ಲಾ ವಿಕಾರಗಳಲ್ಲಿ ಹಿಡಿದಿಡುವುದರ ಜೊತೆಗೇ ಅವುಗಳ ವಿರುದ್ಧ ಹೋರಾಡಿದ ವ್ಯಕ್ತಿತ್ವಗಳನ್ನು ನೆನೆಸುತ್ತದೆ. ಹಾಗೂ ಅವುಗಳ ವಿರುದ್ಧ ಹೋರಾಡಲು ಜನತೆಯನ್ನು ಪ್ರೇರೇಪಿಸುತ್ತದೆ. ಹೀಗೆ ಸದಾ ಜೀವಪರವಾಗಿ ತುಡಿಯುವ ಸಾಹಿತ್ಯ

ಸಮುದಾಯದ ಒಳಿತಿಗಾಗಿ, ಅದರ ಅಮೂಲಾಗ್ರ ಬದಲಾವಣೆಗಾಗಿ ಹೋರಾಡಿದ ವ್ಯಕ್ತಿತ್ವಗಳನ್ನು ಅವರ ಎಲ್ಲಾ ದೌರ್ಬಲ್ಯಗಳ ನಡುವೆಯೂ ಅವರ ಪ್ರಸ್ತುತತೆಯನ್ನು ಪ್ರತಿಪಾದಿಸುತ್ತಿರುತ್ತದೆ. ತನ್ನ ಕಾಲದ ನೋವು, ಹತಾಶೆ, ಬಿಕ್ಕಟ್ಟುಗಳನ್ನು ಹೇಳುತ್ತಲೇ ಆ ವ್ಯಕ್ತಿತ್ವಗಳ ಚಿಂತನ, ಹೋರಾಟಗಳು ಪ್ರಸ್ತುತ ಸನ್ನಿವೇಶದಲ್ಲಿ ಎಷ್ಟು ಮುಖ್ಯ ಎಂಬುದನ್ನು ನಿಕಶಕ್ಕೆ ಒಡ್ಡುತ್ತಿರುತ್ತದೆ.

ಆಧುನಿಕ ಕನ್ನಡ ಕಾವ್ಯ ನವೋದಯ, ನವ್ಯ ಮತ್ತು ನವ್ಯೋತ್ತರ ಘಟ್ಟಗಳಲ್ಲಿ ಸಮೃದ್ಧವಾಗಿ ಕಾವ್ಯ ಕೃಷಿ ನಡೆಸಿದ್ದು, ಮೂರೂ ಘಟ್ಟಗಳಲ್ಲಿ ವಿಭಿನ್ನ ವ್ಯಕ್ತಿತ್ವಗಳೊಂದಿಗೆ ಅನುಸಂಧಾನ ನಡೆಸಿದೆ. ಈ ಮೂರೂ ಘಟ್ಟಗಳಲ್ಲಿ ವ್ಯಕ್ತಿತ್ವಗಳನ್ನು ಶೋಧಿಸಿರುವ ನೆಲೆಗಳು, ಅವುಗಳ ತಾತ್ವಿಕ ಗ್ರಹಿಕೆಗಳು ಭಿನ್ನವಾಗಿವೆ. ನವೋದಯ ಕಾವ್ಯ ವ್ಯಕ್ತಿತ್ವಗಳನ್ನು ಆದರ್ಶ, ವೈಭವೀಕರಣ ಮತ್ತು ಆರಾಧನೆಯ ನೆಲೆಯಲ್ಲಿ ಪ್ರಧಾನವಾಗಿ ನೋಡಿದೆ. ವ್ಯಕ್ತಿತ್ವದ ಒಳಿತಿನ ಆರಾಧನೆಯ ಹಾಗೆ ಕಂಡುಬರುವ ಬಹುತೇಕ ಕವಿತೆಗಳು ವ್ಯಕ್ತಿತ್ವದ ದೌರ್ಬಲ್ಯಗಳ ಕಡೆಗೆ ಅಥವಾ ವ್ಯಕ್ತಿತ್ವದ ಇನ್ನೊಂದು ಮುಖದ ಕಡೆಗೆ ಯೋಚಿಸುವುದೇ ಇಲ್ಲ. ಹೊಗಳಿಕೆ, ಮೆಚ್ಚುಗೆ, ವರ್ಣನೆಗಳು ಇಲ್ಲಿ ಪ್ರಧಾನ ಧೋರಣೆಗಳಾಗಿವೆ. ವ್ಯಕ್ತಿತ್ವಗಳಲ್ಲಿ ಶ್ರೇಷ್ಠ ಮೌಲ್ಯಗಳನ್ನು ಹುಡುಕುವ ನೆಲೆಯಲ್ಲಿ ಇವು ರಚನೆಯಾಗಿವೆ. ಇದರ ನಡುವೆಯೂ ಅಲಕ್ಷಿತ, ಶೋಷಿತ ಸಮೂದಾಯದ, ತನ್ನ ಕಾಲದ ಸಾಂಸ್ಕೃತಿಕ ವ್ಯವಸ್ಥೆಯ ಮಾದರಿಯಾಗಬಲ್ಲ ವ್ಯಕ್ತಿತ್ವಗಳನ್ನು ಕಟ್ಟಿಕೊಡುವ ಪ್ರಯತ್ನದಲ್ಲೂ ಈ ಕಾಲಘಟ್ಟದ ಕವಿತೆಗಳು ತೊಡಗಿವೆ. ನವೋದಯ ಕವಿತೆಗಳು ವ್ಯಕ್ತಿತ್ವಗಳನ್ನು ಹೆಚ್ಚಾಗಿ ಪ್ರಶಂಸೆಯ ನೆಲೆಯಲ್ಲೇ ನೋಡುತ್ತವೆಯಾದರೂ ಚಾರಿತ್ರಿಕ ಪ್ರಜ್ಞೆಯನ್ನು ವಿಶಿಷ್ಟವಾಗಿ ಮೆರೆದಿರುವುದನ್ನು ಕಾಣಬಹುದು. "ನಿಜವಾದ ಕವಿಗೆ ಚಾರಿತ್ರಿಕ ಪ್ರಜ್ಞೆ ಇರಬೇಕು ಎಂದು ಇಂಗ್ಲೆಂಡಿನ ನವ್ಯ ಕಾವ್ಯದ ಕಾಲದಲ್ಲಿ ಟಿ.ಎಸ್.ಎಲಿಯೆಟ್ ಹೇಳಿದ ಮಾತು ಕನ್ನಡ ನವೋದಯ ಕವಿಗಳ ವಿಚಾರದಲ್ಲಿ ಸಾರ್ಥಕವಾಯಿತೇ ಹೊರತು ಕನ್ನಡ ನವ್ಯ ಕವಿಗಳ ವಿಚಾರದಲ್ಲಿ ಅಲ್ಲ."[1] ಎನ್ನುವ ಜಿ.ಎಸ್.ಎಸ್. ಮಾತುಗಳನ್ನು ಕನ್ನಡದ ವ್ಯಕ್ತಿಚಿತ್ರ ಕವಿತೆಗಳ ಹಿನ್ನೆಲೆಯಲ್ಲಿ ಗಮನಿಸಬಹುದು.

ಇನ್ನು ನವ್ಯ ಕಾಲಘಟ್ಟದಲ್ಲಿ ವ್ಯಕ್ತಿತ್ವ ಶೋಧವೆಂಬುದು ವ್ಯಕ್ತಿಯೊಳಗೇ ನಡೆಯಬಹುದಾದ ವ್ಯಕ್ತಿತ್ವದ ಸಂಘರ್ಷವಾಗಿ, ಅಸ್ತಿತ್ವದ ಪ್ರಶ್ನೆಯಾಗಿ, ಸಿನಿಕತನ, ವಿಡಂಬನೆ, ವಿಮರ್ಶೆ, ವ್ಯಕ್ತಿತ್ವದ ದೌರ್ಬಲ್ಯಗಳ ಸಹಜ ನಿರೂಪಣೆಗಳೊಂದಿಗೆ ಕಟ್ಟಿಕೊಡುವ ಬಗೆಯನ್ನು ಕಾಣಬಹುದು. ವ್ಯಕ್ತಿತ್ವವೊಂದು ತನ್ನೆಲ್ಲಾ ಒಳ ಹೊರಗಿನ ಮನುಷ್ಯ ಸಹಜ ಸ್ವಭಾವಗಳೊಂದಿಗೆ ವಿಮರ್ಶೆಗೆ ಒಳಪಡುವುದು ಇಲ್ಲಿನ ವಿಶೇಷ. ಇಲ್ಲಿ ಪ್ರಶ್ನಿಸುವಿಕೆ, ಅನುಮಾನಿಸುವಿಕೆ, ವ್ಯಂಗ್ಯ, ವಿಡಂಬನೆಗಳು ಮುಖ್ಯ ಧೋರಣೆಗಳಾಗಿ ಕಂಡುಬರುತ್ತವೆ.

ನವ್ಯೋತ್ತರ ಕಾಲಘಟ್ಟದ ಸಂದರ್ಭದಲ್ಲಿ ವ್ಯಕ್ತಿತ್ವಗಳನ್ನು ಅವುಗಳ ಸಾಮಾಜಿಕ ಆಯಾಮದೊಂದಿಗೆ ಮುಖಾಮುಖಿಯಾಗಿಸುವ ಧೋರಣೆ ಕಂಡುಬರುತ್ತದೆ. ವ್ಯಕ್ತಿತ್ವಗಳ ಸಮಾಜಮುಖೀ ನೆಲೆಗಳನ್ನು ಬಹುಮುಖ್ಯವಾಗಿ ಪಾರದರ್ಶಕವಾಗಿ ಕಟ್ಟುವ ಕೆಲಸ ಇಲ್ಲಿ ನಡೆದಿದೆ. ಪೌರಾಣಿಕ ಮತ್ತು ಚಾರಿತ್ರಿಕ ವ್ಯಕ್ತಿತ್ವಗಳ ಪುನರ್‌ನಿರೂಪಣೆ, ಶೋಷಿತ ಮತ್ತು ಅಲಕ್ಷಿತ ಸಮೂದಾಯದ ವ್ಯಕ್ತಿತ್ವಗಳ ಅನಾವರಣ, ವ್ಯಕ್ತಿತ್ವಗಳನ್ನು ಅವರ ಸಾಂಸ್ಕೃತಿಕ ಬದುಕಿನ ಮತ್ತು ಸಮೂದಾಯದ ಬದುಕಿನ ಪ್ರತಿಬಿಂಬವಾಗಿ ಗ್ರಹಿಸುವುದು ಇಲ್ಲಿ ಮುಖ್ಯವಾಗಿದೆ. ವ್ಯಕ್ತಿತ್ವಗಳನ್ನು ವರ್ತಮಾನದ ಸಾಮಾಜಿಕ, ರಾಜಕೀಯ ವಿಡಂಬನೆ, ಪ್ರತಿರೋಧಗಳಿಗಾಗಿ ಬಳಸಿಕೊಳ್ಳಲಾಗಿದೆ.

ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ಅಸ್ತ್ರವಾಗಿ ಬಳಸಿಕೊಂಡು ವ್ಯವಸ್ಥೆಯ ವಿರುದ್ಧ ಬಂಡಾಯವೆದ್ದಿರುವುದನ್ನು ಕಾಣಬಹುದು.

ಆಧುನಿಕ ಕನ್ನಡ ಕಾವ್ಯ ತನ್ನ ಪರಂಪರೆಯ ಹಾಗೂ ಸಮಕಾಲೀನವಾದ ಹಲವು ಕ್ಷೇತ್ರಗಳಿಗೆ ಸಂಬಂಧಿಸಿದ ವ್ಯಕ್ತಿಗಳನ್ನು ಕುರಿತ ವ್ಯಕ್ತಿಚಿತ್ರಣಗಳನ್ನು ಒಳಗೊಂಡಿದೆ. ಇದು ವ್ಯಕ್ತಿಗಳ ವ್ಯಕ್ತಿತ್ವವನ್ನು ಶೋಧಿಸಿಕೊಳ್ಳಲು ಹಲವು ವಿಧಾನಗಳನ್ನು ಅನುಸರಿಸಿದೆ. ವ್ಯಕ್ತಿಗಳ ಆಯ್ಕೆ, ವ್ಯಕ್ತಿತ್ವ ಶೋಧನಾ ವಿಧಾನಗಳ ಹಿಂದೆ ಹಲವು ಉದ್ದೇಶ ಹಾಗೂ ಕಾಳಜಿ, ಪ್ರಭಾವಗಳು ಕೆಲಸ ಮಾಡಿವೆ. ಸಾಹಿತ್ಯ ಎಷ್ಟೇ ಸ್ವಾಯತ್ತವಾದುದಾದರೂ ಅದು ಇತರ ಪ್ರಭಾವ ಹಾಗೂ ನಿಯಂತ್ರಣಗಳಿಗೆ ಒಳಗಾಗದೆ ಇರಲು ಸಾಧ್ಯವಿಲ್ಲ. ನಮ್ಮ ಸಾಮಾಜಿಕ, ಧಾರ್ಮಿಕ, ರಾಜಕೀಯ ವ್ಯವಸ್ಥೆಯ ಹಲವು ನಿಯಂತ್ರಕ ಶಕ್ತಿಗಳು ಸಾಹಿತ್ಯದ ವಸ್ತು, ಸ್ವರೂಪ, ಧೋರಣೆಗಳನ್ನು ನಿಯಂತ್ರಿಸುತ್ತಿರುತ್ತವೆ. ಆಧುನಿಕ ಕನ್ನಡ ಕಾವ್ಯದ ವ್ಯಕ್ತಿಚಿತ್ರ ಕವಿತೆಗಳ ಸ್ವರೂಪ, ಧೋರಣೆಗಳ ಮೇಲೂ ಈ ನಿಯಂತ್ರಕ ಶಕ್ತಿಗಳು ಪ್ರಭಾವ ಬೀರಿರುವುದನ್ನು ಕಾಣಬಹುದು. ಏಕೆಂದರೆ ಬಹುತೇಕ ವ್ಯಕ್ತಿಚಿತ್ರ ಕವಿತೆಗಳು ವ್ಯಕ್ತಿ ಕೀರ್ತನೆಯ ನೆಲೆಯಲ್ಲಿಯೇ ಇವೆ. ವ್ಯಕ್ತಿತ್ವಗಳನ್ನು ಅತಿ ಹೆಚ್ಚಾಗಿ ಸಾಂಪ್ರದಾಯಿಕ ದೃಷ್ಟಿಕೋನದಲ್ಲಿಯೇ ನೋಡಲಾಗಿದೆ. ವ್ಯಕ್ತಿತ್ವಗಳನ್ನು ಪಾವಿತ್ರೀಕರಿಸಿ ನೋಡುವ ಧೋರಣೆ ಪ್ರಧಾನವಾಗಿ ಕೆಲಸಮಾಡಿರುವುದನ್ನು ಕಾಣಬಹುದು. ವ್ಯಕ್ತಿತ್ವಗಳನ್ನು ಹಲವು ನೆಲೆಗಳಿಂದ, ಪ್ರಶ್ನೆ, ಅನುಮಾನ, ವಿರೋಧ, ಜಗಳಗಳ ಮೂಲಕ ಎದುರಾಗುವ ಧೈರ್ಯವನ್ನು ಬಹುತೇಕ ಕವಿತೆಗಳು ಮಾಡುವುದೇ ಇಲ್ಲ. ಇನ್ನು ವ್ಯಕ್ತಿತ್ವಗಳ ವಿಶಿಷ್ಟತೆಯನ್ನು ಹಿಡಿದಿಡುವ ಪ್ರತಿಮೆ, ರೂಪಕಗಳಲ್ಲೂ, ವ್ಯಕ್ತಿತ್ವವು ಪ್ರತಿನಿಧಿಸುವ ಮೌಲ್ಯಗಳನ್ನು ಸಂಕೇತಿಸುವಲ್ಲೂ ಸಾಂಪ್ರದಾಯಿಕ ಧೋರಣೆಗಳು ಹಾಗೂ ಜಾತಿ, ಧರ್ಮ, ಲಿಂಗ ವ್ಯವಸ್ಥೆಯ ಮನೋಧೋರಣೆಗಳು ಪ್ರಧಾನವಾಗಿ ಕೆಲಸ ಮಾಡಿರುವುದನ್ನು ಗುರುತಿಸಬಹುದು. ಇದಕ್ಕೆ ಬಸವಣ್ಣ, ಅಕ್ಕ ಮಹಾದೇವಿ ಇವರನ್ನು ಕುರಿತ ಬಹುತೇಕ ಕವಿತೆಗಳನ್ನು ಉದಾಹರಣೆಯಾಗಿ ನೋಡಬಹುದಾಗಿದೆ. ಹಾಗಾಗಿ ಕನ್ನಡದ ವ್ಯಕ್ತಿಚಿತ್ರ ಕವಿತೆಗಳ ಸಂದರ್ಭದಲ್ಲಿ ನಮ್ಮ ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ಕಟ್ಟಿಕೊಳ್ಳುವ ವಿಧಾನವನ್ನು ಪ್ರಭಾವಿಸಿರುವ ಹಾಗೂ ನಿಯಂತ್ರಿಸಿರುವ ವರ್ತಮಾನ ಮತ್ತು ವ್ಯವಸ್ಥೆಗಳ ಹಾಗೂ ಅವುಗಳ ಕಾರ್ಯ ಮಾದರಿಗಳು ಯಾವುವು? ಎಂಬುದನ್ನು ಕಂಡುಕೊಳ್ಳಬೇಕಾದುದು ಅಗತ್ಯವಾಗಿದೆ. ಏಕೆಂದರೆ ವ್ಯಕ್ತಿಗಳ ಆಯ್ಕೆ ಹೇಗೆ? ಆ ವ್ಯಕ್ತಿಗಳ ಯಾವ ಯಾವ ವಿಚಾರಗಳು, ಸಾಧನೆಗಳು ಚರ್ಚೆಗೆ ಒಳಪಟ್ಟಿವೆ? ಯಾವು ಒಳಪಟ್ಟಿಲ್ಲ. ಯಾವುದು ಮುಖ್ಯವಾಗಿ ಕಂಡಿದೆ. ಯಾವ ವಿಚಾರಗಳನ್ನು ಮುನ್ನೆಲೆಗೆ ತರಲು ಪ್ರಯತ್ನಿಸಲಾಗುತ್ತಿದೆ? ಆ ವ್ಯಕ್ತಿತ್ವಗಳ ಮೂಲಕ ವರ್ತಮಾನಕ್ಕೆ ರವಾನೆಯಾಗುತ್ತಿರುವ ಸಂದೇಶಗಳೇನು? ಇವೆಲ್ಲ ಪ್ರಶ್ನೆಗಳಿಗೆ ವ್ಯಕ್ತಿಚಿತ್ರ ಕವಿತೆಗಳ ಮೂಲಕ ಉತ್ತರಿಸಿಕೊಂಡಾಗ ಅವುಗಳ ಮೇಲೆ ಪ್ರಭಾವ ಬೀರಿರುವ ಸಾಂಪ್ರದಾಯಿಕ ನಿಯಂತ್ರಕ ಶಕ್ತಿಗಳು ಗೋಚರವಾಗುತ್ತವೆ. ಹಾಗಾಗಿ ಪ್ರಭಾವಶಾಲೀ ವ್ಯಕ್ತಿತ್ವಗಳ ಗ್ರಹಿಕೆಯ ವಿಧಾನಗಳನ್ನು ನಿರ್ಬಂಧಿಸುವ, ರೂಪಿಸುವ, ಸಾಮಾಜಿಕ- ಸಾಂಸ್ಕೃತಿಕ ಯಜಮಾನ್ಯ ಶಕ್ತಿಗಳನ್ನು ಅರ್ಥಮಾಡಿಕೊಳ್ಳುವ ತುರ್ತು ಇದೆ.

ಪರಂಪರೆಯ ಹಾಗೂ ಸಮಕಾಲೀನ ಮಹತ್ವದ ವ್ಯಕ್ತಿತ್ವಗಳನ್ನು ಗ್ರಹಿಸುವುದು ಕೇವಲ ವ್ಯಕ್ತಿ ಗ್ರಹಿಕೆ ಮಾತ್ರ ಆಗಿರದೆ ಅದು ಮಾನವ ನಾಗರೀಕತೆಯಲ್ಲಿ ಉನ್ನತ ವ್ಯಕ್ತಿತ್ವಗಳು ತಮ್ಮ ಆಂತರಿಕ ವ್ಯಕ್ತಿತ್ವ ವಿಕಾಸ ಮತ್ತು

ಬಾಹ್ಯ ಜಗತ್ತಿನ ಪರಿವರ್ತನೆಗಾಗಿ ಹೋರಾಡಿದ ಕಥಾಕನಗಳನ್ನು ಗ್ರಹಿಸಿದಂತೆಯೇ ಸರಿ. ಈ ನಿಟ್ಟಿನಲ್ಲಿ ಎಂ.ಎಸ್.ಆಶಾದೇವಿಯವರ ಮಾತುಗಳು ಇಲ್ಲಿ ಉಲ್ಲೇಖಾರ್ಹ. "ಉಜ್ವಲವಾದ ಒಂದು ವ್ಯಕ್ತಿತ್ವವನ್ನು ಗ್ರಹಿಸುವುದೆಂದರೆ ದೇಶ ಕಾಲಾತೀತವಾಗಿ ಮನುಷ್ಯ ಸ್ವಭಾವದ. ದೌರ್ಬಲ್ಯಗಳನ್ನು, ವ್ಯವಸ್ಥೆಯ ಮಿತಿಗಳನ್ನು ಮೀರಲು ನಡೆಸಿದ ಪ್ರಯತ್ನಗಳ ಮಹಾಗಾಥೆಯೊಂದನ್ನು ಓದಿದಂತೆ. ಮನುಷ್ಯನ ಅಸೀಮ ಶಕ್ತಿ-ಸಾಧ್ಯತೆಗಳನ್ನು ಮನದಟ್ಟು ಮಾಡಿಕೊಳ್ಳುವ ಸಲುವಾಗಿಯೇ ಸಾಧಕರ ಜೀವನವನ್ನು ಕುರಿತಂತೆ ಕೊನೆಯಿಲ್ಲದ ಆಸಕ್ತಿ ಸಮಾಜದಲ್ಲಿ ಉದ್ದಕ್ಕೂ ಉಳಿದುಕೊಂಡು ಬಂದಿದೆ. ಆದರೆ ನಾಗರೀಕ ಸಮಾಜವೊಂದನ್ನು ನಾವು ಆ ವ್ಯಕ್ತಿತ್ವದ ನಿಜ ವಿಸ್ತಾರದ ನೆಲೆಯಲ್ಲಿ ಗುರುತಿಸುತ್ತೇವೆಯೋ ಅಥವಾ ನಮ್ಮ ಸಂದರ್ಭದ ಪ್ರಶ್ನೆ, ನಿರೀಕ್ಷೆ, ಒತ್ತಡಗಳ ಹಿನ್ನೆಲೆಯಲ್ಲಿ ನಮಗೆ ಬೇಕಾದ ವ್ಯಕ್ತಿತ್ವದ ಚಹರೆಗಳನ್ನು ಮಾತ್ರ ಆ ಉಜ್ವಲ ವ್ಯಕ್ತಿತ್ವದಲ್ಲಿ ಕಂಡುಕೊಳ್ಳಲು ಪ್ರಯತ್ನಿಸುತ್ತಿರುತ್ತೇವೋ? ಎಲ್ಲಾ ಅಸಾಧಾರಣ ವ್ಯಕ್ತಿತ್ವಗಳನ್ನು ಕುರಿತಂತೆಯೂ ಈ ಪ್ರಶ್ನೆಗಳಿವೆ. ಕೊನೆಗೂ ಆ ಪ್ರಭಾವಶಾಲಿ ಚೇತನವು ನಮ್ಮ ಈ ಗಳಿಗೆಯ ತುರ್ತುಗಳಿಗೆ ಸ್ಪಂದಿಸುತ್ತದೆಯೋ ಇಲ್ಲವೋ ಎನ್ನುವುದು ಮೊದಲನೆಯ ನಿರೀಕ್ಷೆ; ಅದರ ಕಾಲಾತೀತತೆಯನ್ನು ಕುರಿತದ್ದು ಎರಡನೆಯ ನಿರೀಕ್ಷೆ. ಇವು ಒಂದನ್ನೊಂದು ಸಂಪೂರ್ಣವಾಗಿ ಅವಲಂಬಿಸಿವೆ ಎನ್ನುವುದು ಸತ್ಯವಾದರೂ ಆದ್ಯತೆಯ ದೃಷ್ಟಿಯಿಂದ ಬಹುಶಃ ಹಿಂದುಮುಂದಾಗಲಾರವು".[3] ಈ ಅಭಿಪ್ರಾಯಗಳು ಕನ್ನಡದ ಒಟ್ಟು ವ್ಯಕ್ತಿತ್ವ ಗ್ರಹಿಕೆಯ ಪ್ರಯತ್ನಗಳ ಹಿಂದಿನ ಧೋರಣೆಗಳನ್ನು ಸಮರ್ಥವಾಗಿ ಗುರುತಿಸಿವೆ. ಈ ಅರಿವು ವ್ಯಕ್ತಿಚಿತ್ರ ಕವಿತೆಗಳ ಅಧ್ಯಯನಕ್ಕೆ ಹೊಸ ನೋಟಕ್ರಮವನ್ನು ಒದಗಿಸಬಲ್ಲದು. ಏಕೆಂದರೆ ವ್ಯಕ್ತಿತ್ವ ಶೋಧವು ಏಕಕಾಲದಲ್ಲಿ ವ್ಯಕ್ತಿಯ ಗ್ರಹಿಕೆಯೂ, ಚರಿತ್ರೆಯ ಅಧ್ಯಯನವೂ ಹೌದು. ಪರಂಪರೆ ಮತ್ತು ವರ್ತಮಾನದ ನಡುವೆ ಕೊಂಡಿಯನ್ನು ನಿರ್ಮಿಸುವ ಪ್ರಯತ್ನ ಈ ಅಭಿವ್ಯಕ್ತಿಗಳಲ್ಲಾಗುತ್ತಿರುತ್ತದೆ.

ವ್ಯಕ್ತಿಚಿತ್ರ ಕವಿತೆಗಳಲ್ಲಿ ಬಹುತೇಕ ವ್ಯಕ್ತಿತ್ವಗಳು ಆರಾಧನೆಗೆ ಒಳಗಾಗಿವೆ. ವ್ಯಕ್ತಿಪೂಜೆಯ ಪರಾಕಾಷ್ಠೆಯ ಸ್ಥಿತಿಯನ್ನು ಬಹುತೇಕ ಕವಿತೆಗಳು ತಲುಪಿವೆ. ಇದಕ್ಕೆ ಸಾಂಪ್ರದಾಯಿಕ ಧೋರಣೆಗಳನ್ನು ಕಳಚಿಕೊಳ್ಳಲಿಚ್ಛಿಸದ ನಮ್ಮ ಮನಸ್ಥಿತಿಗಳು ಕಾರಣವಾಗಿರುವಷ್ಟೇ; ಅವುಗಳನ್ನು ನಿಯಂತ್ರಿಸುತ್ತಿರುವ, ರೂಪಿಸುತ್ತಿರುವ ಸಾಮಾಜಿಕ-ಸಾಂಸ್ಕೃತಿಕ ಯಾಜಮಾನ್ಯ ಶಕ್ತಿಗಳೂ ಕಾರಣವಾಗಿವೆ. ಇವು ನಮ್ಮ ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ಅವುಗಳ ನಿಜ ವಿಸ್ತಾರದಲ್ಲಿ ಅರಿಯುವ ನಮ್ಮ ಗ್ರಹಿಕೆಯ ವಿಧಾನಗಳನ್ನು ನಿರ್ಬಂಧಿಸುತ್ತಿರುತ್ತವೆ.

ಆದರೆ ಬದಲಾದ ಕಾಲ, ಸಂದರ್ಭ, ಪ್ರಭಾವ, ತಿಳುವಳಿಕೆಗಳ ಹಿನ್ನೆಲೆಯಲ್ಲಿ ವ್ಯಕ್ತಿತ್ವಗಳನ್ನು ಗ್ರಹಿಸುವ ವಿಧಾನಗಳು ನಿರಂತರವಾಗಿ ಶೋಧಿತವಾಗುತ್ತಿರುತ್ತವೆ. ಇವು ವ್ಯಕ್ತಿತ್ವಗಳನ್ನು ಗ್ರಹಿಸಬಹುದಾದ ಸಾಧ್ಯತೆಯ ದಾರಿಗಳನ್ನು ವಿಸ್ತರಿಸುವ ಪ್ರಯತ್ನಮಾಡುತ್ತವೆ. ಇವು ವ್ಯಕ್ತಿತ್ವಗಳ ಸ್ವಪ್ರಜ್ಞೆಯನ್ನು ಸ್ಪಷ್ಟವಾಗಿ ಗ್ರಹಿಸುವ, ತೋರಿಸುವ ಪ್ರಯತ್ನವನ್ನು ಎಷ್ಟರ ಮಟ್ಟಿಗೆ ಮಾಡುತ್ತವೆ ಎಂಬುದು ಕವಿತೆಗಳ ಶಕ್ತಿ ಮತ್ತು ಧೋರಣೆಯ ಹೊಸತನಗಳನ್ನು ತೋರಿಸುತ್ತದೆ. ವ್ಯಕ್ತಿತ್ವದಲ್ಲಿ ಅದರೆಲ್ಲ ಸಮೃದ್ಧತೆ, ಶಕ್ತಿ, ಸೌಂದರ್ಯ, ದ್ವಂದ್ವ, ನಿರ್ಭೀತಿ, ಪ್ರಾಮಾಣಿಕತೆ, ದೌರ್ಬಲ್ಯ, ಗೊಂದಲ ಈ ಎಲ್ಲಾ ಬಹುಮುಖೀ ಆಯಾಮಗಳನ್ನು ಗುರುತಿಸಬೇಕು. ಹೀಗೆ ಗುರುತಿಸುವಲ್ಲಿ ಸಾಂಪ್ರದಾಯಿಕ ಮತ್ತು ಭಾವುಕ ಮನಸ್ಥಿತಿಗಳನ್ನು ಮೀರಿಕೊಳ್ಳುವಿಕೆ

ಪ್ರಾಮಾಣಿಕವಾಗಿರಬೇಕಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಯಾವುದೇ ವ್ಯಕ್ತಿತ್ವವನ್ನು ಮನುಷ್ಯತನವನ್ನು ಮೀರಿದ ಪವಿತ್ರಾತ್ಮಗಳನ್ನಾಗಿ ಮಾತ್ರ ನೋಡುವ ಧೋರಣೆಯನ್ನು ಬದಲಾಯಿಸಿಕೊಳ್ಳಬೇಕಾದ ಅಗತ್ಯವಿದೆ.

ಈ ಹಿನ್ನೆಲೆಯಲ್ಲಿ ಆಧುನಿಕ ಕನ್ನಡ ಕಾವ್ಯ ಚರ್ಚಿಸಿರುವ ಬಹುಮುಖ್ಯ ವ್ಯಕ್ತಿತ್ವಗಳಾದ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಅವರನ್ನು ಕುರಿತ ಕವಿತೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆಧುನಿಕ ಕನ್ನಡ ಕಾವ್ಯದಲ್ಲಿ ಹಲವು ಭಿನ್ನ ಕ್ಷೇತ್ರಗಳ ವ್ಯಕ್ತಿತ್ವಗಳನ್ನು ಕುರಿತ ರಚನೆಗಳು ಸಮೃದ್ಧವಾಗಿವೆ. ಇದರಲ್ಲಿ ಅತಿ ಹೆಚ್ಚು ಕವಿತೆಗಳು ಮೇಲಿನ ನಾಲ್ಕು ವ್ಯಕ್ತಿಗಳ ಬಗೆಗೆ ಬಂದಿರುವ ಕಾರಣದಿಂದ ಹಾಗೂ ಈ ನಾಲ್ಕೂ ವ್ಯಕ್ತಿತ್ವಗಳು ಭಾರತೀಯ ವೈಚಾರಿಕ ಪರಂಪರೆಯನ್ನು ರೂಪಿಸುತ್ತಾ ಬಂದ ನಾಲ್ಕು ಆಧಾರಸ್ಥಂಭಗಳ ಹಾಗೆ ಇರುವ ಕಾರಣದಿಂದ ಇವರನ್ನು ಕನ್ನಡ ಕಾವ್ಯ ಹೇಗೆ ಅನುಸಂಧಾನ ನಡೆಸಿದೆ ಎಂಬುದನ್ನು ಗ್ರಹಿಸುವುದು ಮಹತ್ವದ ಅಧ್ಯಯನವಾಗಬಲ್ಲದು. ಈ ನಾಲ್ಕೂ ವ್ಯಕ್ತಿತ್ವಗಳು ಭಿನ್ನ ಕಾಲ ಘಟ್ಟದಲ್ಲಿದ್ದವರಾದರೂ, ಭಿನ್ನ ತಾತ್ವಿಕ ನಿಲುವಿನಿಂದ ಕೂಡಿದವರಾದರೂ, ಭಿನ್ನ ಹೋರಾಟದ ಹಾದಿಯನ್ನು ತುಳಿದವರಾದರೂ ಕೂಡ ಅವರ ಅಂತಿಮ ಗುರಿ, ಆಶಯಗಳು ಒಂದೇ ಆಗಿದ್ದವು. ಹಾಗಾಗಿ ಅವರನ್ನು ಅವರ ಚಿಂತನೆ, ಹೋರಾಟಗಳ ಆಶಯದ ದೃಷ್ಟಿಯಿಂದ ಏಕಸೂತ್ರಕ್ಕೆ ತರಲು ಸಾಧ್ಯವಿದೆ. ಅವುಗಳನ್ನು ಮುಂದಿನಂತೆ ಗುರುತಿಸಲಾಗಿದೆ.

ವೈದಿಕ ಧರ್ಮದ ಜಡತೆ, ಅಸಮಾನತೆ, ಜಾತಿವ್ಯವಸ್ಥೆ, ಮತ್ತು ಮೌಢ್ಯಗಳನ್ನು ನಾಲ್ಕೂ ವ್ಯಕ್ತಿಗಳು ತಿರಸ್ಕರಿಸಿದರು. ಆ ಧರ್ಮದ ಸುಧಾರಣೆಗಾಗಿ ಪ್ರಯತ್ನಿಸಿದರಲ್ಲದೆ ಪರ್ಯಾಯ ಧರ್ಮಗಳ ಹುಡುಕಾಟದಲ್ಲಿ ತೊಡಗಿದ್ದರು. ತಮ್ಮ ಕಾಲದ ಸಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ವ್ಯವಸ್ಥೆಗಳ ಸುಧಾರಣೆಗೆ, ಆಮೂಲಾಗ್ರ ಬದಲಾವಣೆಗೆ ಪ್ರಯತ್ನಿಸಿದರು. ಭಾರತೀಯ ಮನಸ್ಸಿನ ಜಡತೆ ಹಾಗೂ ಗುಲಾಮಗಿರಿಗೆ ಕಾರಣವಾಗಿದ್ದ ವಿಧಿವಾದವನ್ನು ಈ ನಾಲ್ವರೂ ತಿರಸ್ಕರಿಸಿದರು. ಅದರ ಜಾಗದಲ್ಲಿ ಮನುಷ್ಯ ಪ್ರಯತ್ನದ ಅಗಾಧತೆಯನ್ನು ಪ್ರತಿಪಾದಿಸಿದರು. ಮನುಷ್ಯನ ಸ್ಥಿತಿಯನ್ನು ಮನುಷ್ಯನೇ ಬದಲಿಸಬಹುದು ಎಂಬ ನಂಬಿಕೆಯನ್ನು ಜನರ ಮನಸ್ಸಿನಲ್ಲಿ ಮೂಡಿಸಲು ಪ್ರಯತ್ನಿಸಿದರು. ಅದನ್ನು ತಮ್ಮ ಜೀವಿತದಲ್ಲೇ ಪ್ರಯೋಗಕ್ಕಿಳಿಸಿದರು. ಜನರ ಮನಸ್ಸನ್ನು ಆಳುತ್ತಿದ್ದ ಶಾಸ್ತ್ರಾಧಾರಗಳನ್ನು ಇವರೆಲ್ಲರೂ ತಿರಸ್ಕರಿಸಿದರು. ಬುದ್ಧ ದೇವರು ಧರ್ಮಗಳ ಸುತ್ತ ಹಬ್ಬಿದ್ದ ಕಟ್ಟುಕತೆಗಳನ್ನು ತಿರಸ್ಕರಿಸಲು ಸಂದೇಹ ಮತ್ತು ಮಧ್ಯಮಮಾರ್ಗವನ್ನು ತನ್ನ ನೋಟಕ್ರಮವನ್ನಾಗಿ ಮಾಡಿಕೊಂಡ. ಬಸವಣ್ಣ ವೈದಿಕ ಕಂದಾಚಾರಗಳನ್ನು ವಿರೋಧಿಸುತ್ತಲೇ ಪರ್ಯಾಯವಾಗಿ ಕಾಯಕ ಧರ್ಮವನ್ನು ಪ್ರಚುರಪಡಿಸಿದ, ವೈದಿಕ ಶಾಸ್ತ್ರಾಧಾರಗಳನ್ನು ತಿರಸ್ಕರಿಸುತ್ತಾ 'ಶಾಸ್ತ್ರಕ್ಕೆ ನಿಗಳನಿಕ್ಕುವೆ' ಎನ್ನುತ್ತಾನೆ. ಇನ್ನು ಗಾಂಧಿ ಸನಾತನ ಹಿಂದೂ ಧರ್ಮವನ್ನು ಒಂದು ಆದರ್ಶೀಕೃತ ನೆಲೆಯಲ್ಲಿ ಪ್ರಚಲಿತ ಜನಸಾಮಾನ್ಯರ ತಿಳುವಳಿಕೆಗಿಂತ ಭಿನ್ನವಾಗಿ ನಂಬುತ್ತಲೇ ಅದರ ಜಾತಿ ಶೋಷಣೆ, ಮೌಢ್ಯಗಳನ್ನು ವಿರೋಧಿಸಿದರು. ಸರ್ವಧರ್ಮಗಳ ಸಾಮರಸ್ಯದ ಮಹತ್ವವನ್ನು ಪ್ರಚುರಪಡಿಸಿದರು. ಅಂಬೇಡ್ಕರ್ ಜಾತಿ ಶೋಷಣೆ, ಅಸಮಾನತೆಗೆ ಕಾರಣವಾದ ಹಿಂದೂ ಪುರಾಣ, ಶಾಸ್ತ್ರಾಧಾರಗಳ ಮೂಲವನ್ನು ಆಳವಾಗಿ ಅಭ್ಯಸಿಸಿ ಸಕಾರಣವಾಗಿಯೇ ತಿರಸ್ಕರಿಸಿದರು. ಹಿಂದೂ ಧರ್ಮದಲ್ಲಿ ಸುಧಾರಣೆಗಳನ್ನು ತರಲು ಪ್ರಯತ್ನಿಸಿ ವಿಫಲರಾದಾಗ ಕೊನೆಗೆ ಜಾತಿ ಶೋಷಿತರ ಬಿಡುಗಡೆಗಾಗಿ ಬೌದ್ಧಧರ್ಮವನ್ನು ಪರ್ಯಾಯವಾಗಿ ಒಪ್ಪಿಕೊಂಡರು. ಹೀಗೆ ಈ

ನಾಲ್ಕೂ ಉನ್ನತ ವ್ಯಕ್ತಿತ್ವಗಳು ವೈದಿಕ ಧರ್ಮದ ವಿರೋಧ, ಸುಧಾರಣೆ ಮತ್ತು ಹೊಸ ಸ್ವರೂಪಕ್ಕಾಗಿ ಹೋರಾಟವನ್ನೇ ರೂಪಿಸಿದರು.

ಅಸ್ಪೃಶ್ಯತೆಯ ಸಮಸ್ಯೆ ಭಾರತೀಯ ಸಮಾಜದ ದೊಡ್ಡ ಕಳಂಕ. ಈ ಕಳಂಕವನ್ನು ತೊಡೆದು ಹಾಕಲು, ಸಾಮಾಜಿಕ ಸಮಾನತೆಯನ್ನು ಸ್ಥಾಪಿಸಲು ಈ ನಾಲ್ಕೂ ಜನರು ಪ್ರಯತ್ನಿಸಿದ್ದಾರೆ. ಇದಕ್ಕಾಗಿ ಇವರು ಅನುಸರಿಸಿದ ಮಾರ್ಗಗಳು ಭಿನ್ನವಾದರೂ ಗುರಿ ಒಂದೇ ಆಗಿತ್ತು. ಬುದ್ಧ ಜಾತಿವ್ಯವಸ್ಥೆಗೆ ಆಧಾರವಾದ ಶಾಸ್ತ್ರಗಳನ್ನು ವೈಚಾರಿಕವಾಗಿ ಎದುರಿಸಿದರೆ, ಬಸವಣ್ಣ ತಳ ಸಮುದಾಯಗಳ ಘನತೆಯನ್ನು ಎತ್ತಿಹಿಡಿಯಲು ಸ್ವತಹ ತನ್ನನ್ನು ತಾನು ಅಸ್ಪೃಶ್ಯನನ್ನಾಗಿಸಿಕೊಳ್ಳಲು ಪ್ರಯತ್ನಿಸಿದ. ಗಾಂಧಿ ಅಸ್ಪೃಶ್ಯತೆಯ ನಿವಾರಣೆಗೆ ಇಡೀ ಭಾರತ ಪ್ರವಾಸ ಕೈಗೊಂಡರು. ರಚನಾತ್ಮಕ ಕಾರ್ಯಗಳನ್ನು ಅಳವಡಿಸಿಕೊಂಡರು. ಅಂಬೇಡ್ಕರ್ ಸಾಂವಿಧಾನಿಕ ಮಾರ್ಗದ ಮೂಲಕ ಅಸ್ಪೃಶ್ಯರಿಗೆ ಸಾಮಾಜಿಕ, ರಾಜಕೀಯ ಹಕ್ಕುಗಳನ್ನು ಒದಗಿಸುವ ಪ್ರಯತ್ನ ಮಾಡಿದರು. ಅಸ್ಪೃಶ್ಯರ ವಿಮೋಚನೆಗಾಗಿ ಬೌದ್ಧ ಧರ್ಮವನ್ನು ಪರಂಪರೆಯಿಂದ ಶೋಧಿಸಿಕೊಟ್ಟರು. ಹೀಗೆ ಅಸ್ಪೃಶ್ಯತೆಯ ನಿವಾರಣೆ ಈ ನಾಲ್ಕೂ ಜನರ ಹೋರಾಟದ ಮುಖ್ಯ ಗುರಿಯಾಗಿರುವುದನ್ನು ಕಾಣಬಹುದು.

ಈ ನಾಲ್ವರೂ ಭಾರತೀಯರು ಎದುರಿಸುತ್ತಿದ್ದ ಹಲವು ಬಗೆಯ ಸಮಸ್ಯೆಗಳ ನಿವಾರಣೆಗೆ ಧರ್ಮವನ್ನು ಬಹುಮುಖ್ಯ ಪರಿಹಾರ ಮಾರ್ಗವಾಗಿ ಒಪ್ಪಿಕೊಂಡಿದ್ದರು. ಮನುಷ್ಯರಲ್ಲಿ ನೈತಿಕ ಮೌಲ್ಯಗಳನ್ನು ಬಿತ್ತಲು, ಮನಸ್ಥಿತಿಯ ಬದಲಾವಣೆಗೆ, ಸಮಾಜ, ರಾಜಕೀಯ ವ್ಯವಸ್ಥೆಗಳ ಸುಧಾರಣೆಗೆ ಧರ್ಮದ ಅಗತ್ಯವನ್ನು ಒತ್ತಿ ಹೇಳಿದರು. ಬುದ್ಧ ತಾನು ನೀಡುತ್ತಿರುವುದು ಧಾರ್ಮಿಕ ಉಪದೇಶವಲ್ಲವೆಂದರೂ, ಹೊಸ ಧರ್ಮದ ಪ್ರತಿಪಾದಕನೆಂದು ಹೇಳಿಕೊಳ್ಳದಿದ್ದರೂ ಅವನು ಪ್ರತಿಪಾದಿಸಿದ ಹೊಸ ಜೀವನ ಕ್ರಮಗಳು ಧಾರ್ಮಿಕ ಸ್ವರೂಪದವೇ ಆಗಿದ್ದವು. ಮುಂದೆ ಅದೇ ಬೌದ್ಧಧರ್ಮವಾಗಿ ರೂಪುಗೊಂಡುದನ್ನು ಕಾಣಬಹುದು. ಆದರೆ ಇವರು ಒಪ್ಪಿಕೊಂಡ ಧರ್ಮಗಳು ಮಾನವೀಯ, ಜೀವಪರ ನೆಲೆಯವು ಎಂಬುದು ವಿಶೇಷ. ಬಸವಣ್ಣ ವೈದಿಕ ಧರ್ಮವನ್ನು ವಿರೋಧಿಸಿ ಸಮಾನತೆಯ ಸಮಾಜ ನಿರ್ಮಾಣದ ಪ್ರಯತ್ನದಲ್ಲಿ ತೊಡಗಿದ್ದರು. ಗಾಂಧಿ ಸನಾತನ ಹಿಂದೂ ಧರ್ಮವನ್ನು ಆದರ್ಶೀಕೃತ ನೆಲೆಯಲ್ಲಿ ಒಪ್ಪಿಕೊಂಡಿದ್ದರು. ಅಂಬೇಡ್ಕರ್ ಅಸ್ಪೃಶ್ಯತೆಯ ನಿವಾರಣೆಗಾಗಿ ಹಿಂದೂ ಧರ್ಮವನ್ನು ತೊರೆದು ಬೌದ್ಧಧರ್ಮವನ್ನು ಅನುಸರಿಸುವಂತೆ ಕರೆನೀಡಿದರು. ಹೀಗೆ ಈ ನಾಲ್ವರೂ ತಮ್ಮ ಹೋರಾಟದ ಆಶಯಗಳ ಈಡೇರಿಕೆಗಾಗಿ ಧರ್ಮವನ್ನು ಒಂದು ನೈತಿಕ ಅಸ್ತ್ರವನ್ನಾಗಿ ಬಳಸುತ್ತಾರೆ.

ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಇವರು ಮಾನವ ಬದುಕಿನ ಬಗೆಗೆ ಹೊಂದಿದ್ದ ದೂರದೃಷ್ಟಿಯ ಚಿಂತನೆಗಳಲ್ಲಿ ಸಾಮ್ಯತೆಗಳಿವೆ. ಇವರು ಮಾನವ ಸಮುದಾಯ ಎದುರಿಸುತ್ತಿರುವ ಹಲವು ಜ್ವಲಂತ ಸಮಸ್ಯೆ, ಸವಾಲುಗಳಿಗೆ ಶಾಶ್ವತ, ನಿಸರ್ಗ ಸಹಜ ಹಾಗೂ ವೈಚಾರಿಕ ನೆಲೆಯ ಉತ್ತರಗಳನ್ನು ಹುಡುಕಲು ಪ್ರಯತ್ನಿಸಿದರು. ವರ್ತಮಾನದ ಹಲವು ಜಾಗತಿಕ ಸಮಸ್ಯೆಗಳ ಸಂದರ್ಭದಲ್ಲಿ ಇವರ ಚಿಂತನೆ, ಹೋರಾಟದ ಆಶಯಗಳು ಪ್ರಸ್ತುತವೆನಿಸುತ್ತಿರುವುದು ಇವರ ಚಿಂತನೆಗಳ ದೂರದೃಷ್ಟಿಯನ್ನು ಮನವರಿಕೆ ಮಾಡುಕೊಡುತ್ತದೆ. ಈ ನಾಲ್ವರೂ ಗತಿಸಿದ ಕಾಲಾನಂತರದಲ್ಲೂ, ಇಂದಿಗೂ ಬೇರೆ ಬೇರೆ ರೀತಿಯ ಚರ್ಚೆಗೆ, ಜಿಜ್ಞಾಸೆಗೆ, ಸವಾಲಿಗೆ ಕಾರಣವಾಗುತ್ತಿರುವುದು ಅವರ ಹೋರಾಟ, ಚಿಂತನೆಗಳ ಜೀವಂತಿಕೆಯನ್ನು ಹೇಳುತ್ತದೆ.

ನಾಲ್ಕೂ ಜನರ ಚಿಂತನೆ ಹೋರಾಟ, ನಂಬಿಕೆಗಳಲ್ಲಿ ದೊಡ್ಡ ವೈರುಧ್ಯಗಳಿವೆ. ತಾತ್ವಿಕವಾಗಿ ಪರಸ್ಪರ ಸಂಘರ್ಷಕ್ಕಿಳಿಯುವ ಚಿಂತನೆಗಳು ಇವರವು. ಅಲ್ಲದೆ ತಮ್ಮ ಪರ್ಯಾಯಗಳ ಚಿಂತನೆ ಮತ್ತು ಹೋರಾಟದ ಸ್ವರೂಪಗಳೆ ನಂತರದ ಕಾಲಘಟ್ಟಗಳಲ್ಲಿ ತೀವ್ರ ಪ್ರಶ್ನೆಗೆ, ವಿರೋಧಗಳಿಗೆ ಒಳಗಾಗಿವೆ. ಬುದ್ಧ ತನ್ನ ಬಿಕ್ಕು ಸಂಘದಲ್ಲಿ ಮಹಿಳೆಯರಿಗೆ ಅವಕಾಶವನ್ನು ನಿರಾಕರಿಸಿದ್ದು ಮುಂದೆ ಪ್ರಶ್ನೆಗೆ ಒಳಗಾಗುತ್ತದೆ. ಬಸವಣ್ಣನ ಇಷ್ಟ ಲಿಂಗದ ಸಂಕೇತ, ಕೆಳಸಮುದಾಯಗಳ ಬದುಕಿನ ವಿಶಿಷ್ಟತೆಗಳನ್ನು, ಆಹಾರದ ಹಕ್ಕನ್ನು ವಿರೋಧಿಸಿದ್ದು, ಆತ ಹುಟ್ಟು ಹಾಕಿದ ವೀರಶೈವ ಧರ್ಮ ಮುಂದೆ ಬಸವಣ್ಣನಿಗೇ ವಿರುದ್ಧವಾಗಿ ಚಲಿಸಿದ್ದು ಮುಂತಾದವು ಮುಂದೆ ಹಲವು ಪ್ರಶ್ನೆಗಳಿಗೆ ಒಳಗಾಗಿದ್ದಲ್ಲದೆ ಶರಣ ಚಳುವಳಿಯೇ ವಿಫಲವಾಗಲು ಕಾರಣವೂ ಆಯಿತು. ಇನ್ನು ಸಮಕಾಲೀನ ವ್ಯಕ್ತಿಗಳಾದ ಗಾಂಧಿ, ಅಂಬೇಡ್ಕರ್‌ರವರ ನಡುವೆ ಅಸ್ಪೃಶ್ಯತೆಯ ನಿವಾರಣೆ, ಸ್ವರಾಜ್ಯ, ರಾಜಕೀಯಾಧಿಕಾರದ, ಆರ್ಥಿಕ ಚಿಂತನೆ ವಿಷಯಗಳಲ್ಲಿ ದೊಡ್ಡ ವಿರೋಧ-ವಾಗ್ವಾದಗಳೇ ಏರ್ಪಟ್ಟಿರುವುದನ್ನು ಕಾಣಬಹುದು. ಇಬ್ಬರ ಗುರಿ ಒಂದೇ ಆದರೂ ಅನುಸರಿಸಿದ ಮಾರ್ಗಗಳು, ನಂಬಿಕೆಗಳು ಭಿನ್ನವಾಗಿದ್ದವು. ಅಲ್ಲದೆ ಇಬ್ಬರೂ ಪರಸ್ಪರರನ್ನು ಬಹಳವಾಗಿ ಕಾಡಿದ, ಪ್ರಭಾವಿಸಿದ ವ್ಯಕ್ತಿಗಳಾಗಿದ್ದಾರೆ. ಹೀಗೆ ಪರಸ್ಪರ ವೈರುಧ್ಯಗಳುಳ್ಳ ಈ ವ್ಯಕ್ತಿತ್ವಗಳು ಭಾರತೀಯ ಸಾಮಾಜಿಕ, ಧಾರ್ಮಿಕ, ರಾಜಕೀಯ ಪರಿಸರದ ಮೇಲೆ ಬೀರಿರುವ ಪ್ರಭಾವ-ಪ್ರೇರಣೆಗಳು ಎಂತವು ಎಂಬುದು ಕುತೂಹಲ, ಆಶ್ಚರ್ಯವನ್ನು ಉಂಟುಮಾಡುವ ಸಂಗತಿಯಾಗಿದೆ.

ಈ ನಾಲ್ಕೂ ಜನರನ್ನು ಕಾವ್ಯವೆಂಬ ಪ್ರಕಾರ ಹಿಡಿದಿಡುವ ಸಂದರ್ಭದಲ್ಲಿ ಕನ್ನಡದ ಮನಸ್ಸು ಇವರನ್ನು ಹೇಗೆ ಗ್ರಹಿಸಿದೆ, ಹೇಗೆ ಅನುಸಂಧಾನ ನಡೆಸಿದೆ ಎಂಬುದು ತುಂಬಾ ಕುತೂಹಲಕರ ಸಂಗತಿಯಾಗಿದೆ. ಚಾರಿತ್ರಿಕ ಮಹತ್ವವುಳ್ಳ ಈ 'ಉನ್ನತ ವ್ಯಕ್ತಿತ್ವ'ಗಳು ಕಾವ್ಯದ ಮುಖೇನ ಚಿತ್ರಿತಗೊಂಡಾಗ ಪಡೆಯುವ ವಿಸ್ತಾರ- ಸಂಕುಚಿತತೆ, ಮೆಚ್ಚುಗೆ-ವಿರೋಧ, ನೈಜತೆ-ವೈಭವೀಕರಣದ ನೆಲೆಗಳನ್ನು ಅರಿಯುವುದು ಸಾಂಸ್ಕೃತಿಕ ಚರಿತ್ರೆಯ ದೃಷ್ಟಿಯಿಂದ ಹಾಗೂ ಆಯಾ ವ್ಯಕ್ತಿತ್ವಗಳ ಗ್ರಹಿಕೆಯ ದೃಷ್ಟಿಯಿಂದ ಮಹತ್ವ ಪಡೆದಿದೆ. ಅದರಲ್ಲೂ ಕಾವ್ಯ ಪ್ರಕಾರ ಪ್ರತಿಮೆ-ರೂಪಕಗಳ ಮೂಲಕ ಈ ವ್ಯಕ್ತಿತ್ವಗಳನ್ನು ಅನುಸಂಧಾನ ಮಾಡುವ ವಿಶಿಷ್ಟ ಕ್ರಮವನ್ನು, ಕವಿತೆಗಳ ಸಂಗ್ರಹ ಗುಣವನ್ನು ಸಾಹಿತ್ಯ ವಿಮರ್ಶೆಯಾಗಿಯೂ, ಚಾರಿತ್ರಿಕ ವಿಶ್ಲೇಷಣೆಯಾಗಿಯೂ, ಸಾಂಸ್ಕೃತಿಕ ವಿಮರ್ಶೆಯಾಗಿಯೂ ನೋಡುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ವ್ಯಕ್ತಿತ್ವಗಳನ್ನು ಗ್ರಹಿಸುವ, ಶೋಧಿಸುವ ಕ್ರಮಗಳಾವುವು ಎಂಬುದು ಮುಖ್ಯವಾದ ಪ್ರಶ್ನೆ. ಏಕೆಂದರೆ ವ್ಯಕ್ತಿತ್ವಗಳ ನೈಜತೆಯನ್ನು ಅವರ ಎಲ್ಲಾ ಸಾಧನೆ-ದೌರ್ಬಲ್ಯಗಳೊಂದಿಗೆ ಕಂಡುಕೊಳ್ಳಬೇಕಾದರೆ ಆ ವ್ಯಕ್ತಿತ್ವವನ್ನು ಅನುಸಂಧಾನ ಮಾಡುವ ಮಾರ್ಗ ಪ್ರಾಮಾಣಿಕ ಹಾಗೂ ವಿಶಿಷ್ಟವಾದುದಾಗಿರಬೇಕು. ವ್ಯಕ್ತಿಗಳ ಬಗೆಗಿನ ಪೂರ್ವಾಗ್ರಹ ನಿರ್ಧಾರಗಳು, ಅತಿ ಭಾವುಕತೆ, ಪೂಜನೀಯ ಭಾವನೆಗಳು, ಒಂದು ಜಾತಿ-ಸಮುದಾಯದ ಪ್ರತಿನಿಧಿಯನ್ನಾಗಿ ನೋಡುವ ನೋಟಕ್ರಮಗಳು ಆ ವ್ಯಕ್ತಿತ್ವಗಳನ್ನು ಪ್ರಶ್ನಾತೀತವಾಗಿ ಪವಿತ್ರೀಕರಿಸಿಬಿಡುವ ಅಪಾಯವಿರುತ್ತದೆ. ಇಂಥ ರಚನೆಗಳು ಎಷ್ಟೋ ವೇಳೆ 'ಭಜನೆಗೀತೆ'ಗಳ ಹಾಗೆ ಇರುವುದೂ ಉಂಟು. ಈ ಕ್ರಮ ವ್ಯಕ್ತಿಗಳನ್ನು ಅವರ ಸಾಧನೆ, ಸಿದ್ಧಿಗಳನ್ನು ಶ್ರೇಷ್ಠತೆಯ ನೆಲೆಯಲ್ಲಿಯೇ ಗ್ರಹಿಸಿ, ಹೊಗಳುವ ನೆಲೆಯವಾಗಿರುತ್ತವೆ. ಈ ಬಗೆಯ ಕವಿತೆಗಳು ವ್ಯಕ್ತಿತ್ವದ ಸಮಗ್ರ ಚಿತ್ರಣವನ್ನು ನೀಡುವಲ್ಲಿ ವಿಫಲವಾಗುತ್ತವೆ. ಇಂಥ ಕವಿತೆಗಳು

**ಆರಾಧನಾ ನೆಲೆಯ** ರಚನೆಗಳಾಗಿರುತ್ತವೆ. ಇಂಥ ರಚನೆಗಳನ್ನು ಕೊಟ್ಟ ಕವಿಗಳು ವ್ಯಕ್ತಿಗಳ ಜೊತೆಗೆ ಭಾವನಾತ್ಮಕ ಸಂಬಂಧವನ್ನು ಇಟ್ಟುಕೊಂಡಿದ್ದಾರೆಯೇ ಹೊರತು ವೈಚಾರಿಕ ಸಂಬಂಧವನ್ನು ಇಟ್ಟುಕೊಂಡ ಹಾಗೆ ಕಾಣುವುದಿಲ್ಲ. ಇಂಥವು ವ್ಯಕ್ತಿತ್ವ ಗ್ರಹಿಕೆಯಲ್ಲಿ ಇರಲಿ ಕಾವ್ಯವಾಗಿಯೂ ಮಹತ್ವಪಡೆಯಲಾರವು.

ಇನ್ನು ಕೆಲವು ಕವಿತೆಗಳು **ಮಾಹಿತಿ ಪ್ರಧಾನ**ವಾದ ರಚನೆಯ ಕ್ರಮವನ್ನು ಅನುಸರಿಸಿರುವುದುಂಟು. ಇವು ಹೆಚ್ಚಿನ ಪಾಲು ವ್ಯಕ್ತಿಯ ಸಂಕ್ಷಿಪ್ತ ಜೀವನ ಚರಿತ್ರೆಗಳ ಹಾಗೆ ಕಂಡುಬರುತ್ತವೆ. ವ್ಯಕ್ತಿಯ ಬದುಕಿನ ಬಗೆಗೆ ಈಗಾಗಲೇ ಪ್ರಚಲಿತವಾಗಿರುವ ಪ್ರಮುಖ ಘಟನೆಗಳು, ಸಾಧನೆಯ ವಿವರಗಳನ್ನು ಮರುನಿರೂಪಿಸುವ ಪರ್ಯಾಯ ರೂಪದ ರಚನೆಗಳಾಗಿವೆ. ಕಥನ ರೂಪದ ಇಂಥ ರಚನೆಗಳಲ್ಲಿ, ನಿರೂಪಣೆಯಲ್ಲಿ ಹೊಸತನ ಹಾಗೂ ವರ್ತಮಾನದ ಹಲವು ಸಮಸ್ಯೆಗಳಿಗೆ ಅಭಿವ್ಯಕ್ತಿಗಳಾಗುವ ವಿಶಿಷ್ಟ ರೂಪಕವಾಗಿ ಬಳಸಿಕೊಂಡಾಗ ಮಹತ್ವದ ರಚನೆಗಳಾಗುತ್ತವೆ. ಆದರೆ ಹೆಚ್ಚು ಕವಿತೆಗಳು ಕೇವಲ ಸರಳ ನಿರೂಪಣೆಯ ನೆಲೆಯಲ್ಲೆ ನಿಂತು ಕ್ಲೀಷೆಯ ಮಟ್ಟಕ್ಕೂ ಇಳಿದುಬಿಡುತ್ತವೆ. ವ್ಯಕ್ತಿಯ ಬದುಕನ್ನು, ಸಾಧನೆಗಳನ್ನು ಆದರ್ಶವಾಗಿ ಕಾಣುವ, ಮೆಚ್ಚುಗೆ-ಪ್ರಶಂಸೆ ನೆಲೆಯಲ್ಲಿ ಚಿತ್ರಿಸುವ ರಚನೆಗಳು ಕೇವಲ ಮಾಹಿತಿಗಳನ್ನಷ್ಟೇ ನೀಡುತ್ತಿರುತ್ತವೆ. ಈ ತರದ ರಚನೆಗಳೂ ಕೂಡ ವ್ಯಕ್ತಿತ್ವ ಗ್ರಹಿಕೆಯ ದೃಷ್ಟಿಯಿಂದ ಮಹತ್ವದ ರಚನೆಗಳೆನಿಸುವುದಿಲ್ಲ.

ಮೇಲಿನ ಎರಡೂ ರೂಪದ ರಚನೆಗಳ ಹಿಂದೆ ಹಲವು ಕಾರಣ- ಪ್ರಭಾವಗಳಿರುವ ಸಾಧ್ಯತೆ ಇದೆ. ವ್ಯಕ್ತಿಗಳನ್ನು ಜಾತಿ, ಸಮುದಾಯ, ಧರ್ಮಗಳ ನಾಯಕರುಗಳೆಂಬಂತೆ ಗ್ರಹಿಸಿಕೊಳ್ಳುವ ಕ್ರಮವೇ ಇಂಥ ರಚನೆಗಳಿಗೆ ಕಾರಣವಾಗುತ್ತದೆ. ಅಲ್ಲದೆ ವ್ಯಕ್ತಿಗಳ ಬಗೆಗಿನ ತೀರಾ ಮೇಲು ಮಟ್ಟದ ಗ್ರಹಿಕೆಗಳು, ಸೂಕ್ಷ್ಮ ಒಳನೋಟಗಳಿಲ್ಲದಿರುವಿಕೆಯೂ ಕಾರಣವಾಗಬಹುದು. ವ್ಯಕ್ತಿಗಳ ವಿಶೇಷ ಸಂದರ್ಭದ ರಚನೆಗಳು ಉದಾ. ಅಭಿನಂದನಾ ಸಮಾರಂಭ, ಜಯಂತಿ, ಪುಣ್ಯತಿಥಿ, ನುಡಿನಮನ ಮುಂತಾದ ವಿಶೇಷ ಸಂದರ್ಭಗಳಲ್ಲಿ ರಚನೆಯಾದ ಕವಿತೆಗಳು ಬಹುತೇಕ ಕೀರ್ತಿಸಲೆಂದೇ ಬರೆದವುಗಳಾಗಿರುತ್ತವೆ. ಜೊತೆಗೆ ವ್ಯಕ್ತಿತ್ವಗಳನ್ನು ಹೊಗಳಿ ಧನ್ಯರಾಗುವ ಮನಸ್ಥಿತಿ, ಅತಿಯಾದ ಭಾವುಕತೆ, ವ್ಯಕ್ತಿತ್ವಗಳನ್ನು ಪಾವಿತ್ರೀಕರಿಸಿ ನೋಡುವ ಪ್ರಯತ್ನಗಳು ಹಾಗೂ ಪರಂಪರೆಯಿಂದ ಬಂದ ಸಾಂಪ್ರದಾಯಿಕ ದೃಷ್ಟಿಕೋನಗಳೂ ಕಾರಣವಾಗಿರುತ್ತವೆ.

ಹಾಗಾದರೆ ವ್ಯಕ್ತಿತ್ವವನ್ನು ನೈಜವಾಗಿ ಗ್ರಹಿಸುವ ಕ್ರಮ ಯಾವುದು? ವ್ಯಕ್ತಿತ್ವಗಳ ಭಿನ್ನ ಮುಖಗಳು ತಿಳಿದುಬರುವುದೇ ಆ ವ್ಯಕ್ತಿತ್ವಗಳ ನಿರಂತರ ಅನ್ವೇಷಣೆಯ ಮೂಲಕ. ನೈಜತೆಯ ನೆಲೆಯಲ್ಲಿ ಪ್ರಶ್ನೆ, ಅನುಮಾನ, ಜಗಳಗಳ ಮೂಲಕ ಮುಖಾಮುಖಿಯಾದಾಗ ನಿಜ ವ್ಯಕ್ತಿತ್ವಗಳನ್ನು ಅರಿಯುವ ಪ್ರಯತ್ನ ಮಾಡಲು ಸಾಧ್ಯ. ವ್ಯಕ್ತಿತ್ವಗಳನ್ನು ಪ್ರಶ್ನಿಸುವುದು, ಅನುಮಾನಿಸುವುದೆಂದರೆ ವ್ಯಕ್ತಿಗಳಿಗೆ ಅಗೌರವ ಸಲ್ಲಿಸಿದಂತೆ, ದ್ರೋಹ ಬಗೆದಂತೆ ಅಲ್ಲ. ಪ್ರಶ್ನೆ, ಅನುಮಾನ, ಜಗಳಗಳು ಏಕಕಾಲದಲ್ಲಿ ವ್ಯಕ್ತಿಗಳ ವ್ಯಕ್ತಿತ್ವವನ್ನೂ, ಅನ್ವೇಷಕನ ತಿಳುವಳಿಕೆಯನ್ನು ವಿಸ್ತರಿಸುತ್ತಿರುತ್ತವೆ. ವ್ಯಕ್ತಿಗಳೊಂದಿಗೆ ತನ್ನದೇ ಆದ ಭಿನ್ನಾಭಿಪ್ರಾಯ, ವಿರೋಧಗಳೊಡನೆ ಜಗಳವಾಡಿಯೇ ಅವರನ್ನು ಅರ್ಥಮಾಡಿಕೊಳ್ಳಬೇಕಾಗಿರುತ್ತದೆ. ನಮ್ಮ ಪ್ರಶ್ನೆ, ಅನುಮಾನ, ವಿರೋಧಾಭಾಸಗಳಿಗೆ ಅವರೊಡನೆ ಜಗಳವಾಡಿಯೇ ಉತ್ತರಗಳನ್ನು ಕಂಡುಕೊಳ್ಳಬೇಕಾಗಿರುತ್ತದೆ. ವ್ಯಕ್ತಿತ್ವಗಳ ದೌರ್ಬಲ್ಯ, ದ್ವಂದ್ವತೆ, ದೋಷಗಳನ್ನು ಮರೆಮಾಚಿ ವೈಭವೀಕರಿಸದೆ; ಅನುಮಾನಿಸುತ್ತಾ, ಪ್ರಶ್ನಿಸುತ್ತಾ, ವಿರೋಧಿಸುತ್ತಾ ವರ್ತಮಾನದ ಹಲವು ಸಾಂಸ್ಕೃತಿಕ ಪ್ರಶ್ನೆಗಳೊಂದಿಗೆ ಮುಖಾಮುಖಿಯಾಗಿ ನೋಡುವ ಕ್ರಮ ನಿಜವಾದ ಗ್ರಹಿಕೆಯ ಕ್ರಮವಾಗಬಲ್ಲದು.

ಇದು ಸಾಹಸದ ಕೆಲಸವೂ ಹೌದು. ಇದಕ್ಕೆ ಪ್ರಾಮಾಣಿಕತೆ, ಸೂಕ್ಷ್ಮ ಒಳನೋಟ, ಆಳ ತಿಳುವಳಿಕೆಗಳ ಮೂಲಕ ವ್ಯಕ್ತಿತ್ವಗಳೊಂದಿಗೆ ಎದುರಾಗುವ ಧೈರ್ಯ ಹಾಗೂ ಸಮಕಾಲೀನ ಸಾಂಸ್ಕೃತಿಕ ಸಮಸ್ಯೆಗಳ ಅರಿವಿರಬೇಕು. ಇಂಥ ರಚನೆಗಳು ವಿಮರ್ಶಾತ್ಮಕ ನೆಲೆಯವಾಗಿರಲು ಸಾಧ್ಯ. ಇವುಗಳಿಗೆ ಕಾವ್ಯಶಕ್ತಿಯೂ, ಸಾಂಸ್ಕೃತಿಕ ಮಹತ್ವವೂ ಲಭಿಸುತ್ತದೆ. ವ್ಯಕ್ತಿತ್ವಗಳನ್ನು ಪ್ರತಿಮೆ– ರೂಪಕಗಳಲ್ಲಿ ಹಿಡಿದಿಡುವ, ಹಲವು ದೃಷ್ಟಿಕೋನಗಳಿಂದ ನೋಡುವ, ತನ್ನ ಕಾಲದ ಹಲವು ಪ್ರಶ್ನೆಗಳೊಂದಿಗೆ ಮುಖಾಮುಖಿಯಾಗುವ, ವರ್ತಮಾನದ ಸಾಂಸ್ಕೃತಿಕ ಬದುಕಿಗೆ ಹೊಸ ಅರ್ಥವಂತಿಕೆಯನ್ನು ಹುಡುಕುವ ನೆಲೆಯ ರಚನೆಗಳು ವ್ಯಕ್ತಿತ್ವಕ್ಕೆ ಬಹುಸ್ತರೀಯ ಧ್ವನಿ–ಆಯಾಮಗಳನ್ನು ಒದಗಿಸಿಕೊಡಬಲ್ಲವು.

ಆಧುನಿಕ ಕನ್ನಡ ಕಾವ್ಯ ವ್ಯಕ್ತಿತ್ವ ಶೋಧದ ಪ್ರಕ್ರಿಯೆಯಲ್ಲಿ ಮೇಲಿನ ಮೂರೂ ನೆಲೆಗಳನ್ನು ಅನುಸರಿಸಿದೆ. ಬುದ್ಧ, ಬಸವಣ್ಣ, ಗಾಂಧಿ, ಅಂಬೇಡ್ಕರ್ ಅವರುಗಳನ್ನು ಕುರಿತ ಕವಿತೆಗಳೂ ಸಹ ಇದೇ ನೆಲೆಗಳಲ್ಲಿ ರಚನೆಗೊಂಡಿವೆ. ಈ ಮೂರೂ ನೆಲೆಗಳು ಮೇಲಿನ ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸಿರುವ ಬಗೆಯನ್ನು ಪ್ರಬಂಧದಲ್ಲಿ ಚರ್ಚಿಸಲಾಗಿದೆ.

ಸಮಕಾಲೀನ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ತುರ್ತಿನಿಂದ ವ್ಯಕ್ತಿತ್ವಗಳು ರೂಪಿಸಲ್ಪಡುತ್ತವೆ. ಅವರ ಮಾನವೀಯ ಅಂತಃಕರಣದಿಂದಾಗಿ ಮೇರು ವ್ಯಕ್ತಿತ್ವಗಳಾಗಿ ಅರಳಿ ನಿಲ್ಲುತ್ತಾರೆ. ಇಂಥ ವ್ಯಕ್ತಿತ್ವಗಳು ಸಮಕಾಲೀನ ತುರ್ತುಗಳಿಂದ ರೂಪುಗೊಂಡರೂ, ಅದಕ್ಕೆ ಶತಮಾನಗಳ ಮಾನವತೆಯ ನಿರೀಕ್ಷೆ, ಬಿಡುಗಡೆಯ ಉತ್ಕಟ ಆಕಾಂಕ್ಷೆಗಳಿರುತ್ತವೆ. ಹಾಗಾಗಿಯೇ ಪ್ರತಿಯೊಂದು ದೇಶ, ಸಂಸ್ಕೃತಿ, ಸಮಾಜಗಳಲ್ಲೂ ಯುಗ, ಶತಮಾನಗಳಿಗೊಬ್ಬರಾದರೂ ಮಾನವೀಯ ಮಿಡಿತವುಳ್ಳ ವ್ಯಕ್ತಿಗಳು ಕಂಡುಬರುತ್ತಾರೆ, ಅದುವರೆಗೂ ಆವರಿಸಿರುವ ಎಲ್ಲ ಕೊಳೆಯನ್ನೂ ತೊಳೆಯಲು ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ರಾಜಕೀಯ ಈ ಎಲ್ಲ ವಲಯಗಳಲ್ಲೂ ಕ್ರಾಂತಿಕಾರಕ ಬದಲಾವಣೆಗಳನ್ನು ತರಲು ಹೋರಾಡುತ್ತಾರೆ. ಸಮಷ್ಟಿಯ ಸುಖಕ್ಕಾಗಿಯೇ ತಮ್ಮನ್ನು ಅರ್ಪಿಸಿಕೊಳ್ಳುತ್ತಾರೆ. ಇಂಥ ವ್ಯಕ್ತಿಗಳ ಸಂವೇದನೆ ಮಾನವೀಯವಾದುದು. ಸಾಮಾಜಮುಖಿಯಾದುದು. ಇಲ್ಲಿ ವ್ಯಕ್ತಿಗಳಿಗೆ ತಮ್ಮ ವ್ಯಕ್ತಿತ್ವ ವಿಕಾಸದ ಜೊತೆಜೊತೆಗೇ ತಮ್ಮ ಸುತ್ತಣ ಪರಿಸರದ ಉದ್ಧಾರವೂ ಮುಖ್ಯವಾಗಿ ಕಂಡಿದೆ. ಎಲ್ಲ ಮಹಾಮಾನವರ ಕಳಕಳಿ ಅವರೆಲ್ಲರ ಮೊದಲ ಆದ್ಯತೆ ಮನುಕುಲದ ಒಳಿತು, ಹಸನಿಗಾಗಿ ಜೀವಿತದುದ್ದಕ್ಕೂ ಹೋರಾಡುವುದೇ ಆಗಿದೆ. ಸಮಷ್ಟಿಯ ನೆಮ್ಮದಿಗಾಗಿ ಹಾತೊರೆಯುವುದು ಅವರ ಸ್ವಭಾವ. ಜನತೆ ಸಂಕಷ್ಟಗಳಲ್ಲಿ, ಮೌಢ್ಯಗಳಲ್ಲಿ ಸಿಲುಕಿ ನರಳುತ್ತಿರುವಾಗ ಸಮಾಜದಲ್ಲಿ ವೈಚಾರಿಕತೆಯನ್ನು, ನೈತಿಕತೆಯನ್ನೂ ಬಿತ್ತಲು ಆಪದ್ಬಾಂಧವರಾಗಿ ಮಹಾನ್ ವ್ಯಕ್ತಿಗಳು ಅವರ ನೋವಿಗೆ ಸ್ಪಂದಿಸುತ್ತಾರೆ. ಅವರ ಬಿಡುಗಡೆಗಾಗಿ ಹಾತೊರೆಯುತ್ತಾರೆ. ಅಂತವರ ಸಾಲಿನಲ್ಲಿ ಬುದ್ಧ, ಬಸವ, ಗಾಂಧಿ ಮತ್ತು ಅಂಬೇಡ್ಕರ್ ಪ್ರಮುಖರಾದವರಾಗಿರುತ್ತಾರೆ.

### ವ್ಯಕ್ತಿಚಿತ್ರ ಕವಿತೆಗಳು : ಸಾಂಸ್ಕೃತಿಕ ಚರಿತ್ರೆಯ ಪುನಾರಚನಾ ಪ್ರಕ್ರಿಯೆಯ ಭಾಗವಾಗಿ

ವ್ಯಕ್ತಿಚಿತ್ರ ಕವಿತೆಗಳು ಸಾಂಸ್ಕೃತಿಕ ಮಹತ್ವವುಳ್ಳ ವ್ಯಕ್ತಿತ್ವಗಳನ್ನು ಪರಂಪರೆ ಮತ್ತು ಸಮಕಾಲೀನ ಸಮಾಜಗಳಿಂದ ಶೋಧಿಸಿಕೊಡುವ ಮಹತ್ವದ ರಚನೆಗಳಾಗಿವೆ. ಇಂಥ ರಚನೆಗಳ ಹಿಂದಿನ ಉದ್ದೇಶ

ಮೌಲ್ಯಯುತ ಬದುಕಿನ ಹುಡುಕಾಟವೇ ಆಗಿದೆ. ವೈಯಕ್ತಿಕವಾಗಿ ನೈತಿಕ ಬದುಕನ್ನು ಸಾಗಿಸಿದ, ಸಮೂದಾಯದ ಬದುಕಿನಲ್ಲಿ ದೊಡ್ಡ ಪಲ್ಲಟಗಳಿಗೆ ಕಾರಣರಾದ, ಮಾನವೀಯ ಮೌಲ್ಯಗಳ ಉಳಿವಿಗಾಗಿ ಹೋರಾಡಿದ, ನೊಂದವರ, ಶೋಷಿತರ ದನಿಯಾದ ವ್ಯಕ್ತಿಗಳ ವ್ಯಕ್ತಿತ್ವವನ್ನು ಅರ್ಥೈಸಿಕೊಳ್ಳುವ, ಮುನ್ನಲೆಗೆ ತರುವ ಕೆಲಸವನ್ನು ಈ ಕವಿತೆಗಳು ಮಾಡುತ್ತಿರುತ್ತವೆ. ಚರಿತ್ರೆ; ಉದಾತ್ತ ವ್ಯಕ್ತಿಗಳ ಬದುಕು – ಸಾಧನೆಗಳನ್ನು ದಾಖಲಿಸುತ್ತಾ ಅವರ ಮೂಲಕ ಉಳಿದವರ ಬದುಕನ್ನು ನೋಡುವ ನೆಲೆಯಲ್ಲಿ ಇದ್ದರೆ; ಸಾಹಿತ್ಯ ಚರಿತ್ರೆಯನ್ನು ನೋಡುವ ಮತ್ತು ಕಟ್ಟುವ ಪ್ರಕ್ರಿಯೆಯೇ ಭಿನ್ನವಾಗಿರುತ್ತದೆ. ಸಾಹಿತ್ಯ ಚರಿತ್ರೆಯ ಬಗೆಗಿನ ಪಶ್ಚಿಮದ ನೋಟಕ್ರಮಗಳನ್ನು ಪಲ್ಲಟಿಸಿ ಈ ನೆಲದ ಸಾಂಸ್ಕೃತಿಕ ಚರಿತ್ರೆಯ ರಚನಾ ಮಾದರಿಗಳನ್ನು ಮುನ್ನಲೆಗೆ ತರುವ ಕೆಲಸ ಮಾಡುತ್ತಿರುತ್ತದೆ. ಚರಿತ್ರೆಯನ್ನು ಮೌಲ್ಯಯುತ ಬದುಕಿನ ಗ್ರಹಿಕೆಯ ಪ್ರಕ್ರಿಯೆಯಾಗಿ ನೋಡುವ ಪ್ರಯತ್ನವನ್ನು ಸಾಹಿತ್ಯ ಮಾಡುತ್ತಿರುತ್ತದೆ. ತಮ್ಮ ಮೌಲ್ಯಯುತ ಬದುಕಿನಿಂದಾಗಿ ಸಮಾಜ, ಸಂಸ್ಕೃತಿಯ ಮೇಲೆ ಪ್ರಭಾವ ಬೀರಿದ, ಸಾಮಾಜಿಕ ವ್ಯಕ್ತಿತ್ವಗಳನ್ನು ರೂಪಿಸಲು ಬದುಕಿನುದ್ದಕ್ಕೂ ಹೋರಾಡಿದ ವ್ಯಕ್ತಿತ್ವಗಳು ಸಾಹಿತ್ಯ ಕಟ್ಟುವ ಸಾಂಸ್ಕೃತಿಕ ಚರಿತ್ರೆಯ ವಸ್ತುವಾಗಿರುತ್ತಾರೆ. ಇಲ್ಲಿ ವ್ಯಕ್ತಿಗಳ ಅಧಿಕಾರ, ಸಂಪತ್ತು, ಭೌತಿಕ ಸಾಧನಗಳಿಗಿಂತ ಅವರ ಮಾನವೀಯ ಮುಖಗಳು, ಮೌಲ್ಯಯುತ ಬದುಕು ಹಾಗೂ ಸಮುದಾಯದೊಂದಿಗಿನ ಅವರ ಸಂಬಂಧದ ನೆಲೆಗಳು ಮುಖ್ಯವಾಗುತ್ತವೆ. ಹಾಗಾಗಿ ಸಾಹಿತ್ಯ ಆಯ್ಕೆ ಮಾಡಿಕೊಳ್ಳುವ ವ್ಯಕ್ತಿತ್ವಗಳು ಜೀವಪರವಾಗಿ ತುಡಿಯುತವ, ಮಾನವೀಯ ಮೌಲ್ಯಗಳಿಗಾಗಿ ಹಂಬಲಿಸುವ ಯಾರು ಬೇಕಾದರೂ ಆಗಬಹುದು.

ಈ ಹಿನ್ನೆಲೆಯಲ್ಲಿ ಆಧುನಿಕ ಕನ್ನಡ ಕಾವ್ಯದ ವ್ಯಕ್ತಿಚಿತ್ರ ಕವಿತೆಗಳನ್ನು ನೋಡಬಹುದು. ಕವಿತೆಗಳನ್ನು ಒಂದು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟುವ ಪ್ರಯತ್ನದ ಭಾಗವಾಗಿ ನೋಡಲು ಸಾಧ್ಯವಿದೆ. ತಮ್ಮ ಬದುಕು, ವಿಚಾರಗಳಿಂದ ಶ್ರೇಷ್ಠವಾಗಿ ಬದುಕಿದ, ತಮ್ಮೆದುರಿನ ಸಾಂಸ್ಕೃತಿಕ ಬದುಕನ್ನು ರೂಪಿಸುವ ಹೊಣೆಗಾರಿಕೆಯನ್ನು ನಿಭಾಯಿಸಿದ ವ್ಯಕ್ತಿಗಳ ಬಹುಮುಖ ವ್ಯಕ್ತಿತ್ವವನ್ನು ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಕವಿತೆಗಳು ಮಾಡಿವೆ. ಆ ಮೂಲಕ ತಮ್ಮ ನಾಗರೀಕತೆಯ ವಿಕಾಸಪಥವನ್ನು, ಅದನ್ನು ಪ್ರಭಾವಿಸಿದ, ಪ್ರಭಾವಿಸುತ್ತಿರುವ ವ್ಯಕ್ತಿತ್ವಗಳನ್ನು ದಾಖಲಿಸುವ, ಮುನ್ನೆಲೆಗೆ ತರುವ, ಸಮುದಾಯದ ಬದುಕಿಗೆ ರವಾನಿಸುವ ಕೆಲಸವನ್ನು ಮಾಡುತ್ತವೆ.

ಆಧುನಿಕ ಕನ್ನಡ ಕಾವ್ಯ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸಿರುವ ವಿಧಾನಗಳು ಮತ್ತು ಆ ವಿಧಾನಗಳನ್ನು ಪ್ರಭಾವಿಸಿರುವ ಸಾಂಸ್ಕೃತಿಕ ಶಕ್ತಿಗಳನ್ನು ಕವಿತೆಗಳ ವಿಶ್ಲೇಷಣೆಯ ಮೂಲಕ ಕಂಡುಕೊಳ್ಳುವ ಪ್ರಯತ್ನ ಈ ಅಧ್ಯಯನದ್ದಾಗಿದೆ. ಆಧುನಿಕ ಸಂದರ್ಭದ ಪರಿಭಾಷೆ ಮತ್ತು ಪರಿಕಲ್ಪನೆಗಳು ಈ ವ್ಯಕ್ತಿತ್ವಗಳನ್ನು ಗ್ರಹಿಸುವಲ್ಲಿ ಬಳಕೆಯಾಗಿರುವ ಬಗೆಯನ್ನು, ಬೇರೆ ಬೇರೆ ಜ್ಞಾನಶಾಖೆಗಳು ಈ ವ್ಯಕ್ತಿತ್ವಗಳ ಬಗೆಗೆ ಒದಗಿಸುವ ವಿಚಾರಗಳು ಕಾವ್ಯ ಪ್ರಕಾರದಲ್ಲಿ ಪಡೆಯಬಹುದಾದ ಹೊಸ ಅರ್ಥಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಕನ್ನಡ ಕಾವ್ಯಗಳಲ್ಲಿ ವ್ಯಕ್ತಿಚಿತ್ರ ಕವಿತೆಗಳು ಕೇವಲ ವ್ಯಕ್ತಿ ಕುರಿತ ರಚನೆಗಳಾಗಿ ನಿಲ್ಲದೆ ಅದನ್ನು ಮೀರಿ ಸಮಕಾಲೀನ ರಾಜಕೀಯ ಮತ್ತು ಸಾಂಸ್ಕೃತಿಕ ಪ್ರಶ್ನೆ, ಸವಾಲು, ಆತಂಕ, ಅರಾಜಕತೆಗಳಿಗೆ ಪ್ರತಿಕ್ರಿಯೆಗಳಾಗಿಯೂ ಹಾಗೂ ಕವಿಗಳ ರಾಜಕೀಯ, ಸಾಂಸ್ಕೃತಿಕ ಪ್ರಜ್ಞೆ–ನಿಲುವುಗಳ ಪ್ರಕಟಣೆಯ ಸಾಧನಗಳಾಗಿಯೂ ಅಭಿವ್ಯಕ್ತಿ ಪಡೆದಿರುವುದನ್ನು ಅರ್ಥೈಸಿಕೊಳ್ಳುವ, ವಿಮರ್ಶಿಸುವ ಉದ್ದೇಶದಿಂದ

**'ಹೊಸಗನ್ನಡ ಕಾವ್ಯ : ವ್ಯಕ್ತಿತ್ವ ಶೋಧದ ನೆಲೆಗಳು'** ಎಂಬ ವಿಷಯವನ್ನು ಕುರಿತು ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಕೊನೆ ಟಿಪ್ಪಣಿ :**

೧. ಜಿ.ಎಸ್.ಎಸ್. ಸಮಗ್ರ ಗದ್ಯ ೫, ಜಿ.ಎಸ್.ಎಸ್., ಪು. ಸಂ. ೧೧೧,

೨. ಸ್ತ್ರೀಮತವನುತ್ತರಿಸಲಾಗದೇ, ಎಂ.ಎಸ್. ಆಶಾದೇವಿ, ಪು. .ಸಂ. ೬೮

# ಅಧ್ಯಾಯ ೪

## ಬುದ್ಧನ ವ್ಯಕ್ತಿತ್ವ ಶೋಧ : ಕರುಣೆಯ ಬೆಳಕು

೪.೧ ಬುದ್ಧನ ವ್ಯಕ್ತಿತ್ವ: ತಾತ್ವಿಕ ಗ್ರಹಿಕೆ

೪.೨ ಆಧುನಿಕ ಕನ್ನಡ ಕಾವ್ಯ ಕಂಡ ಬುದ್ಧ : ಹಿಂಸೆ, ಯುದ್ಧ, ಮತ್ತು ಆಧುನಿಕ ವಿಕಾರಗಳೊಂದಿಗೆ ಮುಖಾಮುಖಿ

೪.೨.೧ ಬುದ್ಧನ ವ್ಯಕ್ತಿತ್ವದ ಅನನ್ಯತೆಯ ಶೋಧ

೪.೨.೨ ಬುದ್ಧನ ಮೌನ ಮತ್ತು ನಗು : ತಾತ್ವಿಕ ಜಿಜ್ಞಾಸೆಯ ಪರಿಕರಗಳಾಗಿ

೪.೨.೩ ಬುದ್ಧನ ವ್ಯಕ್ತಿತ್ವ : ಸಾಂಸ್ಕೃತಿಕ ಮುಖಾಮುಖಿ

೧. ಸ್ವವಿಮರ್ಶೆ ಮತ್ತು ಸಾಂಸ್ಕೃತಿಕ ವಿಡಂಬನೆಯ ಅಸ್ತ್ರವಾಗಿ

೨. ಯಶೋಧರೆಯ ನೆಲೆಯಿಂದ

೪.೨.೪ ಬುದ್ಧ : ಜಗತ್ತಿನ ಮುಂದಿರುವ ಅಂತಿಮ ಆಯ್ಕೆಯಾಗಿ

# ಅಧ್ಯಾಯ : ೪

# ಬುದ್ಧನ ವ್ಯಕ್ತಿತ್ವ ಶೋಧ : ಕರುಣೆಯ ಬೆಳಕು

## ೪.೧ ಬುದ್ಧನ ವ್ಯಕ್ತಿತ್ವ : ತಾತ್ವಿಕ ಗ್ರಹಿಕೆ

ಬುದ್ಧ ಕ್ರಿ.ಪೂ. ೫ನೇ ಶತಮಾನದಲ್ಲಿ ಬದುಕಿದ್ದ ಚಾರಿತ್ರಿಕ ವ್ಯಕ್ತಿ. ಬುದ್ಧನ ಜನನವಾದದ್ದು ಕ್ರಿ.ಪೂ. ೫೪೪ನೆ ವರ್ಷದಲ್ಲಿ. ಬುದ್ಧನ ಜನನ, ಜ್ಞಾನೋದಯ ಮತ್ತು ಪರಿನಿರ್ವಾಣವಾದದ್ದು ವೈಶಾಖ ಶುಕ್ಲ ಪೂರ್ಣಿಮಾ ದಿನದಂದು. ತಂದೆ ಶುದ್ಧೋಧನ ಮಹಾರಾಜ. ತಾಯಿ ಮಾಯಾದೇವಿ. ಸಾಕುತಾಯಿ ಗೌತಮಿ. ಮಾನವ ಜನಾಂಗದ ದುಃಖಕ್ಕೆ ಕಾರಣ ಹುಡುಕುತ್ತಾ, ತನ್ನ ರಾಜ್ಯ, ಸಂಪತ್ತು, ವೈಭೋಗ ಜೀವನ, ಸುಖ ಸಂಸಾರ ಎಲ್ಲವನ್ನೂ ತೊರೆದು ಕಾಡಿಗೆ ನಡೆದ ಬುದ್ಧ ಮಹಾಜ್ಞಾನವನ್ನು ಪಡೆದು ಮರಳಿ ಜನರೆಡೆಗೆ ನಡೆಯುತ್ತಾನೆ. ಪ್ರಾಪಂಚಿಕ ಸತ್ಯದ ಅರಿವನ್ನು ಮೂಡಿಸುತ್ತಾ ಬೆಳಕಾಗಿ ಜಗವನ್ನೇ ಬೆಳಗುತ್ತಾನೆ.

ಬುದ್ಧನ ಬದುಕು ಹಾಗು ಪ್ರತಿಪಾದನೆಗಳ ಆಧಾರದಿಂದ ಅವನ ವ್ಯಕ್ತಿತ್ವವನ್ನು ಕಂಡುಕೊಳ್ಳಲು ಹೊರಡುವವರಿಗೆ ಅವನಲ್ಲಿ ಪ್ರಧಾನವಾಗಿ ಕಂಡುಬರುವ ಗುಣಗಳು ತಾಯ್ತನ, ವೈಚಾರಿಕತೆ, ನಿಸರ್ಗ ವಿವೇಕಗಳಾಗಿವೆ. ಮಾನವತೆ ತನ್ನೊಳಗೆ ರೂಢಿಸಿಕೊಳ್ಳಬಹುದಾದ ಎಲ್ಲಾ ಶ್ರೇಷ್ಠ ಗುಣಗಳನ್ನು ಮೈಗೂಡಿಸಿಕೊಂಡ ವ್ಯಕ್ತಿತ್ವ ಬುದ್ಧನದು. ಹಾಗಾಗಿಯೇ ಬುದ್ಧನದು ತಾಯ್ತನದಿಂದ ಎಲ್ಲರನ್ನು ಸೆಳೆದುಕೊಳ್ಳುವ ವ್ಯಕ್ತಿತ್ವವಾಗಿದೆ. ದೊಡ್ಡ ಕಾಲದ ಅಂತರದಲ್ಲಿ, ವ್ಯಾಪಕವಾಗಿ ಕನ್ನಡ ಕಾವ್ಯ ಬುದ್ಧನನ್ನು ಮುಖಮುಖಿಯಾಗುತ್ತಿರುವುದು ಆ ತಾಯ್ತನದ ಪ್ರೀತಿಗಾಗಿಯೇ ಮತ್ತು ಪ್ರೀತಿಯಿಂದಲೇ ಎನ್ನುವುದು ಬುದ್ಧನ ವ್ಯಕ್ತಿತ್ವದ ಅನನ್ಯತೆಯನ್ನು ತೋರಿಸುತ್ತದೆ. ಬುದ್ಧನ ವ್ಯಕ್ತಿತ್ವದ ಹಲವು ಮುಖಗಳನ್ನು, ಅವನ ಪ್ರತಿಪಾದನೆಗಳ ಮಾನವೀಯ ಕಾಳಜಿಗಳ ಹಿನ್ನೆಲೆಯಲ್ಲಿ ಮುಂದಿನಂತೆ ವಿಶ್ಲೇಷಿಸಲಾಗಿದೆ.

ಬುದ್ಧನ ವ್ಯಕ್ತಿತ್ವದ ಪ್ರಧಾನ ಲಕ್ಷಣವೆಂದರೆ ಕರುಣೆ ಮತ್ತು ಅರಿವು. ಇವುಗಳಿಂದ ಧಾರ್ಮಿಕ ಮತ್ತು ಸಾಮಾಜಿಕ ಪರಿವರ್ತನೆಯನ್ನು ತರಲು ಪ್ರಯತ್ನಿಸುತ್ತಾನೆ. ತಾನು ಕಂಡುಕೊಂಡ ಪ್ರಾಪಂಚಿಕ ಜ್ಞಾನದ ಅರಿವಿನಿಂದ ಜಗತ್ತನ್ನು ಆವರಿಸಿದ್ದ ಮೋಹವೆಂಬ ಕತ್ತಲೆಯನ್ನು ಬೆಳಕಾಗಿಸಲು ಪ್ರಯತ್ನಿಸುತ್ತಾನೆ. ಬುದ್ಧ ಭಾರತದ ಇತಿಹಾಸ ಕಂಡ ಮೇರು ವ್ಯಕ್ತಿತ್ವ. ಸಹನಶೀಲ ಗುಣಗಳಿಂದ ಬದುಕನ್ನು ಕುರಿತು ಆಲೋಚನೆಗೆ ತೊಡಗಿದ ಬಹುಮುಖ್ಯ ದಾರ್ಶನಿಕ ವ್ಯಕ್ತಿ. ವೈಚಾರಿಕ ವಿವೇಕದ ಎಚ್ಚರದಿಂದ ತನ್ನ ಕಾಲದ ಜನರ ಬದುಕನ್ನು ಬದಲಾಯಿಸಲು ತೊಡಗಿದ ಕ್ರಾಂತಿಕಾರಿ. ಬುದ್ಧ ಮೊದಲ ಬಾರಿಗೆ ವೈದಿಕ ಧರ್ಮವನ್ನು ಅದರ ಅವೈಚಾರಿಕ ಅಂಗಗಳಾದ ವರ್ಣವ್ಯವಸ್ಥೆ, ಜಾತಿ ಪದ್ಧತಿ, ಮೌಢ್ಯತೆ, ವಿಧಿವಾದ, ಕರ್ಮವಾದ, ದೇವರು, ಭಕ್ತಿ, ಮೋಕ್ಷ, ಆಹಾರ ಮುಂತಾದವುಗಳಿಗೆ ಸಂಬಂಧಿಸಿದ ನಿರ್ವಚನಗಳನ್ನು ವೈಚಾರಿಕ ಪ್ರಜ್ಞೆಯೊಂದಿಗೆ ಮುಖಾಮುಖಿಯಾಗುತ್ತಾನೆ. ಮಾನವ ನಾಗರೀಕತೆಯನ್ನು ಅದುವರೆಗೂ ಆವರಿಸಿಕೊಂಡಿದ್ದ ಅಜ್ಞಾನ,

ಮಿಥ್ಯಾಲೋಚನೆ, ಅರ್ಥಹೀನ ನಂಬಿಕೆಗಳ ತೊಳಲಾಟಗಳಿಂದ ಬಿಡುಗಡೆಗೊಳಿಸಲು ಮೊಟ್ಟಮೊದಲ ಬಾರಿಗೆ ಪ್ರಯತ್ನಿಸಿದ. ಅಲ್ಲದೆ ತನ್ನ ಸುತ್ತಲ ಸಮುದಾಯವನ್ನು ಆವರಿಸಿಕೊಂಡಿದ್ದ ಜಂಜಡಗಳಿಂದ ಬಿಡುಗಡೆಗೊಳಿಸಿ ನಿಸರ್ಗಕ್ಕೆ ಹತ್ತಿರವಾಗಿಸುವ, ಬದುಕಿನ ಸತ್ಯಾಸತ್ಯತೆಗಳನ್ನು ಒರೆಗೆ ಹಚ್ಚುವ ವಿವೇಕವನ್ನು ಮೂಡಿಸುವ ನಿಟ್ಟಿನಲ್ಲಿ ಹಲವು ಕಾರ್ಯಯೋಜನೆಗಳನ್ನು ರೂಪಿಸಿದ್ದನು.

ಬುದ್ಧ ಮನುಷ್ಯನ ಅಪರಾಧ, ಕ್ರೌರ್ಯ, ಅನ್ಯಾಯಗಳಿಗೂ, ಬಡತನಕ್ಕೂ ಸಂಬಂಧ ಕಲ್ಪಿಸುತ್ತಾನೆ. ಬಡತನ ನಿವಾರಣೆಯ ಮೂಲಕ ಇವುಗಳನ್ನು ನಿಯಂತ್ರಿಸಲು ಸಾಧ್ಯ ಎಂದು ಹೇಳಿದ. ಶ್ರೀಮಂತಿಕೆಯ ದಾಹ, ಸ್ವಾರ್ಥ ಶೋಷಣೆಯ ಬಗೆಗೂ ಹೇಳುತ್ತಿದ್ದ. ಇದರ ನಿವಾರಣೆಗೆ ಬುದ್ಧ ಸಂಘರ್ಷವನ್ನು ಪ್ರತಿಪಾದಿಸಲಿಲ್ಲ. ಸಂಯಮವನ್ನು ಪ್ರತಿಪಾದಿಸಿದ. ಮಾರ್ಕ್ಸ್ ಕೂಡ ಇದನ್ನು ಗುರುತಿಸುತ್ತಾನಾದರೂ ಇದರ ನಿವಾರಣೆಗೆ ವರ್ಗ ಸಂಘರ್ಷದ ಕ್ರಾಂತಿಯ ಮೂಲಕ ಆಗಬಹುದಾದ ರಾಜಕೀಯ ಅಧಿಕಾರದ ಪಲ್ಲಟದ ಬಗ್ಗೆ ಅವನಿಗೆ ವಿಶ್ವಾಸ. ಗಾಂಧಿಯೂ ಕೂಡ ಇದರ ನಿವಾರಣೆಗೆ ಸಂಯಮದ, ಧರ್ಮದರ್ಶಿತ್ವದ ಪರ ನಿಲ್ಲುತ್ತಾರೆ. ಬುದ್ಧ ಮತ್ತು ಗಾಂಧಿ ಇವರಿಬ್ಬರೂ ಸೈನ್ಯ ಶಕ್ತಿಯ ಅಧಿಕಾರದಿಂದ ಆಗದ ದೊಡ್ಡ ಬದಲಾವಣೆಗಳನ್ನು 'ಪ್ರೀತಿ', 'ವಿಶ್ವಾಸ'ದಿಂದ ತರಲು ಸಾಧ್ಯ ಎಂದು ಗಾಢವಾಗಿ ನಂಬಿದ್ದರು. ಇವರು ತಮ್ಮ ಜೀವಿತದ ಕಾಲದಲ್ಲೇ ಅದನ್ನು ಕಾರ್ಯರೂಪಕ್ಕೆ ಇಳಿಸಿದ್ದರು ಎಂಬುದು ಇಂದು ನಮಗೆ ಆಶ್ಚರ್ಯ ಮತ್ತು ಅಸಾಧ್ಯ ಎಂಬಂತೆ ಕಂಡರೂ ಅದು ಸತ್ಯ.

ಬುದ್ಧ ಪ್ರಾಪಂಚಿಕ ಸತ್ಯಗಳನ್ನು ಅವುಗಳ ಕಾರ್ಯಕಾರಣ ಸಂಬಂಧಗಳ ನೆಲೆಯಲ್ಲಿ ಅರಿತ ಜ್ಞಾನಿಯಾಗಿದ್ದನೇ ಹೊರತು ಒಣ ಪಾಂಡಿತ್ಯದ ವಿದ್ವಾಂಸನಾಗಿರಲಿಲ್ಲ. ವಾದಕ್ಕಿಳಿದು ಇನ್ನೊಬ್ಬರ ಮುಖಭಂಗಮಾಡುವ ಗೊಡ್ಡು ಪಾಂಡಿತ್ಯಕ್ಕಿಂತ ಸತ್ಯದ ದಾರಿ ತೋರುವ ಜ್ಞಾನಿಯಾಗಿದ್ದ. ಹಾಗಾಗಿಯೆ ಬುದ್ಧನ ಎದುರಿಗೆ ವಾದಕ್ಕೆ ಬಂದ ಪಂಡಿತರು ಸೋಲನ್ನು ಒಪ್ಪುವ ಜೊತೆಗೆ ಬುದ್ಧನ ಅನುಯಾಯಿಗಳೂ ಆಗುತ್ತಾರೆ. ಬುದ್ಧ ಸೃಷ್ಟಿಮೂಲ ಸತ್ಯಗಳನ್ನು ಅರಿತವನಾದದ್ದರಿಂದ ಆತನ ಮಾತು, ನೋಟ, ಮನಸ್ಸು ಅಪಾರವಾದ ನಿಸರ್ಗ ವಿವೇಕದಿಂದ ಕೂಡಿದ್ದವು. ಪ್ರಕೃತಿ ಮಾತೆಯ ಕರುಣೆ, ಜೀವನ ಪ್ರೇಮಗಳೇ ಮೈವೆತ್ತಂತೆ ಇದ್ದ ಬುದ್ಧನಲ್ಲಿ ಲಂಕೇಶರು ನಿಸರ್ಗಕ್ಕೆ ಹತ್ತಿರವಾದ ಗುಣಗಳನ್ನು ಗುರುತಿಸುತ್ತಾರೆ. "ಗೌತಮನ ಮನುಷ್ಯತ್ವ ಹಾಸ್ಯ, ರಸಿಕತೆ, ಭೂತದಯೆ, ಜೀವನ ಪ್ರೇಮವನ್ನು ಒಳಗೊಂಡಿತ್ತು. ಆತ ತಾನು ಕಂಡ ನದಿ, ಬೆಟ್ಟ, ಕಾಡುಗಳನ್ನು, ತನ್ನ ಪ್ರೀತಿಯ ಸ್ಥಳಗಳನ್ನು ಕುರಿತು ಭಾವುಕವಾಗಿ ಮಾತನಾಡುತ್ತಿದ್ದ. ಅನೇಕ ಸಲ ನೀನು ಈ ಭೂಮಿಯಲ್ಲಿ ಸ್ವರ್ಗ ಕಾಣಬೇಕೆಂದಿದ್ದರೆ ಈ ಜಿಲ್ಲೆಯ ಗಿರಿಜನರ ಹೆಣ್ಣುಮಕ್ಕಳನ್ನು ನೋಡು ಎಂದು ಹೇಳಬಲ್ಲವನಾಗಿದ್ದ"[6] ಎನ್ನುವ ಮಾತುಗಳು ಬುದ್ಧನಿಗಿದ್ದ ಅಗಾಧ ಜೀವನ ಪ್ರೀತಿಯನ್ನೂ, ಸೌಂದರ್ಯಪ್ರಜ್ಞೆಯನ್ನೂ ಗುರುತಿಸುತ್ತವೆ.

ಬುದ್ಧ ತನ್ನ ಕಾಲದ ಮಾನವ ಸಮೂದಾಯವನ್ನು ಲೋಕದ ಜಂಜಡಗಳಿಂದ ಬಿಡುಗಡೆಗೊಳಿಸಿ ಶಾಂತಿ, ನೆಮ್ಮದಿಯ ಬದುಕನ್ನು ಬಾಳುವಂತಾಗಲು ಶ್ರಮಿಸಿದನು. ತಾನು ಕಂಡುಕೊಂಡ ನಿಸರ್ಗ ವಿವೇಕವನ್ನು, ಬದುಕಿನ ಅರ್ಥವನ್ನು ತನ್ನ ಜನರಿಗೆ ತಲುಪಿಸುವ ಕೆಲಸದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದನು. ಅದಕ್ಕಾಗಿ ಬಿಕ್ಕುಸಂಘವನ್ನು ಕಟ್ಟಿ ಮಾನವನ ದುಃಖ, ನೋವು, ಸಂಕಟಗಳನ್ನು ನಿವಾರಿಸಲು ಪ್ರಯತ್ನಿಸಿದನು. ಬುದ್ಧನ ಮೂಲಭೂತ ಹುಡುಕಾಟಗಳು ಮನುಷ್ಯ ತನ್ನ ಬಡತನ, ರೋಗ, ಸಾವು, ನೋವು, ಅನ್ಯಾಯಗಳನ್ನು

ಗೆಲ್ಲುವ ಸಾಧ್ಯತೆಗಳನ್ನು ಕುರಿತದ್ದಾಗಿದ್ದವು. ನಿರ್ವಾಣ, ಮೋಕ್ಷ ಸಾಧ್ಯವೇ ಎಂದು ದೇವರ ಅಸ್ತಿತ್ವಕ್ಕಾಗಿ ತಡಕಾಡ ತೊಡಗಿದ. ಜೊತೆಗೆ ಮೌಢ್ಯ, ಶೋಷಣೆಯೇ ಮುಖ್ಯ ಗುರಿಯಾಗಿರುವ ವೈದಿಕ ಧರ್ಮವನ್ನು ಸಕಾರಣವಾಗಿಯೆ ವಿರೋಧಿಸಿ ಅದರ ಸ್ಥಾನದಲ್ಲಿ ಜೀವ ಪ್ರೀತಿಯ, ನಿಸರ್ಗ ಸಹಜ ಬದುಕಿನ ಕ್ರಮವನ್ನು ಪ್ರತಿಪಾದಿಸಿದ. ಬುದ್ಧ ಪ್ರತಿಪಾದಿಸಿದ ಈ ಹೊಸ ಬದುಕಿನ ಕ್ರಮ ಅಪಾರ ಜನಸಮುದಾಯವನ್ನೂ, ರಾಜ ಮಹಾರಾಜರನ್ನು ಆಕರ್ಷಿಸಿದ್ದು, ಅವರ ಬದುಕಿನ ಪರಿವರ್ತನೆಗೆ ಕಾರಣವಾಗಿದ್ದು ಚರಿತ್ರೆಯಿಂದ, ಬುದ್ಧನ ಕುರಿತಾದ ಕಥಾನಕಗಳಿಂದ ತಿಳಿದುಬರುತ್ತದೆ.

ಮೊದಲಿಗೆ ಒಂದು ಪ್ರಜಾಸತ್ತಾತ್ಮಕವಾದಂಥ ಬೆಳಕನ್ನು ಮೂಡಿಸಿದಂಥವನು ಬುದ್ಧ. ಅವನ ತಾತ್ವಿಕ ಭಿತ್ತಿಯಲ್ಲಿ ಪ್ರಜಾತತ್ವದ ಶ್ರೀಕಾರವನ್ನು ಕಾಣಬಹುದು. ಅಲ್ಲಿ ಕರುಣೆ, ಸಮಾನತೆ, ಪ್ರೀತಿ, ಪ್ರಜ್ಞೆ ಈ ಎಲ್ಲ ಅಮೂಲ್ಯ ಗುಣಗಳಿವೆ. ಆದರೆ ಭಾರತೀಯ ಸಮಾಜ ಇದನ್ನು ಸಮರ್ಥವಾಗಿ ಬಳಸಿಕೊಂಡಿಲ್ಲ. ಬುದ್ಧನು ಪ್ರತಿಪಾದಿಸಿದ ಜೀವನ ಕ್ರಮಗಳು ಸಾಂಸ್ಕೃತಿಕ ಬದುಕಿನ ಭಾಗವಾಗಿದ್ದಿದ್ದರೆ ಭಾರತೀಯ ನಾಗರೀಕತೆಯಲ್ಲಿ ಇಂದು ಶೋಷಣೆಯ ವಿರಾಟ್ ಶಕ್ತಿಗಳಾಗಿ, ಮೂಢನಂಬಿಕೆಯ ಆಗರಗಳಾಗಿ, ಬದುಕಿನ ಜೀವಂತಿಕೆಯನ್ನೇ ನಾಶಮಾಡುತ್ತಿರುವ ದೇವಸ್ಥಾನ, ಮಠ ಮತ್ತು ಪುರೋಹಿತ ಶಕ್ತಿಗಳಂತಹ ಸಂಸ್ಥೆಗಳು ಹುಟ್ಟುತ್ತಿರಲಿಲ್ಲವೇನೊ ಎಂದೆನಿಸುತ್ತದೆ. ಬುದ್ಧ ಪ್ರತಿಪಾದಿಸಿದ ಭಾರತೀಯ ಸಂಸ್ಕೃತಿಯ ಬಹುದೊಡ್ಡ ಮೌಲ್ಯಗಳಾದ ಧ್ಯಾನ ಮತ್ತು ಪ್ರಜ್ಞೆಗಳು ನಮ್ಮ ಬದುಕಿನ ಪ್ರಧಾನಧಾರೆಯಾಗಿ ಉಳಿಯದೆ ಬಂದಿರುವುದಕ್ಕೆ ವೈದಿಕಶಾಹಿ ಪ್ರಭಾವವೆ ಕಾರಣ. ಹಾಗಾಗಿ ಭಾರತೀಯ ಜನಸಮುದಾಯ ಬುದ್ಧ ಧರ್ಮದ ಬಗ್ಗೆಯಾಗಲೀ, ಇನ್ನಾವುದೇ ಪ್ರಗತಿಪರ ಧರ್ಮದ ಬಗ್ಗೆಯಾಗಲೀ ಆಳವಾದ ಚಿಂತನೆ ನಡೆಸಿಲ್ಲ. ವೈದಿಕೀಕರಣದ ಹುನ್ನಾರಗಳನ್ನು ಬುದ್ಧನಂತೆ ಆತನ ನಂತರ ಬಲವಾಗಿ ವಿರೋಧಿಸಲಿಲ್ಲಿ. ನಮ್ಮ ಜನರಿಗೆ ತಮ್ಮನ್ನು ಆವರಿಸಿಕೊಂಡಿರುವ ಸಾಂಸ್ಕೃತಿಕ ಒತ್ತಡಗಳಿಂದ ಹೊರಬರಲು ಸಾಧ್ಯವಾಗದಿರುವುದು ಇದಕ್ಕೆ ಕಾರಣವಾಗಿರಬಹುದು.

ಬುದ್ಧ ಬೋಧಿಸಿದ ಸಿದ್ಧಾಂತಗಳು ಅತ್ಯಂತ ಸರಳ ಹಾಗೂ ಜನಪರವಾಗಿದ್ದವು. ಅವನು ಅತಿಯಾದ ಸುಖ ಭೋಗಲಾಲಸೆಯಿಂದ ಕೂಡಿದ ಜೀವನ ಹಾಗೂ ದೇಹದ ಅತಿಯಾದ ದಂಡನೆ ಈ ಎರಡೂ ಅತಿರೇಕಗಳನ್ನು ತೊರೆದು 'ಮಧ್ಯಮ ಮಾರ್ಗ'ವನ್ನು ಅನುಸರಿಸುವಂತೆ ಬೋಧಿಸಿದ. ಪ್ರತಿಯೊಬ್ಬ ವ್ಯಕ್ತಿಯೂ ಸಚ್ಚಾರಿತ್ರ್ಯವನ್ನು ರೂಢಿಸಿಕೊಳ್ಳಬೇಕು ಇದಕ್ಕಾಗಿ ಅವರು ಸುಖ ಮತ್ತು ಸ್ವಾರ್ಥವನ್ನು ತ್ಯಾಗ ಮಾಡಬೇಕಾಗುತ್ತದೆ. ಪ್ರಾಮಾಣಿಕತೆ ತನ್ನದೇ ಆದ ಪ್ರಜ್ಞೆ, ಏಕಾಗ್ರತೆ ಮತ್ತು ಶೀಲಗಳನ್ನು ಹೊಂದಿರಬೇಕಾಗುತ್ತದೆ. ಬದುಕಿನ ಮೂಲಗುರಿ, ಉದ್ದೇಶ ಮತ್ತು ಧ್ಯೇಯಗಳನ್ನು ಅರಿಯಬೇಕು. ಹುಟ್ಟು ಮತ್ತು ಸಾವಿನ ನಡುವಿನ ಕರ್ಮ ಸಿದ್ಧಾಂತವನ್ನು ಅದರ ನಿಜಸ್ವರೂಪದಲ್ಲಿ ಅರಿಯಬೇಕು, ಸುಖ-ದುಃಖವನ್ನು ಸಮಾನಾಂತರವಾಗಿ ಕಾಣಬೇಕು. ಅವುಗಳನ್ನು ಮೀರಿ ಬೆಳೆಯಬೇಕು ಇವು ಬುದ್ಧ ಬೋಧಿಸಿದ ಮಧ್ಯಮ ಮಾರ್ಗದ ನಿಲುವುಗಳು.

ಬುದ್ಧ ಲೋಕಕ್ಕೆ ನೀಡಿದ ಅನನ್ಯ ಕೊಡುಗೆ ಎಂದರೆ ದುಃಖ, ದುಃಖಕ್ಕೆ ಕಾರಣ, ದುಃಖ ನಿವಾರಣೆ ಮತ್ತು ನಿವಾರಣೆಯ ಮಾರ್ಗಗಳು ಎಂಬ ನಿತ್ಯ ಸತ್ಯಗಳನ್ನು ಕಂಡುಕೊಂಡಿದ್ದು. ಬುದ್ಧ ಹೇಳಿದ ಈ ವೈಚಾರಿಕ ಸತ್ಯಗಳು ಮೂರು ಆಧಾರ ಸ್ಥಂಭಗಳ ಮೇಲೆ ನಿಂತಿವೆ. ೧. ಅಶಾಶ್ವತತೆ ೨.ದುಃಖ ಸತ್ಯ ೩. ಅನಸ್ಥ (ದುರಾಸೆ ಬೇಡ). ದುಃಖ ನಿವಾರಣೆಗೆ ಅನುಸರಿಸಬೇಕಾದ ಮಾರ್ಗವನ್ನು 'ಅಷ್ಟಾಂಗ ಮಾರ್ಗ'ವೆಂದು

ಗುರುತಿಸುತ್ತಾನೆ. ಅವುಗಳೆಂದರೆ ಸರಿಯಾದ ತಿಳುವಳಿಕೆ, ಸರಿಯಾದ ಯೋಚನೆ, ಸರಿಯಾದ ಮಾತು, ಸರಿಯಾದ ಕರ್ಮ, ಸರಿಯಾದ ಜೀವನೋಪಾಯ, ಸರಿಯಾದ ಪ್ರಯತ್ನ, ಸರಿಯಾದ ಜಾಗೃತಿ ಮತ್ತು ಸರಿಯಾದ ಧ್ಯಾನ. ಇವುಗಳನ್ನು ಅನುಷ್ಠಾನಕ್ಕೆ ತರುವ ಸಲುವಾಗಿ ಪಂಚಶೀಲಗಳನ್ನು ಪೂರಕವಾಗಿ ಬೋಧಿಸುತ್ತಾನೆ. ಅವುಗಳೆಂದರೆ ಪ್ರಾಣಿಹತ್ಯೆ ಮತ್ತು ಕಳ್ಳತನ ಮಾಡದಿರುವುದು. ಅನೈತಿಕ ಸಂಬಂಧ ಹೊಂದದೆಯಿರುವುದು, ಸುಳ್ಳು ಚಾಡಿ ಮುಂತಾದವುಗಳಲ್ಲಿ ಕಾಲಹರಣ ಮಾಡದೆ ಇರುವುದು, ಮಧ್ಯಪಾನ ಸೇವಿಸದೆ ಇರುವುದು. ದುಃಖವನ್ನು ಗೆಲ್ಲಲು, ಆ ಮೂಲಕ ನೆಮ್ಮದಿಯ ಬದುಕನ್ನು ರೂಪಿಸಿಕೊಳ್ಳಲು ಮನುಷ್ಯನು ಅನುಸರಿಸಬಹುದಾದ ಸರಳ ಹಾಗೂ ಅಂತಿಮವಾದ ಈ ಮೇಲಿನ ಮಾರ್ಗಗಳನ್ನು ತಿಳಿಸಿಕೊಟ್ಟ ಬುದ್ಧ ಬದುಕಿನ ಸಮಸ್ಯೆಗಳ ನಿವಾರಣೆಯ ಬಗೆಗಾಗಲಿ, ಅದರಿಂದ ಪಲಾಯನ ಹೊಂದುವ ಬಗ್ಗೆಯಾಗಲಿ, ಅವುಗಳಿಗೆಲ್ಲಾ ಧಾರ್ಮಿಕ ಪರಿಹಾರಗಳಿವೆ ಎಂಬ ನೆಲೆಯಲ್ಲಾಗಲಿ ಮಾತನಾಡುವುದಿಲ್ಲ. ಅವೆಲ್ಲವೂ ಸಹಜ ಎಂದು ಒಪ್ಪಿಸುತ್ತಲೇ ಅವುಗಳನ್ನು ನಿಯಂತ್ರಿಸಬಹುದಾದ ಮಾರ್ಗಗಳನ್ನಷ್ಟೇ ಶೋಧಿಸಿಕೊಟ್ಟ, ಯುದ್ಧ, ಹಿಂಸೆ, ಶೋಷಣೆ, ಬಡತನ, ದುಃಖ ಇವೆಲ್ಲವುಗಳಿಂದ ನೆಮ್ಮದಿಯನ್ನು ಕಳೆದುಕೊಂಡ ಮನುಷ್ಯನಿಗೆ ಮರಳಿ ನೆಮ್ಮದಿಯನ್ನು ಸ್ವತಹ ಪಡೆಯಬಹುದಾದ ಜೀವನ ಕ್ರಮಗಳನ್ನು ಬೋಧಿಸುತ್ತಾನೆ. ಇವು ಮನುಷ್ಯ ನೆಮ್ಮದಿಯನ್ನು ಹೊಂದಬಹುದಾದ ಅತ್ಯಂತ ಸರಳ ಮಾರ್ಗಗಳಾಗಿದ್ದವು.

ಬುದ್ಧ ಮನುಷ್ಯನ ಎಲ್ಲ ಬಗೆಯ ದುಖಃಗಳಿಗೆ ಹಾಗೂ ಅವುಗಳಿಂದ ಬಿಡುಗಡೆ ಹೊಂದಲು ಮನಸ್ಸೇ ಕಾರಣ ಎಂದು ಹೇಳಿದ. "ನಿಮ್ಮ ಬಯಕೆಯ ಸ್ವರೂಪವನ್ನು ಪರೀಕ್ಷಿಸಿ. ಬಯಕೆಯು ಚಲಿಸುವ ರೀತಿಯನ್ನು ಗಮನಿಸಿ. ಅದು ಬಹಳ ಸೂಕ್ಷ್ಮವಾದದ್ದು. ಹಾಗೆ ನೀವು ಗಮನಿಸಿದಾಗ ಎರಡು ವಿಷಯಗಳನ್ನು ಕಾಣುತ್ತೀರಿ. ಒಂದು ಬಯಕೆಯ ಸ್ವರೂಪ ಎಂಥದು ಎಂದರೆ ಅದನ್ನು ಪೂರೈಸುವುದು ಸಾಧ್ಯವೇ ಇಲ್ಲ ಎನ್ನುವಂಥದು. ಇನ್ನೊಂದು ಬಯಕೆಯನ್ನು ಪೂರೈಸುವುದು ಸಾಧ್ಯವೇ ಇಲ್ಲ ಎಂಬುದನ್ನು ನೀವು ತಿಳಿದುಕೊಂಡ ಕೂಡಲೇ ಅದು ಅಂದರೆ ಬಯಕೆಯು ಮಾಯವಾಗಿಬಿಡುತ್ತದೆ. ನೀವು ಬಯಕೆಯೇ ಇಲ್ಲದವರಾಗಿಬಿಡುತ್ತೀರಿ. ಅದೇ ಶಾಂತಿಯ, ಮೌನದ ನಿರಾಕುಲದ (ಯಾವ ಚಿಂತೆಯೂ ಇಲ್ಲದ) ಸ್ಥಿತಿ. ಅದೇ ಸಿದ್ಧಿಯ ಸ್ಥಿತಿ. ಆಸೆಯ ಮೂಲಕ ಜನರು ಸಿದ್ಧಿಯ ಸ್ಥಿತಿಯನ್ನು ಮುಟ್ಟುವುದು ಸಾಧ್ಯವಿಲ್ಲ. ಆಸೆಯನ್ನು ಮೀರುವುದರ ಮೂಲಕ ಮಾತ್ರ ಸಿದ್ಧಿಯ ಸ್ಥಿತಿಯನ್ನು ಮುಟ್ಟುವುದು ಸಾಧ್ಯ".[2] ಲಂಕೇಶ್ ಅವರ ಈ ಮಾತುಗಳು ಮಾನವ ನಾಗರೀಕತೆಯನ್ನು ಆವರಿಸಿರುವ ದುಃಖವನ್ನು, ದುಃಖದ ಸಹಜತೆಯನ್ನು, ಅದನ್ನು ಗೆಲ್ಲುವ ಮಾನಸಿಕ ಸಿದ್ಧಿಯ ಸ್ಥಿತಿಯನ್ನು ಪಡೆಯುವ ಬಗೆಯನ್ನು ಬುದ್ಧ ಹೇಗೆ ವಿಶಿಷ್ಟವಾಗಿ ಕಂಡುಕೊಂಡಿದ್ದ ಎಂಬುದನ್ನು ತಿಳಿಸುತ್ತವೆ. ಮನುಷ್ಯ ದುಃಖವನ್ನು ಗೆಲ್ಲಬಹುದಾದ ವಿಶಿಷ್ಟ ಮಾರ್ಗವೊಂದನ್ನು ಬುದ್ಧ ಶೋಧಿಸಿಕೊಟ್ಟ, ಇಂದು ಜಗತ್ತು ಎದುರಿಸುತ್ತಿರುವ ಎಲ್ಲ ಬಗೆಯ ಸಮಸ್ಯೆಗಳಿಗೆ ಈ ಮೇಲಿನ ಮಾತುಗಳು ಸೂಕ್ತ ಪರಿಹಾರಗಳಾಗಬಲ್ಲವು.

ಮನುಷ್ಯ ತನ್ನನ್ನು ಕಾಡುವ ದುಃಖದಿಂದ ಪಾರಾಗಿ ಶಾಂತಿಯತ್ತ ಸಾಗಬೇಕಿದೆ. ಅದಕ್ಕಾಗಿ ಬುದ್ಧ ಅಹಿಂಸೆ, ಸತ್ಯ, ಶೀಲ, ಜ್ಞಾನ, ಸರಳತೆ, ಸಮಾನತೆ, ಮತ್ತು ಸಾಮಾಜಿಕ ನ್ಯಾಯದ ಬಗ್ಗೆ ಮಾತನಾಡುತ್ತಾನೆ. ಇವು ಮಾನವ ಬದುಕನ್ನು ಆವರಿಸಿಕೊಂಡಿರುವ ದುಃಖವನ್ನು ನಿವಾರಿಸಬಲ್ಲವು ಎಂಬುದು ಬುದ್ಧನು ಕಂಡುಕೊಂಡ ಸತ್ಯ. ಯಾವ ಮನುಷ್ಯ ಉನ್ನತವಾದ ಬದುಕನ್ನು ಬದುಕಲು ಬಯಸುತ್ತಾನೋ ಆತ ಶೀಲವನ್ನು

ತನ್ನ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕು. ಹಾಗೂ ಆಚರಣೆಗೆ ತರಬೇಕು. ಶೀಲವೇ ಮೊದಲು ಅದರಿಂದಲೇ ಪ್ರಜ್ಞೆ ಮತ್ತು ಸಮಾಧಿ ಸಾಧ್ಯ ಎನ್ನುತ್ತಾನೆ.

ಬುದ್ಧನದು ಸದಾ ಸತ್ಯ ಮತ್ತು ಬೆಳಕಿನ ಮಾರ್ಗ. ಬುದ್ಧನ ಬೋಧನೆಗಳು ದೇಹ ಮತ್ತು ಮನಸ್ಸನ್ನು ಕೇಂದ್ರೀಕರಿಸಿದ್ದವು. ಯಾರು ದೇಹ ಮತ್ತು ಮನಸ್ಸನ್ನು ಅರಿಯುವಲ್ಲಿ ವಿಫಲನಾಗುತ್ತಾರೋ ಅವರು ಸತ್ಯವನ್ನು ಅರಿಯುವಲ್ಲಿ ವಿಫಲನಾಗುತ್ತಾರೆ. ಆಗ ನಾವು ಸಂಯಮ ಮತ್ತು ಸದಾಚಾರವನ್ನು ಆಚರಿಸುವಲ್ಲಿ ಹಿನ್ನೆಡೆ ಹೊಂದುತ್ತೇವೆ. ಅಜ್ಞಾನದಿಂದ ಜ್ಞಾನದತ್ತ ಸಾಗುವುದೇ ಬಿಡುಗಡೆಯ ಮೊದಲ ಹೆಜ್ಜೆ ಎಂದು ಸಾರಿದ ಬುದ್ಧ.

ಬುದ್ಧನ ಉಪದೇಶಗಳ ಗುರಿಯೆಂದರೆ ಮನುಷ್ಯರನ್ನು, ಅವರ ಜೀವನ ಕ್ರಮದಲ್ಲಿ ಬದಲಾವಣೆ ತರುವ ಮೂಲಕ ಜ್ಞಾನಿಗಳನ್ನಾಗಿಸುವುದೇ ಆಗಿದೆ. ತಾನು ತನ್ನ ಸ್ವಯಂ ಸಾಧನೆಯ ಮೂಲಕ ಬುದ್ಧತ್ವವನ್ನು ಪಡೆಯಲು ಸಾಧ್ಯವಾಗುವುದಾದರೆ ಪ್ರತಿಯೊಬ್ಬರೂ ಬುದ್ಧತ್ವವನ್ನು ಪಡೆಯಲು ಸಾಧ್ಯ ಎಂಬ ಉದಾತ್ತತೆಯನ್ನು ಸಾರುತ್ತಾನೆ. ಹಾಗಾಗಿಯೇ ಬುದ್ಧ 'ನಿಮಗೆ ನೀವೆ' ಎಂಬ ವೈಜ್ಞಾನಿಕ ಮತ್ತು ವೈಚಾರಿಕ ತತ್ವ ಸಿದ್ಧಾಂತವನ್ನು ಲೋಕಕ್ಕೆ ನೀಡಿದ. ತಮ್ಮ ಉದ್ಧಾರಕ್ಕಾಗಿ ಅಗೋಚರ ಶಕ್ತಿಗಾಗಿಯೋ, ಸಂಭವಿಸಬಹುದಾದ ಪವಾಡಗಳಿಗಾಗಿಯೋ ಕಾಯುತ್ತಾ ಕೂರುವ ಅಗತ್ಯವಿಲ್ಲ. ತಮ್ಮ ನೆಮ್ಮದಿಯನ್ನು ಕಂಡುಕೊಳ್ಳುವ, ಜ್ಞಾನವನ್ನು ಸಂಪಾದಿಸಿಕೊಳ್ಳುವ ಅದ್ಭುತ ಶಕ್ತಿ ಪ್ರತಿಯೊಬ್ಬರಲ್ಲಿಯೂ ಇರುತ್ತದೆ ಎಂದು ಹೇಳಿದ ಬುದ್ಧ ದೇವರ ಪ್ರಸ್ತಾಪ ಮಾಡುವುದಿಲ್ಲ. ಏಕೆಂದರೆ ಬುದ್ಧನ ನಂಬಿಕೆ ಪ್ರತಿಯೊಬ್ಬ ಸಾಮಾನ್ಯ ಮನುಷ್ಯನೂ ತನ್ನ ಬದುಕಿನ ಕ್ರಮಗಳಿಂದಾಗಿಯೇ, ಕೆಲಸಗಳಿಂದಾಗಿಯೇ ತನ್ನ ಸಿದ್ಧಿಯನ್ನು ಪಡೆಯಬಲ್ಲ ಎಂಬುದು. ಎಲ್ಲ ಧರ್ಮ ಬೋಧಕರೂ ಮನುಷ್ಯನ ಉದ್ಧಾರಕ್ಕೆ ಅವರಿಂದ ಹೊರಗಿನ ಶಕ್ತಿಯ ಕಡೆಗೆ ಕೈತೋರಿಸಿದರೆ, ಬುದ್ಧ ಮಾತ್ರ ನಮ್ಮತ್ತಲೇ ಕೈ ತೋರಿಸುತ್ತಾನೆ. 'ಮೊದಲು ನಿಮ್ಮನ್ನು ನೀವು ಅರಿಯಿರಿ ನಿಮ್ಮ ಮನಸ್ಸನ್ನು ಅರಿಯಿರಿ, ನಿಮ್ಮ ಮನಸ್ಸಿಗೆ ತರಬೇತಿ ನೀಡಿರಿ. ಅಲ್ಲಿಯೇ ದೈವವನ್ನು ಕಾಣಲು ಸಾಧ್ಯ' ಎನ್ನುತ್ತಾನೆ. ಪ್ರತಿಯೊಬ್ಬರೂ ತಮ್ಮ ಮನಸ್ಸಿನ ಪೂರ್ಣಶಕ್ತಿಯನ್ನು ಬಳಸಿಕೊಂಡು ದೈವತ್ವದ ಸ್ಥಿತಿಗೆ ಏರಬಹುದು ಎನ್ನುತ್ತಾನೆ. ಬುದ್ಧ ತನ್ನನ್ನು ಎಲ್ಲಿಯೂ ಮುಕ್ತಿದಾತನೆಂದಾಗಲೀ, ದೇವದೂತನೆಂದಾಗಲೀ ಕರೆದುಕೊಂಡಿಲ್ಲ, ಬದಲಾಗಿ 'ಮಾರ್ಗದಾತ' ಎಂದು ಕರೆದುಕೊಳ್ಳುತ್ತಾನೆ. ತಾನು ಬೋಧಿಸಿದ್ದನ್ನು ಧರ್ಮವೆಂದಾಗಲೀ, ಅದರಲ್ಲಿ ತನಗೆ ಪ್ರತ್ಯೇಕ ಸ್ಥಾನವನ್ನಾಗಲೀ, ತನ್ನ ನಂತರದ ಉತ್ತರಾಧಿಕಾರಿಯನ್ನು ನೇಮಿಸಲಾಗಲೀ ಬಯಸಲಿಲ್ಲ. ತಾನು ಬೋಧಿಸಿದ ವಿಷಯದಲ್ಲಿ ಸತ್ಯವಿದ್ದರೆ ಅದು ತನ್ನನ್ನು ತಾನು ಕಾಪಾಡಿಕೊಳ್ಳುತ್ತದೆ. ಇಲ್ಲವಾದರೆ ಇಲ್ಲ ಎಂದು 'ಧರ್ಮ ಕೂಡ ತನಗೆ ತಾನೇ' ಎಂದು ಹೇಳಿದ.

ಬುದ್ಧ ತನ್ನ ಬಳಿ ಬಂದ ಯಾರೇ ಆಗಲಿ ಅವರು ಅಜ್ಞಾನದಿಂದ, ಅಹಂಕಾರದಿಂದ ವರ್ತಿಸಿದರೂ ಅವರ ಮೇಲೆ ಕೋಪಗೊಳ್ಳದೆ ಶಾಂತವಾಗಿ ನಸುನಗುತ್ತಿದ್ದ. ಆ ಮೌನ, ನಸುನಗೆಯಲ್ಲಿ ಸಾವಿರಾರು ಅರ್ಥಗಳಿರುತ್ತಿದ್ದವು. ಜನರ ಸಮಸ್ಯೆಗಳಿಗೆ ತಾನು ಪರಿಹಾರ ಕೊಡುವುದಕ್ಕಿಂತ ಸ್ವತಹ ಅವರೇ ಪರಿಹಾರಗಳನ್ನು ಕಂಡುಕೊಳ್ಳಬೇಕಾದುದು ಮುಖ್ಯ. ಸ್ವಾನುಭವದ ಮೂಲಕ ಪ್ರಾಪಂಚಿಕ ಸತ್ಯಗಳನ್ನು ಪ್ರತಿಯೊಬ್ಬರೂ ಪಡೆಯಬಹುದಾದ ಮಾರ್ಗಗಳನ್ನು ಮನವರಿಕೆ ಮಾಡುವ ಹಾಗೂ ತನ್ನ ಬಗೆಗೆ ಜನರು ಹೊಂದಿರುವ ದೈವಿಕ ಭಾವನೆಗಳನ್ನು ಹೋಗಲಾಡಿಸುವ ಉದ್ದೇಶದಿಂದ ಹಾಗೆ ಮಾಡುತ್ತಾನೆ. ಧರ್ಮಗಳು ಮನುಷ್ಯರನ್ನು

ಅಜ್ಞಾನದಲ್ಲಿಡುವ ಉದ್ದೇಶದಿಂದ ಹುಟ್ಟುಹಾಕಿರುವ ದೇವರ ಕಲ್ಪನೆಯನ್ನು ನಿರಾಕರಿಸುವುದು ಬುದ್ಧನ ಉದ್ದೇಶವಾಗಿತ್ತು. ದುಃಖ ಸತ್ಯ, ಅಶಾಶ್ವತತೆ, ಮತ್ತು ಅನಾತ್ಮ ಇವುಗಳ ಮೂಲಕ ಬದುಕು ಮತ್ತು ಪ್ರಕೃತಿಯ ಸಾರವನ್ನು ಬುದ್ಧ ವಿವರಿಸುತ್ತಾನೆ. ಇವುಗಳನ್ನು ನಿತ್ಯ ಸತ್ಯಗಳೆಂದು ಕರೆಯಲಾಗಿದೆ. ಪ್ರಕೃತಿಯ ಪ್ರತಿಯೊಂದು ವಸ್ತುವೂ ಬದುಕುವ ಮತ್ತು ನಶಿಸುವ ಗುಣಕ್ಕೆ ಒಳಪಟ್ಟಿದೆ. ಬುದ್ಧನ ಕರ್ಮ ಸಿದ್ಧಾಂತವು ದೇಹ ಮತ್ತು ಮನಸ್ಸಿನ ಬಗೆಗಿನ ಶೀಲ, ಪ್ರಜ್ಞೆ, ಅರಿವು ಮತ್ತು ಸಮಾಧಿಗಳನ್ನು ಪ್ರತಿಪಾದಿಸುತ್ತದೆ. ಸ್ವಾರ್ಥತೆ ಮತ್ತು ಕ್ಲೇಶಗಳಿಂದ ಬಿಡುಗಡೆ ಪಡೆದು ಚಿತ್ತ ವಿಮುಕ್ತಿಯನ್ನು ಹೊಂದಿದವನು ಎತ್ತರಕ್ಕೆ ಏರಬಲ್ಲ ಎಂದು ಬೋಧಿಸಿದ.

ಬುದ್ಧ ಕಾಮವನ್ನು, ಅದರ ಹಿಂದಿನ ಅತೃಪ್ತಿಯನ್ನೂ, ಹಿಂಸೆಯೊಂದಿಗಿನ ಅದರ ನಂಟನ್ನೂ ಗುರುತಿಸಿದ್ದ. ಕಾಮ ತಣಿಸಿದಷ್ಟೂ ಭುಗಿಲೇಳುತ್ತದೆ. ಅಂತಿಮವಾಗಿ ಇದು ಹಿಂಸೆಗೆ ಪ್ರಚೋದನೆ ನೀಡುತ್ತದೆ. ಅದು ತಣಿಸಿದಷ್ಟು ದಾಹವನ್ನು ನೀಗದೆ ಮತ್ತೂ ಅತೃಪ್ತಿಯನ್ನು ಹೆಚ್ಚಿಸುತ್ತದೆ. ಹಾಗಾಗಿ ಅದು ಸಲ್ಲದು. ಕೊನೆಯೇ ಇಲ್ಲದ ಈ ಕಾಮದ ದಾಹಕ್ಕಾಗಿ ಅನೈತಿಕ ಸಂಬಂಧಗಳನ್ನು ಹೊಂದುವುದಕ್ಕಿಂತ ಧರ್ಮದ ಮಾರ್ಗದಲ್ಲಿ ಕಾಮವನ್ನು ಕಂಡುಕೊಳ್ಳುವುದೇ ಕ್ಷೇಮವೆನ್ನುತ್ತಾನೆ. ಕಾಮ ಅತೃಪ್ತಿಯಾಗಿ, ಅಹಂಕಾರವಾಗಿ, ದೌರ್ಜನ್ಯದ ಅಸ್ತ್ರವಾಗಿ ಬಳಕೆಯಾಗಬಹುದಾದ ಅಪಾಯಗಳನ್ನು ಬುದ್ಧ ಗುರುತಿಸುತ್ತಾನೆ. ಇದರ ಪರಿಣಾಮವಾಗಿ ಸಂಭವಿಸಬಹುದಾದ ಹಿಂಸೆ, ಯುದ್ಧಗಳನ್ನು ತಡೆಯಲು ಕಾಮವನ್ನು ನಿಯಂತ್ರಿಸಬೇಕಾದ ಅಗತ್ಯವನ್ನು ಒತ್ತಿಹೇಳುತ್ತಾನೆ. ಅದಕ್ಕಾಗಿ ಪಂಚಶೀಲಗಳನ್ನು ಪ್ರತಿಪಾದಿಸುತ್ತಾನೆ. ಗಾಂಧಿಯೂ ಕೂಡ ಇಂಥ ಪ್ರಯೋಗಗಳನ್ನು ನಡೆಸಿದ್ದರು. ಮನುಷ್ಯನೊಳಗಿನ ಹಿಂಸೆಗೆ ಕಾರಣಗಳನ್ನು ಕಂಡುಕೊಳ್ಳುವ ಅವರ ಈ ಪ್ರಯೋಗದ ಮೇಲೆ ಬುದ್ಧನ ಪ್ರಭಾವವಿದ್ದಿರಬಹುದು. ರವೀಂದ್ರನಾಥ ಟಾಗೋರ್ "ಲೋಕದಲ್ಲಿ ಬುದ್ಧನಿಗಿಂತ ಕಾರುಣ್ಯ ಮೂರ್ತಿಯನ್ನು ನಾನು ಕಂಡಿಲ್ಲ. ಅವರ ಪ್ರತಿ ಹೆಜ್ಜೆಯೂ ಕರುಣೆ, ಅನುಕಂಪ ಮತ್ತು ಪ್ರೀತಿಯಿಂದ ತುಂಬಿದೆ. ಅದು ಪ್ರಜ್ಞೆಯನ್ನು ಅವಲಂಬಿಸಿದೆ."[೩] ಎನ್ನುತ್ತಾರೆ. ಬುದ್ಧನ ವಿಚಾರಗಳು ಜಾತ್ಯಾತೀತ, ಧರ್ಮಾತೀತ ಮತ್ತು ಕಾಲಾತೀತವಾದವುಗಳು. ಮಾನವ ಮತ್ತು ಸಕಲ ಜೀವರಾಶಿಗಳೇ ಆತನ ಮುಖ್ಯ ಕಾಳಜಿ. ಬಹುಜನರ ಹಿತ ಮತ್ತು ಸುಖವೇ ಆತನ ಉದ್ದೇಶ ಮತ್ತು ಗುರಿಯಾಗಿದೆ. ಧರ್ಮವನ್ನು ಎಲ್ಲರೂ ಪಾರಮಾರ್ಥಿಕ ಉನ್ನತಿ ಎಂದು ವಿಶ್ಲೇಷಿಸುತ್ತಿದ್ದ ಸಂದರ್ಭದಲ್ಲಿ ಬುದ್ಧ ಧರ್ಮವೆಂದರೆ 'ಪ್ರಕೃತಿ ನಿಯಮ' ಎಂದು ಪ್ರತಿಪಾದಿಸುತ್ತಾನೆ. ಹಾಗೂ ಧರ್ಮ ಮಾನವರಿಗಾಗಿ, ಅವರ ಉನ್ನತಿಗಾಗಿ ಶ್ರಮಿಸಬೇಕಾದುದರ ಅಗತ್ಯವನ್ನು ಹೇಳುತ್ತಾನೆ. ಬುದ್ಧನ ಪ್ರಕಾರ ಬದುಕಿನಲ್ಲಿ ಪವಿತ್ರತೆಯನ್ನು ಕಾಪಾಡಿಕೊಳ್ಳುವುದೇ ಧರ್ಮ. ಇದರಲ್ಲಿ ಮೂರು ವಿಧಗಳಿವೆ. ೧. ಶರೀರಕ್ಕೆ ಸಂಬಂಧಿಸಿದ ಪಾವಿತ್ರ್ಯತೆ ೨. ಮಾತಿಗೆ ಸಂಬಂಧಪಟ್ಟ ಪಾವಿತ್ರ್ಯತೆ ೩. ಮನಸ್ಸಿಗೆ ಸಂಬಂಧಿಸಿದ ಪಾವಿತ್ರ್ಯತೆ.

ಬುದ್ಧ ದೇವರಿಲ್ಲ, ಆತ್ಮ ಇಲ್ಲ, ಸ್ವರ್ಗ ಇಲ್ಲ ಎಂದು ಹೇಳಿದ. ಅವುಗಳ ಪ್ರಶ್ನೆ ಎದುರಾದಾಗ ಮೌನವಹಿಸುತ್ತಾನೆ. ಅವನು ಬೋಧಿಸಿದ್ದು ಧರ್ಮವನ್ನಲ್ಲ; ಒಂದು ಜೀವನ ಮಾರ್ಗವನ್ನು, ಬದುಕುವ ರೀತಿಯನ್ನು. ಅವನು ನಂಬಿಕೆಯ ಮಾರ್ಗವನ್ನು ಬೋಧಿಸಲಿಲ್ಲ. ಅವನ ಬೋಧನೆ ವೈಜ್ಞಾನಿಕ, ಅನುಭವ ಜನ್ಯ ಹಾಗೂ ಪ್ರಾಯೋಗಿಕವಾದುದಾಗಿತ್ತು. ಅವನು ತತ್ವಶಾಸ್ತ್ರಗಳನ್ನು ಅವಲಂಬಿಸಿದವನಾಗಿರಲಿಲ್ಲ ಬದಲಾಗಿ ವಾಸ್ತವವಾದಿ, ಬದುಕಿಗೆ ಹತ್ತಿರವಾದವನಾಗಿದ್ದನು.

ಬುದ್ಧ ವೈದಿಕ ಧರ್ಮದ ಕರ್ಮ ಸಿದ್ಧಾಂತವನ್ನು, ಅದರ ವಿಲಾಸೀ ಜೀವನವನ್ನು, ಅತಿ ಲೌಕಿಕತೆಯನ್ನು, ಮೌಢ್ಯತೆಯನ್ನು ಖಂಡಿಸುತ್ತಾನೆ. ವೈದಿಕ ಧರ್ಮವನ್ನು ಅವನು ಪ್ರಧಾನವಾಗಿ ವಿಮರ್ಶಿಸಿದ್ದು ವಿಚಾರವಾದದ ನೆಲೆಯಲ್ಲಿ. ಪುರೋಹಿತಶಾಹಿಗಳು ಪ್ರತಿಪಾದಿಸುತ್ತಿರುವ ಸುಳ್ಳು ಧರ್ಮ ಮತ್ತು ಅಧಿಕೃತ ಧರ್ಮದ ಕಲ್ಪನೆಗಳೆರಡನ್ನೂ ಬುದ್ಧ ಪರಿಣಾಮಕಾರಿಯಾಗಿಯೇ ಮುಂದಿಡುವ ಮೂಲಕ ವಿರೋಧಿಸುತ್ತಾನೆ.

ಬುದ್ಧನ ಬೋಧನೆಗಳ ಬಹುಮುಖ್ಯ ಗುರಿ ದಮನಿತರ ಬದುಕಿನ ಕತ್ತಲನ್ನು ಬೆಳಗುವುದು. ಈ ಲೋಕದಲ್ಲಿ ತುಂಬಿರುವ ದು:ಖದ ನಿವಾರಣೆ ಹಾಗೂ ಪ್ರತಿಯೊಬ್ಬ ಮಾನವರ ಘನತೆಯನ್ನು ಎತ್ತಿ ಹಿಡಿಯುವುದಾಗಿತ್ತು. ಇಡೀ ಜಗತ್ತನ್ನು ಹಲವು ಬಗೆಯ ಯುದ್ಧದ ಕಾರ್ಮೋಡಗಳು ಕವಿದಿರುವ ಈ ಹೊತ್ತಿನ ವಿನಾಶಕಾರಿ ವಾತಾವರಣದಲ್ಲಿ ಬುದ್ಧನ ದಾರ್ಶನಿಕ ವಿಚಾರಗಳು ಅತ್ಯಂತ ಪ್ರಸ್ತುತ ಅನಿಸುತ್ತವೆ. ಬುದ್ಧನ ಪ್ರತಿಪಾದನೆಗಳು ತನ್ನ ವಿಚಾರಗಳ ನೆಲೆಯಲ್ಲಿ ಮಾನವಧರ್ಮ ಎಂದೆನಿಸುತ್ತವೆ.

ಸಾಮಾನ್ಯ ಮನುಷ್ಯನನ್ನು ಪ್ರಬುದ್ಧನನ್ನಾಗಿ ರೂಪಿಸುವ ಆಶಯ ಬುದ್ಧನ ಸಂದೇಶಗಳಿಗಿದೆ. ಅರ್ಥವಿಲ್ಲದ, ನಿಗೂಢವಾದ ತತ್ವಗಳು, ನಂಬಿಕೆಗಳಿಗಿಂತ ನಿಸರ್ಗಸಹಜ ಬದುಕಿನ ಕ್ರಮವನ್ನೇ ಅವನ ಉಪದೇಶಗಳು ಒಳಗೊಂಡಿದ್ದವು. ಅಲೌಕಿಕ ಶಿಸ್ತುಗಳ ಬಗೆಗಿನ ಮನುಷ್ಯನ ಗಾಢ ನಂಬಿಕೆಯನ್ನು, ಯಾವುದೋ ಅಗೋಚರ ಶಕ್ತಿ ತನ್ನನ್ನು ಉದ್ಧರಿಸುತ್ತದೆ ಎಂಬ ಧರ್ಮಗಳ ಪ್ರತಿಪಾದನೆಗಳನ್ನು ನಿರಾಕರಿಸಿ ವ್ಯಕ್ತಿ ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳಬೇಕು, ತನ್ನ ಪರಿಶ್ರಮದಿಂದ ತಾನೇ ದುಡಿದು ಬದುಕಬೇಕು, ಯಾರನ್ನು ಯಾರೂ ಉದ್ಧರಿಸಲಾರರು ಎಂಬ ಅಂತಿಮ ಸತ್ಯವನ್ನು ಬೋಧಿಸಿದ. 'ನಿನಗೆ ನೀನೇ ದೀಪವಾಗು, ಬೆಳಕಾಗು, ಅನ್ಯರನ್ನು ಆಶ್ರಯಿಸಬೇಡ' ಎಂದು ಹೇಳಿದ. ತಾನು ಮಾರ್ಗದಾತನೇ ಹೊರತು ಮುಕ್ತಿದಾತನಲ್ಲ. ಸುಖಕ್ಕೆ – ದು:ಖಕ್ಕೆ, ಮಂಗಳಕ್ಕೆ, ಅಮಂಗಳಕ್ಕೆ ಅವರವರೇ ಜವಾಬ್ದಾರರೆಂದ. ಅದಕ್ಕಾಗಿ ಸತ್ಯವನ್ನು ಕುರಿತು ಗಾಢವಾಗಿ ವಿಚಾರ ಮಾಡಬೇಕು. ಈ ವಿಚಾರಗಳಿಂದಲೇ ಮನುಷ್ಯರು ಸಹಜ ಹಾಗೂ ಸ್ವತಂತ್ರರಾಗುತ್ತಾರೆ. ವಿಚಾರಗಳ ಮೂಲಕ ಬದುಕನ್ನು ಸಹ್ಯಗೊಳಿಸಿಕೊಳ್ಳುವುದೇ ಧರ್ಮ. ದೇವರು, ಧರ್ಮಶಾಸ್ತ್ರ ಗ್ರಂಥಗಳ ನೆರವಿಲ್ಲದೆ ಮನುಷ್ಯ ತನ್ನ ಬಿಡುಗಡೆಯನ್ನು ತಾನೇ ಕಂಡುಕೊಳ್ಳಬೇಕು ಎಂದು ಪ್ರತಿಪಾದಿಸಿದನು.

ಬುದ್ಧ ತನ್ನನ್ನು ತಾನು ದೇವರೆಂದಾಗಲೀ, ದೇವದೂತನೆಂದಾಗಲೀ, ಅವತಾರ ಪುರುಷನೆಂದಾಗಲೀ, ತನ್ನನ್ನು ಒಪ್ಪಿಕೊಂಡವರಿಗೆ ಮೋಕ್ಷ ನೀಡುತ್ತೇನೆಂದಾಗಲೀ ಘೋಷಿಸಿಕೊಳ್ಳಲಿಲ್ಲ. ತಾನು ಪ್ರತಿಪಾದಿಸುತ್ತಿರುವುದು ಧರ್ಮವೆಂದಾಗಲೀ ತನ್ನ ನಂತರ ತನ್ನ ಧರ್ಮಕ್ಕೆ ಉತ್ತರಾಧಿಕಾರಿಯನ್ನಾಗಲೀ ಹೆಸರಿಸಲಿಲ್ಲ. ನಿಸರ್ಗಸತ್ಯ ಮತ್ತು ಜೀವನ ಸತ್ಯಗಳನ್ನು ಬುದ್ಧ ಜನರಿಗೆ ತಿಳಿಸಿದ. ಮನುಷ್ಯ ಮತ್ತು ಮನಸ್ಸಿನ ಸಂಬಂಧವನ್ನು ಮತ್ತು ಮನುಷ್ಯ ಮನುಷ್ಯರ ನಡುವೆ ಇರಬೇಕಾದ ಸಂಬಂಧವನ್ನು ಜಗತ್ತಿಗೆ ತೋರಿಸಿಕೊಟ್ಟ. ಅಹಂಕಾರ ಮತ್ತು ಅಜ್ಞಾನಗಳು ಮಾನವ ಸಮಾಜದ ವೈರಿಗಳೆಂದು ತಿಳಿಸಿದ. ಮಾನವ ಜನಾಂಗವೆಲ್ಲವೂ ಒಂದೇ ಎಂಬ ಕಲ್ಪನೆಯನ್ನು ಮೂಡಿಸಿದ. ಜನಸಾಮಾನ್ಯರ ಭಾಷೆಯಲ್ಲಿ ಬಹುಸರಳವಾಗಿ ಉಪದೇಶ ನೀಡಿದ ಬುದ್ಧ ಜಗತ್ತು ಕಂಡ ವಿಶಿಷ್ಟ ವ್ಯಕ್ತಿ.

ಬುದ್ಧ ಬದುಕಿನ ನೈತಿಕತೆಗೆ ಪ್ರಾಧಾನ್ಯತೆ ನೀಡುತ್ತಾನೆ. "ಅರಮನೆ, ದೇವಾಲಯಗಳನ್ನು ಬಿಟ್ಟು ನಿರ್ವಾಣವನ್ನು ಕಂಡುಕೊಳ್ಳಲು ಹೊರಟ ಈತ ದೇವರನ್ನು ತಲುಪಲಿಲ್ಲ, ಮನುಷ್ಯರನ್ನು ತಲುಪಿದ.ಅದು ಪ್ರೀತಿಯ ಮೂಲಕ, ನಿರ್ಮೋಹದ ನೋಟದ ಮೂಲಕ. ಸಿದ್ಧಾರ್ಥನಿಗೆ ವಯಸ್ಸಾದಂತೆಲ್ಲಾ ಆತನ ಸಹಜತೆ ಕೂಡ ಬೆಳೆಯುತ್ತಿತ್ತು. ಗಾಡ ವ್ಯಾಮೋಹ, ದುಃಖ, ಸಾವುನೋವು, ವಿರಹಗಳ ಬಲೆಯಲ್ಲಿ ಬಿದ್ದ ಮನುಷ್ಯನ ಅಸಹಾಯಕ ಅಭಿಮಾನಿಗಳನ್ನು ಪಡೆದಿದ್ದ ಬುದ್ಧ ಶಿಸ್ತಿಗೆ, ದಕ್ಷತೆಗೆ ಪ್ರಖ್ಯಾತನಾಗಿದ್ದ. ಈತನ ಆಶ್ರಮಗಳು ನಡೆಯುತ್ತಿದ್ದ ಬಗೆಯನ್ನು, ಈತನ ಅನುಯಾಯಿಗಳ ಜೀವನ ಕ್ರಮವನ್ನು ಗಮನಿಸಿದ್ದ ರಾಜನೊಬ್ಬ "ನನ್ನೆಲ್ಲ ಸೈನ್ಯ, ಶಕ್ತಿ ಬಳಸಿದರೂ ಪ್ರಜೆಗಳಲ್ಲಿ ಈ ಶಿಸ್ತು ತರಲಾಗುತ್ತಿಲ್ಲ ಅಂದ ಅದಕ್ಕೆ ಸಿದ್ಧಾರ್ಥ ವಿಸ್ವಾಸ, ಪ್ರೀತಿ ಇದ್ದಲ್ಲಿ ಮಾತ್ರ ಶಿಸ್ತು ಸಾಧ್ಯ" ಎಂದ."[9] ಹೀಗೆ ಬದುಕಿನ ಮಾರ್ಗದರ್ಶಕ ನಿಲುವುಗಳನ್ನು ಪ್ರತಿಪಾದಿಸುತ್ತಾನೆ. ವೈಚಾರಿಕವಾದ, ಜೀವಪರವಾದ, ಮಾನವ ಕೇಂದ್ರಿತವಾದ, ಸರ್ವಸಮಾನತೆಯ ಜೀವನ ಕ್ರಮಗಳನ್ನು ಪ್ರತಿಪಾದಿಸುವ ಮೂಲಕ ಜಗತ್ತಿಗೆ ಬೆಳಕು ನೀಡಿದವನು ಬುದ್ಧ. ಬುದ್ಧ ಎಲ್ಲವನ್ನೂ ತೊರೆದು ನಡೆದದ್ದು ಬದುಕನ್ನು ಕಾಡುತ್ತಿರುವ ಹಲವು ಜಂಜಡಗಳಿಗೆ ಉತ್ತರವನ್ನು ಕಂಡುಕೊಳ್ಳಲು. ಅಂತಿಮವಾಗಿ ಬುದ್ಧ ಮನುಷ್ಯನನ್ನು ಕಾಡುತ್ತಿರುವ ಹಲವು ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳುತ್ತಾನೆ. ಇದನ್ನೇ ಜ್ಞಾನೋದಯ ಹಾಗೂ ಬುದ್ಧತ್ವ ಎಂದು ಕರೆಯಲಾಗಿದೆ. ಆದರೆ ಬುದ್ಧ ತನ್ನನ್ನು ಜ್ಞಾನಿ ಎಂದಾಗಲಿ, ಎಲ್ಲ ಪೂರ್ಣತೆಯನ್ನು ಪಡೆದ ದೈವ ಸ್ವರೂಪಿ ಎಂದಾಗಲೀ ಕರೆದುಕೊಳ್ಳದೆ ಅದನ್ನು ಮನುಷ್ಯನ ದುಃಖಕ್ಕೆ ಇರಬಹುದಾದ ಉತ್ತರ ಹಾಗೂ ಪ್ರಾಪಂಚಿಕ ಮೂಲ ಸತ್ಯಗಳನ್ನು 'ಅರಿತಸ್ಥಿತಿ' ಎಂದು ಕರೆದುಕೊಳ್ಳುತ್ತಾನೆ. ಲಂಕೇಶ್ ಇದನ್ನು ಕುರಿತು "ನಾನು ಕೂಡ ಅದನ್ನು ಜ್ಞಾನೋದಯ ಎಂದು ಕರೆಯಲು ಆಶಿಸುತ್ತೇನೆ. ಯಾಕೆಂದರೆ ಗೌತಮನಲ್ಲಿ ಜ್ಞಾನೋದಯವಾದ ಒಂದೇ ಒಂದು ಸೂಚನೆ ಇದ್ದದ್ದು ಆತನ ಪ್ರಶಾಂತತೆಯಲ್ಲಿ. ಮನುಷ್ಯನ ಬಗೆಗಿನ ತಿಳುವಳಿಕೆಯಲ್ಲಿ. ದೇವರು ಇದ್ದಾನೆಯೇ? ಎಂಬ ಪ್ರಶ್ನೆಗೆ ಗೌತಮನಲ್ಲಿ ಉತ್ತರವಿಲ್ಲ. ಆತ್ಮ ಎಂಬುದು ಇದೆಯೇ? ಎಂಬುದಕ್ಕೆ ಆತನಲ್ಲಿ ಉತ್ತರವಿಲ್ಲ. ತನಗೆ ಗೊತ್ತಿಲ್ಲದ್ದನ್ನು ಹೇಳಲು ನಿರಾಕರಿಸುವ ಗೌತಮನ ಜ್ಞಾನೋದಯ ಮನುಷ್ಯನ ಬದುಕಿನ ವಿವರಗಳನ್ನು ಒಳಗೊಂಡಿದೆ"[10] ಎನ್ನುತ್ತಾರೆ. ಜ್ಞಾನೋದಯ ಎಂಬುದನ್ನು ದೈವ ಸಾಕ್ಷಾತ್ಕಾರ ಅಥವಾ ದೈವವೇ ಆಗಿಬಿಡುವ ಸ್ಥಿತಿ ಎಂಬ ನಮ್ಮ ಧಾರ್ಮಿಕ ಪರಂಪರೆಗಳ ಅತಿರೇಕದ ಹಾಗೂ ಅಹಂಕಾರದ ನಿರ್ವಚನವನ್ನು ಪಲ್ಲಟಿಸಿ ನೋಡಬೇಕಾದ ಕ್ರಮವನ್ನು ಇದು ಪ್ರಸ್ತಾಪಿಸುತ್ತದೆ.

ಬುದ್ಧ ತನ್ನ ಕಾಲದ ಸಮಾಜವನ್ನು ನಿಯಂತ್ರಿಸುತ್ತಿದ್ದ, ಜನರನ್ನು ಅಜ್ಞಾನದಲ್ಲಿ ಇಟ್ಟಿದ್ದ ಧರ್ಮವನ್ನು ವೈಚಾರಿಕವಾಗಿ ಎದುರಾಗುತ್ತಾನೆ. ಮನುಷ್ಯನ ದುಃಖಕ್ಕೂ, ಧರ್ಮಗಳಿಗೂ ನೇರವಾಗಿ ಸಂಬಂಧ ಕಲ್ಪಿಸುವ ಬುದ್ಧ ಧರ್ಮವನ್ನು ಪರಿಷ್ಕರಿಸುವ, ನಿಜವಾದ ಮಾನವ ಧರ್ಮವನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ಪ್ರಯತ್ನಿಸುತ್ತಾನೆ. ಹಾಗಾಗಿಯೇ ಬುದ್ಧ ತಾನು ಕಂಡುಕೊಂಡ ಸತ್ಯಗಳನ್ನು ಪ್ರತಿಪಾದಿಸುವ ಸಂದರ್ಭದಲ್ಲಿ ಎಚ್ಚರಿಕೆ ವಹಿಸುತ್ತಾನೆ. ತನ್ನ ಮಾತಿನ ಮೇಲೆ ಪ್ರಜ್ಞಾಪೂರ್ವಕ ಹಿಡಿತ ಸಾಧಿಸುತ್ತಾನೆ. ಆತನ ನಗು, ಮೌನ ಮತ್ತು ಮಾತುಗಳು ಧಾರ್ಮಿಕ ಜಡತ್ವವನ್ನು, ಅತಿರೇಕಗಳನ್ನು ಮೀರುವ ಎಚ್ಚರಿಕೆಯ ಪ್ರಜ್ಞೆಗಳಾಗಿ ಪ್ರಕಟಗೊಳ್ಳುವುದನ್ನು ಕಾಣಬಹುದು. ದೇವರು, ಧರ್ಮ, ಆತ್ಮ, ಅವತಾರ, ಮೋಕ್ಷಗಳ ವಿಚಾರಗಳಲ್ಲಿ ಬುದ್ಧ ವಹಿಸುವ ಮಹಾಮೌನ ಮಾತಿನ ಅಪಾಯಗಳಿಂದ ಪಾರಾಗುವ ಪ್ರಯತ್ನಗಳೇ ಆಗಿವೆ. ಈ ನಿಟ್ಟಿನಲ್ಲಿ ಡಿ.ಆರ್.ನಾಗರಾಜ್ ಹೇಳುವ ಮಾತುಗಳು ಬುದ್ಧನ ಈ ಬಗೆಯ ಪ್ರಜ್ಞೆಯನ್ನು ಸಹಜವಾಗಿಯೇ ಗುರುತಿಸುತ್ತವೆ.

"ಬುದ್ಧ ಮಾತಿನ ಮಿತಿ ಬಲ್ಲವನು ಹಾಗೆಯೇ ಬುದ್ಧಿಯ ಶಕ್ತಿಯನ್ನೂ ಬಲ್ಲವನು. ಜೊತೆಗೆ ಮಾತು ಮತ್ತು ಮಿತಿಗಳ ಒಟ್ಟು ಮಿತಿಯನ್ನು ಸೂಕ್ಷ್ಮವಾಗಿಯೆ ಅರಿತವನು. ಧರ್ಮ ಮತ್ತು ದರ್ಶನಗಳ ಕಲ್ಪನೆ ಮೆಟಾಫಿಸಿಕಲ್ ಕಂತೆಗಳಾಗಿ ಬೆಳೆಯತೊಡಗಿತ್ತು. ಆತ್ಮವಾದಿ - ಅನಾತ್ಮವಾದಿಗಳಿಬ್ಬರೂ ರೋಮಾಂಚಕವಾದ, ಆದರೆ ನಿರುಪಯುಕ್ತವಾದ, ಚಿಂತನಾ ಶೋಧನೆಯಲ್ಲಿ ಮುಳುಗಿಬಿಟ್ಟಿದ್ದರು. ಧರ್ಮ ಎನ್ನುವುದು ನಿಜಜೀವನದ ಸವಾಲುಗಳನ್ನು ಮರೆಯತೊಡಗಿತ್ತು. ಮಾತು ಪಾಪಾಸುಕಳ್ಳಿಯ ಹಾಗೆ ಸ್ವಯಂ ಸಮೃದ್ಧ"[6] ಎನ್ನುತ್ತಾರೆ. ಮುಂದುವರಿದು "ಬುದ್ಧನಿಗೆ ಎದುರಿಗಿರುವ ನಿಜವಾದ ದುಃಖದ ಅರಿವೇ ಧಾರ್ಮಿಕ ಶೋಧನೆ. ವೈದಿಕರ ತಾತ್ವಿಕ ವಿನೋದಗಳು ಅಂತಿಮವಾಗಿ ಹಾನಿಕಾರಕ ಎನ್ನುವುದನ್ನು ಬುದ್ಧ ತುಂಬಾ ಮಾರ್ಮಿಕವಾಗಿ ದೃಷ್ಟಾಂತವೊಂದರ ಮೂಲಕ ಚರ್ಚಿಸಿದ್ದ. ಒಬ್ಬನಿಗೆ ಎಲ್ಲಿಂದಲೋ ಬಾಣ ಬಂದು ತಗಲುತ್ತದೆ. ಹಾಗೆ ಬಂದ ಬಾಣದ ಮೂಲ ಎಲ್ಲಿ ? ಎಸೆದವರು ಯಾರು ಹೀಗೆ ಚಿಂತಿಸುವುದು ಹಾನಿಕಾರಕ. ಈಗ ತಕ್ಷಣದ ಅಗತ್ಯ ಎಂದರೆ ಬಾಣಕ್ಕೆ ಗುರಿಯಾದವರನ್ನು ಕಾಪಾಡಬೇಕು. ಬಾಣದ ಮೂಲದ ಚಿಂತನೆ ಸರಿಯಲ್ಲ ಎಂದ ಬುದ್ಧ".[7] ಈ ಮಾತುಗಳಲ್ಲಿ ಬದುಕಿನ ಪ್ರಸ್ತುತತೆಯ ಅಗತ್ಯವನ್ನು ಮೀರಿ ಪರದ ಬಗೆಗೆ ಚಿಂತಿಸುವಂತೆ ಪ್ರೇರೇಪಿಸಿದ ವೈದಿಕ ಧರ್ಮದ ನಂಬಿಕೆಯನ್ನು ವಿರೋಧಿಸಿ ಸದ್ಯದ ಬದುಕನ್ನು, ಬದುಕಿನ ಅಗತ್ಯವನ್ನು ಪೂರೈಸಬೇಕಾದ ತುರ್ತು ಧರ್ಮಗಳಿಗಿರಬೇಕು ಎಂಬ ನೆಲೆಯಲ್ಲಿ ಚಿಂತಿಸಿದ ಬುದ್ಧನ ನಿಲುವುಗಳನ್ನು ಡಿ.ಆರ್.ನಾಗರಾಜರವರು ಸರಿಯಾಗಿಯೇ ಗುರುತಿಸಿದ್ದಾರೆ. 

ಇಂದು ಬುದ್ಧ ಯಾಕಾಗಿ ಮುಖ್ಯ ಮತ್ತು ಅನನ್ಯನಾಗುತ್ತಾನೆ ಎಂಬುದು ತುಂಬಾ ಗಂಭೀರವಾದ ಪ್ರಶ್ನೆ. ಯುದ್ಧ, ಹಿಂಸೆ, ಭ್ರಷ್ಟತೆ, ನೈತಿಕ ಅಧಃಪತನ, ಕೋಮುಹಿಂಸೆ, ಜನಾಂಗೀಯ ದ್ವೇಷ, ಭಯೋತ್ಪಾದನೆ, ನೈತಿಕ ಅಧಃಪತನ ಮುಂತಾದ ಭಯಾನಕ ಮತ್ತು ಆತ್ಯಂತಿಕ ವಾತಾವರಣದಲ್ಲಿ ಬದುಕುತ್ತಿರುವ ಮನುಷ್ಯ ಇನ್ನಾದರೂ ವರ್ತಮಾನವನ್ನು, ಭವಿಷ್ಯವನ್ನು ಸರಿಪಡಿಸಿಕೊಳ್ಳಬೇಕಾದರೆ ಬುದ್ಧನತ್ತ ತಿರುಗಿ ನೋಡಲೇಬೇಕಾಗುತ್ತದೆ. ರಾಜಕಾರಣ, ಧರ್ಮ, ಆರ್ಥಿಕ ಶಕ್ತಿಗಳು ಪರಿಸರದ ಮೇಲೂ, ಜೀವರಾಶಿಯ ಮೇಲೂ ಕ್ರೌರ್ಯವನ್ನು ಎಸಗುತ್ತಿರುವ ಇಂಥ ಸಂದರ್ಭದಲ್ಲಿ ಬುದ್ಧನ ಉಪದೇಶಗಳು ಅತ್ಯಂತ ಮಹತ್ವ ಪಡೆಯುತ್ತವೆ. ಬುದ್ಧ ಪ್ರತಿಪಾದಿಸುವ ನಿತ್ಯ ಸತ್ಯಗಳು. ಅಷ್ಟಾಂಗ ಮಾರ್ಗ, ಸಚ್ಚಾರಿತ್ಯದ ಅಗತ್ಯ, ಮಧ್ಯಮ ಮಾರ್ಗ, ವಿಜ್ಞಾನ ಮತ್ತು ವೈಚಾರಿಕ ಪ್ರಜ್ಞೆಗಳು, ಮನಸ್ಸಿನ ಪರಿವರ್ತನೆ, ಧರ್ಮಾತೀತ, ಜಾತ್ಯಾತೀತ ಧೋರಣೆಗಳು ಇಂದು ಜಗತ್ತಿಗೆ ತೀರಾ ಅಗತ್ಯವಾಗಿ ಬೇಕಾಗಿವೆ. ಹುಟ್ಟು ಸಾವಿನ ರಹಸ್ಯವನ್ನು ಸರಳ ಸತ್ಯದ ಮೂಲಕ ತಿಳಿಸಿದ್ದು, ಹುಟ್ಟು ಸಾವುಗಳನ್ನು ಗೆಲ್ಲುವ ದಾರಿಗಳನ್ನು ತೋರಿಸಿದ್ದು, ಸೃಷ್ಟಿಯ ರಹಸ್ಯವನ್ನು ವೈಚಾರಿಕವಾಗಿ ಮತ್ತು ವೈಜ್ಞಾನಿಕವಾಗಿ ವಿವರಿಸಿದ್ದು ಬದುಕಿನ ಅಶಾಶ್ವತತೆಯನ್ನೂ, ಆ ಅಶಾಶ್ವತವಾದ ಬದುಕನ್ನೂ ಹೇಗೆ ಸಾರ್ಥಕಗೊಳಿಸಿಕೊಳ್ಳಬಹುದು ಎಂಬುದನ್ನು ಬೋಧಿಸಿದ್ದು ಬುದ್ಧನ ಜೀವಪರ ಕಾಳಜಿಗಳನ್ನು ತೋರಿಸುತ್ತದೆ. ಇವೆಲ್ಲವುಗಳು ಇಂದಿನ ಜಗತ್ತಿಗೆ ತೀರಾ ಅಗತ್ಯವಾಗಿದೆ. ಭೋಗ ಮತ್ತು ಹಿಂಸೆಗಳು ಜಗತ್ತಿನ ಮನುಷ್ಯರನ್ನು ಆಳುತ್ತಿರುವ ಇಂಥ ಭೀಕರ ಸಂದರ್ಭದಲ್ಲಿ ಅವು ಉಂಟು ಮಾಡುತ್ತಿರುವ ಎಲ್ಲ ಅಪಾಯಗಳನ್ನು ಮೀರಿನಿಲ್ಲಲು ಇಂದು ಬುದ್ಧನ ಬೋಧನೆಗಳು ತೀರಾ ಅಗತ್ಯವಾಗಿವೆ. ಈ ಎಲ್ಲಾ ವಿಶಿಷ್ಟ ಆಲೋಚನೆ ಹಾಗೂ ಪ್ರತಿಪಾದನೆಗಳ ಮೂಲಕ ಬುದ್ಧನ ವ್ಯಕ್ತಿತ್ವವನ್ನು ಗ್ರಹಿಸಬಹುದಾಗಿದೆ.

ಈ ತಾತ್ವಿಕ ವಿಚಾರಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯದಲ್ಲಿ ಆಧುನಿಕ ಕನ್ನಡ ಕಾವ್ಯ ಬುದ್ಧನ ತಾತ್ವಿಕ ವಿಚಾರಗಳನ್ನು ಗ್ರಹಿಸಿರುವ, ಅದರ ಪ್ರಸ್ತುತತೆಯನ್ನು ಪ್ರತಿಪಾದಿಸುತ್ತಿರುವ ಹಾಗೂ ಅನುಸಂಧಾನ ನಡೆಸಿರುವ ನೆಲೆಗಳನ್ನು ಕುರಿತು ವಿಸ್ತೃತವಾಗಿ ಚರ್ಚೆಗೆ ಒಳಪಡಿಸಲಾಗಿದೆ.

### ೪.೨ ಆಧುನಿಕ ಕನ್ನಡ ಕಾವ್ಯ ಕಂಡ ಬುದ್ಧ : ಹಿಂಸೆ ಮತ್ತು ಆಧುನಿಕ ವಿಕಾರಗಳೊಂದಿಗೆ ಮುಖಾಮುಖಿ.

ಆಧುನಿಕ ಕನ್ನಡ ಕವಿಗಳು ಬುದ್ಧನ ವ್ಯಕ್ತಿತ್ವವನ್ನು ಅರ್ಥಮಾಡಿಕೊಂಡಿರುವ ಹಾಗೂ ಕಟ್ಟಿಕೊಟ್ಟಿರುವ ಬಗೆ ವಿಶಿಷ್ಟವಾದುದು. ಬುದ್ಧ ಕ್ರಿ.ಪೂ. ೬ನೇ ಶತಮಾನದ ಚಾರಿತ್ರಿಕ ವ್ಯಕ್ತಿಯಾದರೂ ಮಾನವತೆಯ ಬಗೆಗಿನ ಆತನ ಮಿಡಿತದಿಂದಾಗಿ ಇಂದಿಗೂ ಪ್ರಸ್ತುತ. ಕನ್ನಡ ಕವಿಗಳು ಆತನ ವ್ಯಕ್ತಿತ್ವದ ಪ್ರಸ್ತುತತೆಯನ್ನು, ಅನನ್ಯತೆಯನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಬುದ್ಧನನ್ನು ಕುರಿತ ಕವಿತೆಗಳು ಆತನ ಬದುಕಿನ ಘಟನಾವಳಿಗಳಿಗೆ, ಉಪದೇಶಗಳಿಗೆ ಮಾತ್ರ ಸೀಮಿತವಾಗಿರದೆ; ಸಮಕಾಲೀನ ಜಗತ್ತಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ಮುಂತಾದ ಕ್ಷೇತ್ರಗಳ ಜ್ವಲಂತ ಸಮಸ್ಯೆಗಳಿಗೆ ಉತ್ತರವನ್ನು ಬುದ್ಧನಲ್ಲಿ ಕಂಡುಕೊಳ್ಳುವ ಪ್ರಯತ್ನವಾಗಿ ಕಂಡುಬರುತ್ತವೆ. ವ್ಯಕ್ತಿಯಿಂದ ಹಿಡಿದು ಜಾಗತಿಕ ಮಟ್ಟದವರೆಗೆ ಇಂದು ಎದುರಾಗಿರುವ ಎಲ್ಲ ಬಗೆಯ ಸಂಕಟಗಳಿಗೆ ಬುದ್ಧನ ವಿಚಾರಗಳು ಉತ್ತರವಾಗಬಲ್ಲವು ಎಂಬ ನೆಲೆಯ ಅಭಿವ್ಯಕ್ತಿಗಳು ಕಂಡುಬಂದಿವೆ. ಸಮಕಾಲೀನ ಸಾಮಾಜಿಕ, ರಾಜಕೀಯ, ಧಾರ್ಮಿಕ ವ್ಯವಸ್ಥೆಯ ದುರಂತಗಳನ್ನು ಹೇಳಿಕೊಳ್ಳಲು ಕವಿಗಳಿಗೆ ಬುದ್ಧ ಒಂದು ಬಲವಾದ ಸಾಧನವಾಗಿದ್ದಾನೆ. ಸೃಜನಶೀಲವಾದ ಮನಸ್ಸುಗಳು ತನ್ನನ್ನು ಕಿತ್ತುತಿನ್ನುತ್ತಿರುವ ಹಲವು ಹತ್ತು ಸಮಸ್ಯೆಗಳನ್ನು, ವ್ಯವಸ್ಥೆಯ ವಿಫಲತೆಯನ್ನು, ತನ್ನ ಎಲ್ಲ ಬಗೆಯ ತಳಮಳಗಳನ್ನು ಬುದ್ಧನನ್ನು ನೆಪವಾಗಿಸಿಕೊಂಡು ಹೊರಹಾಕಲು ಪ್ರಯತ್ನಿಸಿವೆ. ಹಾಗೂ ತಮ್ಮೆಲ್ಲಾ ದುಸ್ಥಿತಿಗೆ ಪರಿಹಾರವನ್ನು ಆತನಲ್ಲಿ ಹುಡುಕುವ ಪ್ರಯತ್ನದಲ್ಲಿ ತೊಡಗಿವೆ. ಸಮಕಾಲೀನ ಮನುಷ್ಯ ಸ್ವಭಾವಗಳ ವಿಮರ್ಶೆ, ಇಂದು ಜಗತ್ತನ್ನು ಕಾಡುತ್ತಿರುವ ಯುದ್ಧ, ಜಾಗತೀಕರಣದ ಪರಿಣಾಮಗಳು ಇವೆಲ್ಲವುಗಳಿಂದ ಮಾನವ ಜಗತ್ತನ್ನು ಕಾಪಾಡುವ ಕಳಕಳಿ ಬುದ್ಧನನ್ನು ಕುರಿತಾದ ಕವಿತೆಗಳಲ್ಲಿದೆ. ಈ ಕವಿತೆಗಳ ಹಿಂದೆ ಮನುಷ್ಯನಲ್ಲಿ ಮಾನವೀಯತೆಯನ್ನು ಜಾಗೃತಗೊಳಿಸುವ, ಸಮಾಜ, ಧರ್ಮ, ರಾಜಕೀಯ ಕ್ಷೇತ್ರಗಳ ಸುಧಾರಣೆಯನ್ನು ಬಯಸುವ, ಸಮಕಾಲೀನ ವ್ಯಕ್ತಿತ್ವಗಳನ್ನು ರೂಪಿಸುವ, ಸುಧಾರಿಸುವ ಹಂಬಲವಿದೆ. ಮಾನವ ಜಗತ್ತು ಇಂದು ಎದುರಿಸುತ್ತಿರುವ ಎಲ್ಲ ಬಗೆಯ ಸಮಸ್ಯೆಗಳಿಗೂ ಬುದ್ಧನ ವಿಚಾರಗಳು ಉತ್ತರ ಹಾಗೂ ಪರಿಹಾರವಾಗಬಲ್ಲವು ಎಂಬ ನೆಲೆಯಲ್ಲಿ ಈ ಕವಿತೆಗಳು ಚಿಂತಿಸುತ್ತಿವೆ. ಈ ಹಿನ್ನೆಲೆಯಲ್ಲಿ ಬುದ್ಧನ ವ್ಯಕ್ತಿತ್ವವನ್ನು ಕರುಣೆ ತುಂಬಿದ ಮಾನವೀಯತೆಯ ಮೂರ್ತರೂಪವಾಗಿ ಕಾಣಲಾಗಿದೆ.

ಆಧುನಿಕ ಕನ್ನಡ ಕಾವ್ಯ ಬುದ್ಧನ ತಾತ್ವಿಕತೆಯೊಂದಿಗೆ ಮುಖಾಮುಖಿಯಾಗುತ್ತಲೇ ಇಂದಿನ ಸಂದರ್ಭಕ್ಕೆ ತಕ್ಕಂತೆ ಅವುಗಳನ್ನು ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಮಾಡಿದೆ. ಬುದ್ಧನ ವ್ಯಕ್ತಿತ್ವದ ಹಲವು ಮುಖಗಳನ್ನು ದರ್ಶಿಸುವ ರೀತಿ, ಬುದ್ಧ ಜ್ಞಾನವನ್ನು ಪಡೆದ ಕ್ರಮ, ಎಲ್ಲವನ್ನೂ ತೊರೆದುದನ್ನು ಯಶೋಧರೆಯ ನೆಲೆಯಿಂದ ನೋಡುವ ಕ್ರಮ ವಿಶಿಷ್ಟವಾದದ್ದು. ಹಲವು ನೆಲೆಗಳಿಂದ ಬುದ್ಧನ ವ್ಯಕ್ತಿತ್ವವನ್ನು ನೋಡುವ, ವಿಮರ್ಶೆಗೊಡ್ಡುವ ಮೂಲಕ ಸಮಕಾಲೀನ ಮಾನವ ಜಗತ್ತನ್ನು ಅರಿಯುವ ಪ್ರಯತ್ನ

ಮಾಡಲಾಗಿದೆ. ಈ ಕವಿತೆಗಳ ತುಡಿತ ಮಾನವೀಯವಾದುದು. ಸಮಕಾಲೀನ ಮಾನವ ಜಗತ್ತಿನ ಬಿಕ್ಕಟ್ಟುಗಳನ್ನು, ಕೊಳಕುಗಳನ್ನು ನಿವಾರಿಸುವ, ಮನುಷ್ಯನನ್ನು ಅರಿವಿನ ಉನ್ನತಿಗೆ ಏರಿಸುವ ಕಾಳಜಿ ಈ ಕವಿತೆಗಳಲ್ಲಡಗಿದೆ. ಈ ಕವಿತೆಗಳು ಬುದ್ಧನ ತಾತ್ವಿಕ ವಿಚಾರಗಳೊಂದಿಗೆ ಮುಖಾಮುಖಿಯಾಗುತ್ತಲೇ ಸಮಕಾಲೀನ ಸಮಸ್ಯೆಗಳಿಗೆ ಎದುರಾಗಿ ಬುದ್ಧನ ಚಿಂತನೆ ಉತ್ತರವಾಗಬಲ್ಲದು ಎಂಬ ನಿಲುವನ್ನು ತಳೆಯುತ್ತದೆ. ಇಂಥ ಕವಿತೆಗಳ ಹಿಂದೆ ಸಮಾಜದ ಎದೆಯೊಡೆದ ಮನಸ್ಸುಗಳು ಕೆಲಸ ಮಾಡಿವೆ. ಮೂಢನಂಬಿಕೆ, ಅರಾಜಕತೆ, ಬಡತನ, ಹಸಿವು, ಶೋಷಣೆ, ಹಿಂಸೆ, ಕ್ರೌರ್ಯ, ಮನುಷ್ಯನ ಅಜ್ಞಾನ, ಯುದ್ಧ, ಜಾಗತೀಕರಣ ಮುಂತಾದ ಕಲುಷಿತ ವಾತಾವರಣದ ಬಗೆಗೆ ಪ್ರತಿರೋಧವನ್ನು ತೋರುತ್ತಲೇ ಎಲ್ಲವನ್ನೂ ಸರಿಪಡಿಸುವ ಉತ್ಸಾಹವನ್ನೂ, ಕಾಳಜಿಯನ್ನು ತೋರುತ್ತಿವೆ. ಇದರ ಸುಧಾರಣೆಗಾಗಿ ಬುದ್ಧನ ವ್ಯಕ್ತಿತ್ವವನ್ನು ಸಮಕಾಲೀನ ಸಂದರ್ಭದಲ್ಲಿ ಮುನ್ನೆಲೆಗೆ ತರುವ, ಮರುರೂಪಿಸಿಕೊಳ್ಳುವ ಪ್ರಯತ್ನ ಮಾಡುತ್ತಿವೆ.

ಬುದ್ಧ ಒಬ್ಬ ವ್ಯಕ್ತಿಯಾಗಿ, ಚರಿತ್ರೆಯ ನಿರ್ದಿಷ್ಟ ಕಾಲಮಾನದಲ್ಲಿ ಬದುಕಿದ್ದವನಾದರೂ ಕೂಡ ಆತನ ವ್ಯಕ್ತಿತ್ವದ ಮಾನವೀಯ ಗುಣಗಳಿಂದಾಗಿ, ಮನುಷ್ಯರ ಮೇಲಿನ ಅಪಾರವಾದ ಪ್ರೀತಿಯಿಂದಾಗಿ ಶತಶತಮಾನಗಳಿಂದಲೂ ಜನಮಾನಸದಲ್ಲಿ ಮರುಹುಟ್ಟು ಪಡೆಯುತ್ತಾ ಜೀವಂತವಾಗಿದ್ದಾನೆ. ಮಾನವ ಚರಿತ್ರೆಯಲ್ಲಿ ಸಮುದಾಯವೊಂದು ವ್ಯಕ್ತಿಯನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುತ್ತಿರುವುದು, ಅವರೊಂದಿಗೆ ಸಂವಾದಿಸುತ್ತಿರುವುದು ಆ ವ್ಯಕ್ತಿತ್ವದ ಹಿರಿಮೆಯನ್ನು ಮತ್ತು ಸಂಕೀರ್ಣತೆಯನ್ನು ಧ್ವನಿಸುತ್ತದೆ. ಕನ್ನಡ ಕವಿಗಳು ಬುದ್ಧನೊಂದಿಗೆ ದೊಡ್ಡ ಮಟ್ಟದಲ್ಲಿಯೇ ಸಂವಾದಕ್ಕಿಳಿದಿರುವುದನ್ನು ಆತನ ಬಗೆಗೆ ಬಂದಿರುವ ಕವಿತೆಗಳೇ ಸ್ಪಷ್ಟಪಡಿಸುತ್ತವೆ.

ಬಹುದೊಡ್ಡ ಕಾಲದ ಅಂತರದಲ್ಲಿ ಕನ್ನಡ ಸಾಹಿತ್ಯ ಬುದ್ಧನೊಂದಿಗೆ ಅನುಸಂಧಾನ ನಡೆಸಲು ಮುಂದಾಗಿದೆ. ಬುದ್ಧನ ಪ್ರತಿಪಾದನೆಗಳು ಧರ್ಮಸ್ವರೂಪ ಪಡೆದು ಭರತಖಂಡದಲ್ಲಿ ಹಲವು ಶತಮಾನಗಳು ಜೀವಂತವಾಗಿದ್ದವು. ರಾಜರು, ಜನಸಾಮಾನ್ಯರನ್ನು ಆಕರ್ಷಿಸಿದ್ದ ಈ ಧರ್ಮ ಮುಂದೆ ವೈದಿಕ ಧರ್ಮದ ದಾಳಿಗೆ ಒಳಗಾಗಿ ಈ ನೆಲದಲ್ಲಿಯೇ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ಗಡಿ ದಾಟಿಹೋಗಿ ಹೊರದೇಶಗಳಲ್ಲಿ ಇಂದಿಗೂ ತನ್ನ ಪ್ರಭಾವವನ್ನು ಉಳಿಸಿಕೊಂಡಿದೆ. ಬುದ್ಧನ ಕಾಲಾನಂತರದಲ್ಲಿ ಆತನ ಬೋಧನೆಗಳನ್ನು, ಆತನನ್ನೂ ವೈದಿಕೀಕರಣಗೊಳಿಸುವ ದೊಡ್ಡ ಮಟ್ಟದ ಪ್ರಯತ್ನಗಳು ನಡೆದು ಬುದ್ಧನನ್ನು ಅವತಾರಿಯನ್ನಾಗಿಸಲಾಯಿತು. ದೇವರು, ಆತ್ಮ, ಕರ್ಮಸಿದ್ಧಾಂತಗಳನ್ನು ಒಪ್ಪಿಸಲಾಯಿತು. ಹೀಗೆ ಅವತಾರ ಮತ್ತು ಆಚರಣೆಗಳಲ್ಲಿ ನಂಬಿಕೆ ತಳೆದು ಬುದ್ಧನ ಮೂಲತತ್ವಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು. ಹೀಗೆ ಅಸ್ತಿತ್ವವನ್ನು ಕಳೆದುಕೊಂಡರೂ ಅವು ಈ ನೆಲದ ಶೋಷಿತ ಸಮುದಾಯದ ಬದುಕಿನಲ್ಲಿ ತಮ್ಮ ಜೀವಂತಿಕೆಯನ್ನು ಉಳಿಸಿಕೊಂಡಿದ್ದವು. ಕರ್ನಾಟಕದ ಅವೈದಿಕ ಮತ್ತು 'ಲಿಂಗ' ವಿರೋಧಿ ಪಂಥಗಳ ತಾತ್ವಿಕ ಭಿತ್ತಿಯೇ ಬೌದ್ಧ ತಾತ್ವಿಕತೆ. ಅಲ್ಲಮನ ವಿಚಾರಗಳಲ್ಲಿ, ಮಂಟೇಸ್ವಾಮಿ, ಮಹದೇಶ್ವರರ ಆಲೋಚನೆಗಳಲ್ಲಿ, ತತ್ವ ಪದಕಾರರಲ್ಲಿ ಹಾಗೂ ತಳಸಮುದಾಯಗಳ ಬದುಕಿನಲ್ಲಿ ಬುದ್ಧನ ಪ್ರತಿಪಾದನೆಗಳು ಉಳಿದು ಬಂದಿರುವುದನ್ನು ಕಾಣಬಹುದು. [೮]

ಹೀಗೆ ಬುದ್ಧನ ಪ್ರತಿಪಾದನೆಗಳು ಒಂದು ಧರ್ಮವಾಗಿ ಈ ನೆಲದಲ್ಲಿ ಉಳಿದು ಬರದಿದ್ದರೂ ಬದುಕಿನ ಕ್ರಮವಾಗಿ ದಲಿತ ಸಮುದಾಯಗಳಲ್ಲಿ ಉಳಿದು ಬಂದಿವೆ. ಅವರ ಬದುಕಿನ ಭಾಗವಾಗಿದ್ದ ಈ ಬೌದ್ಧ ಆಲೋಚನೆಗಳು ಮತ್ತು ಬುದ್ಧ, ಕನ್ನಡ ಸಾಹಿತ್ಯವನ್ನು ನೇರವಾಗಿ ಪ್ರವೇಶಿಸಿದ್ದು ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿಯೇ. ಇಪ್ಪತ್ತನೇ ಶತಮಾನದಲ್ಲಿ ಅಂಬೇಡ್ಕರರು ದಲಿತರಿಗೆ ಬಿಡುಗಡೆಯ ಸಾಧನವಾಗಿ ಬೌದ್ಧ ಧರ್ಮವನ್ನು ಪರಂಪರೆಯಿಂದ ಶೋಧಿಸಿ ಕೊಟ್ಟದ್ದು ಬುದ್ಧನ ವಿಚಾರಗಳು ಸಾಹಿತ್ಯ ಮತ್ತು ಹೋರಾಟದ ಭೂಮಿಕೆಗೆ ಪ್ರವೇಶಿಸುವಂತಾಯ್ತು. ಬುದ್ಧ ಆಧುನಿಕ ಕಾಲದಲ್ಲಿ, ಭಾರತದಲ್ಲಿ ಮಹತ್ವ ಪಡೆದುಕೊಂಡಿದ್ದು ಅಂಬೇಡ್ಕರರಿಂದ. ಕನ್ನಡ ಸಾಹಿತ್ಯದ ಬೇರೆಬೇರೆ ಪ್ರಕಾರಗಳಲ್ಲಿ ಬುದ್ಧನ ಜೀವನದ ಘಟನೆಗಳು ಹಾಗೂ ಪ್ರತಿಪಾದನೆಗಳು ವಸ್ತುವಾಗಿ ಚರ್ಚಿಸಲ್ಪಟ್ಟಿದ್ದರೂ ಕಾವ್ಯದ ಸಂದರ್ಭದಲ್ಲಿ ಹೆಚ್ಚು ರಚನೆಗಳು ಬಂದಿರುವುದನ್ನು ಕಾಣಬಹುದು.

ಹೊಸಗನ್ನಡ ಕಾವ್ಯದ ಎಲ್ಲಾ ಘಟ್ಟಗಳಲ್ಲೂ ಬುದ್ಧನನ್ನು ಕುರಿತಾದ ಕವಿತೆಗಳು ರಚನೆಗೊಂಡಿವೆ. ಹೀಗೆ ರಚನೆಗೊಂಡಿರುವ ಕವಿತೆಗಳನ್ನು ಅವುಗಳ ಸ್ವರೂಪವನ್ನು ಆಧರಿಸಿ ಎರಡು ಬಗೆಗಳಲ್ಲಿ ನೋಡಬಹುದು.

೧. ಬುದ್ಧನಿಗೆ ಸಂಬಂಧಿಸಿದ ಕತೆಗಳನ್ನೂ, ತತ್ವಗಳನ್ನು, ನಿರೂಪಿಸುವ ಕಾವ್ಯಗಳು.
೨. ಆಧುನಿಕ ಸಂವೇದನೆಯ ಕಾವ್ಯಗಳು.

ಈ ಎರಡೂ ಬಗೆಗಳಲ್ಲಿ ಕಾವ್ಯಸತ್ವ ಪ್ರಕಟಗೊಂಡಿರುವುದನ್ನೂ, ಕೆಲವೆಡೆ ನಿರ್ಜೀವವಾಗಿರುವುದನ್ನೂ ಗುರುತಿಸಬಹುದು. ಬರೆಯುವ ಗೀಳಿಗಾಗಿ ಬರೆದ ಅನೇಕ ಕವಿತೆಗಳು ಬುದ್ಧನ ಜೀವನದ ಕತೆಗಳನ್ನು ಮತ್ತೊಮ್ಮೆ ನಿರೂಪಿಸಿವೆ ಅಷ್ಟೇ. ಇವುಗಳಲ್ಲಿ ಯಾವ ವಿಶೇಷತೆಯೂ ಇಲ್ಲ. ಹೀಗಿದ್ದರೂ ಬಹುತೇಕ ಕವಿತೆಗಳು ಹೊಸ ಒಳನೋಟ ಮತ್ತು ಹೊಸ ಸಂವೇದನೆಗಳೊಂದಿಗೆ ಸೃಜನಶೀಲವಾಗಿ ಅಭಿವ್ಯಕ್ತಿಗೊಂಡಿವೆ. ಇವು ಬುದ್ಧನನ್ನು ವರ್ತಮಾನದಲ್ಲಿ ನಮ್ಮ ಬದುಕಿನ ಭಾಗವಾಗಿಸಿಕೊಳ್ಳಬೇಕಾದ ಅಗತ್ಯವನ್ನೂ, ಮಾರ್ಗವನ್ನೂ ಒತ್ತಿಹೇಳುತ್ತವೆ.

ಚರಿತ್ರೆ, ಪುರಾಣದ ವ್ಯಕ್ತಿ ಮತ್ತು ಸಂಗತಿಗಳನ್ನು ಸಾಹಿತ್ಯ ತನ್ನ ವಸ್ತುವನ್ನಾಗಿ ಬಳಸಿಕೊಳ್ಳುತ್ತಿರುವುದು ಇಂದಿನ ಸಂಗತಿಯೇನಲ್ಲ. ಆದರೆ ಹೀಗೆ ವಸ್ತುವಾಗಿಸಿಕೊಂಡ ಚರಿತ್ರೆ ಮತ್ತು ಪುರಾಣದ ವಿಷಯಗಳನ್ನು ಕವಿ ತನ್ನ ಸೃಜನಶೀಲ ಅಭಿವ್ಯಕ್ತಿಯ ರೂಪಕ, ಪ್ರತಿಮೆಗಳನ್ನಾಗಿ ಹೇಗೆ ದುಡಿಸಿಕೊಂಡಿದ್ದಾನೆ ಎಂಬುದು ಮುಖ್ಯ. ವರ್ತಮಾನದ ಜಗತ್ತನ್ನು ಅರಿಯಲು, ಸಮಸ್ಯೆಗಳನ್ನು ಪರಿಹರಿಸಲು, ಅಭಿವ್ಯಕ್ತಿಸಲು ಹೇಗೆ ಅವುಗಳನ್ನು ಸೃಜನಶೀಲವಾಗಿ ಬಳಸಿಕೊಳ್ಳುತ್ತಾನೆ ಎಂಬುದು ಕಾವ್ಯದ ಸತ್ವವನ್ನು, ಕವಿಯ ಪ್ರತಿಭೆಯನ್ನೂ ನಿರ್ಧರಿಸುತ್ತದೆ. ಈ ನಿಟ್ಟಿನಲ್ಲಿ ಬುದ್ಧನನ್ನು, ಆತನಿಗೆ ಸಂಬಂಧಿಸಿದ ಕತೆಗಳನ್ನೂ, ತತ್ವಗಳನ್ನು ಕನ್ನಡ ಕವಿಗಳು ಹೇಗೆ ದುಡಿಸಿಕೊಂಡಿದ್ದಾರೆ ಎಂಬುದು ಕುತೂಹಲದ ಸಂಗತಿ. ಈ ನಿಟ್ಟಿನಲ್ಲಿ ನೋಡಿದಾಗ ಮೊದಲ ಬಗೆಯ ಕವಿತೆಗಳು ಬಹುತೇಕ ಪ್ರಸಿದ್ಧ ಕತೆಗಳ ಕಾವ್ಯ ನಿರೂಪಣೆಗಳಾಗಿ ಕಂಡುಬರುತ್ತವೆಯೇ ಹೊರತು ಸೃಜನಶೀಲ ಅಭಿವ್ಯಕ್ತಿಯ ಭಾಗವಾಗಿ ಕಂಡುಬರುವುದಿಲ್ಲ. ಇದಕ್ಕೆ ವ್ಯಕ್ತಿಯನ್ನು ಕುರಿತ ಆರಾಧನಾ ಮತ್ತು ದೈವೀಭಾವವೇ ಮುಖ್ಯಕಾರಣ. ಇಲ್ಲಿ ಬುದ್ಧನನ್ನು ಕೀರ್ತಿಸಿ ಧನ್ಯರಾಗುವುದೇ ಮುಖ್ಯವಾಗಿದೆ. ಇವು ಕಾವ್ಯ ರೂಪದ ಸಂಕ್ಷಿಪ್ತ ಜೀವನ ಚರಿತ್ರೆಗಳಾಗಿ, ಚರ್ವಿತ ಚರ್ವಣಗಳಾಗಿ ಉಳಿದು ಬಿಡುತ್ತವೆ. ಯಾವುದೇ ಹೊಸ ಆಲೋಚನೆ,

ವಿಚಾರಗಳನ್ನು ಹೇಳಲಾರದ ನೀರಸ ರಚನೆಗಳಾಗಿ ಕಂಡುಬರುತ್ತವೆ. ಸಿ.ಪಿ. ಸಿದ್ಧಾಶ್ರಮರ 'ಬೋಧಿಸತ್ವ', ಶ್ಯಾಮಸುಂದರ ಬಿದಿರಕುಂದಿ ಅವರ 'ಬುದ್ಧ ನಗೆ', ಸತ್ಯನಾರಾಯಣರಾವ್ ಅಣತಿ ಅವರ 'ನಗುವ ಬುದ್ಧ', ವೈ.ಎಂ ಪರಮೇಶ್ವರಯ್ಯ ಅವರ 'ಭಗವಾನ್ ಬುದ್ಧ', ಬಿ.ಎ. ಸನದಿ ಅವರ 'ಮಲಗಿರುವ ಬುದ್ಧ', ನಾ. ದಯಾನಂದರ 'ಬಾಗಿಲ ಬಳಿಯೇ ಬೋಧಿವೃಕ್ಷ' ಮುಂತಾದ ಕವಿತೆಗಳನ್ನು ಉದಾಹರಣೆಯಾಗಿ ಹೆಸರಿಸಬಹುದು.

ಇನ್ನು ಎರಡನೆಯ ಭಾಗದ ಕವಿತೆಗಳು ಬುದ್ಧನನ್ನು ತನ್ನ ಕಾಲದ ಆಧುನಿಕ ಸಂವೇದನೆಗಳೊಂದಿಗೆ ಮುಖಾಮುಖಿಯಾಗುತ್ತವೆ. ಇಲ್ಲಿ ಬುದ್ಧ ಮತ್ತು ಆತನ ಬದುಕಿನ ಘಟನೆಗಳು, ತತ್ವಗಳು ಕವಿಯ ಸೃಜನಶೀಲ ಅಭಿವ್ಯಕ್ತಿಯ ಸಾಧನಗಳಾಗಿ ಬಳಕೆಯಾಗಿವೆ. ಪರಂಪರೆಯ ಕೊಳಕುಗಳನ್ನು, ವೈದಿಕಶಾಹಿ ಶಕ್ತಿಗಳನ್ನು ಮತ್ತು ಆಧುನಿಕ ಮನುಷ್ಯನ ಯುದ್ಧ, ಹಿಂಸೆ ಮುಂತಾದ ವಿಕಾರಗಳನ್ನು ವಿರೋಧಿಸುವ ನೈತಿಕ ಅಸ್ತ್ರವಾಗಿ, ಆತ್ಮವಿಮರ್ಶೆಯ ಸಾಕ್ಷಿಪ್ರಜ್ಞೆಯಾಗಿ, ಸಾಂಸ್ಕೃತಿಕ ಬದುಕಿನ ಅಧಃಪತನದ ವಿಡಂಬನೆಯ ಸಾಧನವಾಗಿ, ತನ್ನೆಲ್ಲಾ ಗೊಂದಲ, ಸಂದೇಹ, ದುಃಖ ಅಸಹಾಯಕತೆ, ಆಕ್ರೋಶ, ನೋವುಗಳನ್ನು ನಿವೇದಿಸಿಕೊಳ್ಳುವ ದಾರಿದೀಪವಾಗಿ, ಜಗತ್ತಿನ ಅಜ್ಞಾನ, ಕತ್ತಲೆಯನ್ನು ತೊಡೆಯುವ ಬೆಳಕಾಗಿ, ಜಗತ್ತಿನ ಮುಂದಿರುವ ಅಂತಿಮ ಆಯ್ಕೆಯಾಗಿ ಹೀಗೆ ಹಲವು ನೆಲೆಗಳಲ್ಲಿ ಬುದ್ಧನ ವ್ಯಕ್ತಿತ್ವನ್ನು ಕನ್ನಡ ಕವಿತೆಗಳು ಮುಖಾಮುಖಿಯಾಗಿವೆ.

ಗೌತಮ ಬುದ್ಧನ ದೈಹಿಕ ಚಹರೆ, ಬದುಕು, ಪ್ರತಿಪಾದನೆಗಳಿಗೆ ಸಂಬಂಧಿಸಿದಂತೆ ಖಚಿತ, ಸ್ಪಷ್ಟ ದಾಖಲೆಗಳು ಇಲ್ಲ. ಲಭ್ಯವಿರುವ ದಾಖಲೆಗಳು ಬುದ್ಧನ ಪ್ರವಚನಗಳು, ಧಮ್ಮಪದ, ಜಾತಕ ಕತೆಗಳು, ಅಶ್ವಘೋಶ ಹೇಳಿದ ಕತೆಗಳು, ತ್ರಿಪಿಟಕಗಳು, ಜನಪದ ನಂಬಿಕೆಗಳು, ಅಶೋಕನ ಶಾಸನಗಳು, ಪಾಹಿಯಾನ್, ಹ್ಯೂಯನ್‌ತ್ಸಾಂಗ್, ಮುಂತಾದ ಬರೆಹಗಾರರ ಬರೆಹಗಳು, ಶಿಲ್ಪಗಳು, ಚಿತ್ರಗಳು, ದೇವಳಗಳು, ಸ್ತೂಪಗಳು, ಬೌದ್ಧರ ಆಚರಣೆ, ನಂಬಿಕೆಗಳು ಇವೇ ಮುಂತಾದ ಆಧಾರಗಳು ಇವೆ. ಅಲ್ಲದೆ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳೂ ಇವೆ. ಇವೆಲ್ಲ ಬುದ್ಧನ ಕಾಲಾನಂತರ ರಚಿತವಾದವುಗಳು. ಇವುಗಳು ದಂತಕತೆಗಳಿಂದ ತುಂಬಿಹೋಗಿವೆ. ಇವುಗಳಲ್ಲಿ ವಾಸ್ತವ ಎಷ್ಟು ಕಟ್ಟುಕತೆ ಎಷ್ಟು ಎಂದು ವಿಂಗಡಿಸುವುದು ಸುಲಭದ ಕೆಲಸವಲ್ಲ. ಈ ನಿಟ್ಟಿನಲ್ಲಿ ಕನ್ನಡ ಕಾವ್ಯ ಇವುಗಳನ್ನು ಹೇಗೆ ನಿರ್ವಹಿಸಿದೆ ಎಂಬುದು ಕುತೂಹಲಕಾರಿ. ದಂತಕತೆಗಳಾಗಿರುವ ಬುದ್ಧನ ಬದುಕು ಮತ್ತು ವ್ಯಕ್ತಿತ್ವವನ್ನು ಹೊಸ ಪ್ರಜ್ಞೆಯಲ್ಲಿ ಮಂಡಿಸುತ್ತಿವೆಯೋ ಅಥವಾ ಈಗಾಗಲೇ ಇರುವ ಪ್ರಸಿದ್ಧ ಕಥಾನಕಗಳ ಯಥಾವತ್ ನಿರೂಪಣೆಗಳೋ ಎಂಬ ವಿಚಾರಗಳನ್ನು ಕವಿತೆಗಳ ಅಧ್ಯಯನದ ಮೂಲಕ ಕಂಡುಕೊಳ್ಳಬೇಕಾಗಿದೆ. ಯಾವುದೇ ದಂತಕತೆಯನ್ನಾದರೂ ಅವುಗಳನ್ನು ಆಧುನಿಕ ಬದುಕಿನ ಅಗತ್ಯಗಳಿಗೆ ಸೃಜನಶೀಲವಾಗಿ ದುಡಿಸಿಕೊಳ್ಳುವ ಕಲೆ ಸಾಹಿತ್ಯ ಪ್ರಕಾರಕ್ಕೆ ಅಂತರ್ಗತವಾಗಿರುತ್ತದೆ. ಇಲ್ಲವಾದಲ್ಲಿ ಒಂದೇ ವಸ್ತುವುಳ್ಳ ಹಲವು ಕೃತಿಗಳು ಜನ್ಮತಳೆಯುತ್ತಿರಲಿಲ್ಲ.

ಬುದ್ಧನನ್ನು ಕುರಿತ ಕವಿತೆಗಳು ಬಹುತೇಕವಾಗಿ ಬುದ್ಧ ಅರಮನೆಯನ್ನು ತೊರೆದು ಕಾಡಿಗೆ ಹೋದ ಪ್ರಸಂಗವನ್ನೂ, ಅದಕ್ಕೆ ಕಾರಣವಾದ ಆತ ಮೊದಲ ಬಾರಿಗೆ ನೋಡಿದ ಮುಪ್ಪು, ರೋಗಿ, ಸಾವು, ಹಸನ್ಮುಖಿ ಸನ್ಯಾಸಿ ದೃಶ್ಯಗಳ ಬಗೆಗಿನ ಕತೆಗಳ ಪ್ರಸ್ತಾಪ ಮಾಡುತ್ತವೆ. ಆದರೆ ಯಾವ ಕವಿತೆಗಳೂ ಆ ಕತೆಯನ್ನು ಅನುಮಾನಿಸುವುದಾಗಲೀ, ಪ್ರಶ್ನಿಸುವುದಾಗಲೀ ಮಾಡುವುದಿಲ್ಲ. ಅದನ್ನು ಒಪ್ಪಿ ನಿರೂಪಿಸುತ್ತವೆ. ಗೌತಮ ತನ್ನ

ಇಪ್ಪತ್ತೊಂದನೇ ವಯಸ್ಸಿನವರೆಗೆ ಈ ನಾಲ್ಕು ದೃಶ್ಯಗಳನ್ನು ನೋಡಿರಲಿಲ್ಲವೆಂಬುದನ್ನು ಹೇಗೆ ನಂಬುವುದು. ದುಃಖವೆಂದರೇನು ಎಂದು ತಿಳಿಯದೆ ಮುಗ್ಧನಾಗಿ ಬೆಳೆದನೆಂದು ಹೇಗೆ ತಿಳಿಯುವುದು? ಈ ಬಗೆಯ ಪ್ರಶ್ನೆಗಳನ್ನು ಕವಿತೆಗಳು ಎತ್ತುವುದಿಲ್ಲ. ಅಥವಾ ಈ ಕತೆಗಳನ್ನು ಸಾಂಕೇತಿಕವಾಗಿ ಗ್ರಹಿಸುವ, ಸೃಜನಶೀಲವಾಗಿ ಬಳಸಿಕೊಳ್ಳುವ ಪ್ರಯತ್ನಗಳನ್ನೂ ಮಾಡಲಿಲ್ಲ. ಅಂಬೇಡ್ಕರ್ ಅವರು ಬುದ್ಧ ಸಾಮ್ರಾಜ್ಯ ತೊರೆದು ಹೋಗಬೇಕಾದ ಅನಿವಾರ್ಯ ಘಟನೆಯ ಬಗೆಗೆ ಕೊಡುವ ಐತಿಹಾಸಿಕ ಕಾರಣವನ್ನು ಯಾರೂ ಗಮನಿಸಿದಂತೆ ಕಾಣುವುದಿಲ್ಲ. ಯಾವ ಕವಿತೆಗಳೂ ಇದನ್ನು ಪ್ರಸ್ತಾಪಿಸುವುದಿಲ್ಲ. ನದಿನೀರಿನ ಹಂಚಿಕೆಯ ವಿವಾದವೊಂದು ಎರಡು ಸಮುದಾಯದವರ ನಡುವೆ ಯುದ್ಧಕ್ಕೆ ಕಾರಣವಾಗುವ ಸಂದರ್ಭದಲ್ಲಿ ಯುದ್ಧವನ್ನೂ, ಅದರ ಪರಿಣಾಮವಾದ ದ್ವೇಷ, ಹಿಂಸೆಯನ್ನೂ ತಡೆಗಟ್ಟಲು ಮಾಡಿದ ಹೋರಾಟದ ಫಲವಾಗಿ ದೇಶಭ್ರಷ್ಟನಾಗಿ ಕಾಡಿಗೆ ಹೋಗಬೇಕಾದ ಅನಿವಾರ್ಯತೆ ಬುದ್ಧನಿಗೆ ಉಂಟಾಯಿತು. ನಂಬಬಹುದಾದ ಈ ಐತಿಹಾಸಿಕ ಕಾರಣದ ಪ್ರಸ್ತಾಪ ಯಾವ ಕವಿತೆಗಳಲ್ಲೂ ಕಂಡುಬರುವುದಿಲ್ಲ. ಇದು ಆ ಬಗೆಯ ಅರಿವಿನ ಕೊರತೆಯಿಂದಾದ ಲೋಪವೋ ಅಥವಾ ದಂತಕತೆಯ ಬಗೆಗಿನ ಮೋಹದಿಂದಾದ ಯಡವಟ್ಟೋ ಅರ್ಥವಾಗುತ್ತಿಲ್ಲ. ಮ.ನ. ಜವರಯ್ಯ ತಮ್ಮ 'ಜಲ' ನಾಟಕದಲ್ಲಿ ಈ ಘಟನೆಯನ್ನು ವಸ್ತುವಾಗಿಸಿಕೊಂಡು ವಿವೇಚಿಸಿದ್ದಾರೆ. ಆದರೆ ಕವಿತೆಗಳು ಇದನ್ನು ಬಳಸಿಕೊಂಡಿಲ್ಲ. ಕವಿಗಳಿಗಿರಬೇಕಾದ ಚಾರಿತ್ರಿಕ ಪ್ರಜ್ಞೆ, ನೈಜತೆಯನ್ನು ಶೋಧಿಸಿಕೊಡಬೇಕಾದ ನೈತಿಕ ಜವಾಬ್ದಾರಿ, ರೂಪಕವಾಗಿ ಕಟ್ಟಿಕೊಡಬಹುದಾದ ಕತೃತ್ವಶಕ್ತಿ ಪ್ರಕಟಗೊಳ್ಳದಿದ್ದಾಗ ಕವಿತೆಗಳು ಸೋಲುತ್ತವೆ ಎಂಬುದಕ್ಕೆ ಇವು ಸಾಕ್ಷಿಯಾಗಬಲ್ಲವು. ಇವೆಲ್ಲದರ ನಡುವೆಯೂ ಕನ್ನಡ ಕಾವ್ಯ ಬುದ್ಧನ ವ್ಯಕ್ತಿತ್ವದ ಅನನ್ಯತೆಯನ್ನು ಶೋಧನೆಗೆ ಒಳಪಡಿಸುವ ಮಾರ್ಗಗಳು ವಿಶಿಷ್ಟವಾದವುಗಳಾಗಿವೆ.

ಚರಿತ್ರೆಯುದ್ದಕ್ಕೂ ಬುದ್ಧನ ಜತೆಗೇ ನಾವು ಬೆಳೆದಿದ್ದೇವೆ ಹಾಗೂ ಆತ ಕೂಡ ನಮ್ಮ ಜೊತೆಯಲ್ಲಿಯೇ ಬೆಳೆದಿದ್ದಾನೆ. ಚಾರಿತ್ರಿಕ ಚಲನೆಯಲ್ಲಿ ಶತಮಾನದಿಂದ ಶತಮಾನಕ್ಕೆ ಬುದ್ಧ ನಮ್ಮ ನಾಗರೀಕತೆಯ ಗ್ರಹಿಕೆಯಲ್ಲಿ ಬದಲಾಗುತ್ತಾ ಬಂದಿದ್ದಾನೆ. ಹೀಗೆ ಬದಲಾಗುತ್ತಾ ಬಂದ ಬುದ್ಧ ಜನರ ಕೈಯಲ್ಲಿ, ಧಾರ್ಮಿಕ ಮೂಲಭೂತವಾದಿಗಳ ಕೈಯಲ್ಲಿ, ರಾಜಕಾರಣದ ವಸ್ತುವಾಗಿ ಏನೇನೋ ಆಗಿ ಹೋಗಿದ್ದಾನೆ. ದೈವವಾಗಿ, ದೇವದೂತನಾಗಿ, ಅವತಾರಿಯಾಗಿ, ಪವಾಡ ಪುರುಷನಾಗಿ, ಮನುಷ್ಯನಲ್ಲಿನ ಹಿಂಸೆ, ಕ್ರೌರ್ಯ, ಅನೈತಿಕತೆ, ಭ್ರಷ್ಟತೆಗಳನ್ನು ಕಂಡು ಸಿನಿಕನಾಗಿ, ಹುಚ್ಚನಾಗಿ, ಕಟುಕನಾಗಿ ಕಂಡುಬಂದಿದ್ದಾನೆ. ಮೂಲ ಬುದ್ಧ ಹೋಗಿ ಅನೇಕ ಬುದ್ಧರನ್ನು ರೂಪಿಸಲಾಗಿದೆ. ಅವರವರ ಅಗತ್ಯಗಳಿಗೆ ಅನುಗುಣವಾಗಿ ಬುದ್ಧನನ್ನು ಕಲ್ಪಿಕೊಳ್ಳಲಾಗಿದೆ. ಬುದ್ಧನನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿ ಸೋತಿದ್ದೇವೆ. ಯಾವ ಯಾವುದೋ ರೂಪಗಳನ್ನು ಕೊಟ್ಟು ನಗೆಪಾಟಲು ಮಾಡಿದ್ದೇವೆ. ಗೌತಮ ಬುದ್ಧನನ್ನು ದೇವತಾ ಪುರುಷನೆಂದು ತಿಳಿಯುವುದಕ್ಕಿಂತ ಒಬ್ಬ ಶ್ರೇಷ್ಠ ಮಾನವನೆಂದು ತಿಳಿಲು ಪ್ರಯತ್ನಿಸಲಾಗಿದೆ. ಬುದ್ಧನ ಬಗೆಗೆ ಈಗಾಗಲೇ ಚಲಾವಣೆಯಲ್ಲಿರುವ ಪರಿಕಲ್ಪನೆಗಳು ಕವಿತೆಯಲ್ಲಿ ಅದರ ಪುನರಾವರ್ತನೆಗಳಾಗಿಯೂ, ಹೊಸದನ್ನು ಮಂಡಿಸುವ ಯತ್ನವಾಗಿಯೂ ಮೂಡಿಬಂದಿರುವುದನ್ನು ಕಾಣಬಹುದು.

### ೪.೨.೧ ಬುದ್ಧನ ವ್ಯಕ್ತಿತ್ವ : ಅನನ್ಯತೆಯ ಶೋಧ

ಸಮಕಾಲೀನ ಬದುಕನ್ನು ಕಾಡುತ್ತಿರುವ ಹಲವು ಜ್ವಲಂತ ಸಮಸ್ಯೆಗಳ ನಡುವೆ ಬುದ್ಧನ ಪ್ರತಿಪಾದನೆಗಳು ಹೇಗೆ ಮಾನವೀಯವಾಗಿ, ಜೀವಪರವಾಗಿ ನಿಲ್ಲಬಲ್ಲವು ಎಂಬುದನ್ನು ಕನ್ನಡ ಕವಿಗಳು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ತನ್ನ ಕಾಲದ ಬದುಕನ್ನು ಹಸನುಗೊಳಿಸುವ, ತಿದ್ದುವ, ಸಾಮಾಜಿಕ ಹೊಣೆಗಾರಿಕೆಯನ್ನು ಹೊತ್ತ ಸಾಹಿತ್ಯ ತನ್ನ ಪರಂಪರೆಯ ವ್ಯಕ್ತಿತ್ವಗಳನ್ನು ಶೋಧಿಸಿಕೊಳ್ಳುವ ಮೂಲಕ ಪರಿಹಾರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದೆ. ಈ ನಿಟ್ಟಿನಲ್ಲಿ ಕನ್ನಡ ಕವಿಗಳು ಬುದ್ಧನ ವ್ಯಕ್ತಿತ್ವವನ್ನು ಕಂಡಿರುವ ಹಾಗೂ ಕಟ್ಟಿಕೊಟ್ಟಿರುವ ಬಗೆಯನ್ನು ವಿಶ್ಲೇಷಿಸುವುದು ಮಹತ್ವದ ಅಧ್ಯಯನವಾಗುತ್ತದೆ.

ಬುದ್ಧನನ್ನು ಸಮಕಾಲೀನ ಜಗತ್ತಿನ ಹಲವು ಸಮಸ್ಯೆಗಳ ನಡುವೆ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿರುವ ಬಗೆ, ಎಲ್ಲಾ ಸಮಸ್ಯೆಗಳಿಗೂ ಬುದ್ಧನಲ್ಲಿ ಉತ್ತರವನ್ನು ಹುಡುಕುವ ಕುತೂಹಲ, ಆತನ ಎದುರಿಗೆ ತಮ್ಮೆಲ್ಲಾ ಒಳಗು ಹೊರಗನ್ನು ತೆರೆದುಕೊಳ್ಳುವ ಪ್ರಾಮಾಣಿಕ ನಡೆ ಇವೆಲ್ಲವೂ ಬುದ್ಧನ ವ್ಯಕ್ತಿತ್ವದ ಅನನ್ಯತೆಯನ್ನೂ, ಕನ್ನಡ ಕವಿಗಳ ಮಾನವೀಯ ತುಡಿತಗಳನ್ನೂ ಧ್ವನಿಸುತ್ತವೆ. ಕನ್ನಡ ಕವಿಗಳು ತಮ್ಮ ಕಾವ್ಯದಲ್ಲಿ ಬುದ್ಧನನ್ನು ಅರಿವು, ಬೆಳಕು, ಕರುಣಾಮೂರ್ತಿ, ಕ್ರಾಂತಿಕಾರಿ, ದೀಮಂತದ ಎಚ್ಚರ, ಪುಣ್ಯಮಯ ಮೂರ್ತಿ, ಕರುಣೆಯ ಬೆಳಕು, ತಾಯಿ ಕರುಳು, ಪ್ರೇಮಮಯ ಮೂರ್ತಿ, ಅಮಲ ತೇಜೋವಲಯ, ಜಗದ ತಾಯಿ, ಮುಂತಾದ ರೂಪಕಗಳಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ. ಈ ಎಲ್ಲಾ ರೂಪಕಗಳು ಬುದ್ಧನ ವ್ಯಕ್ತಿತ್ವದಲ್ಲಿನ 'ತಾಯ್ತನ'ದ ಗುಣಗಳನ್ನು ಗುರುತಿಸುತ್ತವೆ. ಜಗತ್ತಿನ ಸಂಕಟಗಳಿಗೆ ಮರುಗುವ, ಸಂಕಟಗಳಿಂದ ಜಗತ್ತನ್ನು ಪಾರುಮಾಡುವ ಬುದ್ಧನ ತುಡಿತಗಳು ನಿಜವಾದ ತಾಯ್ತನದ ಪ್ರತೀಕಗಳು. ಜಗತ್ತನ್ನು ತಾಯ್ತನದ ಪ್ರೀತಿಯಿಂದ ತಬ್ಬಿಕೊಂಡ ಬುದ್ಧನಲ್ಲಿ ಆ ಗುಣವನ್ನು ಗುರುತಿಸುವ ಹಾಗೂ ಅದನ್ನು ಸಮಕಾಲೀನ ಜಗತ್ತಿಗೆ ಮೌಲ್ಯವಾಗಿ ರೂಪಿಸಿಕೊಡುವ ಅತ್ಯಂತ ಮಾನವೀಯ ಕಾಳಜಿಯ ಕೆಲಸವನ್ನು ಕನ್ನಡ ಕವಿಗಳು ಮಾಡಿದ್ದಾರೆ. ಮನುಷ್ಯನಲ್ಲಿ ರಾಕ್ಷಸೀ ಪ್ರವೃತ್ತಿಗಳು ವಿಜೃಂಭಿಸುತ್ತಿರುವ ಆಧುನಿಕ ಜಗತ್ತನ್ನು ಬುದ್ಧನ ತಾಯ್ತನ ಮಾತ್ರ ಕಾಪಾಡಬಲ್ಲುದು, ಪರಿವರ್ತಿಸಬಲ್ಲದು ಎಂಬ ನಿಲುವು ಅನೇಕ ಕವಿತೆಗಳಲ್ಲಿ ವ್ಯಕ್ತವಾಗುತ್ತದೆ. ಬುದ್ಧ ಕತ್ತಲನ್ನು ಬೆಳಗುವ, ಕೇಡನ್ನು ಪರಿವರ್ತಿಸುವ, ನಿಸರ್ಗ ವಿವೇಕದೊಂದಿಗೆ ಬದುಕುವ ಮಾರ್ಗಗಳನ್ನು ಮಾನವ ನಾಗರೀಕತೆಗೆ ಕೊಡುಗೆಯಾಗಿ ನೀಡಿದವನು. ಅವನ ಈ ಕೊಡುಗೆಗಳನ್ನು ಸಮಕಾಲೀನ ಬದುಕಿನ ಭಾಗವಾಗಿಸುವ ತುಡಿತಗಳು ಕವಿತೆಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು. ಬುದ್ಧನನ್ನು ಕನ್ನಡ ಕಾವ್ಯ ತನ್ನ ಮಾನವೀಯ ಮತ್ತು ಪ್ರಗತಿಪರ ಕಾಳಜಿಗಳ ಅಭಿವ್ಯಕ್ತಿಗೆ ಸಾಧನವನ್ನಾಗಿ ಬಳಸಿಕೊಂಡಿದೆ. ಇಲ್ಲಿ ಬುದ್ಧ ಕವಿಗಳಿಗೆ ಒಂದು ನೈತಿಕಶಕ್ತಿಯಾಗಿ ಕಂಡಿರುವುದನ್ನು ಕಾಣಬಹುದು.

ಮನುಷ್ಯನ ದು:ಖಕ್ಕೆ ಕಾರಣಗಳನ್ನು ಹಾಗೂ ನೆಮ್ಮದಿಗೆ ಮಾರ್ಗಗಳನ್ನು ಹುಡುಕಿಕೊಂಡು ಹೊರಟ ಬುದ್ಧ ಅಂತಿಮವಾಗಿ ಮಾನವ ನಾಗರೀಕತೆ ಎದುರಿಸುತ್ತಿರುವ ಭೀಕರ ಸಮಸ್ಯೆಗಳಿಗೆ ಶಾಶ್ವತ ಪರಿಹಾರಗಳನ್ನು ಕಂಡುಕೊಂಡ. ತಾನು ಕಂಡುಕೊಂಡ ಸತ್ಯಗಳನ್ನು ಪ್ರತಿಯೊಬ್ಬರೂ ಸ್ವಾನುಭವದ ಮೂಲಕ ಕಂಡುಕೊಳ್ಳುವಂತೆ ಪ್ರೇರೇಪಿಸಿದ. ಆತನ ವಿಚಾರಗಳು, ಅವುಗಳನ್ನು ಜನರಿಗೆ ತಲುಪಿಸಲು ಅನುಸರಿಸಿದ ಮಾರ್ಗಗಳು ಹಾಗೂ ಅವನ ಆತ್ಯಂತಿಕ ಕಾಳಜಿಗಳು ಮಾನವೀಯ ಧರ್ಮದ ನೆಲೆಯಿಂದ ಕೂಡಿದ್ದವು. ವೈದಿಕ ಧರ್ಮದ ಅಮಾನವೀಯ ಹಾಗೂ ಜೀವವಿರೋಧಿ ನಡೆಯನ್ನು ಮೊದಲ ಬಾರಿಗೆ ವಿರೋಧಿಸಿದವನು ಬುದ್ಧ. ವೈದಿಕ

ಧರ್ಮ ತನ್ನ ಅರ್ಥರಹಿತ ಆಚಾರ, ಮೂಢನಂಬಿಕೆಗಳಿಂದ ದೇವರು, ಧರ್ಮ ಮೋಕ್ಷ, ಪರದ ಚಿಂತನೆ, ಮುಂತಾದ ಅಜ್ಞಾನಗಳನ್ನು ಬಿತ್ತಿ ಜನರನ್ನು ಕತ್ತಲೆಯಲ್ಲಿ ಇರಿಸಿತ್ತು. ಇಂಥ ಸಂದರ್ಭದಲ್ಲಿ ನಿಜವಾದ ಮಾನವೀಯ ಧರ್ಮವನ್ನು ಪ್ರತಿಪಾದಿಸಿ, ಧರ್ಮದ ಅರ್ಥವನ್ನು ಮನವರಿಕೆ ಮಾಡಿಕೊಡುತ್ತಾನೆ. ವೈದಿಕ ಧರ್ಮವನ್ನು ಬುದ್ಧ ವೈಚಾರಿಕ ಧೋರಣೆಯಿಂದ ಎದುರಾಗುತ್ತಾನೆ. ಅದರ ಆಚರಣೆ, ಮೂಢನಂಬಿಕೆಗಳನ್ನು ವಿರೋಧಿಸಿ ಜನರಲ್ಲಿ ವಿಚಾರವಂತಿಕೆಯನ್ನು ಬಿತ್ತುತ್ತಾನೆ. ವೈದಿಕ ಧರ್ಮ ಜನರ ಪ್ರಜ್ಞೆಯನ್ನು ಆಳುತ್ತಿದ್ದ ಸಂದರ್ಭದಲ್ಲಿ ಜನರ ಪ್ರಜ್ಞೆಯನ್ನು ಸ್ವತಂತ್ರಗೊಳಿಸುವ ಕೆಲಸ ಮಾಡುತ್ತಾನೆ. ಕುವೆಂಪುರವರು ಆ ಕಾರಣಕ್ಕೆ ಬುದ್ಧನನ್ನು 'ಕ್ರಾಂತಿಕಾರಿ' ಎಂದು ಕರೆಯುತ್ತಾರೆ. ಬುದ್ಧನನ್ನು ವೈಚಾರಿಕ ಆಕೃತಿಯಾಗಿ ಕಾಣುವ ಕುವೆಂಪು ಅವರ ಒಟ್ಟು ಸಾಹಿತ್ಯ ದರ್ಶನದ ಹಿಂದೆ ಬುದ್ಧನ ತತ್ವಗಳ ಪ್ರಭಾವವನ್ನು ಕಾಣಬಹುದು. ಅವರ ಕಾನೂರು ಹೆಗ್ಗಡತಿ ಕಾದಂಬರಿಯ ಅಂತ್ಯದಲ್ಲಿ ಹೂವಯ್ಯ ಅಂತಿಮವಾಗಿ ಬೌದ್ಧ ಸನ್ಯಾಸಿಯಾಗಿ ನಿಲ್ಲುವುದು, 'ಸ್ಮಶಾನ ಕುರುಕ್ಷೇತ್ರ' ನಾಟಕದಲ್ಲಿ ಬುದ್ಧಾವತಾರದ ಸನ್ನಿವೇಶ ಕಲ್ಪನೆಗಳು ಇದಕ್ಕೆ ಉದಾಹರಣೆ.

ಧರ್ಮ ತನ್ನ ಮೂಲ ಅರ್ಥವನ್ನು ಕಳೆದುಕೊಂಡು ಶೋಷಣೆಯ ಸಾಧನವಾಗಿ ಬಳಕೆಯಾಗುತ್ತಿದ್ದ ಸಂದರ್ಭದಲ್ಲಿ ನಿಜವಾದ 'ಧರ್ಮ'ವನ್ನು ಪ್ರತಿಪಾದಿಸಿದವನು ಬುದ್ಧ ಎಂದು ಕುವೆಂಪು ಗುರುತಿಸುತ್ತಾರೆ. ಧರ್ಮಗಳ ಶೋಷಕ ಪ್ರವೃತ್ತಿಗಳನ್ನು ವಿರೋಧಿಸಿ, ಅವುಗಳ ಜಾಗದಲ್ಲಿ ವೈಚಾರಿಕ ಮತ್ತು ನಿಸರ್ಗ ವಿವೇಕದ ಬದುಕಿನ ಕ್ರಮಗಳನ್ನು ಪ್ರತಿಪಾದಿಸಿದವನು ಬುದ್ಧ. ಪ್ರತಿಯೊಂದು ಧರ್ಮದ ಮೂಲಭೂತವಾದ ಗುರಿ ಮಾನವತೆಯ ಉದ್ಧಾರ. ಮನುಷ್ಯನ ಅಜ್ಞಾನ ಮತ್ತು ಮೂರ್ಖತನಗಳನ್ನು ತೊಲಗಿಸಿ ಅವರಲ್ಲಿ ಅರಿವನ್ನು ಮೂಡಿಸುವುದು 'ಧರ್ಮ'ದಿಂದ ಆಗಬೇಕಾದ ಮುಖ್ಯ ಕೆಲಸ. ಆದರೆ ಧರ್ಮಗಳು ಇಂದು ಅರ್ಥವಿಲ್ಲದ ಆಚಾರ, ಕರ್ಮ, ಕಟ್ಟಳೆಗಳ ಸಂಕೋಲೆಗಳಲ್ಲಿ ಮನುಷ್ಯನನ್ನು ಬಂಧಿಸಿ ಅವನನ್ನು ಮತ್ತಷ್ಟು ಕುಗ್ಗಿಹೋಗುವ ಹಾಗೆ ಮಾಡಿವೆ. ಹೀಗೆ ಧರ್ಮದ ಮನೋನ್ನತಿಯೇ ಕುಗ್ಗಿ ಹೋಗುತ್ತಿರುವಾಗ ಜನರಲ್ಲಿ ಪ್ರಾಪಂಚಿಕ ಅರಿವನ್ನು ಮೂಡಿಸಿ; ಆ ಅರಿವೇ ನಿಜವಾದ ಧರ್ಮವೆಂದು ಪ್ರತಿಪಾದಿಸಿದ 'ಪುಣ್ಯಮತಿಮೂರ್ತಿ' ಬುದ್ಧ. ಜನರನ್ನು ಅಜ್ಞಾನದಲ್ಲಿಡುವ ಧರ್ಮ-ಜಗದ್ಗುರುಗಳಿಗಿಂತ ಜನರಲ್ಲಿ ಅರಿವನ್ನು ಬಿತ್ತುವುದೇ ನಿಜವಾದ ಧರ್ಮ; ಹಾಗೆ ಮಾಡುವವರೇ ನಿಜವಾದ ಜಗದ್ಗುರುಗಳು ಎನ್ನುತ್ತಾರೆ ಕುವೆಂಪು.

ಕುವೆಂಪು ಅವರ 'ಬುದ್ಧದೇವ' ಕವಿತೆ ಬುದ್ಧನ ವೈದಿಕ ವಿರೋಧಿ ನಿಲುವನ್ನು, ಅದಕ್ಕೆ ಪರ್ಯಾಯವಾಗಿ ಅವನು ಜನರಲ್ಲಿ ಬಿತ್ತಿದ ಸನ್ಮತಿಯ ಪ್ರಜ್ಞೆಯನ್ನು ಗುರುತಿಸುತ್ತದೆ. ಇಲ್ಲಿ ಕವಿ ಬುದ್ಧನ ವ್ಯಕ್ತಿತ್ವದ ಬಹುಮುಖಗಳನ್ನು ಹಿಡಿದಿಡಲು ಪ್ರಯತ್ನಿಸಿದ್ದಾರೆ. 'ಪದ್ಮ ಪೀಠದ ಮೇಲೆ ಧ್ಯಾನಸ್ತ ಸ್ಥಿತಿಯಲ್ಲಿ ಕುಳಿತಿರುವ' ಬುದ್ಧನ ಬಾಹ್ಯ ವ್ಯಕ್ತಿತ್ವದ ಚಹರೆಗಳನ್ನು ಹಿಡಿದಿಡುವ ಮೂಲಕ ಆರಂಭವಾಗುವ ಕವನ ಬುದ್ಧನ ವ್ಯಕ್ತಿತ್ವದ ಮಹೋನ್ನತಿಗೆ ಕಾರಣವಾದ ಗುಣಗಳನ್ನು ಕಟ್ಟಿಕೊಡುವ ಬಗೆ ವಿಶಿಷ್ಟವಾದದ್ದು. ಬುದ್ಧನಲ್ಲಿ ಸ್ಫೂರ್ತಿಯ ಗುಣವನ್ನೂ, ಮಾನವರ ಮೂರ್ಖತೆಯನ್ನು ದಹಿಸುವ ಪ್ರಖರತೆಯನ್ನು ಗುರುತಿಸುವ ಕುವೆಂಪು ಆ ಕಾಲಘಟ್ಟದಲ್ಲಿ ಜನರ ಪ್ರಜ್ಞೆಯನ್ನು ಆವರಿಸಿಕೊಂಡಿದ್ದ ಮೌಢ್ಯತೆ, ಅಧಾರ್ಮಿಕತೆ, ಅಜ್ಞಾನಗಳನ್ನು ತೊಡೆದು ಜನರಲ್ಲಿ ಮತಿಯನ್ನು ಮೂಡಿಸಿದ 'ಮಹಾನ್ ಸಾಧಕ'ನನ್ನಾಗಿ ಕಾಣುತ್ತಾರೆ.

ಅರ್ಥವಿಲ್ಲದ ಕರ್ಮತತಿಯ ಮರುರಂಗದಲಿ

ಶುಷ್ಕ ಆಚಾರಸೈಕತದಲ್ಲಿ ನಡೆಗೆಟ್ಟು
ನಿರ್ಮಲ ವಿಚಾರನದಿ ಲಯವಾಗುತಿರೆ ; ಕಟ್ಟು
ಕಟ್ಟಳೆಯ ಲೌಹ ಶೃಂಖಲೆಯ ಯಮಸಂಗದಲಿ
ಕುಬ್ಜವಾಗುತಲಿರಲು ಧರ್ಮದ ಮಹೋನ್ನತಿಯು,
ವೈರಾಗ್ಯ ವರ್ಷವನು ಕರೆದು, ಜನರಲಿ ಮತಿಯು
ಶ್ರುತಿಯ ಬಂಡೆಯ ಬಿರಿದು ಮೂಡುವಂತೆಸಗಿರುವೆ![5]

ಇಲ್ಲಿ ಕುವೆಂಪು ಪುರೋಹಿತಶಾಹಿಯ ಕಪಿಮುಷ್ಟಿಯಲ್ಲಿ ಸಿಲುಕಿರುವ ಧರ್ಮದ ಸೀಮಿತತೆಯನ್ನು ಹೇಳುತ್ತಲೇ ಬುದ್ಧ ಅವುಗಳನ್ನು ಮೀರುವ ದಾರಿಯನ್ನು ತೋರಿದ ಬಗೆಯನ್ನು ಗುರುತಿಸುತ್ತಾರೆ. ಧರ್ಮದ ಮಹೋನ್ನತಿಯು ನಾಶವಾಗುತ್ತಿರುವಾಗ, ಜನತೆ ಅರ್ಥವಿಲ್ಲದ ಆಚಾರ ನಂಬಿಕೆಗಳಲ್ಲಿ ಮುಳುಗಿ ಅಜ್ಞಾನದಲ್ಲಿರುವ ಸಂದರ್ಭದಲ್ಲಿ ಅವೆಲ್ಲವನ್ನು ದಹಿಸುವ 'ಮಹಾಜ್ವಾಲೆ'ಯಾಗಿ ಬಂದವನು ಬುದ್ಧ ಎನ್ನುತ್ತಾರೆ. ಇಲ್ಲಿ ಬಳಸಲಾದ 'ಮಹಾಜ್ವಾಲೆ' ರೂಪಕ ಸುಡುವ ಹಿಂಸೆಯ ಅರ್ಥವನ್ನೇ ಧ್ವನಿಸುತ್ತಿದೆ. ಬುದ್ಧ ಹಿಂಸೆಯನ್ನು ಪ್ರೀತಿಯಿಂದ ಪರಿವರ್ತಿಸುವ ಬಗೆಯನ್ನು ಪ್ರತಿಪಾದಿಸಿದವನು. ಕೇಡನ್ನು ನಾಶಮಾಡುವ ಮಾತನ್ನು ಎಂದೂ ಆಡುವುದಿಲ್ಲ. ಅದರ ಪರಿವರ್ತನೆಯ ಬಗ್ಗೆ ಮಾತನಾಡುತ್ತಾನೆ. ಆದರೆ ಕುವೆಂಪು ಬುದ್ಧನ ವೈದಿಕ ವಿರೋಧೀ ನಿಲುವುಗಳನ್ನು ಸಮರ್ಥಿಸುವ ಭರದಲ್ಲಿ ಆತನಿಗೆ ಹಿಂಸೆಯ ರೂಪಕವನ್ನು ಬಳಸಿಬಿಡುತ್ತಾರೆ. ಈ ಒಂದು ದೋಷದ ನಡುವೆಯೂ ಕುವೆಂಪು ಬುದ್ಧನಲ್ಲಿ ಮೇರು ವ್ಯಕ್ತಿತ್ವವನ್ನು ಕಾಣುತ್ತಾರೆ. ಬುದ್ಧ ಧರ್ಮದ ನಿಜವಾದ ಅರ್ಥವನ್ನು ತಿಳಿಸಿಕೊಟ್ಟಿದ್ದಾನೆ ಎನ್ನುತ್ತಾರೆ. ಬುದ್ಧನ ಪ್ರಕಾರ ಬದುಕಿನಲ್ಲಿ ಪವಿತ್ರತೆಯನ್ನು ಕಾಪಾಡಿಕೊಳ್ಳುವುದೇ ಧರ್ಮ. ಪ್ರತಿಯೊಬ್ಬ ಮನುಷ್ಯನನ್ನೂ ಜ್ಞಾನಿಯನ್ನಾಗಿ, ಪವಿತ್ರನನ್ನಾಗಿ ಮಾಡುವುದೇ ಧರ್ಮದ ಕೆಲಸ. ಸನ್ಮತಿಯ ನಾಗರೀಕತೆಯ ನಿರ್ಮಾಣವೇ ಧರ್ಮದ ಮಹೋದ್ದೇಶವಾಗಬೇಕು. 'ನರನ ಸನ್ಮತಿ'ಯೇ ನಿಜವಾದ ಜಗದ್ಗುರು ಎಂದು ಸಾರಿದವನು ಬುದ್ಧ. ಜನರನ್ನು ಅಜ್ಞಾನದಲ್ಲಿಟ್ಟು ತಮ್ಮನ್ನು ಜ್ಞಾನಿಗಳೆಂದು, ದೇವರುಗಳೆಂದು ಘೋಷಿಸಿಕೊಂಡಿದ್ದ 'ಜಗದ್ಗುರು ಪರಂಪರೆ'ಯನ್ನು, 'ಮಠೀಯ ಪರಂಪರೆ'ಗಳನ್ನು ಕುವೆಂಪು ಬುದ್ಧನ ಮುಖೇನ ವಿರೋಧಿಸುತ್ತಿದ್ದಾರೆ. ಇದು ಬುದ್ಧನ ಬಹುಮುಖ್ಯ ಕೊಡುಗೆ ಎಂದು ಕುವೆಂಪು ಗುರುತಿಸುತ್ತಾರೆ. ಪ್ರತಿಯೊಬ್ಬರೂ ಅರಿವು ಪಡೆಯಬಹುದಾದದ್ದನ್ನು, ಜಗದ್ಗುರುವಾಗಬಹುದಾದುದನ್ನು ಪ್ರಜಾಸತ್ತಾತ್ಮಕವಾಗಿ ವಿವೇಚಿಸಿದವನು ಬುದ್ಧ ಎನ್ನುತ್ತಾರೆ.

ಬುದ್ಧನ ವ್ಯಕ್ತಿತ್ವದ ಮತ್ತೊಂದು ಬಹುಮುಖ್ಯ ಗುಣ ಎಲ್ಲವನ್ನೂ ತಿಳಿಯುವ ಕುತೂಹಲ ಹಾಗೂ ಅದನ್ನು ತನ್ನಲ್ಲಿ ಸದಾ ಜೀವಂತವಾಗಿರಿಸಿಕೊಳ್ಳುವ ಎಚ್ಚರ. ಸಿದ್ಧಾರ್ಥ ಬುದ್ಧನಾದದ್ದು ಮನುಷ್ಯನನ್ನು ಕಾಡುವ ಜಂಜಡಗಳಿಗೆ ಉತ್ತರವನ್ನು ಕಂಡುಕೊಳ್ಳುವ ಕುತೂಹಲದಿಂದ. ಬುದ್ಧನ ವ್ಯಕ್ತಿತ್ವ ವಿಕಾಸದ ಹಿಂದಿನ ಈ ಕ್ರಿಯೆಗಳನ್ನು ಕನ್ನಡ ಕವಿತೆಗಳು 'ಉರಿ' ಮತ್ತು 'ಎಚ್ಚರದ' ರೂಪಕವಾಗಿ ಚರ್ಚಿಸುತ್ತವೆ. ತಿಳಿಯುವ ಆಂತರಿಕ 'ಉರಿ' ಹಾಗೂ ತನ್ನನ್ನು ಅಜ್ಞಾನದಲ್ಲಿರಿಸಲು ಸದಾ ಸೆಳೆಯುವ ಭೌತಿಕ ಜಗತ್ತಿನ ಬಗೆಗೆ ಇರುವ 'ಎಚ್ಚರ' ಇವು ಸಿದ್ಧಾರ್ಥನನ್ನು ಬುದ್ಧನನ್ನಾಗಿಸಿದವು. ಈ ಆಂತರಿಕ 'ಉರಿ' ಯಾರಲ್ಲಿ ತೀವ್ರವಾಗಿರುತ್ತದೆಯೋ ಅವರು ಮಾತ್ರ ಜ್ಞಾನಿಯಾಗಬಲ್ಲರು. ಬೇಂದ್ರೆ ಇದನ್ನು ತಮ್ಮ 'ಬುದ್ಧ' ಕವಿತೆಯಲ್ಲಿ ಈ ರೀತಿ ಗುರುತಿಸುತ್ತಾರೆ.

ಬುದ್ಧ ಬುದ್ಧ . . . .
ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ
ಮಡದಿ ಮಗು ಮನೆ – ಮಾರು ರಾಜ್ಯ –ಗೀಜ್ಯ

ಹೊತ್ತಿರುವ ಉರಿಯಲಿ ಆಯಿತಾಜ್ಯ
ಹಿಂದೆ ಬಿದ್ದವು ಎಲ್ಲೋ ಕುದುರೆ ಕಾಲಾಳು
ಬೆಚ್ಚಿ ಉದಿರಿತು ಎಲ್ಲೋ ಮನದ ಬಾಳು
ಹೊರಟ ಹೊರಟೇ ಹೊರಟ, ಹೊರಟನೆತ್ತೋ
ಸಾಹಸಿಯ ಗೊತ್ತುಗುರಿ ಆವಗೆ ಗೊತ್ತೊ [೧೦]

ಯಾರಲ್ಲಿ ಆಂತರಿಕವಾಗಿ ಅರಿವನ್ನು ಪಡೆಯುವ 'ಉರಿ' ಮತ್ತು ಅಜ್ಞಾನದ ಬಗೆಗಿನ 'ಎಚ್ಚರ' ಇವೆರಡೂ ತೀವ್ರವಾಗಿ ಇರುತ್ತವೆಯೋ ಅವರು ಏರುವ ಎತ್ತರ, ಹೊಂದುವ ವಿಕಾಸ, ಊಹಿಸಲು ಅಸಾಧ್ಯ. ಬುದ್ಧ ಅದಕ್ಕೆ ಸಾಕ್ಷಿಯಾಗಿದ್ದಾನೆ. ಬೇಂದ್ರೆ ಈ ಕವಿತೆಯಲ್ಲಿ ಸಿದ್ಧಾರ್ಥನ ವ್ಯಕ್ತಿತ್ವ ಸ್ಥಗಿತತೆಯಿಂದ ಚಲನಶೀಲವಾದ ಬಗೆಯನ್ನು ಗುರುತಿಸುತ್ತಾರೆ. ಅವರ ಪ್ರಕಾರ 'ಬುದ್ಧ' ಎಂಬುದೊಂದು 'ಎಚ್ಚರ'. ಅವನೊಬ್ಬ ಸಾಹಸಿ. ಮಾನವರ ಸಂಕಟಗಳಿಗೆ ಉತ್ತರವನ್ನು ಹುಡುಕಲು ಎಲ್ಲವನ್ನೂ ತೊರೆದು ಹೊರಟ ಸಾಹಸಿ. ಸ್ಥಗಿತಗೊಂಡ ತನ್ನ ಬದುಕಿಗೆ ಚಲನೆಯನ್ನು ತಂದುಕೊಂಡು ಬಹು ಎತ್ತರ ಎತ್ತರಕ್ಕೆ ಏರಿ ಸೂರ್ಯನ ಬೆಳಕನ್ನು ಮೀರಿ ಕತ್ತಲನ್ನು ಸೀಳಿ ಶಬ್ದ-ಸ್ಪರ್ಶಗಳಿಗೆ ನಿಲುಕದ ಚೈತನ್ಯನಾದವನು. ಇರುವಿಕೆ ಮತ್ತು ಇಲ್ಲದಿರುವಿಕೆಗಳ ನಡುವಿನ ಭೇದವನ್ನು ತೊಡೆದು ಪರಿಶುದ್ಧನಾದವನು. ಇಲ್ಲಿ ಬುದ್ಧ ಮನುಷ್ಯ ತನ್ನ ಅಜ್ಞಾನ ಮೂರ್ಖತನಗಳಿಂದ ಎಚ್ಚೆತ್ತು ಅಲ್ಲಿಂದ 'ಅಡಿಕಿತ್ತು ಇಟ್ಟು' ಎತ್ತರಕ್ಕೆ ಏರುವ, ಏರಿ ಎಲ್ಲವನ್ನೂ ಮೀರಿ ನಿಲ್ಲುವ, ಅರಿವಿನ ಬೆಳಕಾಗುವ ಮನುಷ್ಯ ಚೈತನ್ಯಕ್ಕೆ ಸಂಕೇತವಾಗಿ ನಿಲ್ಲುತ್ತಾನೆ. ಇಲ್ಲಿ 'ಅಡಿಕಿತ್ತು ಇಟ್ಟ' ಇನ್ನುವ ಪದ ಲೌಕಿಕ ಜಂಜಡಗಳಿಂದ ಮುಕ್ತವಾಗುವ ಹಿಂದಿನ ತಲ್ಲಣಗಳನ್ನೂ, ಅದರಿಂದ ಎದುರಾಗುವ ಸವಾಲುಗಳನ್ನು ಹಿಡಿದಿಡುತ್ತಲೇ ಬುದ್ಧನಂತಹವನು ಮಾತ್ರ ತಗ್ಗು – ದಿಣ್ಣೆ, ಬೆಟ್ಟ – ಗುಡ್ಡ ಎಲ್ಲವನ್ನೂ ಮೀರಿ ತನ್ನ 'ಅಡಿ'ಯನ್ನು ಕಿತ್ತುಯಿಟ್ಟು ಚಲನೆಯನ್ನು ತಂದುಕೊಳ್ಳಲು ಸಾಧ್ಯ ಎಂಬುದನ್ನು ಧ್ವನಿಸುತ್ತದೆ. ಹಾಗಾಗಿ ಮನುಷ್ಯ ಏರಬಹುದಾದ ವ್ಯಕ್ತಿತ್ವದ ಔನತ್ಯಕ್ಕೆ ಬುದ್ಧ ಸಾಕ್ಷಿಯಾಗಿ ನಿಲ್ಲುತ್ತಾನೆ. ಮನುಷ್ಯನ ಆಂತರ್ಯದಲ್ಲಿಯೇ ಇರಬಹುದಾದ ಈ 'ಸಾಹಸಶಕ್ತಿ'ಯನ್ನು ಕಂಡುಕೊಳ್ಳುವ 'ಎಚ್ಚರ' ಎಲ್ಲರಿಗೂ ಇರಬೇಕಾದದ್ದು ಮುಖ್ಯ ಎನ್ನುತ್ತಾರೆ ಬೇಂದ್ರೆ, ಬುದ್ಧ ಆ ಎಚ್ಚರದಿಂದ ಅರಿವನ್ನು ಪಡೆದ. ಆ ಅರಿವನ್ನು ಎಲ್ಲರೂ ಪಡೆಯಬೇಕು ಎಂದು ಹಂಬಲಿಸಿದ. ಆ ಕಾರಣಕ್ಕಾಗಿ ಬುದ್ಧ ಚರಿತ್ರೆಯಲ್ಲಿ ಗತಿಸಿಹೋಗುವಂತವನಲ್ಲ. ಬುದ್ಧ ಉದಯಿಸಿದ ಮೇಲೆ ಮಾನವನ ಸಂಕಟ ಸಮಸ್ಯೆಗಳೆಲ್ಲವೂ ನಿವಾರಣೆಯಾದವು ಎಂದೇನೂ ಅಲ್ಲ. ಮಾನವನ ದುಃಖ ನಿರಂತರವಾದದ್ದು ಎಂಬ ಸತ್ಯವನ್ನು ಅರಿತು ಅದರಿಂದ ದೂರವಿರಬಹುದಾದ ಮಾರ್ಗಗಳನ್ನು ತೋರಿಸಿಕೊಟ್ಟದ್ದು ಬುದ್ಧನ ಹೆಗ್ಗಳಿಕೆ. ಮಾನವನ ದುಃಖಗಳು ನಿರಂತರವಾಗಿರುವಂತೆ ಬುದ್ಧನೂ ಪ್ರತೀ ಬುದ್ಧ ಜಯಂತಿಯಂದು ಮರುಹುಟ್ಟು ಪಡೆಯುತ್ತಾನೆ. ಬುದ್ಧನಿಗೆ ಸಾವಿಲ್ಲ, ಹಾಗೆಯೇ ಬುದ್ಧ ನೀಡಿದ ಅರಿವು, ಜ್ಞಾನ ಇವುಗಳಿಗೂ ಕೂಡ ಸಾವಿಲ್ಲ. ಮಾನವನ ಹೃದಯದಲ್ಲಿ 'ಎಚ್ಚರ'ದ ರೂಪದಲ್ಲಿ ಬುದ್ಧ ಸದಾ ಜೀವಂತವಾಗಿರುತ್ತಾನೆ. ಬೇಂದ್ರೆ ಈ ಬುದ್ಧತ್ವದ ನಿರಂತರತೆಯನ್ನು ಈ ರೀತಿ ಗುರುತಿಸಿದ್ದಾರೆ.

ಬುದ್ಧನ ಸಮಾಧಿಯದು ಮಾನವನ ಹೃದಯ
ಅದುವೆ ಕಾಯುತ್ತಲಿದೆ ಕಲ್ಕಿ ಉದಯ" [೧೧]

ಇಲ್ಲಿ 'ಸಮಾಧಿ'ಯನ್ನು ಮಾನವನ ಹೃದಯದಲ್ಲಿ ಜೀವಂತವಾಗಿಸುವ, ಬೇರೆ ಬೇರೆ ರೂಪದಲ್ಲಿ ಮರುಹುಟ್ಟನ್ನು ಆಶಿಸುವ ಕವಿಯ ಆಶಯ ಸಮಂಜಸವಾದದ್ದೇ. ಮಾನವನ ಹೃದಯದಲ್ಲಿರುವ ಈ 'ಎಚ್ಚರ' ಎಂಬುದು ಕಲ್ಕಿಯಾಗಿ ಉದಯವಾಗಬೇಕಾದುದನ್ನು ಕವಿ ಬಯಸುತ್ತಾರೆ. ಆದರೆ ಈ ಹಾದಿಯ ಪಯಣ ಸುಖಕರವಾದದ್ದೇನೂ ಅಲ್ಲ. ಅದಕ್ಕೆ ಎಡರು ತೊಡರುಗಳು ಹಲವಾರು. ಆದರೆ ಇವೆಲ್ಲವನ್ನೂ ಮೀರಲು

ಶುದ್ಧಜ್ಞಾನದ ಅರಿವು ಅತ್ಯಗತ್ಯ. ಅದು ಬುದ್ಧನಲ್ಲಿತ್ತು. ಹಾಗಾಗಿಯೇ ಅಮೂರ್ತದೊಂದಿಗಿನ ಬುದ್ಧನ ಹೋರಾಟ ಒಂದು ತಾರ್ಕಿಕ ನಿಲುವನ್ನು ಪಡೆಯಲು ಸಾಧ್ಯವಾದದ್ದು. ಇದನ್ನು ಬೇಂದ್ರೆ 'ಗಾಳಿಕುದುರೆ ಸವಾರಿ'ಗೆ ಹೋಲಿಸಿದ್ದಾರೆ. ಇದು ಎಷ್ಟು ವೇಗ, ತೀವ್ರತೆಯನ್ನು ಪಡೆದಿದೆಯೋ ಅಷ್ಟೇ ಅಮೂರ್ತ, ಅಸ್ಪಷ್ಟ, ಅಗೋಚರವಾದದ್ದೂ ಹೌದು. ಹಾಗಾಗಿಯೇ ಮನುಷ್ಯ ಪಡೆಯಬಹುದಾದ 'ಬುದ್ಧತ್ವ'ವನ್ನು ಇದೆ ಅಥವಾ ಇಲ್ಲ ಎಂದು ಸಾಮಾನ್ಯ ಗೆರೆ ಎಳೆದಂತೆ ಗುರುತಿಸಲು ಸಾಧ್ಯವಿಲ್ಲ. ಆದರೆ ಬುದ್ಧನ ಸ್ಥಿತಿ ಇದಕ್ಕಿಂತ ಭಿನ್ನವಾದದ್ದು. ಅವನ ಅರಿವಿನ, ಆಲೋಚನೆಯ ಆಳ, ಏರುವ ಎತ್ತರ ಎಲ್ಲವೂ ಕೂಡ ನಮ್ಮ ನಿಲುವಿಗೆ ಮೀರಿದ್ದು. ಹಾಗಾಗಿಯೇ ಬುದ್ಧನಿಗೆ ಚಂದ್ರಕಿರಣವನ್ನು ಮೀರಲು, ಸೂರ್ಯನನ್ನು ಸೇರಲು, ಶಬ್ಧ-ನಾದ ಧ್ವನಿಯ ಸದ್ದನ್ನು ದಾಟಿ ನಿಲ್ಲಲು ಸಾಧ್ಯವಾದದ್ದು.

ಏರಿದೇರಿದನೇರಿ ಗಾಳಿಗುದುರೆ ಸಾವಾರಿ
ಚಂದ್ರಕಿರಣವ ಮೀರಿ ಸೂರ್ಯ ಸೇರಿ
ಬೆಳಕನ್ನೇ ಹಿಂದೊಗೆದು ತಮದ ಉಸಿರನೆ ಬಗೆದು
ಅಸ್ಪರ್ಶ ಅವಕಾಶದಲ್ಲಿ ಇದ್ದ
ಬುದ್ಧ – ಬುದ್ಧ – ಬುದ್ಧ
ಶಬ್ದ – ನಾದ ಧ್ವನಿಯ ಸದ್ದ ಮೀರಿದ್ದ
ಇಲ್ಲ ಎಂಬುವ ಕೊನೆಗೆ ಆತ್ಮ ಶುದ್ಧ
ಇದ್ದರೇನಿರದಿದ್ದರೇನೆನಲು ಗೆದ್ದ[೧೨]

ಇಲ್ಲಿ ಬೇಂದ್ರೆ ಬುದ್ಧ ಎಂದೋ ಇದ್ದವನಲ್ಲ, ಇಂದಿಗೂ ಇರುವವನು. ಮಾನವ ಹೃದಯದಲಿ ಎಂದೆಂದೂ ಅರಿವಿನ ರೂಪದಲ್ಲಿ ಇರುವವನು. ಆ ಅರಿವನ್ನು ಪಡೆದು ಪ್ರತಿ ಮನುಷ್ಯರೂ ಬುದ್ಧತ್ವಕ್ಕೇರಲು ಸಾಧ್ಯ ಎನ್ನುತ್ತಾರೆ. ಜೊತೆಗೆ ಬುದ್ಧ ಬಯಸಿದ್ದು ತನ್ನ ಉದ್ಧಾರವನ್ನು ಮಾತ್ರವಲ್ಲ; ಜಗದ ಉದ್ಧಾರವನ್ನು; ತನ್ನ ದುಃಖಗಳಿಂದ ಬಿಡುಗಡೆಯನ್ನಲ್ಲ, ಎಲ್ಲ ಮನುಷ್ಯರ ದುಃಖಗಳಿಂದ ಬಿಡುಗಡೆಯನ್ನು. ಹಾಗಾಗಿಯೇ ಅವನು ಸಿದ್ಧ, ಬುದ್ಧ, ಪ್ರಬುದ್ಧನಾಗಲು ಸಾಧ್ಯವಾದದ್ದು ಎನ್ನುತ್ತಾರೆ. ವ್ಯಕ್ತಿತ್ವವೊಂದು ಪ್ರಾಪಂಚಿಕ ಜ್ಞಾನ ಪಡೆದು ಬೆಳಕಾಗಿ ನಿಲ್ಲುವುದು, ಪರಿಶುದ್ಧನಾಗಿ ನಿಲ್ಲುವುದು ಅದರ ಆಂತರಿಕ ವಿಕಾಸದ ಉನ್ನತ ಸ್ಥಿತಿ. ಬುದ್ಧ ಆ ಸ್ಥಿತಿಗೇರಿದವನು, ಮನಸ್ಸನ್ನು ಗೆದ್ದವನಾಗಿದ್ದ. ಮನಸ್ಸನ್ನು ಗೆಲ್ಲುವುದೇ ನಿಜವಾದ ಸಿದ್ಧಿಯ ಸ್ಥಿತಿ ಎಂಬುದನ್ನು ಈ ಕವಿತೆ ಧ್ವನಿಸುತ್ತದೆ.

ಬುದ್ಧ ಪ್ರತಿಪಾದಿಸಿದ ಜೀವನಕ್ರಮಗಳು ಪ್ರತಿ ಮನುಷ್ಯರೂ ಬುದ್ಧತ್ವಕ್ಕೆ ಏರಬಹುದಾದುದನ್ನು ಹೇಳುತ್ತವೆ. ಬುದ್ಧತ್ವ ಎಂದರೆ ಅರಿವಿನ ಸ್ಥಿತಿ. ಆಂತರಿಕ ಜ್ಞಾನದ ವಿಕಾಸ. ಇದು ಅಂತಿಮವಾಗಿ ವಿಶ್ವವನ್ನು ಪ್ರೀತಿ ಕರುಣೆಗಳಿಂದ ಸಲಹುವಂತದ್ದು. ಈ ಹಂತವನ್ನು ಪ್ರತಿಯೊಬ್ಬರೂ ತಮ್ಮ ಜೀವಿತದಲ್ಲೆ ಪಡೆಯಬಹುದು. ಇದಕ್ಕೆ ದೇವರ, ದೇವದೂತರ, ಪರಲೋಕದ ಚಿಂತನೆಯ ಅಗತ್ಯವಿಲ್ಲ ಎಂದು ಬೋಧಿಸಿದ್ದು ಬುದ್ಧನ ತತ್ವಗಳ ವಿಶಿಷ್ಟತೆ. ಹಾಗಾಗಿ ಬೌದ್ಧ ಧರ್ಮ ಜಗತ್ತಿನ ಧರ್ಮಗಳಲ್ಲೆಲ್ಲ ಶ್ರೇಷ್ಠವಾಗಿ ಉಳಿದಿದೆ. ಇದನ್ನು ವಿ.ಕೃ ಗೋಕಾಕರ 'ನಿರ್ಮಾಣ ಕಾಯ' ಕವಿತೆ ಹೀಗೆ ಹಿಡಿದಿಡುತ್ತದೆ.

ಜೀವಾತ್ಮಗಿಹ ಮಹಡಿನು ಏರಿ ನಿಂತು
ವಿಶ್ವವನ್ನು ಸಲುಹದಿರೆ ಏನು ಬಂತು?
ಧರ್ಮಕಾಯವ ಗೆಲ್ಲು, ಮತ್ತೆ ತ್ಯಜಿಸು
ನಿರ್ಮಾಣ ಕಾಯವನು ಹೊಂದಿ ಸೃಜಿಸು
ಮಾನವತೆ ಬೇಡುತಿಹ ಬೆಳಕು ದಾರಿಯನು
ಮೊಳಗಿಸುತ ಪೂರ್ಣತೆಯ ವಿಜಯ ಭೇರಿಯನು [೧೩]

ಬುದ್ಧ ಜಗತ್ತು ಕಂಡ ಪೂರ್ಣತೆಯ ಮೂರ್ತಿ. ಮನುಷ್ಯರ ದುಃಖಗಳಿಗೆ ಉತ್ತರವನ್ನು ಹುಡುಕಲು ಕಠಿಣದ ಹಾದಿಯನ್ನು ತುಳಿದದ್ದು ಮನುಷ್ಯರ ಮೇಲಿನ ಕರುಣೆಯಿಂದಲೇ. ಕರುಣೆಯ ಗುಣ ಆತನನ್ನು ಪೂರ್ಣತೆಯ ಮಟ್ಟಕ್ಕೆ ಕೊಂಡೊಯ್ದಿದೆ. ಮಾನವತೆ ಬೇಡುವ ಬೆಳಕಿನ ದಾರಿಯಾಗಿ ನಿಲ್ಲುವ ಹಾಗೆ ಮಾಡಿದೆ. ಅದು ಕತ್ತಲನ್ನು ಗೆದ್ದ ಸ್ಥಿತಿ. ಹಾಗೆ ಪ್ರತಿ ಮನುಷ್ಯರೂ ಆಗಬೇಕು ಎಂಬ ಆಶಯ ಈ ಕವಿತೆಯಲ್ಲಿದೆ.

ಬುದ್ಧನಿಗೆ ಧರ್ಮ ಸ್ಥಾಪನೆಯ ಉದ್ದೇಶವಿರಲಿಲ್ಲ. ತಾನು ಹೇಳುತ್ತಿರುವುದು ಧರ್ಮವೆಂದು ಎಲ್ಲಿಯೂ ಹೇಳಲಿಲ್ಲ. ಬುದ್ಧ ಜಗತ್ತನ್ನು ತಾಯ್ತನದ ಪ್ರೀತಿಯಿಂದ ಅಪ್ಪಿಕೊಂಡ. ಜಗತ್ತನ್ನು ದುಃಖ, ಸಂಕಟಗಳಿಂದ ಮುಕ್ತಗೊಳಿಸಲು ಚಡಪಡಿಸಿದ. ಹಾಗಾಗಿ ವಿಶ್ವವನ್ನು ಸಲಹುವಂತ ಮಾತೃತ್ವದ ಗುಣ ಬುದ್ಧನ ವ್ಯಕ್ತಿತ್ವದಲ್ಲಿದೆ. ಕರುಣೆಗಣ್ಣು ಮತ್ತು ತಾಯ್ತನದ ಪ್ರೀತಿ ಬುದ್ಧನ ವ್ಯಕ್ತಿತ್ವದಲ್ಲಿ ಕಂಡುಬರುವ ಪ್ರಧಾನ ಗುಣಗಳು. ಈ ಗುಣಗಳನ್ನು ಕೆ.ಎಸ್.ನರಸಿಂಹಸ್ವಾಮಿ ತಮ್ಮ 'ಬುದ್ಧಸ್ಮಿತ' ಕವಿತೆಯಲ್ಲಿ ಗುರುತಿಸುತ್ತಾರೆ.

> ಯಾರಿಗೆ ರಕ್ಷಣೆ ಅಗತ್ಯವೋ ನಾನವರನ್ನು ರಕ್ಷಿಸುತ್ತೇನೆ
> ಯಾತ್ರಾತ್ರಿಗಳಿಗೆ ನಾನು ಮಾರ್ಗದರ್ಶಿಯಾಗುತ್ತೇನೆ
> ಇನ್ನೊಂದು ದಡವನ್ನು ಸೇರುವ ಬಯಕೆಯಿದ್ದವರಿಗೆ
> ನಾನು ದೋಣಿಯಾಗುತ್ತೇನೆ.
> ಯಾರಿಗೆ ಸೇವೆ ಅಗತ್ಯವೋ ನಾನವರಿಗೆ ಸೇವಕನಾಗುತ್ತೇನೆ
> ಆ ಕರುಣೆಗಣ್ಣಿಗೀ ಲೋಕವೆಲ್ಲ ತೆರೆದಿತ್ತು ತನ್ನ ನೋವ
> ನುಡಿದಂತೆ ನಡೆದು, ನಡೆದಲ್ಲಿ ಶಾಂತಿ ಹರಸಿತ್ತು ಬುದ್ಧ ಜೀವ [೧೪]

ಇಲ್ಲಿ ಬುದ್ಧ ತಾನು ಒಬ್ಬ ದೇವದೂತನಾಗಿ ಮಾತನಾಡುತ್ತಿಲ್ಲ. ಮನುಷ್ಯನ ಮೇಲಿನ ಪ್ರೀತಿಯಿಂದ ಮಾತನಾಡುತ್ತಿದ್ದಾನೆ. ಎಲ್ಲ ದುಃಖಗಳಿಂದ ಬಿಡುಗಡೆ ಹೊಂದಬಹುದಾದ ಮಾರ್ಗವನ್ನು ಕಂಡುಕೊಂಡ ಪೂರ್ಣತ್ವದ ಸ್ಥಿತಿಯಲ್ಲಿ, ಅಪಾರವಾದ ಕರುಣೆಯಿಂದ ಮಾತನಾಡುತ್ತಿದ್ದಾನೆ. ಹಾಗಾಗಿ ಕನ್ನಡ ಕವಿಗಳು ಬುದ್ಧನನ್ನು ಅರಿವು, ವಿವೇಕ, ಎಚ್ಚರ, ಬೆಳಕು, ಕರುಣೆಗಳ ರೂಪದಲ್ಲಿ ಕಾಣುತ್ತಾರೆ. ಇವುಗಳ ಮೂಲಕ ಪ್ರತಿ ಮನುಷ್ಯ ಬುದ್ಧನಾಗಲು, ಬುದ್ಧತ್ವಕ್ಕೇರಲು ಸಾಧ್ಯ. ಆಗ ಮಾತ್ರ ಮಾನವ ನಾಗರೀಕತೆಯಲ್ಲಿ ಶಾಂತಿ, ನೆಮ್ಮದಿ ನೆಲೆಸಲು ಸಾಧ್ಯ ಎಂಬುದನ್ನು ಮತ್ತೆ ಮತ್ತೆ ಪ್ರಸ್ತಾಪಿಸುತ್ತಾರೆ. ಇಂದು ನಮಗೆ ತೀರಾ ಅಗತ್ಯವಾಗಿ ಬೇಕಾಗಿರುವುದು ಬುದ್ಧನ ಬೆಳಕು. ಅದನ್ನು ನಾವು ಯುದ್ಧದಲ್ಲಿ, ಯಂತ್ರದಲ್ಲಿ, ಆಧುನಿಕತೆಯ ಬಲೆಯಲ್ಲಿ, ದ್ವೇಷ, ಮತ್ಸರ, ಪ್ರತ್ಯೇಕತೆಗಳಲ್ಲಿ ಹುಡುಕಿದರೆ ಸಿಗುವುದಿಲ್ಲ. ವಿಶ್ವವನ್ನು ಪ್ರೀತಿಯಿಂದ ಅಪ್ಪಿಕೊಳ್ಳುವ ನಿಷ್ಕಲ್ಮಶ ಬುದ್ಧನಗೆಯಲ್ಲಿ, ಆ ನಗೆಯ ಬೆಳಕಲ್ಲಿ ಮಾತ್ರ ಕಾಣಲು ಸಾಧ್ಯ. ಹಾಗಾಗಿ ಇಂದು ಬುದ್ಧನ ಬೆಳಕಿಗಾಗಿ ಜಗತ್ತು ಎದುರು ನೋಡುತ್ತಿದೆ. ಜಗತ್ತಿನ ದುಃಖಕ್ಕೆ ಬುದ್ಧನಲ್ಲಿ ಉತ್ತರವನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗುತ್ತಿದೆ.

ಅಂದು ಬುದ್ಧ ಎಲ್ಲವನ್ನು ತೊರೆದು ಕಠಿಣ ಪರಿಶ್ರಮವನ್ನು ಪಟ್ಟ. ಆದರೆ ಬುದ್ಧನ ನಂತರದ ಮಾನವ ನಾಗರೀಕತೆ ಆತನ ವಿರುದ್ಧವಾಗಿಯೇ ಸಾಗಿ ಎಂದೂ ಚೇತರಿಸಕೊಳ್ಳಲಾಗದಂತ, ಎಂದೂ ನೀಗಿಕೊಳ್ಳಲಾಗದಂತ ಘೋರ ದುಃಖವನ್ನು ತನ್ನ ಮೈಮೇಲೆ ಎಳೆದುಕೊಂಡು ಪ್ರೀತಿಗಾಗಿ, ಶಾಂತಿಗಾಗಿ, ನೆಮ್ಮದಿಗಾಗಿ ಹಾತೊರೆಯುತ್ತಿದೆ. ಇದಕ್ಕೆಲ್ಲ ಬುದ್ಧ ತೋರಿದ ಕರುಣೆಯ ಬೆಳಕೊಂದೇ ಉತ್ತರವಾಗಬಲ್ಲದು. ಬಿಡುಗಡೆಯ ದಾರಿಯಾಗಬಲ್ಲದು. ಆದರೆ ಆ ಧೀರತ್ವದ ಎಚ್ಚರ ಯಾರಿಗೆ ಎಂದು ಇಂದು ನಮ್ಮನ್ನು ನಾವೇ ಕೇಳಿಕೊಳ್ಳಬೇಕಾದ ದುಸ್ಥಿತಿಯಲ್ಲಿ ಇದ್ದೇವೆ. ಅಣುಬಾಂಬ್ ಸ್ಫೋಟಿಸಿ ಅದಕ್ಕೆ ಬುದ್ಧನ ನಗುವನ್ನು ಲೇಪಿಸುವ

ದುರಂತ ಸ್ಥಿತಿಯಲ್ಲಿ ಮಾನವ ನಾಗರೀಕತೆ ಇದೆ. ಆದರೆ ಬುದ್ಧ ಮಾತ್ರ ಇನ್ನೂ ಪೂರ್ಣ ಭರವಸೆಯಿಂದಲೇ ನಗುತ್ತಿದ್ದಾನೆ. ಕವಿಗಳೂ ಆ ಭರವಸೆಯಿಂದಲೇ ಹಾರೈಸುತ್ತಿದ್ದಾರೆ.

ಚಲಿಸುವ ಭೂಮಿಯ ಮೇಲೆ
ಬುದ್ಧನಿದ್ದಾನೆ.
ವರ್ತಮಾನದ ಕಡೆಗು ಹರಿಸಿದ್ದಾನೆ
ಬೆಳಕಿನ ಕಿರಣ!
ಈ ಬೆಳಕು ನಮ್ಮೆದೆಯ ಬೆಳಕಾಗಲಿ
ಈ ಬೆಳಕು ನಮ್ಮನ್ನು ಕಾಪಾಡಲಿ
ಪ್ರತಿಯೊಬ್ಬರ ಉಸಿರಾಟವಾಗಲಿ
ಎಲ್ಲರೊಳಗೆ ಬುದ್ಧ ನಗುತ್ತಿರಲಿ! [೧೫]

ಈ ಪ್ರೀತಿ, ಭರವಸೆ ಮೂಡುತ್ತಿರುವುದು ಬುದ್ಧನ ನಗುವಿನ ಬೆಳಕಿನಿಂದ, ಬುದ್ಧನ ನಗುವಿಗೆ ಎಲ್ಲವನ್ನೂ ಗೆಲ್ಲುವ, ಎಲ್ಲವನ್ನೂ ಬೆಳಗಿಸುವ ಶಕ್ತಿ ಇರುವುದರಿಂದ ಇಂದು ಜಗತ್ತನ್ನು ಬಹಳವಾಗಿ ಕಾಡುತ್ತಿರುವ ಪ್ರಶ್ನೆಗಳಿಗೆ, ಆತಂಕ, ಸಂಕಟಗಳಿಗೆ ಬುದ್ಧನಲ್ಲಿ ಉತ್ತರವನ್ನು ಹುಡುಕುವ ವಿಶಿಷ್ಟ ಪ್ರಯತ್ನವನ್ನು ಕನ್ನಡ ಕಾವ್ಯ ಮಾಡಿದೆ. ಬುದ್ಧನ ನಗುವೆಂಬ ಅಸ್ತ್ರ ಬಳಸಿ ಆಧುನಿಕ ವಿಕಾರಗಳೊಂದಿಗೆ ಮುಖಾಮುಖಿಯಾಗುವ ಪ್ರಯತ್ನ ಕಾವ್ಯದಲ್ಲಿ ನಿರಂತರವಾಗಿ ನಡೆದಿದೆ. ಆ ಮೂಲಕ ಬುದ್ಧನ ಶಾಂತಿ, ಪ್ರೀತಿ, ಕರುಣೆಯಿಂದ ಕೂಡಿದ ವ್ಯಕ್ತಿತ್ವವನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ.

ಬುದ್ಧನೊಳಗೆ ಒಬ್ಬ ಮರುಗುವ ತಾಯಿ ಕರುಳು ಇತ್ತು. ಮನುಷ್ಯರ ಬದುಕಿನ ದುಃಖ ಸಂಕಷ್ಟಗಳನ್ನು ನೋಡಿ ನೊಂದುಕೊಳ್ಳುತ್ತಿದ್ದ ಜೀವ ಅದು. ಆ ಮರುಕವೇ ಸಿದ್ಧಾರ್ಥನನ್ನು ಬುದ್ಧನನ್ನಾಗಿಸಿತು. ಪ್ರತಿಯೊಂದು ಜೀವಿಯಲ್ಲಿಯೂ ಇರಬೇಕಾದ ತಾಯ್ತನದ ಗುಣಗಳ ಬಗ್ಗೆಯೇ ಬುದ್ಧನ ಪ್ರತಿಪಾದನೆಗಳು ಹೇಳುತ್ತಿರುವುದು. ಬುದ್ಧನ ವ್ಯಕ್ತಿತ್ವದಲ್ಲಿನ ಈ ಗುಣಗಳನ್ನು ಸತ್ಯನಾರಾಯಣರಾವ್ ಅಣತಿಅವರ 'ನಗುವ ಬುದ್ಧ' ಕವಿತೆ ಹಿಡಿದಿಡುತ್ತದೆ.

ಗದ್ದೆ ಅಂಚಲಿ ನಿಂತು
ಉಳುತ ನಿಟ್ಟುಸಿರಿಡುವ ಕಡ್ಡಿದೇಹವ ಕಂಡು ಮರುಗುವನು
ಕಣದಲೊಕ್ಕುವ ಕೈಗೆ ಸಿಕ್ಕುವುದು ಹಿಡಿಮಾತ್ರ ಎಂದು ಕೊರಗುವನು
ಹಾಲು ಹಿಂಡುವ ಮುಂಗೈಯ್ಯ
ಬಳೆಯ ಕಿಂಕಿಣಿಗವನ ಕಿವಿ ನಿಮಿರುತಿತ್ತು
ಬತ್ತಿದ ಮೊಲೆ ಕಚ್ಚಿ ಬರಿ
ಲೊಚಗುಟ್ಟಿಸುವ ಕರುವಿನ ಹಪ್ಪಳ ಹೊಟ್ಟೆಯನು
ಕಂಡು ನಿಡುಸುಯ್ಯುತಿದ್ದ
ಸಾಕಿದ ಕುರಿಮರಿ
ತರಿದ ಸೊಪ್ಪನು ತಿಂದು ಥಂಗನೆ ನೆಗೆದಾಗ
ತಾನು ಜಿಗಿಯುತ್ತಿದ್ದ. [೧೬]

ತನ್ನ ಸುತ್ತಲ ಜೀವರಾಶಿಯ ಬದುಕನ್ನು ಪ್ರೀತಿ, ಕುತೂಹಲ, ಮರುಕದಿಂದ ನೋಡುತ್ತಿದ್ದ ಸಿದ್ಧಾರ್ಥ ಎಲ್ಲರ ಕಷ್ಟಗಳಿಗೆ ಸ್ಪಂದಿಸುತ್ತಿದ್ದ. ಮರುಗುವ ಮತ್ತು ಸಲಹುವ ತಾಯ್ತನದ ಗುಣಗಳು ಸಿದ್ಧಾರ್ಥನ್ನು ಬುದ್ಧನನ್ನಾಗಿಸಿವೆ. ಬುದ್ಧನಲ್ಲಿನ ಮಾನವೀಯ ಅಂತಃಕರಣ, ನಿಸ್ವಾರ್ಥತೆಗಳು ಅವನನ್ನು ಮಾನವತ್ವದ ಎತ್ತರಕ್ಕೆ ಒಯ್ದಿವೆ.

ಬುದ್ಧನದು ಮಾನವ ನಾಗರೀಕತೆ ಕಂಡ ಅತ್ಯಂತ ಮಾನವೀಯ ವ್ಯಕ್ತಿತ್ವ. ಹಲವು ಅಮೂಲ್ಯ ಗುಣಗಳ ಒಟ್ಟಂದವೇ ಬುದ್ಧನಾಗಿ ರೂಪುಗೊಂಡಿವೆಯೇನೋ ಎಂಬ ಸಂದೇಹಕ್ಕೆ ಒಳಗುಮಾಡುವ ವ್ಯಕ್ತಿತ್ವ ಅವನದು.

ಬುದ್ಧನ ರೂಪ ಹೇಗಿತ್ತು ಎಂಬುದಕ್ಕೆ ಸ್ಪಷ್ಟ ಮಾಹಿತಿಗಳಿಲ್ಲ. ಬುದ್ಧನ ಶಿಲ್ಪಗಳು ರಚನೆಯಾದದ್ದು ಬುದ್ಧ ಗತಿಸಿದ ಹಲವು ವರ್ಷಗಳ ನಂತರ. ಹೀಗಿರುವಾಗ ಆ ಕಲಾಕೃತಿಗಳು ಬಿಂಬಿಸುತ್ತಿರುವುದು ಬುದ್ಧನ ನೈಜರೂಪ ಎಂದು ನಂಬಲು ಸಾಧ್ಯವಾಗದು. ಬುದ್ಧನ ವ್ಯಕ್ತಿತ್ವದ ಗುಣಗಳನ್ನು ಆಧರಿಸಿ ಆ ರೂಪವನ್ನು ಕಡೆದಿರಬಹುದು. ಆದರೆ ಕಾವ್ಯವೊಂದು ಬುದ್ಧನ ರೂಪವನ್ನು ಆತನ ಉನ್ನತ ಗುಣಗಳ ಮುಖೇನ ಕಟ್ಟಿಕೊಡುವ ಬಗೆ ವಿಶಿಷ್ಟವಾದದ್ದು. ಚೆನ್ನವೀರ ಕಣವಿಯವರು ತಮ್ಮ 'ಬುದ್ಧೋದಯ' ಕವಿತೆಯಲ್ಲಿ ಬುದ್ಧನ ವ್ಯಕ್ತಿತ್ವದ ಅನನ್ಯತೆಯನ್ನು ರೂಪ ಮತ್ತು ಗುಣಗಳ ಸಮೀಕರಣದ ಚಿತ್ರಕಶಕ್ತಿಯಿಂದ ರೂಪಿಸಿಕೊಡುತ್ತಾರೆ. ಬುದ್ಧನ ರೂಪವನ್ನು ಆತನ ವ್ಯಕ್ತಿತ್ವ ದರ್ಶನದ ಪ್ರತೀಕವಾಗಿ ಕಾಣುತ್ತಾರೆ.

ಜಗದ ದುಃಖದ ಕಡಲ ಕಡೆಯಲೊಗೆತಂದ ಶಶಿ
ಕಳೆಯಂತೆ, ಬೆಳುದಿಂಗಳಿನ ಶಾಂತಿ ಮಡುಗಟ್ಟಿ
ಹರಿದಂತೆ, ಮೌನ ಗಂಭೀರತೆಯ ಕೆನೆಗಟ್ಟಿ
ನಿಂದಂತೆ ಬುದ್ಧಸ್ಮಿತಂ! ಕರುಣೆ ನಳನಳಿಸಿ
ದಳದಳವನರತೆರೆದಂತೆ ಕಣ್ಮಲರ ಕಾಂತಿ!
ಹಿಂಸಾರತಿಯ ಕೆಸರ ತೊಳೆವ ಬಿತ್ತರದ ಹಣೆ
ನಿಜದ ನೇರಕೆ ಕರೆವ ನಗೆಬಾಗು ಮೂಗುತನೆ
ತುಟಿಗಳೆರಡೂ ಪರವ ಸೆರೆಗೈದಿರುವ ದಾಂತಿ!
ನಿದ್ದೆಯಿಂದೆದ್ದ ಮೊಗದುದ್ಬುದ್ಧ ಕಳೆಯಂತೆ
ಮುಗ್ಧ ಮಾನವ ಕೋಟಿ ಅದೆ ಮೊದಲು ಕಂಡಿರುವ
ಅಮಲ ತೇಜೋವಲಯ! ಸಿಂಪಿನಿಂದೊಗೆ ತರುವ
ಹೊಸತು ತತ್ವದ ಮುತ್ತು ಮನುಜ ಪುತ್ಥಳಿಯಂತೆ
ಕಂಗೊಳಿಸೆ ಬೋಧಿ ವೃಕ್ಷದಡಿ ಬದ್ಧೋದಯಂ
ಬಹ್ಮಾಂಡಕೀಯುತಿದೆ ಶಾಂತಿ ನವನೀತಮಂ. ೧೭

ಈ ಕವಿತೆಯಲ್ಲಿ ಸಿದ್ಧಾರ್ಥನಾಗಿದ್ದವನು ಕಠಿಣ ಪರಿಶ್ರಮದಿಂದ ಬುದ್ಧನಾದ ಮೇಲೆ ಅವನಲ್ಲಿ ಕಂಗೊಳಿಸಿದ ಶ್ರೇಷ್ಠ ಮಾನವತೆಯ ಚಹರೆ ಮತ್ತು ಆ ಚಹರೆಗೆ ಕಾರಣವಾದ ಆಂತರಿಕ ಗುಣಗಳನ್ನು ಕಣವಿಯ ಅದ್ಭುತವಾದ ಚಿತ್ರಕಶಕ್ತಿಯಿಂದ ಕಟ್ಟಿಕೊಡುತ್ತಾರೆ. ಆಂತರಿಕ ಸ್ವಭಾವಗಳೇ ಬಾಹ್ಯರೂಪನ್ನು ತಿದ್ದಿತೀಡಿದಂತೆ, ಅವೆರಡೂ ಅಭಿನ್ನವಾಗಿ ಸಮ್ಮಿಳಿತಗೊಂಡಂತೆ ಕಂಡಿರುವಲ್ಲಿ ದಾರ್ಶನಿಕ ದೃಷ್ಟಿಯ ಪ್ರತಿಭೆ ಕೆಲಸ ಮಾಡಿದೆ. ಬುದ್ಧನ ವ್ಯಕ್ತಿತ್ವದ ಆಂತರಿಕ ಗುಣಗಳು ಅವನ ಬಾಹ್ಯ ಚಹರೆಯಲ್ಲಿ ಗೋಚರವೂ, ತನ್ನ ಸುತ್ತಲ ಜೀವರಾಶಿಯ ಮೇಲೆ ಪ್ರಭಾವ ಬೀರಬಲ್ಲಷ್ಟು ಆಕರ್ಷಕವೂ, ಒಂದು ಬಗೆಯ ಶಾಂತಿಯ ಅನುಭೂತಿಯನ್ನುಂಟುಮಾಡುವ ಬಗೆಯಲ್ಲಿ ಮೂಡಿಬಂದಿವೆ. ಬುದ್ಧನಲ್ಲಿ ಆ ಶ್ರೇಷ್ಠ ಮಾನವೀಯ ಗುಣಗಳು ಸಾಧ್ಯವಾದದ್ದು ಆತನ ಆಂತರಿಕ ವ್ಯಕ್ತಿತ್ವದ ವಿಕಾಸದಿಂದ. ಬುದ್ಧನ ವ್ಯಕ್ತಿತ್ವದ ಅದ್ಭುತ ಪ್ರಭೆಯಂತ ಶಕ್ತಿಯನ್ನು ಈ ಕವಿತೆ ಸೂಕ್ಷ್ಮವಾಗಿ ಗುರುತಿಸುತ್ತದೆ. ಈ ಕವಿತೆಯ ಸಾಲುಗಳು ಆ ವ್ಯಕ್ತಿತ್ವದ ಘನತೆಯನ್ನು ಅದರ ಪ್ರಭಾವ ಸುತ್ತಲಿನ ಪರಿಸರದ ಮೇಲೆ ಉಂಟುಮಾಡುತ್ತಿರುವ ಇತ್ಯಾತ್ಮಕ ಪರಿಣಾಮಗಳನ್ನು ಧ್ವನಿಸುತ್ತವೆ. ಆತನ ವ್ಯಕ್ತಿತ್ವದ ತೇಜೋವಲಯ ಜಗದ ಕೇಡನ್ನು, ಅಜ್ಞಾನವನ್ನು, ಅನಾಯಾಸವಾಗಿ ಪರಿವರ್ತಿಸಿಬಿಡುವ ಅದ್ಭುತ ಶಕ್ತಿಯುಳ್ಳದ್ದಾಗಿತ್ತು. ಮನುಷ್ಯ ತನ್ನ ಆಂತರಿಕ ವಿಕಾಸದ ಉನ್ನತ ಸ್ಥಿತಿಯಲ್ಲಿ ಬೆಳಗುವ ಪ್ರಭೆಯಾಗಿಬಿಡುವ ಸ್ಥಿತಿಯನ್ನು ಬುದ್ಧನಲ್ಲಿ ಕಾಣವ ಪ್ರಯತ್ನವನ್ನು ಈ ಕವಿತೆ ಮಾಡಿದೆ.

ಬುದ್ಧನ 'ಧ್ಯಾನಸ್ಥಿತಿ'ಯ ಪ್ರಭಾವ ಯಾವ ರೀತಿಯದು ಎಂಬುದನ್ನು ಜಿ.ಎಸ್. ಶಿವರುದ್ರಪ್ಪನವರು 'ವೈಶಾಖ ಶುಕ್ಲ ಪೂರ್ಣಿಮ' ಕವಿತೆಯಲ್ಲಿ ಕಾಣಿಸುತ್ತಾರೆ. ಬುದ್ಧನ ಅರಿವಿನ ಬೆಳಕು, ಧ್ಯಾನದ ಸ್ಥಿತಿ 'ಸುತ್ತಲ

ಕತ್ತಲ ಹುತ್ತವನ್ನು ಕರಗಿಸುವ'ಷ್ಟು ಸಶಕ್ತವಾಗಿದೆ. ಬುದ್ಧನ ಧ್ಯಾನ ಸ್ಥಿತಿಯ ಪ್ರಭಾವದಿಂದ ಇಡೀ ಪ್ರಕೃತಿಯೇ ಧ್ಯಾನಸ್ಥವಾಗಿದೆ. ಬುದ್ಧನ ವಿಶ್ವಪ್ರೇಮದ ಆನಂದದ ಅನುಭೂತಿಯಲ್ಲಿ ಸೃಷ್ಟಿ ಮಗ್ನವಾಗಿದೆ ಎನ್ನುತ್ತಾರೆ.

ಮೌನ ಧ್ಯಾನಸ್ತವಾಗಿವೆ ಈ ವಸಂತ ಸಮಭಾರ
ಗಂಧೋನ್ಮತ್ತ ತರು ಸಂಕುಲ.
ದಿಕ್ಕು ದಿಕ್ಕುಗಳಲ್ಲಿ ಕೈ ಮುಗಿದು ನಿಂತಿವೆ ಮೋಡ
ತೋಡಿ ಕೊಳ್ಳುವ ಹಾಗೆ ಹೃದಯ ಭಾರ.
ಕಾರುಣ್ಯ ಲಹರಿಯೊಳದ್ದಿ ಕಣ್ತೆರೆದ ನಕ್ಷತ್ರಗಳ
ತುಟಿಯಲ್ಲಿ ಮಿನುಗುತಿದೆ ನಿಶ್ಶಬ್ದ ಮಂತ್ರೋಚ್ಚಾರ [೧೮]

ಬುದ್ಧನ ವ್ಯಕ್ತಿತ್ವದ ಸಕಾರಾತ್ಮಕ ಪ್ರಭಾವವನ್ನು ಈ ಕವಿತೆ ಗುರುತಿಸುತ್ತದೆ. ಬುದ್ಧ ಬರುವುದಕ್ಕೂ ಪೂರ್ವದಲ್ಲಿ ಈ ಜಗತ್ತಿಗೆ ಇದ್ದ ಎಚ್ಚರವಿರದ ನಿದ್ದೆಯ ಸ್ಥಿತಿ ಹೋಗಿ ಈಗ 'ಧ್ಯಾನದ ಸ್ಥಿತಿ' ಪ್ರಾಪ್ತವಾಗಿದೆ. ಇದು ಬುದ್ಧನ ಧ್ಯಾನಸ್ಥಿತಿಯ ಪ್ರಭಾವ. ತನ್ನೆದುರಿಗಿರುವ ಎಲ್ಲವನ್ನೂ ಪ್ರಭಾವಿಸಿ ಪರಿವರ್ತಿಸಿಬಿಡುವ ಶಕ್ತಿ ಬುದ್ಧನ ವ್ಯಕ್ತಿತ್ವಕ್ಕಿದೆ. ಬಿ.ಸಿ.ರಾಮಚಂದ್ರಶರ್ಮರು 'ಮೇಜಮೇಲಿನ ಬುದ್ಧ' ಕವಿತೆಯಲ್ಲಿ ಬುದ್ಧನನ್ನು ತನ್ನ ಆತ್ಮಸಾಕ್ಷಿಯನ್ನು ಕೆಣಕುವ 'ನೈತಿಕ ಶಕ್ತಿ'ಯನ್ನಾಗಿ ಕಾಣುತ್ತಾರೆ.

ಮೇಜ ಮೇಲಿನ ಬುದ್ಧ
ನಗುತಲಿದ್ದ
ವರ್ಷದುದ್ದಕ್ಕೂ ನಕ್ಕು ಕೆಣಕಿದವನಂದು
ಬುದ್ಧನಾಗುವೆಯೇನೋ ಎಂದು
ಮೂದಲಿಸಿದ. [೧೯]

ಇಲ್ಲಿ ಬುದ್ಧನ ನೈತಿಕ ಶಕ್ತಿ ನಮ್ಮೊಳಗನ್ನು ಕಾಡುವಂತದ್ದು. ಈ. ಕಾಡುವ ಶಕ್ತಿ ಬಂದದ್ದು ಅವನ ವ್ಯಕ್ತಿತ್ವದ ಶುದ್ಧತೆಯಿಂದ. ಬುದ್ಧ ಪ್ರತಿಪಾದಿಸಿದ ನೆಮ್ಮದಿಯ ಬದುಕಿನ ದಾರಿಯನ್ನು ತೊರೆದು ಹಲವು ಜಂಜಡಗಳಲ್ಲಿ ಸಿಕ್ಕುಹಾಕಿಕೊಂಡಿರುವ ವ್ಯಕ್ತಿಗಳ ನೈತಿಕ ಒಳತೋಟಿಗಳನ್ನು ಕಲಕಿ ಅವರ ವ್ಯಕ್ತಿತ್ವದ ಸಡಿಲತನಗಳನ್ನು ಬಯಲು ಮಾಡುವ ಪ್ರಜ್ಞೆಯನ್ನಾಗಿ ಬುದ್ಧನನ್ನು ಈ ಕವಿತೆ ಕಂಡಿದೆ.

ಪ್ರೇಮಭಾವದಿಂದ ಜಗತ್ತನ್ನೇ ಗೆಲ್ಲಬಹುದು, ಎಂತಹ ಕ್ರೂರಿಯನ್ನೂ ಬದಲಿಸಬಹುದು ಎಂಬುದನ್ನು ಬುದ್ಧ ತೋರಿಸಿಕೊಟ್ಟನು. ದುಃಖವನ್ನು ಗೆಲ್ಲುವ ಸರಳ ಹಾಗೂ ಅಂತಿಮ ಮಾರ್ಗಗಳನ್ನು ಶೋಧಿಸಿಕೊಟ್ಟ ಬುದ್ಧನ ವ್ಯಕ್ತಿತ್ವ ಅನನ್ಯವಾದದ್ದು. ಕಯ್ಯಾರ ಕಿಯ್ಯಣ್ಣ ರೈ ಅವರ 'ಬುದ್ಧನ ಅಮೃತವಾಣಿ ಕವಿತೆ ಇದನ್ನು ಹೀಗೆ ಕಟ್ಟಿಕೊಡುತ್ತದೆ.

ಇರಿಸಿ. ನಿರ್ಮಲ ಪ್ರೇಮಭಾವವ
ಭರಿತ ಕೋಪಿಯ ಜಯಿಸಬಹುದೈ,
ವರ ಸದಾಚಾರದಿ ದುರಾಚಾರನನ್ನು ತಿರುಗಿಪುದು ।
ನಿರುತ ದಾನವ ನೀಡುತ್ತಿದ್ದರೆ
ಪರಮ ಲೋಭಿಯ ತಿದ್ದಬಹುದೈ
ಇರುತ ಸತ್ಯದಿ ಸುಳ್ಳುಗಾರನ ನಾಚಿಸಲೂಬಹುದು [೨೦]

ಜಗತ್ತಿನ ಎಲ್ಲ ಕ್ರೌರ್ಯಗಳನ್ನು ಬದಲಾಯಿಸಬಹುದಾದ ಹಿಂಸಾರಹಿತ ಮಾರ್ಗಗಳನ್ನು ಬುದ್ಧ ಪ್ರತಿಪಾದಿಸಿದ. ಸ್ವತಹ ಆತನ ವ್ಯಕ್ತಿತ್ವವೇ ಆ ಬಗೆಯ ಗುಣಗಳಿಂದ ರೂಪುಗೊಂಡಂತದ್ದು. ಜಗತ್ತು ಶಸ್ತ್ರಶಕ್ತಿ ಮತ್ತು ಹಿಂಸೆಯ ಮೂಲಕ ಎಲ್ಲವನ್ನು ಗೆಲ್ಲಲು, ಬದಲಾಯಿಸಲು ಪ್ರಯತ್ನಿಸುತ್ತಾ ಬಂದಿದೆ. ಆದರೆ ಆ ಪ್ರಯತ್ನಗಳು ಮತ್ತಷ್ಟು ಹಿಂಸೆಗೆ ಪ್ರಚೋದಿಸುತ್ತವೆ. ಒಳಿತಿನಿಂದ ಕೇಡನ್ನು, ಪ್ರೀತಿಯಿಂದ ಹಿಂಸೆಯನ್ನು ಗೆಲ್ಲಬಹುದಾದ ಮಾರ್ಗಗಳು ಮಾತ್ರ ಜಗತ್ತನ್ನು ಶಾಂತಿಯಿಂದಿರಲು ಬಿಡುತ್ತವೆ ಎಂಬುದನ್ನು ಬುದ್ಧ ತೋರಿಸಿಕೊಟ್ಟ. ಈ ಕವಿತೆ ಬುದ್ಧನಿಂದ

ಇಂದು ಜಗತ್ತು ಪಾಠ ಕಲಿಯಬೇಕಾದ ಅಗತ್ಯವನ್ನು ಒತ್ತಿಹೇಳುತ್ತಲೇ ಅವನ ವ್ಯಕ್ತಿತ್ವದ ಪ್ರಸ್ತುತತೆಯನ್ನು ಸಾಬೀತುಪಡಿಸುತ್ತದೆ. "ಬುದ್ಧನ ದಾರ್ಶನಿಕ ಚಿಂತನೆಗಳು ಮಾನವ ಬದುಕಿನ ಅಂತರಂಗದಲ್ಲಿ ಎಂತಹ ಬೆಳಕಿನ ಹಣತೆಯನ್ನು ಹಚ್ಚಿಡಬಲ್ಲವು ಎಂಬುದು ಬಹಳ ಮುಖ್ಯವಾಗಿರುವ ಪ್ರಶ್ನೆ. ಆಧುನಿಕ ಬದುಕಿನಲ್ಲಿ ಮನುಷ್ಯನಿಗೆ ಭೌತಿಕ ಸಾಧನೆಗಳ ನೆರವೊಂದೆ ಸಾಕಾಗುತ್ತಿಲ್ಲ. ಬದಲಿಗೆ ಒಳ್ಳೆಯ ಚಿಂತನೆ ಹಾಗೂ ಒಳ್ಳೆಯ ವರ್ತನೆ ಎಂಬ ಹೃದಯಾಂತರಾಳದ ಪರಿಕರಗಳೂ ಕೂಡ ಅತ್ಯಂತ ಅವಶ್ಯಕವಾಗುತ್ತವೆ."[೨೧] ಈ ಮಾತುಗಳು ಬುದ್ಧನ ಆಲೋಚನೆಗಳ ದೂರದೃಷ್ಟಿ ಮತ್ತು ಕಾಳಜಿಗಳನ್ನು ಧ್ವನಿಸುತ್ತವೆ. ಆತನ ಆಲೋಚನೆಗಳ ಹಿಂದೆ ಮನುಷ್ಯನಲ್ಲಿನ ಹಿಂಸೆಯನ್ನು ಪೂರ್ಣವಾಗಿ ನಿವಾರಿಸಿಕೊಳ್ಳುವ ಮಾರ್ಗಗಳನ್ನು ಹುಡುಕುವ ತುಡಿತವಿತ್ತು.

ದೇವರು ಧರ್ಮಗಳ ಬಗೆಗೆ ಅವತಾರ, ಪವಾಡಗಳನ್ನು ಹೆಣೆಯುವ ಹುನ್ನಾರಗಳನ್ನು ಬುದ್ಧ ನಿರಾಕರಿಸುತ್ತಾನೆ. ವೈಚಾರಿಕ ಪ್ರಜ್ಞೆಯಿಂದ ನಿಸರ್ಗ ಸಹಜ ಸತ್ಯಗಳನ್ನು ಅರಿಯಬೇಕು ಎಂದು ಬೋಧಿಸಿದ. ಪವಾಡ, ಅವತಾರಗಳು ಜನರನ್ನು ಅಜ್ಞಾನದಲ್ಲಿಡುವ ಪ್ರಯತ್ನಗಳಾಗಿವೆ. ಅಂತಿಮವಾಗಿ ಇವು ದುಃಖಕ್ಕೆ ಕಾರಣಗಳು ಎಂದು ತಿಳಿಸಿದ. ಜಿ.ಎಸ್. ಸಿದ್ಧಲಿಂಗಯ್ಯ ತಮ್ಮ 'ಬುದ್ಧ' ಕವಿತೆಯಲ್ಲಿ ಬುದ್ಧನ ಸುತ್ತ ಹೆಣೆಯಲಾದ ಪವಾಡಗಳ ಕಥಾನಕಗಳನ್ನು ನಿರಾಕರಿಸುತ್ತಾ ವಾಸ್ತವದ ದೃಷ್ಟಿಕೋನದಲ್ಲಿ ಜಗತ್ತನ್ನು ಅರಿಯಬೇಕಾದ ಪ್ರಜ್ಞೆಯನ್ನು ಜಗತ್ತಿಗೆ ನೀಡಿದ್ದು ಬುದ್ಧನ ಅದ್ಭುತ ಕೊಡುಗೆ ಎನ್ನುತ್ತಾರೆ.

ತೆರೆಯಿರಿ ಕಣ್ಗಳ ನೋಡಿರಿ ಸುತ್ತ
ಲೋಕವೆನ್ನುವುದೆ ಒಂದು ಪವಾಡ
ಹಾಡುತ್ತಲೆ ಹರಿಯುವ ಹೊಳೆ
ಬಗಿದು ನೆಲದ ಎದೆ ಮೇಲೆ ತಲೆಯೆತ್ತಿ
ಬಾವುಟವೆತ್ತುವ ಬೀಜ ಮೊಳಕೆಗಳು
ಕಡಲಿನ ನೀರೇ ಮುಗಿಲಾಗೇರುತ
ಇಳಿವುದು ಭೂಮಿಗೆ ವರ್ಷರೂಪದಲಿ
.................................................
ಈ ಬದುಕೆಂಬುದೆ ಒಂದು ಪವಾಡ
ಎಲ್ಲಿ ಕಾಣುವಿರಿ ಇವುಗಳಿಗಿಂತಲು
ಬೇರೆ ಪವಾಡವ ತೆರೆಯಿರಿ ಹೃದಯ
ಅರಿಯಿರಿ ಈ ಲೋಕದ ಅದ್ಭುತ [೨೨]

ಈ ಕವಿತೆ ನಿಸರ್ಗದಲ್ಲಿ ಅಡಗಿರುವ ಹಲವು ಪವಾಡಗಳನ್ನು ವೈಜ್ಞಾನಿಕವಾಗಿ ಅರಿಯಬೇಕಾದ ಅಗತ್ಯವನ್ನು ಹೇಳುತ್ತಲೇ ಮನುಷ್ಯರ ಪವಾಡಪ್ರಿಯತೆಯ ಹಿಂದಿನ ಒತ್ತಡಗಳನ್ನು ಗುರುತಿಸುತ್ತದೆ. ಇದುವರೆಗಿನ ಎಲ್ಲಾ ಧರ್ಮಗಳೂ ಮನುಷ್ಯನನ್ನು ಅಜ್ಞಾನದಲ್ಲಿಟ್ಟು ಪವಾಡಗಳನ್ನು ನಂಬಿಸುತ್ತಾ ಬಂದಿದ್ದರೆ ಬುದ್ಧ ಮೊದಲ ಬಾರಿಗೆ ಪವಾಡಗಳಿಲ್ಲದ ಧರ್ಮವನ್ನು ಬೋಧಿಸಿದ. ನಿಸರ್ಗವನ್ನೂ, ಬದುಕನ್ನೂ ಅದರ ಸಹಜತೆಯಲ್ಲಿ ಅರಿಯಬೇಕಾದ ಹೊಸ ಪ್ರಜ್ಞೆಯನ್ನು ಬುದ್ಧ ನೀಡಿದ. ಇದು ಬುದ್ಧನ ವ್ಯಕ್ತಿತ್ವದ ವಿಶಿಷ್ಟತೆ. ಆದರೆ ಬುದ್ಧನ ಕಾಲಾನಂತರದಲ್ಲಿ ಆತನ ಬದುಕು ಬೋಧನೆಗಳು ಪವಾಡದ ಕತೆಗಳಿಂದ ತುಂಬಿಹೋದದ್ದು ಬುದ್ಧನನ್ನು ವೈದಿಕೀಕರಣಗೊಳಿಸುವ ಹುನ್ನಾರದ ಫಲ.

ಪ್ರತಿಯೊಂದು ವಸ್ತುವಿನಲ್ಲೂ, ಮನುಷ್ಯರಲ್ಲೂ ಇರಬಹುದಾದ ಅದ್ಭುತ ಶಕ್ತಿಯನ್ನು ಬುದ್ಧ ಗುರುತಿಸಿದ್ದ. ಜಗತ್ತಿನ ಎಲ್ಲಾ ಸಮಸ್ಯೆಗಳಿಗೆ ಕಾರಣ ಮತ್ತು ಪರಿಹಾರಗಳನ್ನು ಮನುಷ್ಯರ ಒಳಗೇ

ಕಂಡುಕೊಂಡಿದ್ದು ಬುದ್ಧನ ವಿಶಿಷ್ಟತೆ. ಮನುಷ್ಯರೊಳಗಿನ ಪ್ರೀತಿ, ಕರುಣೆ, ನಗು, ಸ್ನೇಹ ಇವುಗಳಿಗೆ ಎಂತಹ ಕ್ರೌರ್ಯವನ್ನೂ ಪರಿವರ್ತಿಸುವ ಶಕ್ತಿ ಇರುತ್ತದೆ ಎಂಬ ಸತ್ಯವನ್ನು ತನ್ನ ಬದುಕಿನ ಮೂಲಕವಾಗಿಯೇ ಸಾಬೀತುಪಡಿಸಿದ. ಇದನ್ನು ಶ್ಯಾಮಸುಂದರ ಬಿದರಕುಂದಿ ಅವರ 'ಬುದ್ಧ ನಗೆ' ಕವಿತೆ ಗುರುತಿಸುತ್ತದೆ.

ನಗೆ ನವಿರು ಭಾವದ ಹಾರ್ದಿಕ ತೋರಿಕೆ
ನಗುವ ಮುಖ, ತನ್ನೆದುರು ಮುಖವನ್ನು ಅರಳಿ
ಸುವುದು: ತತ್‌ಕ್ಷಣವೇ ಕಣ್ಣ ಮಿನುಗಿಸುವುದು.
ನೂರು ಮಾತಿಗೆ ಇರದ ಇಂಪು ಒಂದು ಹೂ–
ನಗೆಗುಂಟು: ಮೊಗ್ಗೆ ನಗುವಿಗೂ ಉಂಟು ಸ್ನೇಹ
ವರಳಿಸುವ ಸರಸ ಸಜ್ಜನಿಕೆ ನರುಗಂಪು [೨೩]

ಈ ಕವಿತೆ ದ್ವೇಷ, ಹಿಂಸೆಯನ್ನು ಗೆಲ್ಲಲು ಬೇಕಾದ ಸರಳ ಮಾರ್ಗಗಳನ್ನು ಮನುಷ್ಯನ ಸಾತ್ವಿಕ ಗುಣಗಳಲ್ಲಿ ಗುರುತಿಸುವುದರ ಮೂಲಕ ಅವುಗಳ ಪ್ರಸ್ತುತತೆಯನ್ನು ಹೇಳುತ್ತದೆ. ಒಂದು ನಿಷ್ಕಲ್ಮಷ ನಗೆ ಒಂದು ಯುದ್ಧವನ್ನೇ ತಪ್ಪಿಸಬಲ್ಲದು ಎಂಬ ಸತ್ಯವನ್ನು ಬುದ್ಧ ಕಂಡುಕೊಂಡಿದ್ದ ಎಂಬುದನ್ನು ಕವಿತೆ ಧ್ವನಿಸುತ್ತದೆ.

ಬುದ್ಧನದು ಜ್ಞಾನದ ಅಹಂನಿಂದ ಬೀಗುವ ವ್ಯಕ್ತಿತ್ವವಾಗಿರಲಿಲ್ಲ. ಮನುಷ್ಯ ಸಹಜ ಎಲ್ಲಾ ವಿಕಾರಗಳನ್ನೂ ಗೆದ್ದ ಪರಿಪೂರ್ಣ ವ್ಯಕ್ತಿತ್ವ ಅವನದು. ಮಾನವತೆಯು ಹೊಂದಬಹುದಾದ ಎಲ್ಲಾ ಗುಣಗಳನ್ನು ಸಂಪಾದಿಸಿಕೊಂಡಿದ್ದ ಬುದ್ಧನದು ಚೆಲುವು ಪರಿಮಳಗಳಿಂದ ಮುದ ನೀಡುವ ಹೂವಿನಂತ ವ್ಯಕ್ತಿತ್ವ. ಸವಿತಾ ನಾಗಭೂಷಣರ 'ಬುದ್ಧ ಮತ್ತು ಹೂವು' ಕವಿತೆ ಬುದ್ಧನ ವ್ಯಕ್ತಿತ್ವದಲ್ಲಿ ಹೂವಿನ ನಿಗರ್ವಿ ಗುಣವನ್ನು ಕಾಣುತ್ತದೆ.

ಗರ್ವವೆಂಬುದು
ಹೂವಿನ ಬಳಿ
ಸುಳಿಯದು
ಎಷ್ಟೊಂದು ಚೆಲುವು
ಘನವಾದ ಒಲವು
ನಿರಂತರ
ಧ್ಯಾನದ ಫಲವು
ಮೈತ್ರಿ–ಕರುಣೆ
ಎಂದು ಬುದ್ಧ
ಬೋಧಿಸಿದ್ದ
ಪೂರ್ವಜನ್ಮದ ಸ್ಮರಣೆ
ಅವನು ಹೂವಾಗಿದ್ದ. [೨೪]

ಹೂವಿನಲ್ಲಿನ ಚೆಲುವು, ಒಲವು, ನಿರಂತರ ಧ್ಯಾನ, ನಿಗರ್ವತೆ, ಮೈತ್ರಿ, ಕರುಣೆ ಬುದ್ಧನಲ್ಲಿ ನೆಲೆಸಿವೆ. ಹೂವಿನ ಸಾನಿಧ್ಯ ಉಂಟುಮಾಡಬಹುದಾದ ಎಲ್ಲಾ ಭಾವನಾತ್ಮಕ ಸಂವೇದನೆಗಳನ್ನು ಬುದ್ಧನ ಸಾನಿಧ್ಯವೂ ಉಂಟುಮಾಡಬಲ್ಲದು ಎಂಬುದನ್ನು ಕವಿ ಗುರುತಿಸುತ್ತಾರೆ.

ಬುದ್ಧನ ಹುಡುಕಾಟಗಳ ಅಂತಿಮ ಗುರಿ ಸಾಮಾಜಿಕ ನೆಲೆಯದ್ದಾಗಿತ್ತು. ವೈಯಕ್ತಿಕ ಸಾಧನೆ ಸಿದ್ಧಿಗಳು ಬುದ್ಧನ ಗುರಿಯಾಗಿರಲಿಲ್ಲ. ತನಗೆ ಸಾಧ್ಯವಾದದ್ದು ಎಲ್ಲರಿಗೂ ಸಾಧ್ಯ ಎಂದು ನಂಬಿದ್ದ ಬುದ್ಧ ಮಾನವ ನಾಗರೀಕತೆಯ ರೋಗಗಳಿಗೆ ಮದ್ದು ಕಂಡುಕೊಳ್ಳಲು ತನ್ನ ಬದುಕನ್ನೇ ಪ್ರಯೋಗಶಾಲೆಯಾಗಿಸಿಕೊಂಡ. ಸತ್ಯವನ್ನು ಅರಿತ ನಂತರ ಮತ್ತೆ ಜನರ ಬಳಿಗೆ ಬಂದ. ಜನರನ್ನು ದುಃಖದಿಂದ ಪಾರು ಮಾಡುವ ಮಾರ್ಗಗಳನ್ನು ಬೋಧಿಸಿದ. ವೈಯಕ್ತಿಕ ಮೋಕ್ಷ ಸಾಧನೆಗಾಗಿ ಎಲ್ಲವನ್ನೂ ತೊರೆದು ಹೋಗುವ, ಮರಳಿ ಬಾರದ ಸಾಧಕರ ನಡುವೆ ಬುದ್ಧ ವಿಶಿಷ್ಟವಾಗಿ ನಿಲ್ಲುತ್ತಾನೆ.

ಮನೆ ಮಠ ಎಲ್ಲಾ ಬಿಟ್ಟು
ನಿನ್ನಂತೆ ಹೋದವರನೇಕ ಮಧ್ಯರಾತ್ರಿಯಲಿ ಎದ್ದು
ನನಗಂತೂ ಗೊತ್ತಿಲ್ಲ; ಅವರು ಮರಳಿ ಬಂದದ್ದು
ನಿನ್ನಂತೆ ಬದುಕನ್ನು ಗೆದ್ದದ್ದು! [38]

ಈ ಕವಿತೆ ವೈದಿಕ ಧರ್ಮದ ಮೋಕ್ಷ ಸಾಧನೆಯ ನಿಲುವುಗಳನ್ನು ಪಲ್ಲಟಿಸಿದ ಬುದ್ಧನ ಸಾಮಾಜಿಕ ಕಳಕಳಿಯ ವ್ಯಕ್ತಿತ್ವವನ್ನು ಗುರುತಿಸುತ್ತದೆ. ಬುದ್ಧ ಸಂಸಾರವನ್ನು ತೊರೆದು ಹೋದದ್ದು ಪ್ರಶ್ನಿಸಲ್ಪಟ್ಟಿದ್ದರೂ ಬುದ್ಧ ಹಾಗೆ ತೊರೆದು ಹೋದದ್ದು ವೈಯಕ್ತಿಕ ಸಾಧನೆಗೆ ಅಡ್ಡಿ ಎಂಬ ಭಾವನೆಯಿಂದಲ್ಲ. ಜಗತ್ತಿನ ದು:ಖಗಳಿಗೆ ಕಾರಣಗಳನ್ನು ಕಂಡುಕೊಳ್ಳುವ ಆಂತರಿಕ ತುಡಿತಗಳಿಂದ. ಜ್ಞಾನೋದಯದ ಬಳಿಕ ಬುದ್ಧ ಜನರ ಬಳಿಗೆ ಬಂದದ್ದು ಆತನನ್ನು ಪರಂಪರೆಗಿಂತ ಭಿನ್ನವಾಗಿ ನೋಡಬೇಕಾದ ಬಗೆಯನ್ನು ತಿಳಿಸುತ್ತದೆ. ಇಲ್ಲಿ ಬುದ್ಧನ ವ್ಯಕ್ತಿತ್ವದಲ್ಲಿನ ಮಾನವೀಯ ಕಳಕಳಿಗಳನ್ನು ಕಾಣಬಹುದು.

ಬುದ್ಧ ಜ್ಞಾನದ ಬೆಳಕಿನಿಂದ ಜಗತ್ತಿನ ಕತ್ತಲೆಯನ್ನು ಬೆಳಗಿದವನು. ಈ ಬೆಳಕು ಸ್ವಾರ್ಥಪರವಾದುದಲ್ಲ. ತನ್ನನ್ನು ಮಥಿಸಿಕೊಂಡು ಪಡೆದ ಆ ಬೆಳಕು ಕೇವಲ ತನಗಾಗಿ ಅಲ್ಲ. ಎಲ್ಲ ಮನುಷ್ಯರನ್ನೂ ಆ ನೆಲೆಗೆ ಏರಿಸುವ ಬಯಕೆಯನ್ನು ಹೊಂದಿತ್ತು. ಆ ಸ್ಥಿತಿಯನ್ನು ಹೊಂದುವ ಮಾರ್ಗವನ್ನು ಬುದ್ಧ ಗುಪ್ತವಾಗಿಡಲಿಲ್ಲ. ಜಗತ್ತು ಆ ಬೆಳಕಿನ ಆನಂದವನ್ನು ಅನುಭವಿಸಬೇಕು ಎಂದು ಬಯಸಿ ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತನಾಗಿದ್ದ.

ತಾನೊಬ್ಬನೇ ಏಕೆ ತೊಳಗಿ ಬೆಳಗಲಿ ಎಂದು
ನೂರಾರು ಜ್ಯೋತಿಗಳ ಬೆಳಗಿಸಿದ ಅಂದು
ನೊಂದು ಬೆಂದಿಹ ಜನಕೆ ನಲಿವ ತರಲೆಂದು
ತನಗೆ ತಾನೇ ಉರಿಸಿಕೊಂಡಿತ್ತು ಆ ಜ್ಯೋತಿ ಅಂದು [39]

ಬುದ್ಧ ಜಗತ್ತನ್ನು ತನ್ನ ಕರುಣೆಯ ಬೆಳಕಿನಿಂದ ಬೆಳಗಿದ 'ಜ್ಯೋತಿ'. ಆ ಜ್ಯೋತಿ ತಾನೊಂದೇ ಬೆಳಗುವ ಪ್ರತಿಷ್ಠೆಯನ್ನು ಮೆರೆಯಲಿಲ್ಲ. ಎಲ್ಲ ಮನುಷ್ಯರೂ ಜ್ಯೋತಿಯಾಗಿ ಬೆಳಗಬಹುದಾದ ದಾರಿಯನ್ನು ಮುಕ್ತವಾಗಿರಿಸಿದ್ದ ಬುದ್ಧ. ಬಹುಜನರ ಒಳಿತಿಗಾಗಿ ತನ್ನ ಬದುಕನ್ನೆ ಶೋಧಕ್ಕೆ ಒಡ್ಡಿಕೊಂಡು ಅಂತಿಮವಾಗಿ ಬೆಳಗುವ ಜ್ಯೋತಿಯಾಗಿ ನಿಂತ ಬುದ್ಧನ ಮುಂದೆ ಜನತೆ ಹತಾಶೆ, ನೋವು, ಅಸಹಾಯಕತೆ, ಅನಾಥತೆಯಿಂದ ಮೊರೆಯಿಡುತ್ತದೆ ಎಂದರೆ ಬುದ್ಧನ ವ್ಯಕ್ತಿತ್ವದ ಅನನ್ಯತೆ ಮನದಟ್ಟಾಗುತ್ತದೆ.

ಈ ಎಲ್ಲಾ ಕವಿತೆಗಳು ಬುದ್ಧನ ವ್ಯಕ್ತಿತ್ವವನ್ನು ಹಲವು ನೆಲೆಗಳಲ್ಲಿ ಗ್ರಹಿಸುವ, ವಿಸ್ತರಿಸುವ ಪ್ರಕ್ರಿಯೆಯಲ್ಲಿ ತೊಡಗಿರುವುದು ಗಮನಾರ್ಹ. ಈ ಕವಿತೆಗಳು ಕಟ್ಟಿಕೊಡುತ್ತಿರುವ ಬುದ್ಧನ ವ್ಯಕ್ತಿತ್ವದ ಹಲವು ಮುಖಗಳು, ಗುಣಗಳು ಸಮಕಾಲೀನ ಜಗತ್ತಿನ ಅಗತ್ಯಗಳೂ ಹೌದು. ಸಮಕಾಲೀನ ಜಗತ್ತಿನ ಹಲವು ಗೊಂದಲ, ಸಂಘರ್ಷ, ಸಂಕಟಗಳಿಗೆ ಉತ್ತರಗಳೂ ಹೌದು. ಕವಿಗಳು ತಮ್ಮ ಸಮುದಾಯದ ಪ್ರತಿನಿಧಿಯಾಗಿ ಮಾತನಾಡುತ್ತಿರುತ್ತಾರಾದ್ದರಿಂದ ಇವು ಸಮುದಾಯದ ನಿರೀಕ್ಷೆಗಳೂ ಹೌದು. ತಮ್ಮ ಕಾಲದ ಸಾಂಸ್ಕೃತಿಕ ಬದುಕನ್ನು ಬೌದ್ಧ ಗ್ರಹಿಕೆಯಿಂದ ಮರುರೂಪಿಸಿಕೊಳ್ಳುವ ವಿಶಿಷ್ಟ ಕಾಳಜಿಗಳೂ ಹೌದು. ಹಾಗೂ ಮಾನವ ನಾಗರೀಕತೆ ಸಾಗಬೇಕಾದ ದಾರಿಯ ಸೂಚಕಗಳಾಗಿಯೂ ಈ ಕವಿತೆಗಳು ಪಾತ್ರವಹಿಸುತ್ತವೆ. ಬುದ್ಧನ ವ್ಯಕ್ತಿತ್ವದ ಗುಣಗಳನ್ನು ಯಾವ ಕಾರಣಕ್ಕಾಗಿ ಈ ಕವಿಗಳು ಮುನ್ನೆಲೆಗೆ ತರುತ್ತಿದ್ದಾರೋ, ಯಾವ ವಿರೋಧಗಳಿಗೆ ಅಸ್ತ್ರವಾಗಿ ಬಳಸುತ್ತಿದ್ದಾರೋ ಅವು ಸಾಕಾರಗೊಳ್ಳಬೇಕಾದ ತುರ್ತಿನಿಂದ ಹೊರಟ ಒತ್ತಾಯಗಳಾಗಿಯೂ ಈ ಕವಿತೆಗಳನ್ನು ನೋಡಬಹುದು. ಆ ಒತ್ತಾಯಗಳನ್ನು ಈ ಕವಿತೆಗಳ ಧೋರಣೆಯ ಹಿನ್ನೆಲೆಯಲ್ಲಿ

ಗುರುತಿಸಬಹುದು. ಸಮಾನತೆ, ಶಾಂತಿ, ಸಹಬಾಳ್ವೆ, ಸ್ವಾತಂತ್ರ್ಯ ಮುಂತಾದ ನೆಮ್ಮದಿಯ ನಾಳೆಗಳನ್ನು ರೂಪಿಸಿಕೊಡುವ ಮಾನವೀಯ ಕಾಳಜಿಗಳು ಇಲ್ಲಿ ಕೆಲಸ ಮಾಡಿವೆ. ಇಲ್ಲಿ ಕವಿಗಳ ಒತ್ತಾಸೆಗಳಿಗೆ ನೈತಿಕಶಕ್ತಿಯಾಗಿ, ಏಕೈಕ ಪರಿಹಾರವಾಗಿ ಕಂಡಿರುವುದು ಬುದ್ಧನ ವ್ಯಕ್ತಿತ್ವವೇ ಎಂಬುದು ಆತನ ವ್ಯಕ್ತಿತ್ವದ ಅನನ್ಯತೆಯನ್ನು ಧ್ವನಿಸುತ್ತದೆ. ಬುದ್ಧನ ವ್ಯಕ್ತಿತ್ವವನ್ನು ಕುರಿತ ಈ ಎಲ್ಲಾ ವಿವೇಚನೆಗಳು ಬುದ್ಧನನ್ನು ಗ್ರಹಿಸಿಕೊಳ್ಳುವ ಪ್ರಯತ್ನಗಳಾಗಿರುವಂತೆಯೇ ಸಮಕಾಲೀನ ಜಾಗತಿಕ ತುರ್ತುಗಳಿಗೆ ಬುದ್ಧನಲ್ಲಿ ಪರಿಹಾರಗಳನ್ನು ಕಾಣುವ ಪ್ರಯತ್ನಗಳೂ ಹೌದು. ಬುದ್ಧನ ವ್ಯಕ್ತಿತ್ವವನ್ನು ಸಮಕಾಲೀನ ಪ್ರಜ್ಞೆಯ ಮುಖೇನ ಗ್ರಹಿಸಿಕೊಳ್ಳುವ ವಿಶಿಷ್ಟ ಪ್ರಯತ್ನವನ್ನು ಇಲ್ಲಿ ಕಾಣಬಹುದು.

### ೪.೨.೨ ಬುದ್ಧನ ಮೌನ ಮತ್ತು ನಗು : ತಾತ್ವಿಕ ಜಿಜ್ಞಾಸೆಯ ಪರಿಕರಗಳಾಗಿ

ಬುದ್ಧನ ವ್ಯಕ್ತಿತ್ವದ ಬಹುಮುಖ್ಯವಾದ ಎರಡು ಅಂಶಗಳೆಂದರೆ ಮೌನ ಮತ್ತು ನಗು. ಬುದ್ಧನಿಗೆ ಸಂಬಂಧಿಸಿದ ಸಾಹಿತ್ಯ ಕೃತಿಗಳು ಹಾಗೂ ಶಿಲ್ಪ ಕಲಾಕೃತಿಗಳು ಈ ಎರಡೂ ಅಂಶಗಳನ್ನು ಪ್ರಸ್ತಾಪಿಸುತ್ತವೆ. ಬುದ್ಧ ತನಗೆ ಜ್ಞಾನೋದಯವಾದ ನಂತರ ಪ್ರಾಪಂಚಿಕ ಸತ್ಯಗಳನ್ನು ಅರಿತ ಆನಂದದಿಂದ ಮತ್ತು ಅಪಾರವಾದ ಮಾನವ ಪ್ರೀತಿಯಿಂದ ನಗುತ್ತಾನೆ. ಹಾಗೆಯೇ ತನಗೆ ಆದ ಜ್ಞಾನೋದಯದ ಅನುಭವಗಳನ್ನು ಹೇಳಬೇಕೋ, ಬೇಡವೋ ಎಂಬ ಗೊಂದಲದಲ್ಲಿ ಹಾಗೂ ಕೆಲವು ಆತ್ಯಂತಿಕ ಸಂದರ್ಭಗಳಲ್ಲಿ ಮೌನವಹಿಸುತ್ತಾನೆ. ಬುದ್ಧನ ನಗು ಮತ್ತು ಮೌನಗಳೆರಡೂ ಜಗತ್ಪ್ರಸಿದ್ಧವಾದವುಗಳು. ಬುದ್ಧನ ವ್ಯಕ್ತಿತ್ವಕ್ಕೆ ಸಂಬಂಧಿಸಿದ ಈ ಎರಡೂ ಸಂಗತಿಗಳು ಮಾತಿಗೆ ಮೀರಿದ ಅನುಭವಗಳನ್ನು ಕೊಡುವ ಹಾಗೂ ಮಾತಿನ ಅಪಾಯಗಳನ್ನು ತಡೆಯುವ ಪ್ರಯತ್ನಗಳಾಗಿ ಕಂಡುಬರುತ್ತವೆ. ತನಗಿರುವ ಅರಿವಿನ ಮಿತಿಯನ್ನು ಹೇಳಲೂ, ಪ್ರತಿಯೊಬ್ಬರೂ ಸತ್ಯದ ಅರಿವನ್ನು ಸ್ವತಹ ಅನುಭವದಿಂದಲೇ ಪಡೆಯಲಿ ಎಂಬ ಉದ್ದೇಶದಿಂದಲೂ ಬುದ್ಧ ನಗು ಮತ್ತು ಮೌನವನ್ನು ಬಳಸುತ್ತಾನೆ. ಬುದ್ಧ ಬಳಸುವ ಈ ವಿಶಿಷ್ಟ ಸಾಧನಗಳನ್ನು ಆಧುನಿಕ ಕವಿಗಳು ತಮ್ಮ ತಾತ್ವಿಕ ಜಿಜ್ಞಾಸೆಗಳ ಅಭಿವ್ಯಕ್ತಿಗಾಗಿ ಬಳಸಿಕೊಂಡಿದ್ದಾರೆ. ಬುದ್ಧನ ನಗು ಮತ್ತು ಮೌನಗಳಲ್ಲಿ ಇವರು ಕಂಡುಕೊಳ್ಳುವ ಅರ್ಥಗಳು ಭಿನ್ನವಾಗಿವೆ. ಹಾಗೆಯೇ ಅವುಗಳನ್ನು ಸಮಕಾಲೀನ ಬದುಕಿನ ವಿಡಂಬನೆಗಾಗಿಯೂ ಬಳಸಲಾಗಿದೆ.

ಕೆಲವು ಆತ್ಯಂತಿಕ ಸಂದರ್ಭಗಳಲ್ಲಿ ಬುದ್ಧ ಮಾತನಾಡದೆ ಮೌನವಹಿಸುತ್ತಾನೆ. ಇದು ಬುದ್ಧನ 'ಮಹಾಮೌನ' ಎಂದೆ ಕರೆಯಲ್ಪಟ್ಟಿದೆ. ತನ್ನ ಬಳಿಗೆ ಬಂದ ಅನೇಕರ ಪ್ರಶ್ನೆಗಳಿಗೆ ಬುದ್ಧ ಉತ್ತರಿಸುತ್ತಾನಾದರೂ ಅವರ ಎಲ್ಲಾ ಪ್ರಶ್ನೆಗಳಿಗೆ ಉತ್ತರಿಸುತ್ತಿರಲಿಲ್ಲ. ಕೆಲವು ಪ್ರಶ್ನೆಗಳ ಸಂದರ್ಭದಲ್ಲಿ ಬುದ್ಧ ಮೌನವಹಿಸಿಬಿಡುತ್ತಿದ್ದ. ಬುದ್ಧನ ಈ ಮೌನ ಹಲವು ಮರುಪ್ರಶ್ನೆಗಳಿಗೆ, ಅನುಮಾನಗಳಿಗೆ, ಹಾಗೂ ಹಲವು ಅರ್ಥಸಾಧ್ಯತೆಗಳಿಗೆ ಕಾರಣವಾಗಿದೆ. ಬುದ್ಧನ ನಗುವಿಗೆ ಹಲವು ಕಾರಣಗಳಿವೆ. ಅವುಗಳೆಂದರೆ ಬುದ್ಧ ನಿಸರ್ಗ ಸತ್ಯಗಳನ್ನು, ಮನುಷ್ಯನ ದುಃಖಗಳಿಗೆ ಕಾರಣಗಳನ್ನೂ, ಪರಿಹಾರಗಳನ್ನೂ ಕಂಡುಕೊಂಡ ಆನಂದ ಒಂದು ಅಂಶವಾದರೆ ಮತ್ತೊಂದು ಜೀವರಾಶಿಯ ಮೇಲಿನ ಅಪಾರವಾದ ಕರುಣೆ, ಪ್ರೀತಿಗಳು. ಜನರನ್ನು ಅಜ್ಞಾನದಲ್ಲಿಟ್ಟಿರುವ ಧರ್ಮವೂ ಕೂಡ ಒಂದು ರೀತಿಯಲ್ಲಿ ಬುದ್ಧನ ನಗುವಿಗೆ ಕಾರಣವಾಗಿದೆ.

ಬುದ್ಧನ 'ನಗು' ಮತ್ತು 'ಮೌನ'ಗಳಿಗೆ ಬೌದ್ಧ ತಾತ್ವಿಕ ನಿಲುವುಗಳು ಕೊಡುವ ಉತ್ತರಗಳು ಒಂದು ಬಗೆಯವಾದರೆ, ಸಾಹಿತ್ಯ ಇದನ್ನು ಭಿನ್ನವಾಗಿ ನೋಡುವ ಪ್ರಯತ್ನ ಮಾಡಿದೆ. ಆಧುನಿಕ ಕನ್ನಡ ಕಾವ್ಯ ಈ ಎರಡೂ ಅಂಶಗಳನ್ನು ವರ್ತಮಾನದ ಯಾವ ವಿಚಾರಗಳ ಅಭಿವ್ಯಕ್ತಿಗೆ ರೂಪಕಗಳನ್ನಾಗಿ ಬಳಸಿಕೊಂಡಿದೆ? ಆ ಮೂಲಕ ಬುದ್ಧನ 'ಮೌನ' ಮತ್ತು 'ನಗು'ವಿಗೆ ಕಾವ್ಯ ಕೊಡುತ್ತಿರುವ ಅರ್ಥಸಾಧ್ಯತೆಗಳಾವುವು? ಎಂಬುದು ಕುತೂಹಲಕಾರಿಯಾದ ಪ್ರಶ್ನೆಗಳಾಗಿವೆ. ಬುದ್ಧನ ನಗು, ಮೌನ, ತೇಜಸ್ಸು, ಪ್ರಶಾಂತತೆ ಕವಿಗಳನ್ನು ಬಹಳವಾಗಿ ಕಾಡಿದೆ. ಕವಿಗಳು ತಮ್ಮ ಸಮಕಾಲೀನ ಸಂದರ್ಭದಲ್ಲಿ ತಾವು ಕಾಣುತ್ತಿರುವ ಅಸಮಾನತೆ, ಅನ್ಯಾಯ, ಶೋಷಣೆ, ಹಿಂಸೆ, ಭ್ರಷ್ಟತೆ, ಮೌಲ್ಯಗಳ ಅಧಃಪತನ ಮುಂತಾದವುಗಳ ನಿವಾರಣೆಗಾಗಿ ಬುದ್ಧನ ಮೊರೆಹೋಗುತ್ತಿದ್ದಾರೆ. ಇವೆಲ್ಲವುಗಳ ಅಭಿವ್ಯಕ್ತಿಗೆ ಬುದ್ಧ ಸಾಕ್ಷಿಪ್ರಜ್ಞೆಯಾಗಿದ್ದಾನೆ. ವ್ಯವಸ್ಥೆಯ ದುರಂತ ಹುಟ್ಟುಹಾಕಿದ ಅಸಹಾಯಕತೆ, ಸಿಟ್ಟು, ಆಕ್ರೋಶ, ಬಂಡಾಯ, ಅಸಮಾಧಾನಗಳನ್ನು ಹೊರಹಾಕಲು ಬುದ್ಧ ನೆಪವಾಗಿಯೂ, ನೈತಿಕ ಶಕ್ತಿಯಾಗಿಯೂ ಬಳಕೆಯಾಗಿದ್ದಾನೆ. ಇಂಥ ಸಂದರ್ಭಗಳಲ್ಲೆಲ್ಲಾ 'ಬುದ್ಧನ ನಗು' ಮತ್ತು 'ಮೌನ'ಗಳು ವ್ಯಂಗ್ಯ- ವಿಡಂಬನೆಯ ಸಾಧನಗಳಾಗಿ ಬಳಸಿಕೆಯಾಗಿವೆ.

ಕನ್ನಡ ಕವಿಗಳು ಬುದ್ಧನ ನಗೆ, ಮೌನ, ಪ್ರಶಾಂತತೆಯಲ್ಲಿ ಹಲವು ಅರ್ಥಲೋಕಗಳನ್ನು ಕಂಡುಕೊಳ್ಳುವ ಸೂಕ್ಷ್ಮತೆಯನ್ನು ಪ್ರಕಟಿಸಿದ್ದಾರೆ. ತಮ್ಮ ಸಮಕಾಲೀನ ಮಾನವ ಜಗತ್ತಿನ ದುರಂತಗಳಿಗೆ, ಗೊಂದಲಗಳಿಗೆ ನೀಚತನಗಳಿಗೆ ಪ್ರತಿಕ್ರಿಯೆಯಾಗಿ ಇವುಗಳನ್ನು ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಬುದ್ಧನ ಮೌನ ಮತ್ತು ನಗುವನ್ನು ಆನಂದ, ಹತಾಶೆ, ಸಿಟ್ಟು, ವ್ಯಂಗ್ಯ, ನೋವು, ಅಸಹಾಯಕತೆ, ಮತ್ತು ಮನುಷ್ಯನಲ್ಲಿನ ಕ್ರೌರ್ಯ, ಸಣ್ಣತನಗಳ ಅಭಿವ್ಯಕ್ತಿಗೆ ಸಾಧನಗಳನ್ನಾಗಿ ಬಳಸಲಾಗಿದೆ. ಈ 'ನಗು' ಮತ್ತು 'ಮೌನ'ಗಳೆಂಬ ಅಮೂಲ್ಯ ಸಾಧನಗಳು ಆಧುನಿಕ ಮನುಷ್ಯನ ಕೈಗೆ ಸಿಕ್ಕು ಬಳಸಲ್ಪಡುತ್ತಿರುವ ರೀತಿ, ಅವುಗಳ ಹಿಂದಿನ ಉದ್ದೇಶಗಳನ್ನು ಈ ಕವಿತೆಗಳು ವಿಡಂಬಿಸುತ್ತವೆ.

ಬುದ್ಧ ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಹಾಗೂ ಜನರು ಕೇಳುವ ಕೆಲವು ಪ್ರಶ್ನೆಗಳಿಗೆ ಮೌನತಳೆಯುತ್ತಾನೆ. ಬುದ್ಧನ ಈ ಮೌನದ ಹಿಂದೆ ಹಲವು ಕಾರಣ ಮತ್ತು ಉದ್ದೇಶಗಳಿದ್ದವು. ಬುದ್ಧ ದೇವರು, ಪುನರ್ಜನ್ಮ, ಆತ್ಮ, ಮೋಕ್ಷ, ಇವುಗಳಿಗೆ ಸಂಬಂಧಿಸಿದಂತೆ ಎದ್ದ ಪ್ರಶ್ನೆಗಳಿಗೆ ಮೌನವಹಿಸುತ್ತಾನೆ. ಈ ಮೌನದ ಹಿಂದೆ ಎರಡು ಕಾರಣಗಳನ್ನು ಗುರುತಿಸಬಹುದು. ಒಂದು ತನಗೆ ಗೊತ್ತಿಲ್ಲದ ವಿಚಾರಗಳ ಬಗ್ಗೆ ಮಾತನಾಡದೇ ಇರುವುದು. ಇನ್ನೊಂದು ಆ ಪ್ರಶ್ನೆಗಳಿಗೆ ನೀಡಬಹುದಾದ ಹೌದು ಅಥವಾ ಇಲ್ಲ ಎಂಬ ಉತ್ತರಗಳ ಪರಿಣಾಮ ಸಾಧ್ಯತೆಗಳನ್ನು ನಿಯಂತ್ರಿಸುವ ಉದ್ದೇಶ. ತನಗೆ ಗೊತ್ತಿಲ್ಲದ್ದರ ಬಗ್ಗೆ ಮೌನ ವಹಿಸುವ ವಿನಯ, ಮತ್ತು ಆ ಪ್ರಶ್ನೆಗಳಿಗೆ ಪ್ರತಿಯೊಬ್ಬರೂ ಸ್ವತಃ ತಾವೇ ಉತ್ತರಗಳನ್ನು ಕಂಡುಕೊಳ್ಳುವ ಅಗತ್ಯತೆಯ ಸೂಕ್ಷ್ಮತೆ ಬುದ್ಧನ ಮೌನದ ಹಿಂದೆ ಇದ್ದವು. ಈ ಮೌನ ಆಧುನಿಕ ಕನ್ನಡ ಕವಿತೆಗಳಲ್ಲಿ ಸಮಕಾಲೀನ ಮನುಷ್ಯನ ಸ್ವಭಾವ ಹಾಗೂ ಕೆಲವು ಆತ್ಯಂತಿಕ ಸಮಸ್ಯೆಗಳ ಅಭಿವ್ಯಕ್ತಿಗೆ ಸಾಧನವಾಗಿ ಬಳಕೆಗೊಂಡಿದೆ.

ಬುದ್ಧನ ಮಹಾಮೌನ ಲೋಕ ಪ್ರಸಿದ್ಧ. ಆತ ಈ ಮುಂದಿನ ನಾಲ್ಕು ಪ್ರಶ್ನಾಗುಚ್ಛಕ್ಕೆ ಉತ್ತರಿಸಲೊಲ್ಲದೆ ಮೌನತಳೆದ ಎನ್ನುತ್ತಾರೆ ಡಿ.ಆರ್. ನಾಗರಾಜ್.

೧. "ಈ ಜಗತ್ತು ಕಾಲಾತೀತವೇ? ಅಲ್ಲವೆ? ಅಥವಾ ಎರಡು ಅಹುದೆ?

೨. ಈ ಜಗತ್ತಿಗೆ ಮಿತಿ ಇದೆಯೇ? ಅಂತ್ಯವುಂಟೆ? ಇಲ್ಲವೆ? ಅಥವಾ ಎರಡೂ ಹೌದೆ?

೩. ತಥಾಗತ ಮರಣಾ ನಂತರ ಬದುಕಿರುತ್ತಾನೆಯೇ? ಇಲ್ಲವೆ? ಅಥವಾ ಎರಡೂ ಹೌದೆ?

೪. ಆತ್ಮ ಶರೀರಕ್ಕಿಂತ ಬೇರೆಯೇ? ಅಥವಾ ಎರಡು ಒಂದೇನೇ?

ಈ ಪ್ರಶ್ನೆಗಳನ್ನು ಬುದ್ಧ 'ಅವ್ಯಾಕೃತ' ಎಂದು ಕರೆದ. ಇದರ ಬಗೆಗೆ ನಾನು ಶೋಧನೆ ನಡೆಸಲಾರೆ ಎಂದ. ಮಾನವ ಬುದ್ಧಿ ಎಲ್ಲವನ್ನೂ ಅರ್ಥ ಮಾಡಿಕೊಳ್ಳಬಲ್ಲೆ ಎಂದು ಮೊದಲು ತವಕಿಸುತ್ತದೆ. ಆಮೇಲೆ ಅರ್ಥಮಾಡಿಕೊಂಡೆ ಎಂದು ಅಹಮ್ಮಿನಿಂದ ಬೀಗುತ್ತದೆ. ಈ ಅತಿರೇಕಗಳಿಂದ ಬುದ್ಧ ಪಾರಾಗಲು ಹೀಗೆ ಮೌನವಹಿಸುತ್ತಾನೆ."[೨] ಮಾತಿನ ಮಹತ್ವ ಹಾಗೂ ಅದರ ಮಿತಿಗಳ ಬಗೆಗೆ ವಹಿಸಬೇಕಾದ ಎಚ್ಚರಿಕೆಯ ನಡೆಯನ್ನು ಬುದ್ಧನ ಈ ಸಂದರ್ಭದಿಂದ ಅರಿಯಬಹುದು. ಮುಂದುವರಿದು ಬುದ್ಧನ ಮೌನಕ್ಕೆ ಮತ್ತೊಂದು ಕಾರಣವನ್ನು ಗುರುತಿಸಬಹುದಾದರೆ ತನ್ನನ್ನು ದೃಷ್ಟಿವಾದಿ ಎಂಬ ಪಂಥದಿಂದ ಬೇರ್ಪಡಿಸಿಕೊಳ್ಳುವ ಪ್ರಯತ್ನವಾಗಿಯೂ ಇದು ಕಂಡುಬರುತ್ತದೆ. ಡಿ.ಆರ್. ನಾಗರಾಜ್ ಇದನ್ನು ಕುರಿತು ಹೇಳಿರುವ ಮಾತುಗಳು ಸೂಕ್ತವಾದವು. "ಬುದ್ಧನ "ಡೈಲೆಕ್ಟಿಕಲ್" ಚಿಂತನೆ ಉಗಮ ಇಲ್ಲಿಯೇ ಆದರೂ ಬುದ್ಧ 'ಇದಮಿತ್ಥಂ' ಎಂದು, ಹೌದು-ಅಲ್ಲ ಎಂದು ಉತ್ತರ ಕೊಟ್ಟಿದ್ದರೆ ಆತನೂ 'ದೃಷ್ಟಿವಾದಿ' ಆಗಿಬಿಡುತ್ತಿದ್ದ. ಶಾಶ್ವತವಾದ ಮತ್ತು ಉಚ್ಛೇದವಾದಗಳೆರಡೂ ಕಡುದಿಟ್ಟವಾದಗಳಾಗಿಬಿಟ್ಟಾಗ ಬುದ್ಧ ಆ ಬಗೆಯ ಹಠಗಳಿಗೆ ವಿರೋಧವಾದ ಒಂದು ದರ್ಶನ ಕ್ರಮವನ್ನು ನಿರ್ಮಿಸಿದ. ಎಲ್ಲ ಬಗೆಯ ದರ್ಶನಗಳ ವಿಮರ್ಶಾತ್ಮಕ ಪ್ರತಿಫಲನ ಅದು. ಎಲ್ಲ ದಿಟ್ಟವಾದಗಳಿಂದ ಮುಕ್ತವಾಗಿರುವ ಸ್ಥಿತಿಯ ಸ್ವಾತಂತ್ರ್ಯದ ಮಾಧ್ಯಮಿಕ ಅಂತಿಮ ನಿಲುವು ಇದು".[೨೮]

ಈಗಾಗಲೇ ಗುರುತಿಸಿರುವಂತೆ ಬುದ್ಧನ ಮೌನಕ್ಕೆ ವಿಭಿನ್ನ ಆಯಾಮ ಮತ್ತು ನೆಲೆಗಳಿವೆ. ಜಿ. ಕೆ. ರವೀಂದ್ರ ಕುಮಾರ್ ಬುದ್ಧನ ಮೌನವನ್ನು ಗುರುತಿಸುವ ಬಗೆ ವಿಶಿಷ್ಟವಾದದ್ದು. ಅವರ ಪ್ರಕಾರ ಬುದ್ಧನ ಮೌನದಲ್ಲಿ ಮಾತಿನ ಚಿಗುರಿದೆ, ಚಲನೆಯಿದೆ, ಜೀವಂತಿಕೆಯಿದೆ, ಎಚ್ಚರವಿದೆ. ಮೌನ ಮತ್ತು ಮಾತುಗಳೂ ಕೂಡ ಬುದ್ಧನಲ್ಲಿ ಒಂದರೊಳಗೊಂದು ಬೆರೆತುಹೋಗಿವೆ. ಆತನ ಮೌನದಲ್ಲಿ ಅಪಾರ ಅರ್ಥವಂತಿಕೆಯ ಮಾತುಗಳನ್ನು, ಮಾತಿನಲ್ಲಿ ಆಳವಾದ ಮೌನವನ್ನೂ ಕಾಣಲು ಸಾಧ್ಯ. ಆ ಮೌನ ಇಡೀ ಸೃಷ್ಟಿಯ ರಹಸ್ಯವನ್ನು ಅದರ ಎಲ್ಲಾ ನೇತ್ಯಾತ್ಮಕ, ಇತ್ಯಾತ್ಮಕ ಪರಿಣಾಮಗಳನ್ನು ಭೇದಿಸುವ ಶಕ್ತಿಯುಳ್ಳದ್ದು ಎನ್ನುತ್ತಾರೆ. ಬುದ್ಧನ ಮಾತಿನಲ್ಲಿ ಅಡಗಿರುವ ಮೌನ, ತನ್ನೊಳಗಿನ ಹಲವು ಪ್ರಶ್ನೆಗಳ ಬಗೆಗಿನ ಪ್ರಖರ ತಿಳಿವಿನಿಂದ ಮೂಡಿಬಂದದ್ದು. ಈ ಮೌನ ನಮ್ಮ ಅಜ್ಞಾನದ ಅಡಿಪಾಯವನ್ನು ಅಲುಗಿಸಿಬಿಡುವಷ್ಟು ಶಕ್ತವಾಗಿದೆ. ಮೌನದ ಹಿಂದೆ ಶೂನ್ಯತ್ವದ ಅರಿವಿದೆಯೇ ಎಂಬ ಪ್ರಶ್ನೆ ಕಾಡುತ್ತದೆ. ಬಿಕ್ಕುಗಳು ಕೇಳಿದ ಪ್ರಶ್ನೆಗಳಿಗೆ ಬುದ್ಧನ ಮೌನವೇ ಉತ್ತರ. ಹಾಗಾಗಿ ಬುದ್ಧನನ್ನು ಕುರಿತಂತೆ ಬಿಕ್ಕುಗಳು ಕೇಳಿದ ಪ್ರಶ್ನೆಗಳು ಜಗದ, ಕಾಲದ, ಪ್ರತಿ ಮನುಷ್ಯರ ಪ್ರಶ್ನೆಗಳೂ ಕೂಡ ಹೌದು. ಇವೆಲ್ಲವನ್ನೂ ಜಿ. ಕೆ. ರವೀಂದ್ರ ಕುಮಾರ್ ಅವರ 'ಮಹಾಮೌನ' ಕವನ ಹಿಡಿದಿಡಲು ಪ್ರಯತ್ನಿಸುತ್ತದೆ.

ನನ್ನ ಮೌನದ ಕುರಿತು ಜಗವು
ಮಾತಾಡಲಿ ಎಂದಾದಲ್ಲಿ
ನನ್ನ ಮೌನದಲ್ಲೂ ಮಾತಿನ ಚಿಗುರು

ನಾನು ಮಾತನಾಡಿದರೆ ಜಗವು
ಸುಮ್ಮನಿರಲಿ ಎಂದಾದಲ್ಲಿ
ನನ್ನ ಮಾತಿನಲ್ಲೂ ಮೌನದ ಬೇರು [೨೯]

ಎನ್ನುವ ಕವಿಯ ಮಾತು ಬುದ್ಧನ ಮಾತು ಮತ್ತು ಮೌನ ಎರಡರ ಪ್ರಾಮುಖ್ಯತೆಯನ್ನು ಹಿಡಿದಿಡಲು ಪ್ರಯತ್ನಿಸುತ್ತದೆ. ಬುದ್ಧ ಮೌನದಂತೆ ಮಾತಿನ ಮಹತ್ವವನ್ನೂ ಕೂಡ ಅರಿತವನಾಗಿದ್ದ. ಹಾಗಾಗಿ ಬುದ್ಧನ ಶಿಷ್ಯರು ಆತ್ಮ, ಪರಲೋಕ, ದೇವರ ಅಸ್ತಿತ್ವದ ಬಗೆಗೆ ಕೇಳಿದ ಪ್ರಶ್ನೆಗಳಿಗೆ ಅವನು ಕೊಡುತ್ತಿದ್ದ ಉತ್ತರ "ಅವು ಇಲ್ಲ ಅಥವಾ ನನಗೆ ಗೊತ್ತಿಲ್ಲ" ಎಂಬುದಾಗಿತ್ತು. ಇದನ್ನು ಬಂಜಗೆರೆ ಜಯಪ್ರಕಾಶ್ ಹೀಗೆ ಗುರುತಿಸುತ್ತಾರೆ "ಜ್ಞಾನವನ್ನು ಸಂಪೂರ್ಣವಾಗಿ ತನಗೆ ದಕ್ಕಿರುವ ವಸ್ತು ಎಂದು ನಂಬದ ಗೌತಮ ಬುದ್ಧ ಆತ್ಮ ಪರಮಾತ್ಮಗಳ ಬಗ್ಗೆ ಅದೇ ನಿಲುವಿನಿಂದ ಉತ್ತರಿಸಿರುವ ರೀತಿ ಅತ್ಯಂತ ಆಲೋಚನಾ ಯೋಗ್ಯವಾದುದು. 'ಅವು ಇಲ್ಲ' ಎಂದಾಗ ಆ ವರೆಗೆ ತನಗೆ ತಿಳಿದಿರುವ ಸತ್ಯವನ್ನು ಮಂಡಿಸುತ್ತಿರುವ ಧೀಮಂತಿಕೆ ಇದೆ. ಅಥವಾ 'ನನಗೆ ಗೊತ್ತಿಲ್ಲ' ಎಂಬುದರಲ್ಲಿ ತನ್ನ ಅರಿವಿಗೆ ಬರದ ಮತ್ತೇನೋ ಇರಬಹುದಾದ ಸಾಧ್ಯತೆ ಇದ್ದರೆ, ಅವುಗಳನ್ನು ಹುಡುಕುವುದಕ್ಕೆ ಬೇಕಾದ ಜಿಜ್ಞಾಸೆಯನ್ನು ಮುಕ್ತವಾಗಿಡುವಂತಹ ವಿನಯವಂತಿಕೆ ತುಂಬಿಕೊಂಡಿದೆ. ಸತ್ಯದ ಹುಡುಕಾಟವೆಂಬುದು ಒಂದು ಸಲಕ್ಕೆ ಮುಗಿದುಬಿಡುವ ಪ್ರಯಾಣವಲ್ಲ. ಅಥವಾ ಸತ್ಯವೆಂಬುದು ತಾನು ನಂಬಿಕೊಂಡಿರುವ ಕೆಲವು ಕಲ್ಪನೆಗಳ ಕಂತೆಯೂ ಅಲ್ಲ. ಯಾರೋ ಕಂಡುಕೊಂಡಿದ್ದನ್ನು ಕುರುಡಾಗಿ ಅನುಸರಿಸುವ ಅನುಯಾಯಿತ್ವವೂ ಅಲ್ಲ. ಸತ್ಯದ ಶೋಧನೆಯನ್ನು ತನ್ನ ಆಲೋಚನೆ ಹಾಗೂ ಅನುಭವಗಳ ಆಧಾರದಲ್ಲಿ ಪ್ರತಿ ವ್ಯಕ್ತಿಯೂ ಕೈಗೊಳ್ಳಬೇಕು. ಅದು ಬುದ್ಧನ ಮಾರ್ಗ"[೩೦] ಹಾಗಾಗಿ ಬುದ್ಧನ ಮಾತು ಮತ್ತು ಮೌನ ಎರಡಕ್ಕೂ ಕೂಡ ಪರಸ್ಪರ ಅಂತರ್ ಸಂಬಂಧವೂ ಇದೆ ಮತ್ತು ಅವೆರಡಕ್ಕೂ ಸಮಾನವಾದ ಘನತೆ ಮತ್ತು ಪ್ರಾಮುಖ್ಯತೆಗಳಿವೆ. ಬುದ್ಧ ಕೇವಲ ಪ್ರಾಪಂಚಿಕ ಜಂಜಡಗಳನ್ನು ಕುರಿತು ಮಾತ್ರ ಮೌನ ತಾಳುವುದಿಲ್ಲ. ಅವನು ತನ್ನ ಅಸ್ತಿತ್ವವನ್ನು ಕುರಿತು ಕೇಳಿದ ಪ್ರಶ್ನೆಗಳಿಗೂ ಕೂಡ ಉತ್ತರಿಸದೆ ಮೌನವಹಿಸುತ್ತಾನೆ. 'ಹೇಳು ತಥಾಗತ ಮೌನ ಕಳಚಿ ನಿನ್ನ ಬಳಿಕ ನೀನು ಏನಾಗುವೆ' ಬಿಕ್ಕುಗಳು ಬುದ್ಧನನ್ನು ಕುರಿತಂತೆ ಕೇಳುವ ಈ ಪ್ರಶ್ನೆ ದೇವರನ್ನು ಕುರಿತದ್ದೂ ಹೌದು. ಸೃಷ್ಟಿಯನ್ನು ಕುರಿತ ಪ್ರಶ್ನೆಯೂ ಹೌದು. ಆದರೆ ಈ ಪ್ರಶ್ನೆಗೆ ಬುದ್ಧನ ಉತ್ತರ 'ಮೌನ' ಮಾತ್ರ. ಈ ಪ್ರಶ್ನೆಗೆ ಹೌದು, ಇಲ್ಲಗಳ ಉತ್ತರ ಉಂಟು ಮಾಡಬಹುದಾದ ಅತಿರೇಕಗಳ ಅಪಾಯವನ್ನು ಬುದ್ಧ ಬಲ್ಲವನಾಗಿದ್ದ ಹಾಗಾಗಿಯೇ ಮೌನವಹಿಸಿದ ಎನ್ನುವ ಬಂಜೆಗೆರೆ ಜಯಪ್ರಕಾಶ್ ಅವರ ಮಾತುಗಳು ಬುದ್ಧನ ಮೌನದ ಹಿಂದಿನ ಕಾರಣಗಳನ್ನು ಗುರುತಿಸುತ್ತವೆ.

ಬುದ್ಧನ ಮೌನ ಸಾಮಾನ್ಯ ಜನರಿಗೆ ವಿಚಿತ್ರವಾಗಿ ಕಂಡಿದೆ. ಹಾಗಾಗಿ ಅವರಲ್ಲಿ ಬುದ್ಧನನ್ನು ಕುರಿತಂತೆ ಹಲವು ಗೊಂದಲಗಳು ಏರ್ಪಡಲು ಕಾರಣವಾಗಿದೆ. ತಮ್ಮ ಬದುಕಿಗೆ ಒಂದು ಆಸರೆ, ನೆಲೆ ಇರಲೇಬೇಕು ಎಂದು ನಂಬಿದ ಜನರಿಗೆ ಬುದ್ಧನ ಮೌನ ವಿಚಿತ್ರವಾಗಿ, ಆತಂಕವಾಗಿ ಕಾಣುತ್ತಿದೆ. ದೇವರಿಲ್ಲ, ಕಾಪಾಡುವವನಿಲ್ಲ ಎನ್ನುವುದಾದರೆ ಅದನ್ನು ನಂಬುವುದಾದರೂ ಹೇಗೆ? ಎಂಬುದು ಜನರ ಆತಂಕಕ್ಕೆ ಕಾರಣ. ಆದರೆ ಬುದ್ಧನಿಗೆ ಸಾಮಾನ್ಯ ಜನರ ನಂಬಿಕೆ ನಿರೀಕ್ಷೆಗಳನ್ನು ಒಡೆಯುವುದು ದೊಡ್ಡ ಸವಾಲಾಗಿ ಕಂಡಿದೆ. ಅದಕ್ಕಾಗಿಯೇ ಆತ ಮೌನವಹಿಸಿದ ಎಂದೆನಿಸುತ್ತದೆ. ಬುದ್ಧ ತಾನು ಕಂಡ ಸತ್ಯವನ್ನು ಹೇಳಿದರೆ ಜನ ಅದನ್ನೇ ಅಂತಿಮವೆಂದು ನಂಬಿಬಿಡುವ, ಬೇರೆ ಮಾರ್ಗಗಳನ್ನು ಕಂಡುಕೊಳ್ಳದ ಜಡತ್ವದ ಸ್ಥಿತಿಯನ್ನು ತಲುಪಿಬಿಡಬಹುದು. ಹೇಳದೇ

ಹೋದರೆ ತನ್ನ ಮುಂದಿನ ಪೀಳಿಗೆ ಅತಂತ್ರ ಸ್ಥಿತಿಯಲ್ಲಿರಬೇಕಾಗುತ್ತದೆ. ಆಗ ಮತ್ತದೇ ಅಜ್ಞಾನದ ಹಾದಿಯಲ್ಲಿ ನಾಗರೀಕತೆ ಸಾಗಬೇಕಾದೀತು ಎಂಬ ದ್ವಂದ್ವಗಳು ಬುದ್ಧನನ್ನು ಕಾಡಿವೆ. ಹಾಗಾಗಿ ಜನಸಾಮಾನ್ಯರ ಆತಂಕ, ನಿರೀಕ್ಷೆಗಳನ್ನು ತಣಿಸಲೇಬೇಕಾದ ಅನಿವಾರ್ಯತೆ ಬುದ್ಧನಿಗಿದೆ.

ಇನ್ನು ಬುದ್ಧನ ನಗುವನ್ನು ಕುರಿತಂತೆ ಕನ್ನಡ ಕಾವ್ಯ ವ್ಯಾಪಕ ಅರ್ಥಸಾಧ್ಯತೆಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದೆ. ಬುದ್ಧ ಬದುಕಿದ್ದ ಕಾಲದಿಂದ ಹಿಡಿದು ಪ್ರಸ್ತುತ ಸಾಮಾಜಿಕ ಬಿಕ್ಕಟ್ಟುಗಳೊಂದಿಗೆ ಬುದ್ಧನ ನಗುವನ್ನು ಮುಖಾಮುಖಿಯಾಗಿಸಲು ಆಧುನಿಕ ಕನ್ನಡ ಕವಿಗಳು ಪ್ರಯತ್ನಿಸಿದ್ದಾರೆ. ಹಾಗಾಗಿ ಬುದ್ಧನ ನಗು ಎನ್ನುವುದು ಕೇವಲ ಬುದ್ಧ ಮೂರ್ತಿಯ ನಗುವಷ್ಟೇ ಆಗದೆ; ನಮ್ಮ ಸಮಕಾಲೀನ ಸಾಮಾಜಿಕ, ಸಾಂಸ್ಕೃತಿಕ ಘಟನೆಗಳ ವಿಡಂಬನೆಗಾಗಿ ಮತ್ತೆ ಮತ್ತೆ ಚರ್ಚೆಗೊಳಗಾಗುವ ಜಿಜ್ಞಾಸೆಯಾಗಿ ಕಂಡಿದೆ. ಕನ್ನಡ ಕಾವ್ಯ ಬುದ್ಧನ ನಗುವನ್ನು ಮೂರು ಅಂಶಗಳ ಹಿನ್ನೆಲೆಯಲ್ಲಿ ಹಿಡಿದಿಡಲು ಪ್ರಯತ್ನಿಸಿದೆ. ಮೊದಲನೆಯದು ಬುದ್ಧ ತನ್ನನ್ನು ಆವರಿಸಿದ್ದ ಎಲ್ಲಾ ವ್ಯಾಮೋಹಗಳನ್ನು ಗೆದ್ದದ್ದರಿಂದ ನಕ್ಕ ಜ್ಞಾನೋದಯದ ನಗು. ಎರಡನೆಯದು ಮನುಷ್ಯ ತನ್ನನ್ನು ಆವರಿಸಿಕೊಂಡಿರುವ ಅಜ್ಞಾನ–ಅಂಧಕಾರಗಳಿಂದ ಹೊರಬರಲಾರದೆ ತೊಳಲಾಡುತ್ತಿರುವುದನ್ನು ಕಂಡು ನಕ್ಕ ವ್ಯಂಗ್ಯದ ನಗು. ಮೂರನೆಯದು ಜಗತ್ತಿನಲ್ಲಿ ನಡೆಯುತ್ತಿರುವ ಹಿಂಸೆಯನ್ನು ಕಂಡು ಹಾಗೂ ಆ ಹಿಂಸೆ–ಕ್ರೌರ್ಯಗಳಿಗೆ ತನ್ನ ನಗುವನ್ನು ಸಂಕೇತವಾಗಿ ಬಳಸುತ್ತಿರುವುದನ್ನು ಕಂಡ ವಿಷಾಧದ ನಗು. ಒಟ್ಟಾರೆ ಮನುಷ್ಯನ ಎಲ್ಲ ನೋವು, ಸಂಕಟಗಳಿಂದಾಗಿ ಮಿಡಿದ ಹೃದಯ ಬುದ್ಧನದು. ಮನುಷ್ಯರ ಮೇಲಿನ ಅಪಾರವಾದ ಪ್ರೀತಿ, ಕರುಣೆಯಿಂದ ಜಗತ್ತನ್ನೇ ಅಪ್ಪಿಕೊಂಡ ಮಾತೃಹೃದಯಿ ಭಾವವನ್ನು ಬುದ್ಧನ ನಗುವಿನಲ್ಲಿ ಕಾಣಲಾಗಿದೆ.

ಕೆ.ಎಸ್.ನರಸಿಂಹಸ್ವಾಮಿಯವರ 'ಬುದ್ಧಸ್ಮಿತ' ಕವಿತೆ ವಿನಾಶಕಾರಿಯಾದ ಹೈಡ್ರೋಜನ್ ಬಾಂಬ್ ಪರೀಕ್ಷಿಸಿ ಅದಕ್ಕೆ 'ಬುದ್ಧ ನಕ್ಕ' ಎಂದು ಹೆಸರಿಟ್ಟ ಆಧುನಿಕ ಮನುಷ್ಯನ ಯುದ್ಧದಾಹವನ್ನು ವಿಡಂಬಿಸುವುದಾಗಿದೆ. ಯುದ್ಧ ಮತ್ತು ಅದರ ಭೀಕರ ಪರಿಣಾಮಗಳನ್ನು ತಪ್ಪಿಸಲು ಸ್ವತಹ ರಾಜ್ಯ ತೊರೆದು ಹೋದ ಬುದ್ಧ ಆಧುನಿಕ ರಾಷ್ಟ್ರಗಳ ವಿಧ್ವಂಸಕಾರೀ ಕೃತ್ಯಗಳಿಗೆ 'ಹೆಸರಾ'ಗಬೇಕಾಗಿ ಬಂದುದರ ವ್ಯಂಗ್ಯ ಈ ಕವಿತೆಯಲ್ಲಿದೆ. ಹೀಗೆ ವಿಡಂಬಿಸುತ್ತಲೇ ಕವಿತೆ ಬುದ್ಧ ನಕ್ಕ ಎರಡು ಸಾವಿರದ ಐದನೂರು ವರ್ಷಗಳ ಗತಕಾಲಕ್ಕೆ ಜಾರಿ ಆ ನಗುವಿನ ಹಿಂದಿನ ಕಾರಣಗಳನ್ನು ಹೆಕ್ಕಿತೆಗೆಯುವ ಪ್ರಯತ್ನ ಮಾಡುತ್ತದೆ. ಬುದ್ಧ ಮೊದಲಿಗೆ ನಕ್ಕಿದ್ದು ಕಲ್ಲಿನಲ್ಲಿ. ಇದು ಬುದ್ಧ ವಿಗ್ರಹಗಳನ್ನು ಕುರಿತು ಮಾತನಾಡುತ್ತಿದೆಯಾದರೂ ಮುಂದುವರಿದು ಬುದ್ಧನ ಈ ನಗುವಿನ ಹಿಂದಿನ ಮರ್ಮಗಳನ್ನು ಹಿಡಿದಿಡಲು ಪ್ರಯತ್ನಿಸುತ್ತದೆ. ಬುದ್ಧನ ನಗುವನ್ನು ಕಾಣಲು ಆಂತರ್ಯದ ಶುದ್ಧಿ ಅವಶ್ಯಕ ಎಂಬುದನ್ನು ತಿಳಿಸುವುದರಲ್ಲಿ ಈ ಕವಿತೆಯ ವಿಶೇಷತೆ ಇದೆ. ಈ ಕವನ ಬುದ್ಧನ ನಗುವನ್ನು ಅರಿಯುವುದು ಎಲ್ಲರಿಂದಲೂ ಸಾಧ್ಯವಿಲ್ಲ ಎನ್ನುತ್ತಲೇ, ತನ್ನೆಲ್ಲಾ ದುರ್ಗುಣಗಳನ್ನು ಮೀರಿ ಸದ್ಗುಣದ ಕಡೆ ತಿರುಗಿದಾಗ ಬುದ್ಧನ ನಗುವನ್ನು ಅರಿಯಲು, ಮುಂದಿನ ದಾರಿಯನ್ನು ತಿಳಿಯಲು ಸಾಧ್ಯ ಎನ್ನುತ್ತದೆ. ಕೆ.ಎಸ್.ನ. 'ನನ್ನೆಲ್ಲ ಸಣ್ಣತನ ಸೋತು ಕಣ್ಣು ತಣ್ಣೀರಾದ ಮೇಲೆ ಕಲ್ಲು ನಕ್ಕಿತು, ದಾರಿ ಸಿಕ್ಕಿತು' ಎನ್ನುವ ಸಾಲುಗಳಲ್ಲಿ ಮನುಷ್ಯನ ಸಣ್ಣತನ ಹಾಗೂ ಅದು ಅಳಿಯುವಿಕೆಯ ಅಗತ್ಯ ಎರಡನ್ನೂ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಕಣ್ಣು ತೆರೆದ ಮೇಲೆ ಅಜ್ಞಾನ, ಅಂಧಕಾರಗಳೆಲ್ಲವೂ ತಣ್ಣೀರಾಗಿ ಹರಿಯುವುದು ವ್ಯಕ್ತಿಯ ಆಂತರಿಕ ಗುಣಗಳಲ್ಲಾದ ಬದಲಾವಣೆಯನ್ನು ಸಂಕೇತಿಸುತ್ತದೆ. ಇಲ್ಲಿ ಆಂತರಿಕ ಬದಲಾವಣೆಯ ಮೂಲಕ ಬುದ್ಧನ ನಗುವನ್ನು ಕಾಣಲು

ಸಾಧ್ಯ ಎಂಬುದು ನಮ್ಮೊಳಗೆ ಅಡಕವಾಗಿರುವ ಸ್ವಪ್ರಜ್ಞೆಯನ್ನು ಜಾಗೃತಗೊಳಿಸಬೇಕಾದ ಅಗತ್ಯವನ್ನು ಧ್ವನಿಸುತ್ತದೆ. ಒಟ್ಟಾರೆ 'ಬುದ್ಧನ ನಗು' ಸ್ವಪ್ರಜ್ಞೆಯ ಅರಿವಾಗಿ, ಅರಿವಿನ ವಿಸ್ತರಣೆಯಾಗಿ, ವಿವೇಕದ ಬೆಳಕಾಗಿ 'ಬುದ್ಧ ಸ್ಮಿತ' ಕವನದಲ್ಲಿ ಚಿತ್ರಿತಗೊಂಡಿದೆ. ಬುದ್ಧ ನಕ್ಕಂಥ ಸಂದರ್ಭ, ಸನ್ನಿವೇಶಗಳನ್ನು ಈ ಕವಿತೆ ಊಹಾತ್ಮಕವಾಗಿ ಕಟ್ಟಿಕೊಡಲು ಪ್ರಯತ್ನಿಸಿದೆ. ಅಂದು ಬುದ್ಧ ನಕ್ಕಂತ ನಗೆಗೂ .ಇಂದು ನಾವು ನಮ್ಮ ನಮ್ಮ ವಿಕಾರಗಳಿಗೆ ಬುದ್ಧನನ್ನು ನಗಿಸುತ್ತಿರುವ ರೀತಿಗೂ ಹೋಲಿಸಿ ವಿಡಂಬಿಸುವ ರೀತಿ ವಿಶಿಷ್ಟವಾಗಿದೆ.

ಮಾರ ಬಂದಿವನ ತಡೆದ, ತಂತ್ರ ಹೂಡಿದ,
ತನ್ನ ಚಲುವೆಯರ ಮೈ ಕುಣಿಸಿದ,
ಸಕಲ ಭೋಗ ಸಾಮ್ರಾಜ್ಯವನ್ನೇ ಧಾರೆಯೆರೆದ,
ಇವನು ದಕ್ಕಲಿಲ್ಲ;
ಅತಿ ಸುಲಭ ಸ್ವರ್ಗ ದೊರೆಮಗನ ಮೇಲೆ ಹೂಡಿತ್ತು ಘೋರ ಯುದ್ಧ,
ಗೆದ್ದು ನಕ್ಕ ಬುದ್ಧ.[೩೧]

ಇಲ್ಲಿರುವ ಬುದ್ಧನ ನಗು ತನ್ನನ್ನು ಆವರಿಸಿರುವ ಆಸೆ, ವ್ಯಾಮೋಹಗಳನ್ನು ತೊಡೆದುಕೊಂಡು ಜ್ಞಾನವನ್ನು ಪಡೆದ ಹೆಮ್ಮೆಯಿಂದ ನಕ್ಕಿದ್ದು. ಈ ಮೂಲಕ ಬುದ್ಧನ ನಗುವನ್ನು ಗೆಲುವಿನ ಸಂಕೇತವಾಗಿ ಕೆ.ಎಸ್.ನ ಗುರುತಿಸುತ್ತಾರೆ. ಬುದ್ಧ ನಕ್ಕಿದ್ದು ಅಂತರ್ಯುದ್ಧದ ಗೆಲುವಿನ ನಗೆ. ಅದು ಎಲ್ಲಾ ವ್ಯಾಮೋಹಗಳ ವಿರುದ್ಧ ನಡೆದ ಯುದ್ಧ. ಆ ಯುದ್ಧದಲ್ಲಿ ಗೆದ್ದ ಹರ್ಷದಿಂದ ಬುದ್ಧ ನಕ್ಕ. ಈ ನಗುವಿನಲ್ಲಿ ಮನುಷ್ಯರ ಮೇಲೆ ಅಪಾರವಾದ ಪ್ರೀತಿ, ಕರುಣೆಯಿದೆ. ಇಳೆಯ ಎಲ್ಲಾ ನೋವುಗಳನ್ನು ಹೊರುವ, ನಿವಾರಿಸುವ, ಅಪಾರವಾದ ಪ್ರೀತಿಯಿದೆ. ಹಾಗಾಗಿಯೇ ಬುದ್ಧ 'ಯಾರಿಗೆ ರಕ್ಷಣೆ, ಮಾರ್ಗದರ್ಶನದ ಅವಶ್ಯಕತೆಯಿದೆಯೋ ನಾನದನ್ನು ನೀಡುತ್ತೇನೆ. ನಿಮ್ಮೆಲ್ಲಾ ನೋವು, ನಲಿವುಗಳಿಗೆ ಧ್ವನಿಯಾಗುತ್ತೇನೆ' ಎಂಬ ಆತ್ಮವಿಶ್ವಾಸದಿಂದ ನಕ್ಕಿದ್ದು ಎನ್ನುತ್ತಾರೆ ಕೆ.ಎಸ್.ನ. ಇಲ್ಲಿ ಮನುಷ್ಯ ಲೋಕದ ಜಂಜಡಗಳಗೆ ಸಿಲುಕಿ ತೊಳಲಾಡುತ್ತಿರುವುದರ ಬಗೆಗೆ ನೋವು, ಸಂಕಟ ಇದೆಯಾದರೂ ಅದರಿಂದ ಹೊರಬರಲಾರದ ಸ್ಥಿತಿಯನ್ನು ಕುರಿತಂತೆ ವಿಷಾದ, ವ್ಯಂಗ್ಯ ಈ ಕವಿತೆಯಲ್ಲಿ ಅಡಕವಾಗಿದೆ. ಅದರ ನಡುವೆಯೂ ತನ್ನನ್ನು ನಂಬಿದವರನ್ನು ಕಾಯುವ, ಕಾಪಾಡುವ ತಾಯ್ತನದ ಪ್ರೀತಿ ಬುದ್ಧನದು ಆ ಪ್ರೀತಿಯಿಂದಲೇ ಅವನು ನಕ್ಕಿದ್ದು ಎನ್ನುತ್ತಾರೆ.

ಇಳೆಯೆಲ್ಲ ನೋವು ನನಗಿರಲಿ, ನಿಮ್ಮ ಚಿಂತೆಗಳ ಹೊರಿಸಿ ನನಗೆ
ಎಂದೊಂದು ಜೀವ ತಾಯಾಗಿ ಬಂದು ಭೂಮಿಯನೆ ಅಪ್ಪಿದಂತೆ ಬುದ್ಧ ನಕ್ಕನಂತೆ [೩೨]

ಬುದ್ಧ ನಕ್ಕು ಲೋಕವನ್ನು ತಾಯ್ತನದ ಪ್ರೀತಿಯಿಂದ ಅಪ್ಪಿ ನಿಮ್ಮೆಲ್ಲ ನೋವನ್ನು ನನಗೆ ನೀಡಿ ಎಂದು ಸ್ವೀಕರಿಸಿದ. ಆದರೆ ಇಂದು ಆ ಮಾನವೀಯ ಅಂತಃಕರಣದ ಪ್ರೇಮದ ನಗು ಎಲ್ಲೆಲ್ಲೂ ಕಾಣೆಯಾಗಿದೆ. ಕಾಲಾತೀತವಾಗಿ ಎಲ್ಲ ಜನರ ಮುಖಗಳಲ್ಲಿ ನೆಲೆಸಬೇಕಾಗಿದ್ದ ನಗು ಇಂದು ಕೇವಲ ಕಲ್ಲಿನಲ್ಲಿ, ಎರಡು ಸಾವಿರದ ಐದು ನೂರು ವರ್ಷಗಳ ಹಿಂದಿನ ಕಾಲಕ್ಕೇ ಸೀಮಿತಗೊಂಡು ಸೆರೆಯಾಗಿರುವುದಕ್ಕೆ ಕವಿ ವಿಷಾದ ವ್ಯಕ್ತಪಡಿಸುತ್ತಾರೆ. ಬುದ್ಧ ಎಂದೋ ನಕ್ಕಿದ್ದಲ್ಲ. ಇಂದಿಗೂ ಆತ ಎಲ್ಲ ಮನುಷ್ಯರ ಮುಖಗಳಲ್ಲಿ ಕಿರುನಗೆಯಾಗಿ ಜೀವಂತವಾಗಿ ಉಳಿಯಬೇಕು ಎಂಬ ಹಂಬಲವನ್ನು ವ್ಯಕ್ತಪಡಿಸುತ್ತಾರೆ. ಬುದ್ಧನ ನಗೆಯ ಸ್ಥಿತಿಯನ್ನು, ಅದರ ಕಾರಣವನ್ನು, ಆ ಕಾಲವನ್ನು ಬಿಟ್ಟು ಮನುಷ್ಯ ಬಹುದೂರ ಸಾಗಿಬಂದಿದ್ದಾನೆ. ಈಗ ಆತನಿಗೆ ಹಿಂಸೆ ಅಭ್ಯಾಸವಾಗಿಹೋಗಿದೆ.

ಶಾಂತಿ ಸಾಗರದಲ್ಲಿ ಮತ್ತೆ ಸಿಡಿಯಿತು ಹೈಡ್ರೋಜನ್ ಬಾಂಬ್;
ಪಿಂಕ್ ಬಣ್ಣದಂಚಂತೆ ಸರ್ವನಾಶದ ಬೆಳ್ನಗೆಗೆ,

ಪ್ರೇತ ಕವಿತೆಗೆ ಅಟಾಮಿಕ್ ಲೇಖನಿಯ ಹುಡುಕುತಿದೆ ಬೆರಳಿಲ್ಲದ ಕೈ;
ನೋಡುತ್ತಿದೆ ಮೂತಿಯಿಲ್ಲದ ತಲೆ; ತಲೆಯಿಲ್ಲದ ಹೆಣ
ಲೋಕದ ಕಿವಿಯಲುಸುರುತ್ತಿದೆ: ಮುಗಿಯಿತು ನಿನ್ನ ಋಣ
ಮತ್ತೆ ಕತ್ತಲೆ;. . . . . . .
ಲೋಕ ನೋಡುತ್ತಿದೆ ನಿನ್ನನೇ. [೩೩]

ಆತ ನಕ್ಕ ಈ ನೆಲದಲ್ಲೇ, ಬಿತ್ತಿದ ಶಾಂತಿ ಸಾಗರದಲ್ಲೇ ಹೈಡ್ರೋಜನ್ ಬಾಂಬ್ ಸಿಡಿದಿದೆ. ಮನುಕುಲದ ಸರ್ವನಾಶದ 'ಪ್ರೇತ ಕವಿತೆ' ಬರೆಯಲು ಅಟಾಮಿಕ್ ಲೇಖನಿಯ ಹುಡುಕಿ ಕೂತಿದೆ ಬೆರಳಿಲ್ಲದ ಕೈ'. ಬುದ್ಧ ಕಂಡುಕೊಂಡ, ತೋರಿದ ಬೆಳಕಿನ ಹಾದಿಯಲ್ಲಿ ಸಾಗದೆ ಮತ್ತೆ ಕತ್ತಲೆಗೇ ಜಗತ್ತು ಸಾಗುತ್ತಿದೆ. ಒಳಗೆಲ್ಲೋ ಆಳದಲ್ಲಿ ಲೋಕ ಆತನನ್ನೇ ಎದುರು ನೋಡುತ್ತಿದೆ. ತನ್ನ ಉದ್ದಾರಕ್ಕಾಗಿ, ಸರ್ವನಾಶದ ಸ್ಥಿತಿಯಲ್ಲಿರುವ ಜಗತ್ತಿಗೆ ಬುದ್ಧ ಆಶಾಕಿರಣವಾಗಿ ಕಾಣುತ್ತಿದ್ದಾನೆ. ಹೀಗೆ ಕಲ್ಲಿನಲ್ಲಿ ಸೆರೆಯಾದ ಬುದ್ಧಸ್ಮಿತವನ್ನು ಮತ್ತೆ ಲೋಕದುದ್ದಾರಕ್ಕೆ ಆಹ್ವಾನಿಸುವ, ಮಾನವ ಹೃದಯದ ಒಳಧ್ವನಿಯನ್ನು ಮತ್ತೆ ಮೊಳಗಿಸುವ ಹಂಬಲ ಈ ಕವಿತೆಗಿದೆ. ಜಗತ್ತನ್ನು ಆವರಿಸಿಕೊಂಡಿರುವ ಹಿಂಸೆಯಿಂದ ಹೊರಬರುವ ಏಕೈಕ ದಾರಿಯಾಗಿ ಬುದ್ಧ ಕಂಡುಬಂದಿದ್ದಾನೆ. ಬುದ್ಧನ ನಂತರ ಆ ನಗು ಬೇರೆ ಬೇರೆ ರೂಪಗಳಲ್ಲಿ, ವ್ಯಕ್ತಿಗಳಲ್ಲಿ ಇಡೀ ಲೋಕವನ್ನೇ ಆವರಿಸಿ ಪ್ರೀತಿಯಿಂದ ಎತ್ತಿಕೊಳ್ಳಲು ಪ್ರಯತ್ನಿಸುತ್ತಿದೆ ಎಂಬ ಆಶಾಭಾವ ವ್ಯಕ್ತವಾಗುತ್ತದೆ.

ಭೂವ್ಯೋಮಗಳ ತುಂಬುತಿದೆ ಬೆಳದಿಂಗಳ ಮೈ; ಅಭಯದ ಕೈ
ನೊಂದ ಕುರಿಮರಿಯ ನೇವರಿಸುತಿದೆ ; ಬಿದ್ದ ಹಕ್ಕಿಗೆ ಮುತ್ತು ಕೊಡುತಿದೆ
ಬುದ್ಧ ಕರುಣೆ, ಬುದ್ಧ ಶಾಂತಿ, ಬುದ್ಧ ಜೀವನ ಕಾಂತಿ
ಕಲ್ಲೆದೆಯ ಕರಗಿಸಿದೆ, ಕಲ್ಲು ನಗುತಿದೆ, ಕಲ್ಲು ನಗುತಿದೆ
ಕೋಟಿ ವಿಗ್ರಹಗಳಲಿ ಕುಸುಮಿತವಾಗುತಿದೆ ಬುದ್ಧಸ್ಮಿತ. [೩೪]

ಈ ಎರಡು ಕಾರಣಗಳನ್ನು ಮೀರಿ ಬುದ್ಧ ನಗಲು ಮತ್ತೊಂದು ಕಾರಣವಿದೆ. ಅದು ಬುದ್ಧನನ್ನು ಕ್ರೌರ್ಯದ, ಹಿಂಸೆಯ ಸಾಧನವಾಗಿ ಬಳಸುತ್ತಿರುವ ಆಧುನಿಕ ಮನುಷ್ಯನ ವಿಕಾರ ಮನಸ್ಥಿತಿಯನ್ನು ಕಂಡ ವಿಷಾಧದ ನಗು. ಕನ್ನಡದ ಬಹುತೇಕ ಕವಿಗಳು ಈ ಅಂಶವನ್ನು ಮತ್ತೆ ಮತ್ತೆ ಚರ್ಚೆಗೆ ಒಳಪಡಿಸಿದ್ದಾರೆ. ಆಧುನಿಕ ರಾಷ್ಟ್ರಗಳ ಶಕ್ತಿ ಪ್ರದರ್ಶನದ ಭಾಗವಾಗಿ ನಡೆಸಲಾದ ಅಣುಬಾಂಬ್ ಪರೀಕ್ಷೆಗೆ ಇಟ್ಟ ಹೆಸರು 'ಸ್ಮೈಲಿಂಗ್ ಬುದ್ಧ'!. ಯಾರು ವಿಶ್ವಶಾಂತಿಗೆ, ಮನುಕುಲದ ಉದ್ಧಾರಕ್ಕೆ, ತಮ್ಮೊಳಗಿನ ಅಂಧಕಾರದ ನಿವಾರಣೆಗಾಗಿ ಪ್ರಯತ್ನಿಸಿದನೋ ಅವನ ಹೆಸರನ್ನೇ ತದ್ವಿರುದ್ಧದ ಕಾರ್ಯಚಟುವಟಿಕೆಗಳ ಸಂಕೇತವಾಗಿ ಬಳಸಿರುವುದು ಮಾನವ ನಾಗರೀಕತೆಯ ಬಹುದೊಡ್ಡ ವ್ಯಂಗ್ಯವಾಗಿದೆ. ಇದು ಕೇವಲ ಮಾನವರನ್ನು ಮಾತ್ರ ಬೆಚ್ಚಿಬೀಳಿಸಿಲ್ಲ. ಸ್ವತಃ ಬುದ್ಧನನ್ನೇ ಆತಂಕಕ್ಕೀಡುಮಾಡಿದೆ. ಈ ರೀತಿ ಆತಂಕಕ್ಕೊಳಗಾಗಿರುವ ಬುದ್ಧನ ಸ್ಥಿತಿಯನ್ನು ಕವಿಗಳು ಭಿನ್ನ ಭಿನ್ನ ರೀತಿಯಲ್ಲಿ ತಮ್ಮ ಕವಿತೆಗಳ ಮೂಲಕ ಹಿಡಿದಿಟ್ಟಿದ್ದಾರೆ.

ಬುದ್ಧ ಅಳುತ್ತಾನೆ.
ಬುದ್ಧ ಸಿಟ್ಟಿಗೇಳುತ್ತಾನೆ
ಯುದ್ಧ ಬೇಡವೆಂದ ಬುದ್ಧ
ಬಾಂಬ್ ನೋಡಿ ಕಂಗಾಲಾಗುತ್ತಾನೆ.
, . . . . . .
ಡಿಸೆಂಬರ್ ಆರರ ಗ್ಯಾಂಗ್ ಮಸೀದಿ
ಬೀಳಿಸುವುದು ನೋಡಿ ಬುದ್ಧ ಖಿನ್ನನಾಗುತ್ತಾನೆ

ಆಸೆಯೇ ದುಃಖಕ್ಕೆ ಮೂಲವೆಂದ
ಬುದ್ಧ ಜನರ ದುರಾಸೆ ಕಂಡು ನೊಂದುಕೊಳ್ಳುತ್ತಾನೆ
ತಮ್ಮ ಕುರ್ಚಿ ಅಲುಗಾಡುತ್ತಿರುವಾಗ
ಬಾಂಬ್ ಹಾರಿಸುವ ರಾಜಕಾರಣಿಗಳ
ಪರಿ ಕಂಡು ಮೋಕ್ಷಾನಿನ ಮರಳುಗಾಡಿನಲ್ಲೂ
ಖೋ ಖೋ ಎಂದು ಬುದ್ಧ ನಗುತ್ತಾನೆ.[೩೩]

ಬುದ್ಧನ ನಗುವಿನ ಹಿಂದೆ ಮನುಷ್ಯನ ಸಣ್ಣತನ, ದುರಾಲೋಚನೆ, ಕ್ರೌರ್ಯಗಳನ್ನು ಕಂಡ ವಿಷಾದ,ವ್ಯಂಗ್ಯ, ಅಸಹಾಯಕತೆಯ ಭಾವನೆಗಳು ಅಡಕವಾಗಿವೆ.

ಬಿ.ಸಿ.ರಾಮಚಂದ್ರ ಶರ್ಮ ಅವರ 'ಮೇಜ ಮೇಲಿನ ಬುದ್ಧ' ಕವಿತೆ ಆಧುನಿಕ ಮನುಷ್ಯನ ತವಕ, ತಲ್ಲಣಗಳೊಂದಿಗೆ ಅವನ ದ್ವಂದ್ವ ಮನಸ್ಥಿತಿಯನ್ನೂ, ಏನನ್ನೂ ಸಾಧಿಸಲಾರದ ಎಡಬಿಡಂಗಿತನವನ್ನೂ ಸಮರ್ಥವಾಗಿ ಹಿಡಿದಿಡುತ್ತದೆ. ಅದರ ಜೊತೆಗೆ ಬುದ್ಧನಾಗಲು ಎದುರಿಸಬೇಕಾಗಿರುವ ಸವಾಲುಗಳನ್ನೂ, ಸಾಮಾನ್ಯ ಮಾನವನ ಅಲ್ಪತೆಯನ್ನೂ ಈ ಕವನ ಚರ್ಚಿಸುತ್ತದೆ. ಸದಾ ಬುದ್ಧನಾಗುವ ತವಕದಿಂದ ಹೊರಟ ವ್ಯಕ್ತಿ ಸಣ್ಣ ಅಡೆತಡೆಗಳನ್ನೂ ಸಹಿಸಲಾರದೆ ಹಿಂತಿರುಗಿದ್ದನ್ನು ಕಂಡು 'ಬುದ್ಧ ನಕ್ಕ' ಎನ್ನುವ ಮೂಲಕ ಕವಿ ಸಮಾಜವನ್ನೂ, ಮಾನವನ ಅಸ್ತಿತ್ವವನ್ನೂ ವಿಡಂಬನೆಗೆ ಒಳಪಡಿಸಿದ್ದಾರೆ.

ಕಾಡುತ್ತಿದ್ದ ಅಷ್ಟೂ ಅಷ್ಟೂ ದೆವ್ವಗಳ ಕೊಡವಿ
ಮೇಲೆದ್ದು ಹೆಬ್ಬಾಗಿಲತ್ತ ನುಗ್ಗಿದ್ದ
ನಾನು ಹೊಸ್ತಿಲನ್ನೆಡವಿ
ಗಕ್ಕನೆ ನಿಂತು ಹಿನ್ನೋಟವೆಸೆದೆ
ಎಂದಿನ ಹಾಗೆ
ಮೇಜ ಮೇಲಿನ ಬುದ್ಧ
ನಗುತ್ತಲಿದ್ದ.[೩೪]

ಈ ಕವಿತೆಯ ಸಾಲುಗಳು ಹೊಸ್ತಿಲು, ಮೇಜ ಮೇಲಿನ ಬುದ್ಧ ಎಲ್ಲವನ್ನೂ ಸಾಂಕೇತಿಕವಾಗಿ ಹಿಡಿದಿಡುತ್ತವೆ. ದೆವ್ವಗಳನ್ನು ಕೊಡವಿ ಮೇಲೆದ್ದವನಿಗೆ ಹೊಸ್ತಿಲನ್ನು ದಾಟುವುದು ಸುಲಭವಾಗಲಿಲ್ಲ ಎನ್ನುವ ಮಾತು ನಮ್ಮನ್ನು ನಿಯಂತ್ರಿಸುತ್ತಿರುವ ಆಧುನಿಕ ಬದುಕಿನ ಸಂಕೋಲೆಗಳ ಅಗೋಚರ ಹಿಡಿತವನ್ನೂ, ಎಲ್ಲದರಿಂದ ಸುಲಭವಾಗಿ ಬಿಡುಗಡೆ ಪಡೆಯಲಾಗದ ನಮ್ಮ ಮನಸ್ಥಿತಿಯನ್ನೂ ಧ್ವನಿಸುತ್ತದೆ. ಬುಧ್ಧನಾಗುವ ವ್ಯಕ್ತಿಯ ಬದ್ಧತೆಯಲ್ಲಿನ ಸಡಿಲತನವೇ ಆತನ ಬದುಕಿನ ದುಃಖಗಳಿಗೆ ಕಾರಣವಾಗಿರುವುದನ್ನು ಈ ಕವಿತೆ ವಿಡಂಬಿಸುತ್ತದೆ. ಆದರೆ ಬುದ್ಧ ಇವೆಲ್ಲವುಗಳನ್ನೂ ಮೀರಿದವನು. ಬುದ್ಧನ ವ್ಯಂಗ್ಯ ನಗುವಿಗೆ ನಮ್ಮ ಈ ಸ್ಥಿತಿ ಕೂಡ ನಗಲು ಕಾರಣವಾಗಿದೆ ಎನ್ನುತ್ತಾರೆ ರಾಮಚಂದ್ರ ಶರ್ಮ.

ಶ್ಯಾಮಸುಂದರ ಬಿದರಕುಂದಿ ಅವರು ಬುದ್ಧನ ನಗುವಿನಲ್ಲಿ ಹಲವು ಭಾವಗಳನ್ನು ಏಕಕಾಲಕ್ಕೇ ಹೊರಹೊಮ್ಮಿಸಬಲ್ಲ ನವಿರು ವ್ಯಕ್ತಿತ್ವವನ್ನು ಗ್ರಹಿಸುತ್ತಾರೆ. ಬುದ್ಧ ಮಾತಿನಲ್ಲಿ ಹೇಳಲಾಗದ್ದನ್ನು, ನೂರು ಮಾತಿನಿಂದ ಹೇಳಲಾಗದ ಹಲವು ಅನುಭವಗಳನ್ನು ಒಂದು ಕಿರುನಗೆಯಲ್ಲಿ ಹೊರಹೊಮ್ಮಿಸಿದ ಎನ್ನುತ್ತಾರೆ. ಈ ನಗೆಯಲ್ಲಿ ಸೇಹ, ಸರಸ, ಸಜ್ಜನಿಕೆ ಎಲ್ಲವೂ ಕೂಡಿಕೊಂಡಿವೆ ಎನ್ನುತ್ತಾರೆ.

ನಗೆ ನವಿರು ಭಾವದ ಹಾರ್ದಿಕ ತೋರಿಕೆ
ನಗುವ ಮುಖ ತನ್ನೆದುರ ಮುಖವನ್ನು ಅರಳಿ
ಸುವುದು; ತತ್‌ಕ್ಷಣವೇ ಕಣ್ಣ ಮಿನುಗಿಸುವುದು
ನೂರು ಮಾತಿಗೆ ಇರದ ಇಂಪು ಒಂದು ಹೂ

ನಗೆಗುಂಟು; ಮೊಗ್ಗೆ ನಗುವಿಗೂ ಉಂಟು ಸ್ನೇಹ
ವರಳಿಸುವ ಸರಸ ಸಜ್ಜನಿಕೆ ನರುಗಂಪು.[೩೭]

ಒಂದು ನಿಷ್ಕಲ್ಮಶ ನಗೆಗಿರುವ ಅದ್ಭುತ ಶಕ್ತಿಯನ್ನು ಬುದ್ಧನ ನಗೆ ಜಗತ್ತಿಗೆ ತೋರಿಸಿಕೊಟ್ಟಿದೆ. ಶುದ್ಧವಾದ ನಗೆಯೊಂದು ತನ್ನೆದುರಿರುವ ಕ್ರೂರಿಯಲ್ಲೂ ಸಾತ್ವಿಕತೆಯನ್ನು ಹುಟ್ಟುಹಾಕುತ್ತದೆ. ಬುದ್ಧ ಅಪಾರವಾದ ಜನರನ್ನು ಆಕರ್ಷಿಸಿದ್ದು ಈ ಶುದ್ಧ ನಗೆಯಿಂದಲೇ. ಒಂದು ನಗೆ ಜಗತ್ತಿನ ಮುಂದಿರುವ ಹಲವು ಸಂಕಟ, ಸವಾಲುಗಳನ್ನು ನಿವಾರಿಸಬಹುದಾದ ಸಾಧ್ಯತೆಯನ್ನು ಬುದ್ಧನ ನಗುವಿನಿಂದ ಕಲಿಯಬೇಕಾಗಿದೆ ಎಂಬ ಆಶಯವನ್ನು ಕವಿತೆ ವ್ಯಕ್ತಪಡಿಸುತ್ತದೆ.

ಬುದ್ಧನ ನಗುವನ್ನು ಕುರಿತಂತೆ ಚರ್ಚಿಸುವ ಮತ್ತೊಂದು ಗುಂಪಿನ ಕವಿತೆಗಳು ಬುದ್ಧನ ನಗುವಿನಲ್ಲಿ ಕೃತಕತೆಯನ್ನೂ, ಅಟ್ಟಹಾಸವನ್ನೂ, ಸಹಜವಾಗಿ ನಗಲೂ ಅಸಾಧ್ಯವಾಗದಿರುವ ಸ್ಥಿತಿಯನ್ನು ಗುರುತಿಸುತ್ತವೆ. ಬುದ್ಧ ಮುಂಚಿನಂತೆ ನಗಲು ಈಗ ಸಾಧ್ಯವಿಲ್ಲ ಎನ್ನುತ್ತಾರೆ. ಆಧುನಿಕ ಮನುಷ್ಯ ಬುದ್ಧನ ನಗೆಯನ್ನು ತನ್ನ ಸ್ವಾರ್ಥಸಾಧನೆಗೆ ಬಳಸಿಕೊಂಡಿರುವುದನ್ನು ಕಂಡೂ ಬುದ್ಧ ಹೇಗೆ ನಗಲು ಸಾಧ್ಯ ಎಂಬ ಪ್ರಶ್ನೆಯನ್ನು ಹಾಕುತ್ತಿದ್ದಾರೆ. ಸಿದ್ಧರಾಮ ಹಿರೇಮಠ ಅವರ 'ಬುದ್ಧ ನಕ್ಕ' ಕವನ ಆಧುನಿಕ ಮನುಷ್ಯನ ಹಿಂಸಾಪ್ರವೃತ್ತಿಗಳನ್ನು ವಿಡಂಬಿಸಲು ಬುದ್ಧನ ನಗುವನ್ನು ಬಳಸಿಕೊಂಡಿದೆ. ವರ್ತಮಾನದ ಜಾಗತಿಕ ವಾತಾವರಣವನ್ನು ನೋಡಿದರೆ ಬುದ್ಧನನ್ನಾಗಿಸುವ, ಬುದ್ಧ ಪ್ರತಿಪಾದಿಸಿದ ಬದುಕಿನ ಕ್ರಮಗಳನ್ನು ಒಪ್ಪುವ ಯಾವ ಮನಸ್ಥಿತಿಯೂ ಉಳಿಯಲಾರದು ಎಂದೆನಿಸುತ್ತದೆ. ಪ್ರಸ್ತುತ ವಾತಾವರಣ ಹೆಚ್ಚು ಕ್ರೂರತೆಯಿಂದ ಕೂಡಿದೆ. ಬುದ್ಧನಿಗೆ ಬೆಲೆಕೊಡುವ ವಾತಾವರಣವಿಲ್ಲದಂತಾಗಿ ಹಿಂಸಾ ಕೃತ್ಯಗಳಿಗೆ ಪ್ರಚೋದನೆ ನೀಡುತ್ತಿದೆ ಜಗತ್ತು. ಇಂತಹ ಸಂದಿಗ್ಧ ಸನ್ನಿವೇಶದಲ್ಲಿ ಬುದ್ಧ ನಗುವುದಾದರೂ ಹೇಗೆ ಎನ್ನುತ್ತಾರೆ. ಸಿದ್ಧರಾಮ ಹಿರೇಮಠ ತಮ್ಮ 'ಬುದ್ಧ ನಕ್ಕ' ಕವನದಲ್ಲಿ ಆಧುನಿಕತೆಯ ವಿಕಾರಗಳು ಜಗತ್ತಿನಲ್ಲಿ ಹುಟ್ಟುಹಾಕಿರುವ ನಾನಾ ರೂಪದ ಹಿಂಸೆಗಳನ್ನು ಕಂಡು ಬುದ್ಧ ನಗಲು ಸಾಧ್ಯವಿಲ್ಲ. ಬುದ್ಧ ಪೂರ್ಣಿಮೆಯಂದೇ ನಡೆದಿರುವ ಅಣ್ವಸ್ತ್ರವೆಂಬ ರಾಕ್ಷಸನ ಪರೀಕ್ಷೆ ಜಗತ್ತಿನ ವಿನಾಶದ ಮುನ್ನುಡಿಯೂ ಹೌದು. ಎಲ್ಲೆಲ್ಲೂ ಬಡತನ, ಹಸಿವು, ಶೋಷಣೆ, ಕ್ರೌರ್ಯವೇ ಕಂಡುಬರುವಾಗ ಬುದ್ಧ ನಗಲು ಹೇಗೆ ಸಾಧ್ಯ ಎಂಬ ಪ್ರಶ್ನೆಯನ್ನು ವ್ಯಂಗ್ಯದ ದಾಟಿಯಲ್ಲಿಯೇ ಎತ್ತುತ್ತದೆ.

ಬುದ್ಧ ಪೂರ್ಣಿಮೆಯಂದು
ಚಂದಿರನ ಮೊಗದಲ್ಲಿ
ಮೂಡಿತೊಂದು ಕಪ್ಪು ಚುಕ್ಕಿ
ನೀಲಾಗಸದಿಂದ ಉದುರಿತು ಶಾಂತಿ ಚುಕ್ಕೆ
ಬುದ್ಧ ನಕ್ಕ
. . . . . .
ಹಸಿರು ತುಂಬಿದ ಮನದಲ್ಲಿ
ಹುಲಿ, ಚಿರತೆ, ಸಿಂಹಗಳ ಆರ್ಭಟ
. . . . . .ತಾಳಲಾಗದ ಸಂಕಟ, ಬುದ್ಧನ ಮೊಗವೆಲ್ಲ ಕಪ್ಪು
ಬುದ್ಧ ನಕ್ಕ[೩೮]

ಹಿಂಸೆಯ ಮೂಲ, ದುಃಖದ ಮೂಲವನ್ನು ಹುಡುಕಿ ಹೊರಟ ಬುದ್ಧನನ್ನು ನಮ್ಮ ಅಂತರಂಗಕ್ಕೆ ತಂದುಕೊಳ್ಳುವಲ್ಲಿ, ಉಸಿರಾಗಿಸಿಕೊಳ್ಳುವಲ್ಲಿ ವಿಫಲರಾಗಿದ್ದೇವೆ. ಹಾಗಾಗಿಯೇ ಬುದ್ಧನ ನಗು ಇಂದು ಅಪ್ರಸ್ತುತ ಎಂದೆನಿಸುತ್ತಿದೆ. ಅಲ್ಲದೆ ಇಂದಿನ ಜನರಿಗೆ ಬುದ್ಧ ನಕ್ಕಂತೆ ನಗುವುದು ಸಾಧ್ಯವೂ ಇಲ್ಲ ಎನ್ನುತ್ತಾರೆ. ಮುಂದುವರಿದು ಬುದ್ಧನ ನಗು ವ್ಯಂಗ್ಯದಿಂದ ಕೂಡಿದ್ದಾಗಿದೆ. ಏಕೆಂದರೆ ಬುದ್ಧನನ್ನು ಆತನ ವಿಚಾರಗಳನ್ನು

ನಾವು ಮೇಲೆ ಮೇಲೆ ತಿಳಿದುಕೊಂಡು ತಿರಸ್ಕರಿಸಿದ್ದೇವೆ. ಆಳವಾಗಿ ಗ್ರಹಿಸಲು, ಹಿಡಿದಿಡಲು ಪ್ರಯತ್ನಿಸಲೇ ಇಲ್ಲ ಎಂಬ ನೋವು ಈ ಕವನದಲ್ಲಿ ವ್ಯಕ್ತವಾಗಿದೆ. ಕೊನೆಗೆ ಬುದ್ಧನನ್ನು ಬಲವಂತವಾಗಿ ನಗಿಸುವ ಮಟ್ಟಕ್ಕೆ ಇಳಿದಿರುವುದನ್ನೂ, ಆ ಪ್ರಯತ್ನವೂ ಹಿಂಸೆಯನ್ನೇ ಮಾಡುತ್ತಿರುವುದರ ವ್ಯಂಗ್ಯ ಈ ಕವಿತೆಯ ಸಾಲುಗಳಲ್ಲಿದೆ.

ಬುದ್ಧ ನಗಲಿಲ್ಲ
ತುಟಿ ಸೀಳಿ ನಗಿಸಿದರು
ಎದೆಯೊಳು ಯುದ್ಧವೆಂದು
ಕೊರೆದರು
ಬುದ್ಧ ನಕ್ಕನೆಂದರೆ
ಬುದ್ಧ ಅತ್ತ! ೩೯

ಬುದ್ಧನ ನಾಡು ಇಂದು ಹಿಂಸೆಯಿಂದ ತುಂಬಿಹೋಗಿದೆ. ಇಡೀ ನಾಡು ಬುದ್ಧನ ಕರುಣೆಯ ಕಿರಣಕ್ಕಾಗಿ ಕಾದು ಕೂತಿದೆ. ಸರ್ವನಾಶಕ ಬಾಂಬುಗಳ ತಯಾರಿಕೆ ಮತ್ತು ಪ್ರಯೋಗದಲ್ಲಿ ಆಧುನಿಕ ರಾಷ್ಟ್ರಗಳು ಪೈಪೋಟಿಗಿಳಿದಿವೆ. ಇಂಥ ಸಂದರ್ಭದಲ್ಲಿ ಬುದ್ಧ ನಗಲು ಹೇಗೆ ಸಾಧ್ಯ ಎಂದು ಕವಿತೆ ಪ್ರಶ್ನಿಸುತ್ತದೆ. ನಾವು ಇಂದು ಬುದ್ಧನನ್ನು ಕಾಣುವ ಕಣ್ಣನ್ನು ಕಳೆದುಕೊಂಡಿದ್ದೇವೆ ಎಂಬ ನೋವು, ವಿಷಾಧ ಕವಿತೆಯ ಹಿಂದಿದೆ.

ಬುದ್ಧನು ನಕ್ಕ ಹಾಗೆಯೇ ಇಂದು ನಗುವುದು ಸಾಧ್ಯ
ವಾದರೆ ನಮಗೂ ಆ ನಗೆಗೆ, ಆ ಗೌತಮನು ತೆತ್ತಂತ
ಬೆಲೆಗೆ ಸಾಟಿ ಆದೀತೆ ನಾವು ದಕ್ಕಿಸಿದ ನಮ್ಮ ಇಂದಿನ ನೆಲೆ ೪೦

ಆಧುನಿಕ ಮನುಷ್ಯನ ಯುದ್ಧದಾಹ, ಹಿಂಸೆ, ಕೌರ್ಯ, ನೀಚತನಗಳ ಮನಸ್ಥಿತಿಯನ್ನು ವಿಡಂಬಿಸಲು, ನಮ್ಮೊಳಗಿನ ಸಾಕ್ಷಿಪ್ರಜ್ಞೆಯನ್ನು ಪರೀಕ್ಷಿಸಿಕೊಳ್ಳಲು ಬುದ್ಧನ ನಗುವನ್ನು ನೈತಿಕ ಸಾಧನವಾಗಿ ಬಳಸಿಕೊಳ್ಳಲಾಗಿದೆ. ನಗು ತಾಯ್ತನದ ಪ್ರೀತಿಯಿಂದ ಹುಟ್ಟಬೇಕೇ ಹೊರತು ಕೊಲ್ಲುವ ವಿನಾಶಕಾರಿ ಮನಸ್ಥಿತಿಯಿಂದ ಅಲ್ಲ. ಯುದ್ಧಗಳನ್ನು ನಿಲ್ಲಿಸಬಲ್ಲ ನಗೆ ಬುದ್ಧನದಾದರೆ ಯುದ್ಧಗಳನ್ನು, ಹಿಂಸೆಯನ್ನು ಪ್ರಚೋದಿಸುವ ನಗೆ ಆಧುನಿಕ ಮನುಷ್ಯನದ್ದಾಗಿದೆ. ಒಂದು ನಿಷ್ಕಲ್ಮಶ ಪ್ರೀತಿಯ ನಗೆ ಜಗತ್ತಿನ ಗಡಿಗಳನ್ನೂ, ರಕ್ತದ ಹೊಳೆಗಳನ್ನು, ಸ್ಫೋಟಿಸುವ ಬಾಂಬುಗಳನ್ನೂ ಇಲ್ಲವಾಗಿಸಬಲ್ಲದು. ಹೀಗೆ ಪ್ರೀತಿಯ ನಗೆಯಿಂದ ಜಗತ್ತನ್ನು ಗೆಲ್ಲಬಹುದಾದ ಮತ್ತು ಜಗತ್ತನ್ನು ಪ್ರೀತಿಯಿಂದ ಬಂಧಿಸಬಹುದಾದ, ಆ ಮೂಲಕ ನೆಮ್ಮದಿಯ ಬದುಕನ್ನು ರೂಪಿಸಿಕೊಡಬಹುದಾದ ಸರಳ ಮಾರ್ಗಗಳನ್ನು ಬುದ್ಧ ಪ್ರತಿಪಾದಿಸಿದ. ಇಂದು ಜಗತ್ತು ಆ ನೆಮ್ಮದಿಗಾಗಿ ಬುದ್ಧನೆಡೆಗೆ ಮುಖಮಾಡಿದೆ. ಇಂದು ಜಗತ್ತು ಸಂಭವಿಸಬಹುದಾದ ಮೂರನೇ ಮಹಾಯುದ್ಧವನ್ನು ತಡೆಯಲು ಇನ್ನಿಲ್ಲದಂತೆ ಪ್ರಯತ್ನಿಸುತ್ತಿದೆ. ಇದಕ್ಕೆ ವಿರುದ್ಧವಾಗಿ ಎಲ್ಲಾ ರಾಷ್ಟ್ರಗಳು ರಾಷ್ಟ್ರ ರಕ್ಷಣೆಯ ನೆಪದಲ್ಲಿ ತಮ್ಮ ಬಲಪ್ರದರ್ಶನಕ್ಕಾಗಿ ವಿನಾಶಕಾರಿ ಅಸ್ತ್ರಗಳನ್ನು ಸಂಗ್ರಹಿಸಿಟ್ಟುಕೊಂಡಿವೆ. ಮಾನವ ಕಲ್ಯಾಣಕ್ಕಾಗಿ ಹುಟ್ಟಿಕೊಂಡ ರಾಷ್ಟ್ರಗಳು ತಮ್ಮ ಕಲ್ಯಾಣದ ಉದ್ದೇಶವನ್ನು ಮರೆತು ಜಗತ್ತಿನ ವಿನಾಶದಲ್ಲಿ ತೊಡಗಿರುವ ಇಂದಿನ ಭೀಕರ ಸನ್ನಿವೇಶದಲ್ಲಿ ಬುದ್ಧನ ಜೀವಪ್ರೀತಿಯ, ಪ್ರಸನ್ನತೆಯ, ನಿಶ್ಕಲ್ಮಷ ನಗುವಿನ ಮಹತ್ವ ವೇದ್ಯವಾಗುತ್ತದೆ. ಈ ನಿಟ್ಟಿನಲ್ಲಿ ಕನ್ನಡ ಕವಿತೆಗಳು ಬುದ್ಧನ ಮಾನವೀಯ ಕಾಳಜಿಗಳನ್ನು ಜಗತ್ತಿಗೆ ಸಾರುವ ಯುದ್ಧ ವಿರೋಧಿ ಧ್ವನಿಗಳಾಗಿ ಕಂಡುಬರುತ್ತವೆ. ಕನ್ನಡದ ಮನಸ್ಸು ಬೌದ್ಧ ಗ್ರಹಿಕೆಯ ಮೂಲಕ ಜಾಗತಿಕ ಶಾಂತಿಗಾಗಿ ಇಷ್ಟೊಂದು ಜೀವಪರವಾಗಿ ತುಡಿಯುತ್ತಿರುವುದು ಸಾಹಿತ್ಯದ ಮಾನವೀಯ ಕಾಳಜಿಗಳನ್ನು ಎತ್ತಿಹಿಡಿಯುತ್ತದೆ.

ಒಟ್ಟಾರೆ ಬುದ್ಧನ ನಗುವಿನ ಅರ್ಥವನ್ನು ಬೆರಗಿನಿಂದ ಹುಡುಕುವ ಕವಿತೆಗಳು ಅದಕ್ಕೆ ಕಾರಣಗಳನ್ನು ಇತಿಹಾಸದ ಕಾಲಗರ್ಭದಲ್ಲಿ, ಪುಸ್ತಕ, ಶಾಸನಗಳಲ್ಲಿ ಹುಡುಕಿ ಉತ್ತರ ಸಿಗದೆ ಸುಸ್ತಾಗುತ್ತವೆ. ಕೊನೆಗೆ ಬುದ್ಧಸ್ಮಿತಕ್ಕೆ

ಕಾರಣವನ್ನು ಬುದ್ಧನ ಬುದುಕಿನ, ಚಿಂತನೆಗಳ ಹಿನ್ನೆಲೆಯಲ್ಲಿ ಹಿಡಿದಿಡಲು ಪ್ರಯತ್ನಿಸುತ್ತವೆ. ಕನ್ನಡ ಕಾವ್ಯ ಬುದ್ಧನ ನಗುವನ್ನು ಅದೊಂದು ಅರಿವಿನ ನಗೆ, ಆತ್ಮತೃಪ್ತಿಯ ನಗೆ, ಗೆಲುವಿನ ನಗೆ, ಅಪಾರವಾದ ಮಾನವ ಪ್ರೀತಿಯ ನಗೆ, ಮಾತೃವಾತ್ಸಲ್ಯದ ನಗೆ ಎಂದು ಚರ್ಚಿಸುತ್ತಲೇ ಅದನ್ನು ಸಮಕಾಲೀನ ಅಮಾನವೀಯ ಕೃತ್ಯಗಳ ವಿಡಂಬನೆಗೂ ದುಡಿಸಿಕೊಂಡಿರುವುದು ಕನ್ನಡ ಕಾವ್ಯದ ಜೀವಪರ ತುಡಿತಗಳಿಗೆ ಸಾಕ್ಷಿಯಾಗಿದೆ.

### ೪.೨.೩. ಬುದ್ಧನ ವ್ಯಕ್ತಿತ್ವ : ಸಾಂಸ್ಕೃತಿಕ ಮುಖಾಮುಖಿ

ಆಧುನಿಕ ಕನ್ನಡ ಕಾವ್ಯ ಬುದ್ಧನನ್ನು ಗ್ರಹಿಸಿಕೊಂಡಿರುವ ಹಾಗೂ ಮರುನಿರೂಪಿಸಿಕೊಳ್ಳಲು ನಡೆಸಿರುವ ಪ್ರಯತ್ನ ವಿಶಿಷ್ಟವಾದದ್ದು. ಈ ಪ್ರಕ್ರಿಯೆಯ ಹಿಂದಿನ ಒತ್ತಾಸೆಗಳು ಮಾನವೀಯವಾದವುಗಳಾಗಿವೆ. ಬುದ್ಧನನ್ನು ಕುರಿತ ಕವಿತೆಗಳು ತಮ್ಮ ಕಾಲದ ಹಲವು ಪ್ರಶ್ನೆ, ಸವಾಲು, ಆತಂಕ, ಸಂದೇಹಗಳೊಂದಿಗೆ ಬುದ್ಧನೊಡನೆ ಮುಖಾಮುಖಿಯಾಗಿವೆ. ಇಲ್ಲಿ ಎದುರಾಗುವ ಪ್ರಶ್ನೆಗಳು ಬುದ್ಧನೊಡನೆಯೂ, ವ್ಯವಸ್ಥೆಗೆ ಹಾಕಿದ ಸವಾಲುಗಳಾಗಿಯೂ ಹಾಗೂ ಸ್ವವಿಮರ್ಶೆಯ ನೆಲೆಯವೂ ಆಗಿ ಮೂಡಿಬಂದಿರುವುದು ವಿಶೇಷ. ಯಾವುದೇ ಕಾಲ, ಪ್ರದೇಶದ ಕವಿಗಳು ತಮ್ಮ ಕಾಲದ ಸಾಂಸ್ಕೃತಿಕ ಬದುಕನ್ನು ರೂಪಿಸುವ ಕಾಳಜಿಯನ್ನು ಹೊಂದಿರುತ್ತಾರೆ. ಬುದ್ಧನನ್ನು ಮುಖಾಮುಖಿಯಾಗಿರುವ ಕನ್ನಡ ಕಾವ್ಯ ಬಹುಮುಖ್ಯವಾಗಿ ಮನುಷ್ಯನಲ್ಲಿ ನಶಿಸುತ್ತಿರುವ ನೈತಿಕತೆ ಹಾಗೂ ಜಾಗತಿಕ ಹಿಂಸೆಯ ವಿರಾಟ್ ರೂಪಗಳ ವಿಡಂಬನೆಗಾಗಿ ಬಳಸಿಕೊಂಡಿದೆ. ಆ ಮೂಲಕ ಆಧುನಿಕ ಮನುಷ್ಯನಲ್ಲಿ ನೈತಿಕ ಮೌಲ್ಯಗಳನ್ನು ರೂಪಿಸುವ ಹಾಗೂ ಹಿಂಸೆಯಿಂದ ಈ ಜಗತ್ತನ್ನು ಮುಕ್ತಗೊಳಿಸಬಹುದಾದ ಮಾರ್ಗಗಳನ್ನು ಶೋಧಿಸುವ ಮಹತ್ವದ ಕೆಲಸದಲ್ಲಿ ಕನ್ನಡ ಕಾವ್ಯ ತನ್ನನ್ನು ಪ್ರಾಮಾಣಿಕವಾಗಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಈ ನಿಟ್ಟಿನಲ್ಲಿ ಹೊಸಗನ್ನಡ ಕವಿತೆಗಳು ಬುದ್ಧನೊಂದಿಗೆ ಮುಖಾಮುಖಿಯಾಗಿರುವ ಬಗೆಯನ್ನು ಮೂರು ನೆಲೆಗಳಲ್ಲಿ ಗುರುತಿಸಬಹುದು.

೧. ಸ್ವ ವಿಮರ್ಶೆ ಮತ್ತು ಸಾಂಸ್ಕೃತಿಕ ವಿಡಂಬನೆಯ ಅಸ್ತ್ರವಾಗಿ.
೨. ಯಶೋಧರೆಯ ನೆಲೆಯಿಂದ.
೩. ಬುದ್ಧ: ಜಗತ್ತಿನ ಮುಂದಿರುವ ಅಂತಿಮ ಆಯ್ಕೆಯಾಗಿ.

### ೧ ಸ್ವವಿಮರ್ಶೆ ಮತ್ತು ಸಾಂಸ್ಕೃತಿಕ ವಿಡಂಬನೆಯ ಅಸ್ತ್ರವಾಗಿ:

ಬುದ್ಧ ಈ ಉಪಖಂಡದ ಜನರ ಸಂಸ್ಕೃತಿಯನ್ನೂ, ಆತ್ಮ ಸಾಕ್ಷಿಯನ್ನೂ ರೂಪಿಸಿದ ವ್ಯಕ್ತಿ. ಹಾಗಾಗಿಯೇ ಆತ ಇಲ್ಲಿನ ಜನರ ಆತ್ಮಸಾಕ್ಷಿಯನ್ನು ಕೆಣಕುವ ವ್ಯಕ್ತಿಯೂ ಆಗಿದ್ದಾನೆ. ಕನ್ನಡ ಕವಿಗಳು ಬುದ್ಧನ ಎದುರಿಗೆ ತಮ್ಮನ್ನು ತಾವು ನೈತಿಕವಾಗಿ ಪ್ರಶ್ನಿಸಿಕೊಳ್ಳುವ, ಪ್ರಾಮಾಣಿಕವಾಗಿ ಆತ್ಮವಿಮರ್ಶೆ ಮಾಡಿಕೊಳ್ಳುವ ಪ್ರಯತ್ನಮಾಡಿದ್ದಾರೆ. ಈ ಆತ್ಮವಿಮರ್ಶೆ ವೈಯಕ್ತಿಕ ಮತ್ತು ಸಾಮುದಾಯಿಕ ಎಂಬ ಎರಡೂ ನೆಲೆಗಳಲ್ಲಿ ನಡೆದಿರುವುದು ವಿಶೇಷ.

ಬುದ್ಧನ ವ್ಯಕ್ತಿತ್ವದ ಎದುರಿಗೆ ಕವಿಗಳು ತಮ್ಮ ಅಂತರಂಗವನ್ನು ತೆರೆದಿಡುವ, ಆತ ಬೋಧಿಸಿದ ಮೌಲ್ಯಯುತ ವಿಚಾರಗಳ ಬೆಳಕಿನಲ್ಲಿ ತಮ್ಮನ್ನು, ಸಮುದಾಯವನ್ನು ಉಜ್ಜಿನೋಡಿಕೊಳ್ಳುವ ಪ್ರಯತ್ನಮಾಡಿದ್ದಾರೆ. ಇಲ್ಲಿ ಬುದ್ಧ ನಮ್ಮ ಆತ್ಮಸಾಕ್ಷಿಯನ್ನು ಕೆಣಕುವ ನೈತಿಕ ಶಕ್ತಿಯಾಗಿ ಬಳಕೆಯಾಗಿದ್ದಾನೆ. ಮನುಷ್ಯರ ದುಃಖಕ್ಕೆ ಕಾರಣಗಳನ್ನು ಹುಡುಕಿ ಹೊರಟ ಸಿದ್ಧಾರ್ಥನ ತ್ಯಾಗ, ದೃಢತೆ, ಕರುಣೆ, ಪ್ರೀತಿಗಳ

ಮುಂದೆ ಕವಿಗಳು ತಮ್ಮ ಸಣ್ಣತನಗಳನ್ನೂ, ಕ್ಷುದ್ರ ಬಯಕೆಗಳನ್ನು ವಿಮರ್ಶಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿದ್ದಾರೆ. ಹಾಗೆಯೇ ಬುದ್ಧನಾಗುವ ಕಷ್ಟ, ಸಂಕಟಗಳನ್ನು, ಬುದ್ಧ ಅನುಭವಿಸಿದ ತಳಮಳಗಳನ್ನು ತನ್ನ ಬದುಕಿನ ರೀತಿಯೊಂದಿಗೆ ಹೋಲಿಸಿ ನೋಡುವ ಪ್ರಯತ್ನವನ್ನು ಆಧುನಿಕ ಕನ್ನಡ ಕವಿತೆಗಳು ಮಾಡುತ್ತವೆ. ಬಿ.ಸಿ.ರಾಮಚಂದ್ರಶರ್ಮರ 'ಮೇಜ ಮೇಲಿನ ಬುದ್ಧ' ಕವಿತೆ ಈ ನಿಟ್ಟಿನಲ್ಲಿ ಉತ್ತಮವಾದ ಕವಿತೆಗಳಲ್ಲೊಂದು. ಇದು ಸಿದ್ಧಾರ್ಥ ಬುದ್ಧನಾದ ಬಗೆಯನ್ನು ತಿಳಿಸುತ್ತಲೇ ಸಾಮಾನ್ಯ ಮನುಷ್ಯರ ಮುಂದಿರುವ ಸವಾಲುಗಳನ್ನು, ಅವುಗಳನ್ನು ಎದುರಿಸಲಾಗದೆ ಮನುಷ್ಯ ಪಡುತ್ತಿರುವ ಪರಿಪಾಟಲುಗಳನ್ನು ಏಕಕಾಲದಲ್ಲಿ ಹಿಡಿದಿಡಲು ಪ್ರಯತ್ನಿಸುತ್ತದೆ. ಈ ಗೊಂದಲಗಳನ್ನು ಒಂದೊಂದಾಗಿ ಬಿಡಿಸಿಕೊಳ್ಳಲು ಈ ಕವಿತೆ ಪ್ರಯತ್ನಿಸುತ್ತದೆ.

ಸಿದ್ಧಾರ್ಥನಿಗೆ ಮನುಷ್ಯರ ಬದುಕಿನಲ್ಲಿ ಕಗ್ಗಂಟಾಗಿ ಕಂಡಿದ್ದು ದುಃಖ ಮತ್ತು ಚೆಲುವು. ಈ ಎರಡೂ ಆತನಿಗೆ ಅರ್ಥವಾಗದ ವೈರುಧ್ಯಗಳಾಗಿ ಕಾಡಿವೆ. ಹಾಗಾಗಿಯೇ ಅವೆಲ್ಲವುಗಳ ಅರ್ಥವನ್ನು ತಿಳಿಯುವ ಜಿಜ್ಞಾಸೆಯಿಂದ ಎಲ್ಲವನ್ನೂ ತೊರೆದು, ಪರಿಶ್ರಮದಿಂದ ಅಂತಿಮವಾಗಿ ಉತ್ತರ ಕಂಡುಕೊಳ್ಳುತ್ತಾನೆ. ಬುದ್ಧನ ಬದುಕಿನ ಈ ಜಿಜ್ಞಾಸೆಯ ಪ್ರವೃತ್ತಿ, ಎಲ್ಲವನ್ನೂ ತಿಳಿಯುವ ಕುತೂಹಲ, ಕಾರಣಗಳನ್ನು ಬೆನ್ನತ್ತಿ ಹೋಗುವ ಹಠ ಇವುಗಳನ್ನು ಮಾನವ ನಾಗರೀಕತೆ ಮೌಲ್ಯವಾಗಿಯಾಗಲೀ, ತನ್ನ ಬದುಕಿನ ಕ್ರಮವನ್ನಾಗಿಯಾಗಲೀ ಬಳಸಿಕೊಂಡಿಲ್ಲ. ಈ ದೌರ್ಬಲ್ಯವೇ ಮನುಷ್ಯನ ದುಸ್ಥಿತಿಗೆ ಕಾರಣ ಎನ್ನುವ ಕವಿ ತನ್ನನ್ನು ತಾನು ಮನುಷ್ಯ ಸಮೂದಾಯದ ಪ್ರತಿನಿಧಿಯನ್ನಾಗಿ ಸ್ವವಿಮರ್ಶೆಗೆ ಒಳಗು ಮಾಡಿಕೊಳ್ಳುತ್ತಾರೆ. ಬುದ್ಧನಿಗೆ ಎದುರಾದಂತೆ ತನಗೂ ಬದುಕಿನಲ್ಲಿ ಪ್ರತಿದಿನವೂ ಇಂಥದೇ ಹಲವು ಸನ್ನಿವೇಶ, ಪ್ರಶ್ನೆಗಳು ಎದುರಾದರೂ ತಾನು ಮಾತ್ರ ಯಾವುದೇ ಬಗೆಯ ಜಿಜ್ಞಾಸೆಗೆ ಒಳಗಾಗದೆ ಕೇವಲ ಮನುಷ್ಯನಾಗಿಯೇ ಬದುಕುತ್ತಿರುವ ತನ್ನ ಸ್ಥಿತಿಯನ್ನು ಈ ಕವಿತೆ ವ್ಯಂಗ್ಯವಾಡುತ್ತದೆ. ಈ ಕವನದ ಮೊದಲ ಭಾಗ ಬುದ್ಧನಾಗಬಯಸುವ ಕವಿಯ ಪ್ರಯತ್ನಗಳ ಹಿಂದಿನ ತಲ್ಲಣಗಳನ್ನು, ಆ ತಲ್ಲಣ ಮತ್ತು ಪ್ರಯತ್ನಗಳು ತನ್ನ ವ್ಯಕ್ತಿತ್ವದಲ್ಲಿ ತೀವ್ರವಾಗಿಲ್ಲದಿರುವ ಸ್ಥಿತಿಯನ್ನು ವಿಡಂಬಿಸಿಕೊಳ್ಳಲು ಪ್ರಯತ್ನಿಸುತ್ತದೆ. ಮೇಜ ಮೇಲಿನ ಬುದ್ಧನ ಚಿತ್ರಣ ಬುದ್ಧನ ಪ್ರತಿಮೆಯನ್ನು ಕುರಿತಾಗಿ ಹೇಳದೆ ಅದು ಬುದ್ಧ ಮತ್ತು ಕವಿಯ ನಡುವಿನ ಅಂತರವನ್ನು ಹೇಳುತ್ತಿದೆ. ಮಾರುಕಟ್ಟೆಯಿಂದ ತನ್ನ ಕೋಣೆಯ ಮೇಜಿನ ವರೆಗೂ ತಂದುಕೊಂಡ ಬುದ್ಧನನ್ನು ತನ್ನೊಳಗೆ ತಂದುಕೊಳ್ಳುವಲ್ಲಿ ವಿಫಲನಾದುದನ್ನೂ, ತನ್ನೊಳಗೇ ಜಿಜ್ಞಾಸೆ ಮತ್ತು ಅರಿವಿನ ರೂಪದಲ್ಲಿ ಕೊಡುಕೊಳ್ಳಬೇಕಾಗಿದ್ದ ಬುದ್ಧನನ್ನು ಬರೀ ಪ್ರತಿಮೆಯಾಗಿ ನೋಡುತ್ತಿರುವ ಮನಸ್ಥಿತಿಯನ್ನೂ ಈ ಕವಿತೆ ವಿಡಂಬಿಸುತ್ತಿದೆ. ಬುದ್ಧನಿಗೂ ತನಗೂ ಇರುವ ಈ ಅಂತರದ ನಿರಂತರತೆಗೆ ಕಾರಣಗಳನ್ನು ಪ್ರಾಮಾಣಿಕವಾಗಿ ಹುಡುಕುವ ಈ ಕವಿತೆ ಮನುಷ್ಯನಲ್ಲಿ ಬುದ್ಧನಾಗುವ ಆಂತರಿಕ ತುಡಿತ ತೀವ್ರವಾಗಿಲ್ಲದಿರುವುದೇ ಕಾರಣ ಎನ್ನುತ್ತದೆ. ಹೀಗೆ ಬುದ್ಧನೆದುರಿಗೆ ಸ್ವವಿಮರ್ಶೆಯಲ್ಲಿ ತೊಡಗುವ ಈ ಕವಿತೆ ಬುದ್ಧನ ಸ್ಥಿತಿಗೆ ತಾನು ಏರಲು ಸಾಧ್ಯವಾಗದುದಕ್ಕೆ ಕಾರಣಗಳನ್ನು ವಾಸ್ತವದ ಅರಿವಿನೊಂದಿಗೆ ಕಂಡುಕೊಳ್ಳುವ ಪ್ರಯತ್ನವನ್ನು ಮಾಡುತ್ತದೆ.

ಮೇಜ ಮೇಲಿನ ಬುದ್ಧ
ನಗುತಲಿದ್ದ
ಕಿಟಕಿಯಾಚೆಗೆ ಹಸೆಗೇರಿದಂಬೆಗಾಲಿನ ಚಂದ್ರ
ಬೆಳಕಿನುಂಗುರ ನಕ್ಕ
ಒಲವಿನ ತಿಳಿ ನೀಲಿ ತೊಟ್ಟಿಲ ಮುಕ್ಕ
ಇಂಥದೇ ಒಂದಿರುಳು

ಸುಕ್ಕು ಸುಕ್ಕಾಗಿದ್ದ ನೆಲದ ಸಾವಿರ ಕೋಳದ ಒಡೆದ
ಕನ್ನಡಿಯಲ್ಲಿ ಬಿದ್ದ
ಬಾಲಕನೊಬ್ಬ ಎದ್ದಿದ್ದ ವೃದ್ಧನಾಗಿ
ಪ್ರಶ್ನೆಯುಟ್ಟು ಮನೆ ಬಿಟ್ಟು ಓಡಿದ್ದ ಹುಡುಗ ಹಿಂದಿರುಗಿದ್ದ
ಬುದ್ಧನಾಗಿ [೪೧]

ಈ ಕವನ ಮೇಜ ಮೇಲಿನ ಬುದ್ಧನ ನಗುವಿಗೆ ಕಾರಣಗಳನ್ನು ಹತ್ತು ಹಲವು ಚಿಂತನೆ, ಆಲೋಚನೆಗಳ ಹಿನ್ನೆಲೆಯಲ್ಲಿ ಹಿಡಿದಿಡಲು ಪ್ರಯತ್ನಿಸುತ್ತದೆ. ಇಲ್ಲಿ ಕಿಟಕಿಯಾಚೆ ಕಾಣುತ್ತಿರುವ ನೀಲಿ ತೊಟ್ಟಿಲ ಮೇಲಿನ ಅಂಬೆಗಾಲ ಚಂದ್ರ, ಸೃಷ್ಟಿಯ ಅದಮ್ಯ ಚೆಲುವಿನ ಸಂಕೇತ. ಪ್ರಕೃತಿಯ ಈ ಚೆಲುವು ಯಾವುದೋ ಒಂದು ಕಾಲಕ್ಕೆ ಬಂದು ಹೋಗುವಂತದ್ದಲ್ಲ. ಇಂದಿಗೂ ಕೂಡ ಅದೇ ಬೆಳದಿಂಗಳು, ಅದೇ ಚಂದ್ರ ಜಗವನ್ನಾಳುತ್ತಿದ್ದಾರೆ. ಕಿಟಕಿಯಾಚೆಗಿನ ಚೆಲುವು-ಒಲವನ್ನು ತನ್ನೊಳಗೆ ತಂದುಕೊಳ್ಳುವ ತೀವ್ರ ತುಡಿತ, ಅವು ಮನುಷ್ಯನ ಬದುಕಿನಲ್ಲಿ ನಿತ್ಯ ಏಕಿಲ್ಲ ಎಂಬ ಜಿಜ್ಞಾಸೆ ಬಾಲಕನ್ನು ವೃದ್ಧನನ್ನಾಗಿ ಆ ಇರುಳು ಎಬ್ಬಿಸಿದ್ದವು. ಇಂಥದ್ದೇ ಒಂದಿರುಳು ಸಿದ್ಧಾರ್ಥ ಬುದ್ಧನಾಗಲು ಮನಸ್ಸು ಮಾಡಿದ್ದು. ಅದರಿಂದ ಆಕರ್ಷಿತನಾಗಿ ಹಲವು ಪ್ರಶ್ನೆಗಳನ್ನು ತಲೆಯೊಳಗೆ ತುಂಬಿಕೊಂಡು ಮನೆಬಿಟ್ಟು ಹೊರಟಿದ್ದು ಎನ್ನುವ ಕವಿಯ ಮಾತು ನೇರವಾಗಿ ಓದುಗರನ್ನಾಗಲೀ, ಸ್ವತಃ ಲೇಖಕನ ಸ್ಥಿತಿಯನ್ನಾಗಲೀ ಕುರಿತು ಚರ್ಚಿಸದಿದ್ದರೂ ಆಂತರ್ಯದಲ್ಲಿ ಇಂತಹ ಸಾಧನೆ ಎಲ್ಲರಿಂದಲೂ ಸಾಧ್ಯವಾಗುವಂತದ್ದಲ್ಲ ಎನ್ನುವುದು ವ್ಯಂಗ್ಯದೊಂದಿಗೆ ಕೂಡಿ ಅಭಿವ್ಯಕ್ತಗೊಂಡಿದೆ. ಹಾಗಾಗಿ ಆ ಚೆಲವು ಎಲ್ಲರ ಬದುಕಿನಲ್ಲೂ ಏಕೆ ಶಾಶ್ವತವಾಗಿಲ್ಲ ಎಂಬ ಪ್ರಶ್ನೆ ಈ ಸಾಲುಗಳ ಹಿಂದೆ ಅಡಕವಾಗಿರುವುದನ್ನು ಗುರುತಿಸಬಹುದು. ಮುಂದುವರಿದು ಈ ಕವನ ಸಿದ್ಧಾರ್ಥ ಬುದ್ಧನಾಗುವ ಸಂದರ್ಭದಲ್ಲಿ ಎದುರಿಸಿದ ಸವಾಲು ಸಂಕಷ್ಟಗಳನ್ನು ಹಿಡಿದಿಡುತ್ತಲೇ ಸಿದ್ಧಾರ್ಥ ಬುದ್ಧನಾಗಲು ಸಾಗಿದ ಹಾದಿ ಸುಲಭವಾದದ್ದಲ್ಲ ಎಂಬುದನ್ನು ಮನವರಿಕೆ ಮಾಡಿಕೊಡಲು ಪ್ರಯತ್ನಿಸುತ್ತದೆ. ಸಿದ್ಧಾರ್ಥ ಬುದ್ಧನಾಗುವ ದಾರಿಯಲ್ಲಿ ಹಲವು ಸಂಕಷ್ಟಗಳನ್ನು, ಆಂತರಿಕ ಸಂಘರ್ಷ, ತಳಮಳಗಳನ್ನು ಅನುಭವಿಸಿದ. ಈ ಪ್ರಾಪಂಚಿಕ ಸತ್ಯಗಳನ್ನು ಅರಿಯುವ ಆತನೊಳಗಿನ ಆಂತರಿಕ ತುಡಿತವೇ ಅವನನ್ನು ಬುದ್ಧನನ್ನಾಗಿಸಿತು. ಇದನ್ನು 'ಆಂತರಿಕ ಉರಿ' ಎಂದು ಗುರುತಿಸಬಹುದು. ಬುದ್ಧನನ್ನು ಕಾಡಿದ ಈ 'ಉರಿ' ಮತ್ತು ಸಂಘರ್ಷಗಳು ಇಂದು ಹಲವು ಸಮಸ್ಯೆ, ವೈರುಧ್ಯ ಸನ್ನಿವೇಶಗಳಲ್ಲಿ ಬದುಕುತ್ತಿರುವ ವ್ಯಕ್ತಿಗೆ ತೀವ್ರ ಜಿಜ್ಞಾಸೆಯಾಗಿ ಕಾಡುತ್ತಿಲ್ಲ. ಏಕೆಂದರೆ ಆಧುನಿಕ ಮನುಷ್ಯನಿಗೆ ತನ್ನ ಬದುಕಿನ ಬಗೆಗೇ, ತನ್ನ ವ್ಯಕ್ತಿತ್ವದ ಬಗೆಗೆ ನಿರ್ದಿಷ್ಟತೆಗಳಿಲ್ಲ ಹಾಗೂ ಸ್ಪಷ್ಟತೆಗಳಿಲ್ಲ. ಹಾಗಾಗಿ ಕಾಳಜಿವಹಿಸಲಾಗದಂತ ವಿಸ್ಮೃತಿಗೊಳಗಾದ ಸನ್ನಿವೇಶದಲ್ಲಿ ನಾವು ಬದುಕುತ್ತಿದ್ದೇವೆ ಎಂಬ ವಿಷಾದ ಭಾವನೆ ಕವಿಯದು. ಬುದ್ಧನಂತೆಯೇ ಲೇಖಕನ ಒಳಗೂ ಒಂದು 'ಉರಿ' ಇದೆಯಾದರೂ ಅದು ಬುದ್ಧತ್ವಕ್ಕೇರುವ ಬದ್ಧತೆಯ ಉರಿಯಲ್ಲ. ಬದುಕಿನ ಚೆಲುವು-ಒಲವನ್ನು ಕಂಡುಕೊಳ್ಳುವ ಮನುಷ್ಯ ಸಹಜ ಸೌಂದರ್ಯಪ್ರಜ್ಞೆಯನ್ನೂ, ವಿವೇಕವನ್ನೂ ಕಳೆದುಕೊಂಡ ಅತಂತ್ರ ಸ್ಥಿತಿಯ ಉರಿ. ಕವಿ ಇಂತಹ ಸಂದಿಗ್ಧ ಸನ್ನಿವೇಶವನ್ನು ತನ್ನ ಬದುಕಿನ ಅತಂತ್ರ ಸ್ಥಿತಿಯ ಮೂಲಕ ಹಿಡಿದಿಡಲು ಪ್ರಯತ್ನಿಸುತ್ತಾರೆ. ಆಧುನಿಕ ಮನುಷ್ಯನ ಬುದ್ಧನಾಗುವ ಪ್ರಯತ್ನಗಳ ಹಿಂದಿನ ಸೋಗಲಾಡಿತನಗಳ ವಿಡಂಬನೆ ಇಲ್ಲಿ ನಡೆದಿದೆ.

ಆರು ಎಂಟರ ನನ್ನ ರೂಮೊಂದು ಅಗ್ನಿಕುಂಡ
ನಡುವಿಗಿದೆ ತಕತಕನೆ ಕುದಿಯುವೆಣ್ಣೆ ತುಂಬಿತದ ಮಣ್ಣಿನೆದೆ ಮಡಕೆ
ಯಾವ ಕೈಯ್ಯೋ ಕಾಣೆ ಸರ್ವೆ ಸೌದೆಯನ್ನೂಡಿ ಊದುಗೊಳವಿ ಹಿಡಿದು ಗಾಳಿಯೂದುತ್ತಿದೆ
ಎಂದಿಗೂ ಆರದೇನೋ ಈ ಕೆಂಪು ಕೆಂಡ

ಹಿಂದೊಮ್ಮೆ ನೂರು ಸೂರ್ಯರ ತಾಪದೆದುರು ಎದೆ ಚಾಚಿ ನಡೆದಿದ್ದ
ಬಿರುದೆಂತೆಂಬರ ಗಂಡ!
ನಾನೀಗ ನಾಟಕದ ದೊರೆ,
ಎಂದೋ ಬಿದ್ದು ಕೊನೆಯ ತೆರೆ
ನನ್ನ ಪಾಲಿಗೆ ಜೀತದಾಳೂ ಪುಂಡ.
ಕಿಟಕಿಯಾಚೆಯ ನೀಲಿ ನೆಮ್ಮದಿಗೆ ಹಾಲು ಬೆಳದಿಂಗಳಿಗೆ ಬೆಂಕಿ ಹಚ್ಚು!
ಏನಿದೆಂತಹ ಹುಚ್ಚು?
ಎದೆಯ ಹುಣ್ಣಿಗೆ ಮದ್ದೆ ಗಿಡಕ್ಕೆ ಬೀಸಿದ ಮಚ್ಚು?
ಹುಳಕಡ್ಡಿ ಕಡಿತಕ್ಕೆ ಪರಿಹಾರವೇ ಮಗುವ ಮೇಲಿನ ಸಿಟ್ಟು?
ಇನ್ನಷ್ಟು ನೋವು ಹೆರಿಗರುಳಿಗೆ [೬೨]

ಈ ಸಾಲುಗಳು ಆಧುನಿಕ ಮನುಷ್ಯ ಮತ್ತು ಬುದ್ಧನ ವ್ಯಕ್ತಿತ್ವದ ನಡುವಿನ ವೈರುಧ್ಯಗಳನ್ನು ಸ್ವವಿಮರ್ಶೆಯ ಮೂಲಕ ವಿಡಂಬನೆಗೊಳಪಡಿಸುತ್ತವೆ. ಬದುಕಿನ ಸಂಕಷ್ಟಗಳು ಎಲ್ಲರಿಗೂ, ಎಲ್ಲ ಕಾಲದಲ್ಲೂ ಇರುವುದು ಸಾಮಾನ್ಯವಾದರೂ ಬುದ್ಧ ಅದನ್ನು ಮೀರಿದ ಬಗೆಯನ್ನು ಅದು ತಮಗೆ ಸಾಧ್ಯವಾಗದೇ ಇರುವುದಕ್ಕೆ ಕಾರಣಗಳನ್ನು ಹುಡುಕುತ್ತವೆ. ಬುದ್ಧ ಮತ್ತು ತಾವು ಇಬ್ಬರ ನಡುವೆಯೂ ಒಂದು 'ಆಂತರಿಕ ಉರಿ' ಇದೆ. ಆದರೆ ಈ ಉರಿಯ ತೀವ್ರತೆ, ಕಾಳಜಿಗಳು ಭಿನ್ನವಾಗಿವೆ. ಮನಸ್ಸನ್ನು ನಿಯಂತ್ರಿಸುವ ಎಲ್ಲ ವ್ಯಾಮೋಹಗಳನ್ನೂ ಗೆಲ್ಲುವ ತೀವ್ರತೆಯಿಂದುಂಟಾದ 'ಉರಿ' ಬುದ್ಧನದು. ಅದು ಸ್ವತಂತ್ರನಾಗುವ ಹಂಬಲದ್ದು. ಆದರೆ ಸಾಮಾನ್ಯ ಮನುಷ್ಯನದ್ದು ಕ್ಷುದ್ರ ಬಯಕೆಗಳಿಗೆ ಕುದಿವ, ಯಾರದೋ ಕೈಗೊಂಬೆಯಾಗಿ, ಅತಂತ್ರವಾಗಿ ಬದುಕುವ ಸ್ಥಿತಿ. ತನ್ನ ಬದುಕಿನ ಗೊತ್ತುಗುರಿಗಳೇ ಅಸ್ಪಷ್ಟವಾಗಿರುವ ಸ್ಥಿತಿ. "ತಕತಕನೆ ಕುದಿಯುವೆಣ್ಣೆ ತುಂಬಿದ ಮಣ್ಣಿನೆದೆ ಮಡಕೆ, ಯಾವ ಕೈಯೋ ಕಾಣೆ ಸರ್ವೆ ಸೌದೆಯನೊಡ್ಡಿ ಊದುಗೊಳವಿ ಹಿಡಿದು ಗಾಳಿಯೂದುತ್ತಿದೆ." ಎಂಬ ಸಾಲುಗಳು ಆಧುನಿಕ ಮನುಷ್ಯ ಬದುಕುತ್ತಿರುವ ಸನ್ನಿವೇಶದ ಸಂಧಿಗ್ಧತೆಯನ್ನೂ, ಅವನ ಮುಂದಿರುವ ಸವಾಲುಗಳನ್ನೂ ಸಮರ್ಥವಾಗಿ ಧ್ವನಿಸುತ್ತವೆ. ಮನುಷ್ಯ ಇಂದು ತನ್ನ ಹಾಗೂ ಎದುರಿಗಿನ ಬದುಕಿನ ಚೆಲುವನ್ನು ಕಾಣುವ, ಅದನ್ನು ಕುರಿತು ಯೋಚಿಸುವ ಸಮಯ, ತಾಳ್ಮೆ, ವಿವೇಕ ಎಲ್ಲವನ್ನೂ ಕಳೆದುಕೊಂಡಿದ್ದಾನೆ. ಆದರೆ ತನ್ನ ಸುತ್ತ ಹಣೆದುಕೊಂಡಿರುವ ಇಂತಹ ವ್ಯಾಮೋಹಗಳನ್ನು ತೊರೆಯುವ, ಅದರಿಂದ ಬಿಡುಗಡೆ ಪಡೆಯುವ ಯಾವ ಗಟ್ಟಿ ನಿಲುವೂ ಕೂಡ ಈತನಲ್ಲಿ ಕಂಡು ಬರುತ್ತಿಲ್ಲ. ಹಾಗಾಗಿ ಆಧುನಿಕ ಮನುಷ್ಯನಿಗೆ ತನ್ನನ್ನು ಸುತ್ತುವರಿದ ವ್ಯಾಮೋಹಗಳ ಬಗೆಗಿನ ಮೋಹ ಬಿಡಿಸಲಾಗದಷ್ಟು ತೀವ್ರವಾಗಿರುವುದನ್ನು ಈ ಕವಿತೆ ಧ್ವನಿಸುತ್ತದೆ. ಬುದ್ಧನಾಗುವ ಈತನ ಹಂಬಲ ತೋರಿಕೆಯದ್ದು. ಈತ ಈಗ ನಾಟಕದ ದೊರೆಯಾಗಿದ್ದಾನೆ. ಚೆಲುವು ಒಲವನ್ನು ಕಾಣುವ ಹಾಗೂ ತನ್ನದಾಗಿಸಿಕೊಳ್ಳುವ ಯಾವ ಹಂಬಲಗಳೂ ಇವನಲ್ಲಿ ತೀವ್ರವಾಗಿಲ್ಲ. ಅದಕ್ಕಾಗಿ ಮಾಡಬೇಕಾಗಿರುವ ತ್ಯಾಗಗಳು ಅರ್ಥಹೀನವಾಗಿ ಕಾಣುತ್ತವೆ. ಈ ನಿಟ್ಟಿನಲ್ಲಿ ಬುದ್ಧನಿಗೂ ತನಗೂ ಇರುವ ಮನಸ್ಥಿತಿಯ ಅಂತರವನ್ನು ಕವಿತೆಯ ಈ ಸಾಲುಗಳು ಹಿಡಿದಿಡುತ್ತವೆ.

ಮನುಷ್ಯನ ಇಬ್ಬಂದಿತನಕ್ಕೆ, ಯಾವುದನ್ನೂ ಒಪ್ಪಿಕೊಳ್ಳಲಾಗದ ಎಡಬಿಡಂಗಿತನಕ್ಕೆ ಕಾರಣಗಳೂ ಇಲ್ಲದಿಲ್ಲ. ಯೌವ್ವನದ ಮದ, ಅಹಂಕಾರ, ಹಣ, ಅಧಿಕಾರದ ಅಮಲು ಎದುರಿಗಿರುವ ಸಮಸ್ಯೆಗಳ ಬಗೆಗೆ ಕುರುಡಾಗಿಸಿವೆ. ಹಾಗಾಗಿ ಮನುಷ್ಯ ತನ್ನೆದುರಿಗೆ ಎಂತಹ ಸಮಸ್ಯೆ, ಸವಾಲುಗಳಿದ್ದರೂ ಅವುಗಳನ್ನು ತನ್ನ ಜಿಜ್ಞಾಸೆಯ ಪ್ರೇರಣೆಗಳನ್ನಾಗಿಸಿಕೊಳ್ಳದೆ ಕೇವಲ ಸ್ವಾರ್ಥಪರ ಚಿಂತನೆ, ಆಲೋಚನೆಗಳಲ್ಲಿ ಮಗ್ನನಾಗಿದ್ದಾನೆ. ಕೊನೆಗೆ ಅವನ ಅತಂತ್ರ ಸ್ಥಿತಿ ಅವನೊಳಗೆ ಹುಡುಕಾಟದ ತೀವ್ರತೆಯನ್ನು ಹುಟ್ಟುಹಾಕುತ್ತದೆ. ಅದಕ್ಕೆ

ಪರಿಹಾರಗಳನ್ನು ಕಂಡುಕೊಳ್ಳುತ್ತಿರುವ ಬಗೆಯನ್ನು ರಾಮಚಂದ್ರ ಶರ್ಮ ಗುರುತಿಸಲು ಪ್ರಯತ್ನಿಸುತ್ತಾರೆ. ಮಾನವ ತನ್ನ ಬದುಕಿನ ಸಮಸ್ಯೆಗಳಿಂದ ಬಿಡುಗಡೆ ಪಡೆಯಲು, ಸುಖ-ನೆಮ್ಮದಿಯನ್ನು ಪಡೆಯಲು ಹಲವು ಮಾರ್ಗಗಳಲ್ಲಿ ಪ್ರಯತ್ನಿಸುತ್ತಾನೆ. ಹೀಗೆ ತನ್ನ ದುಃಖಕ್ಕೆ ಮೂಲವನ್ನು ಅರಿಯಲು ಹೊರಟವನಿಗೆ ಹಲವು ಜನರು ಹಲವು ಮಾರ್ಗಗಳನ್ನು ತೋರುತ್ತಾರೆ. ಒಬ್ಬೊಬ್ಬರದ್ದೂ ಒಂದೊಂದು ಮಾರ್ಗ. ಹಲವು ಧರ್ಮಗಳೂ, ಧರ್ಮ ಪ್ರತಿಪಾದಕರೂ ತಮ್ಮದೇ ಆದ ನೆಲೆಯಲ್ಲಿ ಬದುಕನ್ನು ಸಾರ್ಥಕಗೊಳಿಸಿಕೊಳ್ಳಬಹುದಾದ ಬೋಧೆಗಳನ್ನು ನೀಡುತ್ತಾರೆ. ಆದರೆ ಅವೆಲ್ಲವೂ ಅವನನ್ನು ಮತ್ತಷ್ಟು ಅಜ್ಞಾನದಲ್ಲಿ ದೂಡುವ ಮಾರ್ಗಗಳೇ ಆಗಿದ್ದವು. ಸ್ವರ್ಗವನ್ನು ಹುಡುಕಿಕೊಂಡು ನೆಲವನ್ನು ತೊರೆದು ಅಗೋಚರ, ಅಮೂರ್ತದೆಡೆಗೆ ಪಯಣಿಸುವ ಮಾರ್ಗಗಳನ್ನೇ ಅವರೆಲ್ಲ ಬೋಧಿಸುತ್ತಿದ್ದರು. ಆದರೆ ಬುದ್ಧ ಮಾತ್ರ ನೆಲಕ್ಕಿಳಿದು ಬರಲಿರುವ ಸ್ವರ್ಗದಚ್ಚರಿಯ ಬಗ್ಗೆ ಮಾತನಾಡಿದ. ಹಿಂಸೆ ದುಃಖಗಳನ್ನು ಗೆದ್ದು ಶಾಂತಿಯನ್ನು ಕಾಣಬಹುದಾದ ವಾಸ್ತವದ ಅರಿವನ್ನು ಬೋಧಿಸಿದ ಎನ್ನುವ ಮೂಲಕ ಮನುಷ್ಯನ ನೆಮ್ಮದಿ-ಸುಖಗಳನ್ನು ಕಾಣುವ ಹಂಬಲವನ್ನು ತಣಿಸುವ ಸರಿಯಾದ ಮಾರ್ಗವನ್ನು ತೋರುವ ಏಕೈಕ ಮಾರ್ಗವಾಗಿ ಬದ್ಧನನ್ನು ಗುರುತಿಸುತ್ತಾರೆ. ಆಧುನಿಕ ಮನುಷ್ಯನೊಂದಿಗೆ ಬುದ್ಧ ಹಾಗೂ ಅವನ ಚಿಂತನೆಗಳು ಅನುಸಂಧಾನಗೊಳ್ಳುತ್ತಿರುವ ಬಗೆಯನ್ನು ವಿಮರ್ಶೆಗೆ ಒಳಗುಮಾಡುತ್ತಲೇ ಸರಿಯಾದ ಮಾರ್ಗವನ್ನೂ ತೋರಿಸಲಾಗುತ್ತಿದೆ. ಪ್ರಾಪಂಚಿಕ ಸತ್ಯಗಳನ್ನು ಅರಿತ, ಜ್ಞಾನದ ವಿಕಾಸದ ಸ್ಥಿತಿಯಲ್ಲಿ ಬದ್ಧನನ್ನು ಕಂಡುಕೊಳ್ಳಬೇಕಾಗಿದ್ದ ಆಧುನಿಕ ಮನುಷ್ಯ ಬುದ್ಧನನ್ನು 'ಪೊರೆಯುವ ದೈವ'ವಾಗಿಯೇ ನೋಡುತ್ತಿದ್ದಾನೆ. ಎಂಥ ದಾರ್ಶನಿಕ ವ್ಯಕ್ತಿಯನ್ನು, ವಿಚಾರಗಳನ್ನು ದೈವವಾಗಿಯೇ ನೋಡುವ ಮನುಷ್ಯ ಪ್ರಜ್ಞೆಯನ್ನು ಕವನ ವಿಡಂಬನಾತ್ಮಕವಾಗಿ ನೋಡುತ್ತದೆ. ತಾನು ಅಜ್ಞಾನದಲ್ಲಿಯೇ ಇರಲು ಬಯಸಿ, ತನ್ನನ್ನು ಉದ್ಧರಿಸುವ, ನಿಯಂತ್ರಿಸುವ ಶಕ್ತಿಯೊಂದಿದೆ ಎಂಬ ಗಾಢನಂಬಿಕೆಯನ್ನೇ ಮುಂದುಮಾಡಿ ಬದುಕುವ ಆಧುನಿಕ ಮನುಷ್ಯನ ಅಧೀನ ಸ್ಥಿತಿಯನ್ನು ಈ ಕವನದಲ್ಲಿ ಕಾಣಬಹುದು.

ಕವನದ ಮುಂದಿನ ಭಾಗ ಬುದ್ಧನಿಗೆ ಮನುಷ್ಯನ ದುಃಖಗಳಿಗೆ ಕಾರಣಗಳನ್ನು ತಿಳಿಯುವ ದಾಹ ಉಂಟಾದ ಸ್ಥಿತಿಯನ್ನೂ, ಅವನೊಳಗಿನ ತಳಮಳದ ಸ್ಥಿತಿಗಳನ್ನು ಹೇಳುತ್ತಲೇ ಆ ಉರಿ, ತಳಮಳಗಳು ತನ್ನಲ್ಲೂ ಅರಿಯುವ ತೀವ್ರತೆಯನ್ನು ಹುಟ್ಟು ಹಾಕಿ ಅಂತಿಮವಾಗಿ ನೈಜಮಾರ್ಗವನ್ನು ಕಂಡುಕೊಳ್ಳಲು ನೆರವಾದ ಬಗೆಯನ್ನು ಹೇಳುತ್ತದೆ. ಆಧುನಿಕ ಮಾನವ ತನ್ನ ಗೊಂದಲ, ತಳಮಳ, ಅತಂತ್ರ ಸ್ಥಿತಿಯಲ್ಲಿ; ನಿಜವಾದ ಶಾಂತಿ, ಸಾಂತ್ವಾನ ನೀಡುವ ಕರುಣೆಯ ಕೈಯಾಗಿ ಬುದ್ಧನ ಮಾರ್ಗವನ್ನು ಕಂಡುಕೊಂಡರೂ, ಬುದ್ಧನೆನ್ನುವವನು ಆತನೊಳಗಿನ ಅರಿವಾಗಿ ಮೂಡಿಬರಲಿಲ್ಲ. ಬದಲಾಗಿ ಪ್ರತಿಮೆಯಾಗಿ ಮನೆಗೆ ಬರುತ್ತಾನೆ. ಇದನ್ನು ಕವಿತೆಯ ಮುಂದಿನ ಸಾಲುಗಳು ಧ್ವನಿಸುವುದನ್ನು ನೋಡಬಹುದು

ಒಂದು ವರ್ಷದ ಹಿಂದೆ
ವೈಶಾಖ ಪೂರ್ಣಿಮೆಯ ಬೆಳಕಾಗಿ ನೀ ಬಂದೆ.
ಆಕಾಶದ ನೀಲಿ ಆಗ ನೆಲಕ್ಕಿಳಿದು
ನನ್ನ ತಲೆ ನೇವರಿಸಿತ್ತು
ಸಾಂತ್ವಾನದ ಮಾತಾಡಿತು.
ಮಾರನೆಯ ಬೆಳಗ್ಗೆ ಮಾರುಕಟ್ಟೆಗೆ ಹೋದೆ,
ನಿನ್ನ ಪ್ರತಿಮೆಯೊಂದನ್ನು ಕೊಂಡು ತಂದೆ. ೬೩

ಬದುಕಿನ ದುರಂತ ಸ್ಥಿತಿಗಳು ಬುದ್ಧನಲ್ಲಿ ಬದುಕಿನ ಅರ್ಥಗಳನ್ನು ಹುಡುಕುವ ತೀವ್ರ 'ಉರಿ'ಯನ್ನು ಹುಟ್ಟುಹಾಕಿ ಅಂತಿಮವಾಗಿ ಒಂದು ಉತ್ತಮ ಮಾರ್ಗವನ್ನು ಕಂಡುಕೊಂಡನಾದರೂ ಅದನ್ನು ಅದರ ಮೂಲ ಆಶಯಗಳಲ್ಲಿ

ಗ್ರಹಿಸುವಲ್ಲಿ, ಪಾಲಿಸುವಲ್ಲಿ ವಿಫಲನಾದ ವ್ಯಕ್ತಿಯ ಸ್ಥಿತಿಯನ್ನು ಈ ಕವಿತೆ ಆತ್ಮ ವಿಮರ್ಶೆಗೆ ಒಡ್ಡುತ್ತದೆ. ಬುದ್ಧನ ವಿಚಾರಗಳು ಆಕರ್ಷಿಸಿದರೂ ಬುದ್ಧನನ್ನು ಮನೆಗೆ ತಂದುಕೊಳ್ಳುತ್ತಿರುವುದು 'ಬೆಳಕಾಗಿ' ಅಲ್ಲ ಪ್ರತಿಮೆಯಾಗಿ. ಈ ಪ್ರತಿಮೆ ಮೇಜ ಮೇಲಿದ್ದು ಪ್ರತಿದಿನವೂ ಆತನ ಆತ್ಮಸಾಕ್ಷಿಯನ್ನು ಕೆಣಕಿದರೂ ಅವನೊಳಗಿನ ಅರಿವಾಗಲು ಸಾಧ್ಯವಾಗಲಿಲ್ಲ. ಅವನು ಪ್ರತಿದಿನ 'ಬುದ್ಧ'ನಾಗಲು ಹೊರಟಿದ್ದಾನೆ. ಆದರೆ ಸಿದ್ಧಾರ್ಥನ ಸ್ಥಿತಿಯನ್ನು ಕಳೆದುಕೊಳ್ಳದ ಹೊರತು ಬದ್ಧನಾಗಲು ಸಾಧ್ಯವಿಲ್ಲ. ತನ್ನೊಳಗಿನ ಸಿದ್ಧಾರ್ಥನ ಸ್ಥಿತಿಯನ್ನು ಕಳೆದುಕೊಳ್ಳುವ ತೀವ್ರವಾದ ಉರಿ ಆತನೊಳಗೆ ಇಲ್ಲ. ಹಾಗಾಗಿಯೇ ಆತ ಇನ್ನೂ ಸಿದ್ಧಾರ್ಥನಾಗಿಯೇ ಉಳಿದಿದ್ದಾನೆ.

ಕಾಡುತ್ತಿದ್ದ ಅಷ್ಟು ಅಷ್ಟು ದೆವ್ವಗಳ ಕೊಡವಿ
ಮೇಲೆದ್ದು ಹೆಬ್ಬಾಗಿಲತ್ತ ನುಗ್ಗಿದ್ದೆ
ನಾನು ಹೊಸ್ತಿಲನ್ನೆಡವಿ
ಗಕ್ಕನೆ ನಿಂತು ಹಿನ್ನೋಟವೆಸೆದ
ಎಂದಿನ ಹಾಗೆ
ಮೇಜ ಮೇಲಿನ ಬುದ್ಧ
ನಗುತ್ತಲಿದ್ದ

ಬುದ್ಧನಾಗುವ ಆಧುನಿಕ ಮನುಷ್ಯರ ಎಲ್ಲಾ ಪ್ರಯತ್ನಗಳು ಹೊಸ್ತಿಲ ಒಳಗೇ ಇವೆ. ಹೊಸ್ತಿಲನ್ನು ದಾಟುವ ದೃಢತೆ, ತೀವ್ರತೆ, ಧೈರ್ಯಗಳು ಅವರಲ್ಲಿ ಗಾಢವಾಗಿ ಇಲ್ಲ. ಬುದ್ಧನಾಗುವ ಮಾರ್ಗದ ಕಷ್ಟಗಳನ್ನು ಹೇಳುತ್ತಲೇ ಬುದ್ಧನಾಗಲಾಗದ ಸಣ್ಣತನಗಳನ್ನು ಹೇಳುತ್ತದೆ. ಬುದ್ಧನಿಗಿದ್ದ ತಿಳಿಯುವ ಉರಿ, ದಾಹ, ಅದನ್ನು ಪಡೆಯಲು ಎಲ್ಲವನ್ನೂ ತೊರೆದು ಹೋದ ಆತನ ದಿಟ್ಟತನ, ಜ್ಞಾನವನ್ನು ಪಡೆಯುವ ಆತನ ತೀವ್ರ ತುಡಿತಗಳು ನಮಗಿಲ್ಲ. ಹಾಗಾಗಿ ಇಂದು ನಾವು ಗೊಂದಲದಲ್ಲಿದ್ದೇವೆ. ನಮಗೆ ನಾವೆ ಅಸ್ಪಷ್ಟವಾಗಿದ್ದೇವೆ. 'ಮೇಜ ಮೇಲಿನ ಬುದ್ಧ' ನಮ್ಮ ಆತ್ಮಸಾಕ್ಷಿಯನ್ನು ಕೆಣಕುವವನಾಗಿದ್ದಾನೆ ಎನ್ನುತ್ತಾರೆ ರಾಮಚಂದ್ರ ಶರ್ಮ. ಬುದ್ಧನಾಗುವ ಕಷ್ಟ, ಸಂಕಟ ಬುದ್ಧನಾಗಲು ಬಿಡದ ಆಧುನಿಕ ಬದುಕಿನ ಜಂಜಡಗಳನ್ನೂ, ಬುದ್ಧನಾಗುವ ಆಂತರಿಕ 'ಉರಿ' ಇಲ್ಲದ ಪೇಲವ ವ್ಯಕ್ತಿತ್ವಗಳನ್ನು ಕವಿತೆ ವಿಮರ್ಶೆಗೊಡ್ಡುತ್ತದೆ. ಇದು ಕವಿತೆಯ ನಾಯಕನ ಸಮಸ್ಯೆಯಾಗಿರದೆ ಆಧುನಿಕ ಮನುಷ್ಯನ ಸಮಸ್ಯೆಯಾಗಿಯೂ ಧ್ವನಿತವಾಗುತ್ತಿರುವುದು ವಿಶೇಷ. ದುಃಖ, ಹಿಂಸೆ, ಮುಂತಾದ ಬದುಕಿನ ಸಮಸ್ಯೆಗಳಿಂದ ಬಿಡುಗಡೆ ಹೊಂದಲು ಎಷ್ಟೆಲ್ಲ ಒದ್ದಾಡುತ್ತಿದ್ದರೂ ಆಧುನಿಕ ಮನುಷ್ಯನಿಗೆ ಬುದ್ಧನ ಪ್ರತಿಪಾದನೆಗಳು ಮತ್ತು ಆತನ ಹಾದಿ, ಆಂತರಿಕ ಬೆಳಕಾಗಿ ಬೆಳಗಲೇ ಇಲ್ಲ ಎಂಬುದನ್ನು ಕವಿತೆ ಹೇಳುತ್ತದೆ.

ಚಂದ್ರಶೇಖರ ಪಾಟೀಲರ 'ಬುದ್ಧನೂ ನಾನು' ಕವಿತೆ ಬುದ್ಧ ಮತ್ತು ತನ್ನ ನಡುವೆ ಇರುವ ತುಡಿತಗಳ ಅಂತರವನ್ನು ಸ್ವವಿಮರ್ಶೆಗೆ ಒಡ್ಡುತ್ತದೆ. ಈ ಕವನ ಲೌಕಿಕ ವ್ಯಾಮೋಹಗಳಲ್ಲಿ ಮುಳುಗಿ ಹೋಗಿರುವ ಆಧುನಿಕ ಸಂದರ್ಭದಲ್ಲಿ ಲೇಖಕ ತನ್ನ ಅಂತರಂಗದಲ್ಲಿ ಅಡಕವಾಗಿರುವ ಸಿದ್ಧಾರ್ಥನ ಸ್ಥಿತಿಯನ್ನು ಗುರುತಿಸಿಕೊಳ್ಳುತ್ತಲೇ ಬುದ್ಧನಾಗುವ ಬಯಕೆಯನ್ನು ವ್ಯಕ್ತಪಡಿಸುತ್ತಾರೆ. ಆದರೆ ಅವನಿಗೆ ಬುದ್ಧನಾಗುವ ಪ್ರೇರಣೆಗಳಾಗಲೀ, ತೀವ್ರತೆಯಾಗಲೀ, ಜರೂರಿಯಾಗಲೀ ಅಷ್ಟು ತೀವ್ರವಾಗಿ ಕಾಡಿದಂತೆ ಕಂಡುಬರುತ್ತಿಲ್ಲ. ಅದಕ್ಕೆ ಕಾರಣಗಳೂ ಕೂಡ ಸಾಕಷ್ಟಿವೆ. ಇದು ಕಾಲದ ಒತ್ತಡವೂ ಹೌದು. ಬುದ್ಧನಾಗುವ ವ್ಯಕ್ತಿಯ ಬಯಕೆ ಆಂತರಿಕ ತೀವ್ರತೆಯನ್ನು ಕಳೆದುಕೊಂಡ ಸೋಗಲಾಡಿತನದ್ದು. ಹಾಗಾಗಿ ಬದುಕಿನ ಕ್ಷುದ್ರ ವ್ಯಾಮೋಹಗಳಲ್ಲೇ ಕಣ್ಣುನೆಟ್ಟು ನಿಂತ ವ್ಯಕ್ತಿತ್ವವೊಂದು ಬುದ್ಧನಾಗಲು ಹೇಗೆ ಸಾಧ್ಯ ಎಂಬ ಪ್ರಶ್ನೆ, ಅದರೊಂದಿಗೆ ಬುದ್ಧನಾಗಲಾರದ ಸ್ಥಿತಿಯನ್ನು ಕುರಿತಾದ ವಿಡಂಬನೆ ಈ ಕವನದಲ್ಲಿದೆ. 'ಆಗಲಾರೆನೆ ನಾನು ಮತ್ತೊಬ್ಬ ಬುದ್ಧ' ಎನ್ನುವ ಸಾಲು ಬುದ್ಧನಾಗುವುದೆಂದರೆ 'ಬುದ್ಧತ್ವ'ಕ್ಕೇರುವುದಕ್ಕಿಂತ ಮನೆ ಮಠಗಳನ್ನು ತೊರೆಯುವುದು ಎಂಬ ಸಾಮಾನ್ಯಾರ್ಥದ

ಗ್ರಹಿಕೆಯಾಗಿ ನಿಂತುಬಿಡುತ್ತದೆ. ಹಾಗಾಗಿ ಇದು ಬುದ್ಧನನ್ನು ಗ್ರಹಿಸುವಿಕೆಯ ಮಿತಿಯೂ ಕೂಡ ಹೌದು. ಆದರೆ ಹೆಚ್ಚಿನ ಸಂದರ್ಭದಲ್ಲಿ 'ಬುದ್ಧ' ಅರಿಯುವಿಕೆಗಿಂತ ತೊರೆಯುವಿಕೆಯ ಪ್ರತಿಮೆಯಾಗಿ ರೂಪುಗೊಂಡಿರುವುದು ದುರಾದೃಷ್ಟವೇ ಸರಿ. ಮುಂದುವರೆದು ಬುದ್ಧನಾಗುವ ಬಯಕೆ ವ್ಯಕ್ತಿಯ ಆಂತರಿಕ ಒತ್ತಡದಿಂದ ಹುಟ್ಟಿದುದಲ್ಲ ಎಂಬುದನ್ನು ಹೇಳುತ್ತಲೇ, ಆ ವ್ಯಕ್ತಿತ್ವದ ಸಣ್ಣತನ, ದುರ್ಬಲತೆಯನ್ನು ಹಿಡಿದಿಡಲು ಪ್ರಯತ್ನಿಸುತ್ತದೆ. ಪ್ರಸ್ತುತ ಸನ್ನಿವೇಶದಲ್ಲಿ ಬುದ್ಧನಾಗಬಯಸುವ ವ್ಯಕ್ತಿ ತನಗೆ ಯಾರ ಸ್ಫೂರ್ತಿ, ಪ್ರೇರಣೆಗಳೂ ಬೇಡ ಎಂದು ತಿರಸ್ಕರಿಸುವ, ತಾನು ಪ್ರಬುದ್ಧನೆನ್ನುವ ಅಹಂಕಾರಿಯಾಗಿದ್ದಾನೆ. ಬುದ್ಧನಾಗುವ ದಾರಿಯನ್ನು ಸರಳವಾಗಿ ಗ್ರಹಿಸಿದ್ದಾನೆ. ಆದರೆ ಅಂತಿಮವಾಗಿ ಬುದ್ಧನಾಗುವ ಕಷ್ಟವನ್ನೂ, ಅದರ ಸಂಕಟವನ್ನೂ ಅರಿತು ಬುದ್ಧನಾಗುವ ಜರೂರಿ ಏನಿದೆ? ಎಂದು ಪ್ರಶ್ನಿಸಿಕೊಳ್ಳುವ ಸ್ಥಿತಿಗೆ ಬಂದು ನಿಲ್ಲುತ್ತಾನೆ. ತನ್ನನ್ನು ಸುತ್ತುವರಿದಿರುವ ವ್ಯಾಮೋಹಗಳಿಂದ ಬಿಡಿಸಿಕೊಳ್ಳಲಾಗದ, ಅದರಲ್ಲೇ ಮುಳುಗಿ ಹೋದ ತನ್ನ ಅಜ್ಞಾನದ ಸ್ಥಿತಿಯನ್ನೂ, ಅದನ್ನು ಸಮರ್ಥಿಸುವ ಹೀನಸ್ಥಿತಿಗಿಳಿದಿರುವುದನ್ನು ಈ ಕವಿತೆ ತೀವ್ರ ವಿಮರ್ಶೆಗೆ ಒಡ್ಡುತ್ತದೆ. ತಾನು ಬುದ್ಧನಾಗಲಾರದೆ ಸಿದ್ಧಾರ್ಥನಾಗಿಯೇ ಉಳಿದಿರುವುದಕ್ಕೆ ಕಾರಣಗಳನ್ನು ಬುದ್ಧ ಮತ್ತು ತನ್ನ ಹೋಲಿಕೆಗಳೊಂದಿಗೆ ವಿಮರ್ಶಿಸಿಕೊಳ್ಳುವ ವ್ಯಕ್ತಿ ತನ್ನ ವ್ಯಕ್ತಿತ್ವದ ಹೀನಸ್ಥಿತಿಯನ್ನು, ತನ್ನ ಇರುವಿಕೆಯನ್ನು ಸಮರ್ಥಿಸಿಕೊಳ್ಳುವುದನ್ನು, ತನ್ನ ಬಂಡತನವನ್ನೂ ಒರೆಗೆ ಹಚ್ಚಿ ನೋಡಿಕೊಳ್ಳಲಾಗುತ್ತಿದೆ. ಇಲ್ಲಿ ಲೇಖಕ ತಾನು ಬುದ್ಧನಾಗದಿರಲು ಕೊಡುತ್ತಿರುವ ಕಾರಣಗಳು ಆಧುನಿಕ ಬದುಕಿನ ಒತ್ತಡಗಳಿಂದ ಬಂದಂತವುಗಳು. ಬುದ್ಧನಾಗುವುದು, ಎಲ್ಲವನ್ನು ತೊರೆಯುವುದು, ತನ್ನೊಳಗನ್ನು ಅರಿಯುವುದು ಅಷ್ಟು ಸುಲಭವೂ ಅಲ್ಲ. ಅಂಥ ವಾತಾವರಣ ಆಧುನಿಕ ಜಗತ್ತಿನಲ್ಲೂ ಇಲ್ಲ ಎಂಬುದನ್ನು ಈ ಕವಿತೆ ಹೇಳುತ್ತದೆ.

ಈ ಯಶೋಧರೆ.........
ಇವಳು ನನ್ನ ಬೆನ್ನತ್ತಿ ಬಂದವಳು.
ಉಡಿತುಂಬ ವರದಕ್ಷಿಣೆಯ ಹೊತ್ತು ತಂದವಳು.
ನಾನಿವಳ ಕೈಗೆ ಕೈಕೊಟ್ಟರೆ
ಯಾರು ನೋಡುವರಿವಳ ಹೊಟ್ಟೆನೆತ್ತಿ?
ಅಂತೂ ಇಂತೂ ನಾನೂ ಹೋದೆನೋ, ಮರುದಿನವೆ
ವೃತ್ತಪತ್ರಿಕೆಯಲ್ಲಿ ಚಿತ್ರ ಬರುವುದು. ಕೆಳಗೆ
ಹಿಡಿದು ತಂದೊಪ್ಪಿಸಿದವರ ಕೈಗೆ ಬಹುಮಾನ
ಸಿಕ್ಕರೋ ಅವಮಾನ, ಸಿಗದಿದ್ದರೂ, ಮುಂದೆ
ಹದಿನೈದೆ ದಿನದಲ್ಲಿ ನನ್ನ ಮಡದಿ ಯಶೋಧ
ಕೊಡಬಹುದು ಈ ಪತಿಗೆ ಸೋಡ ಚೀಟಿ.
ನಾ ಬುದ್ಧನಾದಾಗ ನನ್ನ ಬುದ್ಧಿಯ ಮಾತು
ಆಲಿಸಲು ಹೆಂಡತಿಯೇ ಇರದಿದ್ದರೆ ಹೇಗೆ?
ನಾನೇನೊ ಹೊರಡಲಿಕ್ಕೀಗಲೇ ತಯ್ಯಾರಿ
ಅದು ಸರಿ, ಇರ
ಬಹುದೆ ನಾ ಬುದ್ಧನಾಗುವ ಜರೂರಿ!
ನಾನು? ಹಾಗೂ
ಬುದ್ಧ? [೪೫]

ಈ ಸಾಲುಗಳು ಮನುಷ್ಯನ ವ್ಯಕ್ತಿತ್ವದ ಸೋಗಲಾಡಿತನವನ್ನು ಹಿಡಿದಿಡುತ್ತಲೇ, ಆಧುನಿಕ ಬದುಕು ತಂದೊಡ್ಡಿರುವ ಸವಾಲುಗಳನ್ನು, ಸಾಮಾನ್ಯ ಮನುಷ್ಯನೊಬ್ಬನು ಅದನ್ನು ಮೀರಲಾಗದ ಸಂದಿಗ್ಧತೆಯನ್ನು ಹೇಳಲು ಪ್ರಯತ್ನಿಸುತ್ತದೆ. ಯಾವುದೇ ವ್ಯಕ್ತಿತ್ವದ ನಿಲುವಿಗೆ ಅವರವರು ಎಷ್ಟು ಹೊಣೆಗಾರರೊ ಅವರು ಬದುಕುತ್ತಿರುವ

ಜಾಗತಿಕ ವಾತಾವರಣವೂ ಅಷ್ಟೇ ಹೊಣೆ. ಮನುಷ್ಯನ ಆಂತರಿಕ ವಿಕಾಸಕ್ಕೆ ಪೂರಕವಾದ, ಪ್ರೇರಕವಾದ ವಾತಾವರಣ ಇಂದು ಇಲ್ಲ. ಅಂತಹ ಒಂದು ಸನ್ನಿವೇಶ ನಿರ್ಮಾಣವಾಗಬೇಕಿದೆ ಎಂಬ ಆಶಯ ಈ ಕವನದಲ್ಲಿದೆ. ಆದರೆ ಎಲ್ಲದರಿಂದ ಮುಕ್ತವಾಗಬಹುದಾದ ಸ್ವತಂತ್ರ ವಾತಾವರಣವೊಂದು ಅಂದಿಗೂ ಇಲ್ಲ, ಇಂದಿಗೂ ಇಲ್ಲ ಎಂಬುದು ಸಾಮಾಜಿಕ ವಾಸ್ತವ. ಅವುಗಳನ್ನು ಮೀರಿದವರು ಮಾತ್ರ ಬುದ್ಧತ್ವಕ್ಕೇರಲು, ಬೋಧಿಸತ್ವರಾಗಲು ಸಾಧ್ಯ ಎಂಬ ಸತ್ಯವನ್ನು ಈ ಕವಿತೆ ವಿಡಂಬನೆಯ ಮೂಲಕವೇ ಧ್ವನಿಸುತ್ತದೆ. ಹೀಗೆ ಆಧುನಿಕ ಜಗತ್ತಿನಲ್ಲಿ ನಾವು ಇಂದು ಎದುರಿಸುತ್ತಿರುವ ವಿಭಿನ್ನ ಸವಾಲುಗಳನ್ನು, ನಮ್ಮ ಸಂದಿಗ್ಧ ಸ್ಥಿತಿಯನ್ನು ಹಿಡಿದಿಡುತ್ತಲೇ ಬುದ್ಧನ ವ್ಯಕ್ತಿತ್ವದೊಂದಿಗೆ ಸಮಕಾಲೀನ ಸಮಾಜದ ವ್ಯಕ್ತಿತ್ವಗಳನ್ನು ವಿಮರ್ಶೆಗೆ ಒಳಪಡಿಸುತ್ತದೆ.

ಮನುಷ್ಯ ಸದಾ ತನ್ನ ಸಂಕಟದ ಸನ್ನಿವೇಶದಲ್ಲಿ ಅಗೋಚರ ಶಕ್ತಿಯೊಂದಿಗೆ ಅನುಸಂಧಾನ ನಡೆಸುವಂತೆ; ಮನುಷ್ಯರನ್ನು ತಾಯ್ತನದ ಪ್ರೀತಿಯಿಂದ ಸಲಹಲು ಪ್ರಯತ್ನಿಸಿದ ಉನ್ನತವ್ಯಕ್ತಿತ್ವಗಳ ಮೊರೆ ಹೋಗುವುದೂ, ಮರುಹುಟ್ಟಿಗಾಗಿ ಹಂಬಲಿಸುವುದೂ ವಿಚಿತ್ರವಾದದ್ದು. ತನ್ನನ್ನು ಕಾಡುತ್ತಿರುವ, ಬಿಡಿಸಿಕೊಳ್ಳಲಾರದ ನೋವು ಸಂಕಟಗಳನ್ನು 'ಉನ್ನತವ್ಯಕ್ತಿತ್ವ'ಗಳಲ್ಲಿ ನಿವೇದಿಸಿಕೊಳ್ಳುವ ಮೂಲಕ ತನ್ನ ಮನದ ಭಾರವನ್ನು ಇಳಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಆದರೆ ಇದು ಆತ್ಮನಿವೇದನೆಗಿಂತ ವಾಚಾಳಿತನದ ಪರಮಾವಧಿ ತಲುಪಿರುವುದನ್ನು ಕೆ.ವಿ.ತಿರುಮಲೇಶರ 'ಬುದ್ಧನ ಪದ್ಯಗಳು' ಕವಿತೆ ಗುರುತಿಸುತ್ತದೆ. ಈ ಕವಿತೆ ವರ್ತಮಾನದ ಎಲ್ಲ ಸಮಸ್ಯೆ ಸಂಕಟಗಳಿಗೂ ಮಹಾನ್ ವ್ಯಕ್ತಿತ್ವಗಳಲ್ಲಿ ಮೊರೆಯಿಡುವ, ದೂರುವ ಮನುಷ್ಯ ಪ್ರವೃತ್ತಿಗಳನ್ನು ವಿಡಂಬಿಸುತ್ತದೆ. ತನ್ನ ಬದುಕಿನಲ್ಲಿ ಎದುರಾಗುವ ಎಲ್ಲ ಸಮಸ್ಯೆಗಳಿಗೂ ಬುದ್ಧನಲ್ಲಿ ದೂರಿಡುವ, ಆತನಿಂದ ಉತ್ತರ ಬಯಸುವ ಸಿನಿಕತನಗಳನ್ನು ಚರ್ಚಿಸುತ್ತದೆ. ಬುದ್ಧ ಬದುಕಿದ್ದಾಗಲೂ ಜನ ಬುದ್ಧನ ಬಳಿಯಲ್ಲಿ ಇಂಥವೇ ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸುತ್ತಾರೆ. ಬುದ್ಧ ಇಂಥ ಸಂದರ್ಭದಲ್ಲಿ ಮಾತಾಡದೆ ಮೌನವಹಿಸುತ್ತಾನೆ. ಈ ರೀತಿ ಎಲ್ಲವೂ ಬುದ್ಧನೇ ಹೇಳಬೇಕು. ಆತನೇ ಪರಿಹರಿಸಬೇಕು ಎಂದು ಮೊರೆಯಿಡುವ ಮನುಷ್ಯ ಸ್ವಭಾವಗಳು ಇಂದಿಗೂ ಬದಲಾಗಿಲ್ಲ. ಇಂದಿಗೂ ಅದೇ ಪ್ರಶ್ನೆಗಳನ್ನು ಕೇಳುತ್ತಾ, ದೂರುತ್ತಾ ಕುಳಿತಿದ್ದಾರೆ. ನಾಗರೀಕತೆಯ ಚಲನೆಯಲ್ಲಿ ಮನುಷ್ಯರು ವಿಕಾಸಶೀಲರಾಗಿ ಬೆಳೆಯದೇ ಇರುವ ಸ್ಥಿತಿಯನ್ನು ಬಹಳ ಸಮರ್ಥವಾಗಿ ಕವಿತೆ ವಿಡಂಬಿಸುತ್ತದೆ.

ಯಾರಿದ್ದಾರೆ ಯಾರಿಲ್ಲ
ಆಸ್ಪತ್ರೇಲಿ ಡಾಕ್ಟರಿಲ್ಲ
ಸ್ಕೂಲಲ್ಲಿ ಮಾಸ್ತರರಿಲ್ಲ
ಕಚೇರಿಯಲ್ಲಿ ಕ್ಲರ್ಕಿಲ್ಲ
ದೇವಾಲಯದಲ್ಲಿ ದೇವರಿಲ್ಲ
ಯಾರಿಗ್ಹೇಳಲಿ ಏನು ಮಾಡಲಿ
ಬುದ್ಧನಿಗೇಳು
. . . . . . . . . . .
ನಲ್ಲಿಯೊಳಗೆ ನೀರಿಲ್ಲ
ಕೊಳವಿ ಬಾವಿ ವರ್ಕಾಗಲ್ಲ
ಶಾಪಿಗೆ ಸಕ್ರೆ ಬಂದೇ ಇಲ್ಲ
ಸೀಮೆಣ್ಣೆ ಸಿಗೋದಿಲ್ಲ
ಕರೆಂಟು ಈ ಕಡೆ ಇಲ್ವೇ ಇಲ್ಲ
ಬುದ್ಧನಿಗೇಳು

ಈ ಕವನ ಮೇಲ್ನೋಟಕ್ಕೆ ಮನುಷ್ಯರು ತಮ್ಮೆಲ್ಲಾ ಅಹವಾಲುಗಳನ್ನು ಬುದ್ಧನಲ್ಲಿ ನಿವೇದಿಸಿಕೊಳ್ಳುತ್ತಿರುವುದನ್ನು ಹಿಡಿದಿಡುತ್ತಿರುವಂತೆ ಕಂಡುಬಂದರೂ ಇದು ಮನುಷ್ಯರ ಅತಂತ್ರ, ಅವಲಂಬನೆಯ ಸ್ಥಿತಿಯನ್ನೂ, ಯಾವ ಸಮಸ್ಯೆಗೂ ಪರಿಹಾರವನ್ನು ಕಂಡುಕೊಳ್ಳಲಾಗದ ಅವರ ಅಸಹಾಯಕತೆಯನ್ನೂ ಧ್ವನಿಸುತ್ತದೆ.

ಬುದ್ಧನನ್ನು ಅರಿಯುವುದರಲ್ಲಿ ವಿಫಲರಾದ ನಾವು ಆತನನ್ನು ರೂಪಿಸುವುದರಲ್ಲಿ ಗೆದ್ದಿದ್ದೇವೆ. ಮೂಲ ಬುದ್ಧನನ್ನು ಬದಲಾಯಿಸಿ ನಮ್ಮ ಆಧುನಿಕ ಅಗತ್ಯಗಳಿಗೆ, ಪ್ರತಿಷ್ಠೆಗಳಿಗೆ ಅನುಗುಣವಾಗಿ ಬಗೆಬಗೆಯಾಗಿ ರೂಪಿಸಿಕೊಂಡಿದ್ದೇವೆ. ಬುದ್ಧ ಆಧುನಿಕ ಮನುಷ್ಯನ ಕೈಗೆ ಸಿಕ್ಕು ಹೇಗೆಲ್ಲಾ ಆಗಿ ಹೋಗಿದ್ದಾನೆ ಎಂಬುದನ್ನು ಕವಿತೆ ವ್ಯಂಗ್ಯವಾಗಿ ವಿಡಂಬಿಸುತ್ತದೆ.

ಹೆಚ್ಚು ಎತ್ತರವಿರದ ಕಾರಣ ಕುತ್ತಿಗೆ
ನೋಯದಿರಲೆಂದು
ಹೆಚ್ಚು ಗಿಡ್ಡವಿರದ ಕಾರಣ ದೇಹ
ಬಾಗದಿರಲೆಂದು
ಹೆಚ್ಚು ದಪ್ಪವಿರದ ಕಾರಣ ಕಾಲುಗಳು
ಎಡವದಿರಲೆಂದು
ಹೆಚ್ಚು ತೆಳ್ಳಗಿರದ ಕಾರಣ ಆಧಾರ
ತಪ್ಪದಿರಲೆಂದು
ಹಾಗೂ ಮೊಲೆಗಳು ತುಂಬಿ ತುಳುಕಬಾರದು
ಉಗುವ  ಹಾಲಿಗೆ ಮೋರೆ ಸೀಯದಿರಲೆಂದು
ಹೆಚ್ಚು ಕಪ್ಪಿರಬಾರದು
ಹಾಲು ತಣ್ಣಗಿರಬಹುದೆಂದು
ನೂರು ಜನ ಸ್ತನದಾಯಿನಿಯರು
ಚೆಲುವೆಯರಲ್ಲಿ ಚೆಲುವೆಯರು
ನನ್ನ ಬುದ್ಧನ್ನ ಮಾಡುವುದಕ್ಕೆ
ಬಿಡುವುದಕ್ಕೆ ನೀನೊಬ್ಬಳೇ ಯಶೋಧರ! [೪೭]

ಈ ಕವಿತೆ ಬುದ್ಧನ ಬಾಹ್ಯ ವ್ಯಕ್ತಿತ್ವಕ್ಕೆ ಮರುಳಾದ ನಾವು ಅವನ ತತ್ವ ಸಿದ್ಧಾಂತಗಳಿಗೆ ಮುಖತಿರುಗಿಸಿದ್ದೇವೆ ಎಂಬುದನ್ನು ಧ್ವನಿಸುತ್ತದೆ. ಜೊತೆಗೆ ಬುದ್ಧನನ್ನು ವಿಕೃತವಾಗಿ ಚಿತ್ರಿಸುತ್ತಿರುವ ಆಧುನಿಕ ವಿಕಾರಗಳನ್ನು, ಬುದ್ಧನ ಮೂರ್ತಿಯನ್ನು ಸುಂದರವಾಗಿಸುವ ನಮ್ಮ ಮನಸ್ಥಿತಿಯನ್ನು ಹೇಳುತ್ತಲೇ ನಿಜವಾದ ಬುದ್ಧನನ್ನು ರೂಪಿಸಿದ್ದು ಯಶೋಧರೆ ಒಬ್ಬಳೇ ಎನ್ನುತ್ತದೆ. ಇಂದು ನೋಡುತ್ತಿರುವ 'ನಗುವ ಬುದ್ಧ' ಆಧುನಿಕ ಬದುಕಿನ ವಿಕೃತ ಮನಸ್ಥಿತಿಯಿಂದ ಹುಟ್ಟಿದವನು ಎಂಬ ವಿಡಂಬನೆಯ ಧ್ವನಿ ಇಲ್ಲಿದೆ. ಬುದ್ಧ ಪ್ರತಿಪಾದಿಸಿದ ವಿಚಾರಗಳನ್ನು ಬಿಟ್ಟು ಆತನ 'ಮೂರ್ತಿ'ಯ ಹಿಂದೆ ಬಿದ್ದಿರುವ ಆಧುನಿಕ ಮನುಷ್ಯನ ಮನಸ್ಥಿತಿಗಳನ್ನು ಕವಿತೆ ವಿಮರ್ಶೆಗೆ ಒಡ್ಡುತ್ತದೆ. ಬುದ್ಧನನ್ನು ತಾತ್ವಿಕವಾಗಿ ಗ್ರಹಿಸಬೇಕಾದ ಪ್ರಜ್ಞೆ ಹೋಗಿ ಕೇವಲ 'ಪ್ರತಿಮೆ'ಗಳಲ್ಲಿ ಹಿಡಿದಿಡಲಾಗುತ್ತಿದೆ. ಬೇರೆ ಬೇರೆ ರೂಪಗಳಲ್ಲಿ ಬುದ್ಧನ ಪ್ರತಿಮೆಗಳನ್ನು ಕೆತ್ತುವ ಪ್ರಯತ್ನಗಳು ನಡೆಯುತ್ತಿವೆ. ಈ ಕೆತ್ತುವಿಕೆಯನ್ನು ಕವಿ ಪ್ರತಿನಿರ್ಮಾಣ ಮತ್ತು ನಾಶದ ಮುಖಾಮುಖಿಯ ಸಂಕೇತವಾಗಿ ಹಿಡಿದಿಡಲು ಪ್ರಯತ್ನಿಸಿದ್ದಾರೆ.

ದೀರ್ಘಪಾದಗಳ ಬುದ್ಧನಿರಬೇಕು. ಬರೀ ಸಣ್ಣಪಾದಗಳ
ಬುದ್ಧನಿದ್ದರೆ ಹೇಗೆ ಇಷ್ಟೊಂದು ದೊಡ್ಡ ಮಹಿಮನಿಗೆ
ಎಂದೆ ಅವ ಕಾಲುಗಳನ್ನಿಟ್ಟಲ್ಲಿ ಖಂಡಾಂತರ!
ನೆಲ ಆಕಾಶ ಒಂದೆ. ಸಾಗರದ ತಳ ಕಂಡೆ. ಮೋಡಗಳು
ಮೈಯ ಹೊದ್ದಿರುತ್ತವೆ. ನಕ್ಷತ್ರಗಳು ಕೆಳಗಿಳಿದು ಪ್ರಭಾವಳಿಯ

ಹಿಡಿದಿರುತ್ತವೆ. ನಾವಿವನನ್ನು ರಾಯಗಿರಿಯ ಮಹಾ
ಗ್ರಾನೈಟ್ ಶಿಲೆಯಿಂದ ಕಡೆದು ತೆಗೆಯುತ್ತೇವೆ.
ಸಾವಿರ ಶಿಲ್ಪಿಗಳು ಹಗಲಿರುಳು ಕೂತು ಕೆತ್ತುತ್ತಾರೆ – ಅವರು ಭುಜದ
ಮೇಲಿದ್ದಾರೆ, ತಲೆಯ ಮೇಲಿದ್ದಾರೆ, ಹೊಟ್ಟೆಯ ಮೇಲೆ ಹೊಡೆ
ಯುತ್ತಾರೆ. ಕಿವಿಗೆ ತೂತು ಕೊರೆಯುತ್ತಾರೆ. ಕಣ್ಣ ರೆಪ್ಪೆಗಳ
ತೆರೆಸುತ್ತಾರೆ. ಅವರು ಬುದ್ಧನನ್ನು ಬಿಡಿಸುತ್ತಿದ್ದಾರೆಯೆ
ಕಲ್ಲನ್ನು ಕೆತ್ತುತ್ತಿದ್ದಾರೆಯ – ಒಬ್ಬೊಬ್ಬರಿದ್ದಾರೆ ಒಂದೊಂದು ಕಡೆ.
ಇಡಿಯಾದ ಬುದ್ಧನ್ನ ಯಾರು ಕಂಡಿದ್ದಾರೆ? [೪೮]

ಕವನದ ಮೊದಲರ್ಧ ಭಾಗ ಬುದ್ಧನ ವ್ಯಕ್ತಿತ್ವ ಮತ್ತು ಬುದ್ಧನ ಮೂರ್ತಿಯ ನಡುವಿನ ಸಾಮ್ಯತೆಯನ್ನು ಗುರುತಿಸಿದರೆ ಅನಂತರದ ಭಾಗ ಬುದ್ಧನ ವ್ಯಕ್ತಿತ್ವವನ್ನು ನಾಶಪಡಿಸುತ್ತಲೇ, ಅವನ ಮೂರ್ತಿಯನ್ನು ನಿರ್ಮಿಸುತ್ತಿರುವ ಆಧುನಿಕ ವಿಕಾರವನ್ನು ಚಿತ್ರಿಸುತ್ತದೆ. 'ದೀರ್ಘ ಪಾದಗಳ' ಬುದ್ಧನ ಚಿತ್ರಣವೇ ಅವನ ವ್ಯಕ್ತಿತ್ವದ ಅನನ್ಯತೆಯನ್ನು, ಅದರ ವ್ಯಾಪಕತೆಯನ್ನು ಧ್ವನಿಸುತ್ತದೆ. ಹಾಗಾಗಿಯೇ ಇಲ್ಲಿ 'ನೆಲ ಆಕಾಶ ಒಂದೆ, ಸಾಗರದ ತಳ ಕಂಡೆ' ಎಂಬ ಸಾಲುಗಳು ಬೌದ್ಧ ತಾತ್ವಿಕತೆಯನ್ನು ಬುದ್ಧನ ವ್ಯಕ್ತಿತ್ವ, ಹಾಗೂ ಮೂರ್ತಿಯೊಂದಿಗೆ ಸಮೀಕರಿಸಿಬಿಡುತ್ತದೆ. ಆದರೆ ರಾಯಗಿರಿಯ ಮಹಾ ಗ್ರಾನೈಟ್ ಶಿಲೆಯಿಂದ ಕಡೆಯಲಾಗುತ್ತಿರುವ ಬುದ್ಧನ ಮೂರ್ತಿಗೆ ಹಲವು ಮಿತಿಗಳಿರುವುದನ್ನು ಗುರುತಿಸುತ್ತದೆ ಕವನ. ಒಂದೆಡೆ ಇದು ಬುದ್ಧನನ್ನು ಬಿಡಿಬಿಡಿಯಾಗಿ ಬಿಡಿಸುತ್ತಿರುವ ನಮಗೆ ಅವನು ಇಡಿಯಾಗಿ ದಕ್ಕದಂತೆ ಮಾಡಿದ್ದರೆ, ಮತ್ತೊಂದೆಡೆ ಬುದ್ಧನ ಮೂರ್ತಿಯನ್ನು ಕಡೆಯುತ್ತಲೇ ಬುದ್ಧನ ವ್ಯಕ್ತಿತ್ವವನ್ನು 'ಕಡೆಯ'ಲಾಗುತ್ತಿದೆ. ಬುದ್ಧನ ತಲೆಯ ಮೇಲೆ, ಭುಜದ ಮೇಲೆ, ಹೊಟ್ಟೆಯ ಮೇಲೆ ಕೂತು ತಮ್ಮಿಚ್ಚೆಯಂತೆ ಬುದ್ಧನನ್ನು ನಿರ್ಮಿಸಲು ಸಾವಿರಾರು ಶಿಲ್ಪಿಗಳು ಪ್ರಯತ್ನಿಸುತ್ತಿದ್ದಾರೆ. ಹಾಗಾಗಿ 'ನಿಜ ಬುದ್ಧನ' ಸಮಗ್ರ ವ್ಯಕ್ತಿತ್ವವೊಂದು ಆ ಶಿಲ್ಪದಲ್ಲಿ ರೂಪುಗೊಳ್ಳಲು ಸಾಧ್ಯವಿಲ್ಲ ಎಂದೆನಿಸುತ್ತದೆ. ಅಲ್ಲದೆ ಬುದ್ಧನನ್ನು ನಮಗಿಷ್ಟ ಬಂದಂತೆ ಕೆತ್ತುತ್ತಿದ್ದೇವೆಯೇ ಹೊರತು ನಿಜವಾದ ಬುದ್ಧನನ್ನು ಅರಿಯುವಲ್ಲಿ ವಿಫಲರಾಗಿದ್ದೇವೆ. ಬುದ್ಧನ ಮೂರ್ತಿಯನ್ನು 'ಕೆತ್ತುವಿಕೆ'ಯ ಮೂಲಕ ನಡೆಯುತ್ತಿರುವ ರಾಜಕಾರಣವನ್ನು ಈ ಕವನದ ಸಾಲುಗಳು ಹಿಡಿದಿಡುತ್ತವೆ. 'ಹೊಟ್ಟೆಯ ಮೇಲೆ ಹೊಡೆಯುತ್ತಾರೆ, ಕಿವಿಗೆ ತೂತು ಕೊರೆಯುತ್ತಾರೆ, ಕಣ್ಣ ರೆಪ್ಪೆ ತೆರೆಸುತ್ತಾರೆ' ಎನ್ನುವ ಸಾಲುಗಳು ಬುದ್ಧನ ನಿಜವಾದ ವಿಚಾರಗಳನ್ನು ಬಿಟ್ಟು ಕಲ್ಲಿನ ಹಿಂದೆ ಬಿದ್ದಿರುವ ಮನುಷ್ಯನ ಆಡಂಬರ, ಅಜ್ಞಾನಗಳನ್ನು ಧ್ವನಿಸುತ್ತವೆ. ಈ ಕೆತ್ತುವ ಕ್ರಿಯೆ 'ಕಲ್ಲು' ಮತ್ತು 'ಮನುಷ್ಯ'ರ ನಡುವಿನ ಭೇದವನ್ನು ಇಲ್ಲವಾಗಿಸಿಬಿಡುತ್ತವೆ. ಇದರ ಸೋಜಿಗವೆಂದರೆ 'ಕಲ್ಲು' ಮತ್ತು 'ಮನುಷ್ಯ' ಇಬ್ಬರೂ ಬುದ್ಧನಾಗುವಿಕೆಯಲ್ಲಿ ಸೋಲುತ್ತಿರುವುದು. ಆದರೆ ಅಂತಿಮವಾಗಿ 'ನಿಜ ಬುದ್ಧನ' ನಿರ್ಮಿತಿಯಂತೂ ಅಸಾಧ್ಯ ಎನ್ನುತ್ತಲೇ, ನಾವು ರೂಪಿಸಿಕೊಂಡಿರುವ ಅಸಂಖ್ಯ ಬುದ್ಧರನ್ನು ಕಂಡು ಆಶ್ಚರ್ಯ ವ್ಯಕ್ತಪಡಿಸುತ್ತದೆ. ಇಂದು ಒಬ್ಬ ಬುದ್ಧನಿಲ್ಲ.

ನಗುವ ಬುದ್ಧ ಅಳುವ ಬುದ್ಧ!
ಅವನೂ ಇದ್ದ! ಮಹಮೌನಿ ಬುದ್ಧ!
ಮಾತಾಡುವ ಬುದ್ಧ! ಮಲಗಿರುವ ಬುದ್ಧ!
ನಿಂತಿರುವ ಬುದ್ಧ! ಕೂತಿರುವ ಬುದ್ಧ!
ಎಮರಾಲ್ಡ್ ಬುದ್ಧ! ಗ್ರಾನೈಟ್ ಬುದ್ಧ! ಸಂಗ–
ಮರವರೀ ಬುದ್ಧ! ಸಿಮೆಂಟ್ ಬುದ್ಧ!
. . . . . . . . . . . . . .
ಎಲ್ಲೋರದ ಬುದ್ಧ! ಎಲ್ಲೋ ಬುದ್ಧ! ವೈಟ್ ಬುದ್ಧ!

ಬ್ಲಾಕ್ ಬುದ್ಧ! ಐವರಿ ಬುದ್ಧ! ನಮ್ಮನೆ ಬುದ್ಧ! ಮನೆಮನೆ ಬುದ್ಧ!
ಅರಮನೆ ಬುದ್ಧ! ಹುಸೇನ್ ಸಾಗರ ಬುದ್ಧ! ಮುಗಿಯಿತೆ
ಬುದ್ಧ? ಮುಗಿದೀತೆ ಬುದ್ಧ?
ಎಷ್ಟೋ ಬುದ್ಧರು ಆಗಿಹೋದರು, ಇನ್ನೆಷ್ಟೋ ಬುದ್ಧರು
ಆಗುವರಿದ್ದರು! ಎಲ್ಲಾ ಬುದ್ಧರೂ
ಒಂದೇ ಎಂದಿದ್ದರು? ಒಂದೇ, ಮುಂದಿನವರಿಗೂ
ಸ್ಥಳ ಇರಿಸಿದ್ದರು! ೪೯

ಇಲ್ಲಿ ಕವಿ ಒಂದು ಬುದ್ಧನನ್ನು ಕಡೆಯ ಹೋಗಿ ಅನಂತ ಬುದ್ಧರು ನಿರ್ಮಿತಿಯಾಗಿರುವುದನ್ನು ಗುರುತಿಸುತ್ತಾರೆ. ಬುದ್ಧನನ್ನು ಕಲ್ಲಿನ ಮೂರ್ತಿಯಲ್ಲಿ ಸೆರೆಹಿಡಿಯಲು ಪ್ರಯತ್ನಿಸಿ ವಿಫಲವಾದ ಸ್ಥಿತಿಯನ್ನು ವಿಡಂಬಿಸುತ್ತಲೇ ಅನೇಕ ಬುದ್ಧರ ನಿರ್ಮಿತಿಯ ಬಗೆಗೆ ಸೋಜಿಗವೂ ಹೊರಹೊಮ್ಮಿದೆ. ಇಲ್ಲಿ ಗಮನಿಸಲೇಬೇಕಾದ ಅಂಶವೆಂದರೆ ಬುದ್ಧನೆನ್ನುವುದು ವ್ಯಕ್ತಿಯನ್ನು ಮೀರಿ ವ್ಯಕ್ತಿತ್ವವಾಗಿ ವಿಕಾಸಹೊಂದಿರುವುದು. ಹಾಗಾಗಿಯೇ ಎಷ್ಟೇ ಬುದ್ಧರು ಆಗಿ ಹೋದರೂ, ಇನ್ನಷ್ಟು ಬುದ್ಧರು ಆಗುವವರಿದ್ದಾರೆ. ಅವರಿಗೂ ಸ್ಥಳ ಖಾಲಿ ಇದೆ ಎನ್ನುವ ಕವಿಯ ಅನಿಸಿಕೆ ಎಂದೋ ಆಗಿ ಹೋದ ಗೌತಮ ಬುದ್ಧನಿಗಷ್ಟೇ ಸೀಮಿತವಾಗದೆ ನಿತ್ಯ, ನಿರಂತರ ನಮ್ಮೊಳಗೆ ರೂಪುಗೊಳ್ಳುತ್ತಿರುವ ಬುದ್ಧತ್ವವನ್ನು ಕುರಿತೂ ಮಾತನಾಡುತ್ತದೆ. ಹಾಗೆಯೇ ಮೂಲ ಬುದ್ಧನನ್ನು ಬಿಟ್ಟು ಹಲವಾರು ಬುದ್ಧರನ್ನು ಸೃಷ್ಟಿಸಿಕೊಂಡು ಮತ್ತದೇ ಕತ್ತಲಲ್ಲಿ ತೊಳಲುವ ಮನುಷ್ಯನ ಸ್ವಭಾವವನ್ನು ವಿಡಂಬಿಸುತ್ತದೆ. ಇದೆಲ್ಲದರ ನಡುವೆ ಬುದ್ಧನ ವ್ಯಕ್ತಿತ್ವವನ್ನು ಶಿಲ್ಪಗಳಿಗೆ ಸೀಮಿತಗೊಳಿಸುತ್ತಿರುವಿಕೆಯನ್ನು ಈ ಕವಿತೆ ಚರ್ಚೆಗೆ ಒಳಪಡಿಸಿದೆ. ಬುದ್ಧನನ್ನು ವೈದಿಕೀಕರಣಗೊಳಿಸುತ್ತಿರುವ ರಾಜಕಾರಣವನ್ನು, ಹಲವು ಅವತಾರಗಳಲ್ಲಿ ಚಿತ್ರಿಸುವ ಪ್ರಯತ್ನಗಳನ್ನು, ಬುದ್ಧನ ವಿಚಾರಗಳಿಗೆ ಅತಿಯಾದ ಅರ್ಥೈಸುವ, ಅಂತಿಮ ಅರ್ಥ ಕಲ್ಪಿಸುವ ಎಲ್ಲ ಅತಿರೇಕಗಳನ್ನು ವಿಡಂಬಿಸುತ್ತದೆ. ಬುದ್ಧನನ್ನು ಶಿಲ್ಪದಲ್ಲಿ ಹಿಡಿದಿಡುವ ಮನುಷ್ಯನ ಅಹಂಕಾರ, ಪ್ರತಿಷ್ಠೆ, ಅಜ್ಞಾನ, ವ್ಯರ್ಥ ಪ್ರಯತ್ನಗಳನ್ನು ಚರ್ಚೆಗೊಳಪಡಿಸುತ್ತದೆ. ದೇಶದ ಗಡಿದಾಟಿ ಹೋದ ಬುದ್ಧ ಹಲವು ಜನರ ಕೈಯಲ್ಲಿ ಏನೇನೋ ಆಗಿ ಬದಲಾಗಿ ಬಿಟ್ಟಿರುವ ಬಗೆಯನ್ನು ವ್ಯಂಗ್ಯದೊಂದಿಗೆ ಚಿತ್ರಿಸುತ್ತದೆ.

ಆಮೇಲೆ ಪೂರ್ವರಾಷ್ಟ್ರಗಳತ್ತ ಕಾಲಿಟ್ಟ
ಅಲ್ಲೆಲ್ಲಾ ಮಿಲ್ಟ್ರಿ ಹೋಟೆಲುಗಳು – ಸೀ ಫುಡ್
ಲ್ಯಾಂಡ್ ಫುಡ್ – ಬಟ್ ಇಟ್ ವಾಸ್ ಗುಡ್!
ಬದುಕುವ ಪ್ರಶ್ನೆ! ಬುದ್ಧ ತಿನ್ನದ ವಸ್ತುಗಳಿಲ್ಲ–
ಬಹಳ ದಪ್ಪವಾಗಿಬಿಟ್ಟ
ಆಲ್ ರೌಂಡರ್! ಉಬ್ಬುಗೆನ್ನೆ ಡಬಲ್ ಚಿನ್
ಕುತ್ತಿಗೆ ಕೂತಿತು ಹೊಟ್ಟೆಯ ಒಳಗೆ! ಹಾಗೂ ಕೂತಾಗ
ಹೊಟ್ಟೆ ತೊಡೆಯ ಮೇಲೆ! ದಿ ಲಾಫಿಂಗ್ ಬುದ್ಧ! ೫೦

ಕವಿತೆಯ ಸಾಲುಗಳು ನಾವು ಇಂದು ಬುದ್ಧನನ್ನು ನಮ್ಮ ಅಗತ್ಯಗಳಿಗನುಗುಣವಾಗಿ ಬಳಸಿಕೊಳ್ಳುತ್ತಿರುವುದನ್ನು ಕುರಿತು ವ್ಯಂಗ್ಯ, ವಿಷಾದವನ್ನು ವ್ಯಕಪಡಿಸುತ್ತವೆ. ಬುದ್ಧ ಮನುಷ್ಯನ ಕೈಗೆ ಸಿಕ್ಕು ಏನೇನೋ ಆಗಿ ಹೋಗಿರುವ ಸ್ಥಿತಿ, ಅದರ ಹಿಂದಿನ ಮನುಷ್ಯ ಅಹಂಕಾರಗಳ ಬಗೆಗೆ ವಿಡಂಬನೆಯ ಧ್ವನಿಯಿದೆ. ನಮಗೆ ಬೇಕಾದ ಬುದ್ಧನನ್ನು ರೂಪಿಸುವ ಭರದಲ್ಲಿ ಅವನ ತತ್ವಸಿದ್ಧಾಂತಗಳನ್ನೆಲ್ಲಾ ಗಾಳಿಗೆ ತೂರಿ ಮನಸೋ ಇಚ್ಛೆ ಅವುಗಳನ್ನು ಬಳಸಿಕೊಳ್ಳುತ್ತಿರುವುದನ್ನು ಮೇಲಿನ ಸಾಲುಗಳು ಧ್ವನಿಸುತ್ತವೆ. 'ಲಾಫಿಂಗ್ ಬುದ್ಧ' ರೂಪುಗೊಳ್ಳುತ್ತಲೇ ಹಲವು ಅಚ್ಚರಿಯ ಬದಲಾವಣೆಗಳು ಬೌದ್ಧ ತತ್ವದಲ್ಲೂ ಕೂಡ ಸಂಭವಿಸಿರುವುದನ್ನು ಕವಿತೆ ಧ್ವನಿಸುತ್ತದೆ. 'ಕುತ್ತಿಗೆ ಕೂತಿದೆ ಹೊಟ್ಟೆಯ ಒಳಗೆ, ಹೊಟ್ಟೆ ತೊಡೆಯಮೇಲೆ ಕೂತಿದೆ' ಎನ್ನುವ ಚಿತ್ರಣ ವ್ಯಂಗ್ಯದೊಂದಿಗೆ

ವಿಷಾದವನ್ನೂ ಕೂಡ ತುಂಬಿಕೊಂಡಿದೆ. ಹಾಗಾಗಿ ಬುದ್ಧ ಮತ್ತು ಬುದ್ಧನ ವಿಚಾರಗಳು ಮಾನವ ನಾಗರೀಕತೆಯ ಚರಿತ್ರೆಯಲ್ಲಿ ಏನೆಲ್ಲಾ ವಿಕೃತ ರೂಪಗಳನ್ನು ಪಡೆದುಕೊಂಡಿವೆಯೋ ಅವುಗಳ ಹಿಂದಿನ ಸಾಂಸ್ಕೃತಿಕ ರಾಜಕಾರಣಗಳನ್ನು, ಮನುಷ್ಯನ ಅಜ್ಞಾನ, ಪ್ರತಿಷ್ಠೆ, ಕುರುಡು ಧರ್ಮ ಶ್ರದ್ಧೆ, ಸಣ್ಣತನಗಳನ್ನು ವಿಡಂಬನೆ ಮಾಡುತ್ತದೆ. ಮನುಷ್ಯನ ಅಂತರಂಗವನ್ನು ಬೆಳಗಬೇಕಾದ ಬುದ್ಧ ಅವನ ಅಜ್ಞಾನ, ಪ್ರತಿಷ್ಠೆ, ಅಹಂಕಾರಗಳ ಅಭಿವ್ಯಕ್ತಿಯ ಸಾಧನವಾಗಿಯೇ ಬಳಕೆಯಾಗಬೇಕಾಗಿ ಬಂದ ದುಸ್ಥಿತಿಯನ್ನು ಈ ಬಗೆಯ ವಿಡಂಬನೆಯ ಕವಿತೆಗಳು ಬಹಳ ಶಕ್ತವಾಗಿ ಹಿಡಿದಿಡುತ್ತವೆ. ವಿಚಾರಗಳಿಗಿಂತ ವ್ಯಕ್ತಿ ಮೆರವಣಿಗೆ, ಅರಿವಿಗಿಂತ ಅಜ್ಞಾನ, ಮೂರ್ತಕ್ಕಿಂತ ಅಮೂರ್ತ, ಬಿಡುಗಡೆಗಿಂತ ಬಂಧನಗಳೇ ಮನುಷ್ಯ ನಾಗರೀಕತೆಗೆ ಇಷ್ಟವಾದಂತೆ ತೋರುತ್ತಿದೆ. ಹಾಗಾಗಿಯೇ ಮಾನವ ನಾಗರೀಕತೆ ಬುದ್ಧನೆಡೆಗೆ ಸಾಗುವಲ್ಲಿ ವಿಫಲವಾಗಿದೆ. ಯಾರು ಬಂದರೂ, ಏನೂ ಹೇಳಿದರೂ ತಾನು ಮಾತ್ರ ತನ್ನ ಮೂಲ ಮನಸ್ಥಿತಿ, ಸ್ವಭಾವಗಳಿಂದ ಮೇಲೇಳದ ಮನುಷ್ಯನ ಸಣ್ಣತನಗಳನ್ನು ಈ ಬಗೆಯ ವಿಡಂಬನೆಯ ಕವಿತೆಗಳು ಸಮರ್ಥವಾಗಿ ಗುರುತಿಸುತ್ತವೆ. ಹಾಗೆಯೇ ಬುದ್ಧನ ಉಪದೇಶಗಳ ಮೂಲ ಆಶಯಗಳು ಮನುಷ್ಯನ ಒಳಗನ್ನು ಬೆಳಗಬೇಕೆಂಬ ಒತ್ತಾಸೆಯೂ ಇವುಗಳ ಹಿಂದೆ ಇದೆ. ಮುಂದುವರೆದು ಕವಿತೆ ಬುದ್ಧನ ವ್ಯಕ್ತಿತ್ವವನ್ನು ಅವನ ಸಿದ್ಧಾಂತಗಳ ನೆಲೆಯಲ್ಲಿ ಗುರುತಿಸಲು ಪ್ರಯತ್ನಿಸುತ್ತದೆ. ಬುದ್ಧನೆನ್ನುವುದು ಅರಿವಿನ ಸ್ಥಿತಿ. ಪ್ರತಿಯೊಬ್ಬ ಮನುಷ್ಯನಲ್ಲಿಯೂ ಕಾಣ್ಕೆಯ ರೂಪದಲ್ಲಿ ಬುದ್ಧನಿರುತ್ತಾನೆ. ಆದರೆ ಆಧುನಿಕ ಮನುಷ್ಯರು ಬುದ್ಧನನ್ನು ಯಾವ ಯಾವುದೋ ಬಾಹ್ಯ ರೂಪಗಳಲ್ಲಿ ಕಂಡುಕೊಳ್ಳಲು ಹೆಣಗಿ ಸೋತಿದ್ದಾರೆಎಂಬುದರ ವಿಡಂಬನೆ ಈ ಪದ್ಯದ ಸಾಲುಗಳಲ್ಲಿದೆ. ಬುದ್ಧತ್ವವೆಂಬುದು ಸೃಷ್ಟಿಯ ಅರಿವು. ಆ ಅರಿವನ್ನು ಸಿದ್ಧಿಸಿಕೊಂಡು ಮನುಷ್ಯ ಬುದ್ಧನಾಗಲು ಪ್ರಯತ್ನಿಸಲಿಲ್ಲ. ಆಧುನಿಕ ಮನುಷ್ಯನಿಗೆ ನಿಂತು ತನ್ನೊಳಗನ್ನು ನೋಡಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಅವರು ಓಡುತ್ತಿದ್ದಾರೆ. ಅದಕ್ಕಾಗಿ 'ಓಡು'ವುದನ್ನು ಬಿಟ್ಟು 'ನಿಲ್ಲ'ಬೇಕು ನಿಂತು ತಮ್ಮ ಅಂತರಂಗವನ್ನು ನೋಡಿಕೊಂಡಾಗ ಮಾತ್ರ ಬುದ್ಧತ್ವ ಸಿದ್ಧಿಸುತ್ತದೆ.

> ನೀನು ನಿಲ್ಲುವುದನ್ನು ಕಲಿತುಕೋ
> ಸ್ಥಿರವಾಗು, ಸಮುದ್ರದ
> ತಲ್ಲಣವಾಗುವುದು ಬೇಡ
> ಕೊಳದ ನಿರಾಳವಾಗು!
> ಅಲ್ಲಿಯೂ ಮಳೆಯ ಹನಿ ಬಿದ್ದಾಗ ಅಲೆಗಳೇಳುತ್ತವೆ
> ಅವು ಯಾರನ್ನೂ ಹೊಡೆದು ಅಪ್ಪಳಿಸುವುದಿಲ್ಲ [೫೧]

ಬುದ್ಧನೆಂಬ ಬೆಳಕು ಕಣ್ಣೆದುರಿಗೇ ಇದ್ದರೂ ಮನುಷ್ಯ ಮಾತ್ರ ಅದನ್ನು ತನ್ನ ಬದುಕಿನ ದಾರಿ ದೀಪವಾಗಿಸಿಕೊಳ್ಳಲೆ ಇಲ್ಲ. ಬುದ್ಧತ್ವವನ್ನು ತನ್ನೊಳಗಿನ ಅರಿವಿನ ಮಾರ್ಗದಲ್ಲಿ ಕಂಡುಕೊಳ್ಳದೆ, ಬಾಹ್ಯ ಆಡಂಬರಗಳಲ್ಲಿ ಕಾಣಲು ಹೆಣಗುತ್ತಿರುವ ಮನುಷ್ಯ ಪ್ರವೃತ್ತಿಗಳನ್ನು ಇದು ವಿಡಂಬಿಸುತ್ತಲೇ ಅದನ್ನು ಪಡೆಯುವ ಬಗೆಯನ್ನು ತೋರಿಸುತ್ತಿದೆ.

ಬುದ್ಧ ಹಾಗೂ ಬುದ್ಧನ ವಿಚಾರಗಳಿಗಿಲ್ಲದ ಬೆಲೆ ಆತನ ವಿಗ್ರಹಗಳಿಗಿರುವುದು, ಆ ವಿಗ್ರಹಗಳು ಕಳ್ಳತನವಾಗುವುದು, ಅವುಗಳಿಗೆ ಅಂತರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಭಾರಿ ಬೇಡಿಕೆಗಳಿರುವುದನ್ನು ಕಂಡು ಸ್ವತಹ ಬುದ್ಧನೇ ದಂಗಾಗಿ ಹೋಗಿದ್ದಾನೆ. ದುಃಖದ ಮೂಲ ಮನಸ್ಸಿನ ತುದಿಯ ಆಸೆಯಲ್ಲಡಗಿದೆ ಎಂದ ಬುದ್ಧನ

ಮಾತುಗಳನ್ನೇ ನಾಚಿಸುವಂತೆ ವರ್ತಿಸುತ್ತಿರುವ ಜನರ ವರ್ತನೆಗಳನ್ನು ವಸಂತ ಕುಷ್ಟಗಿಯವರ 'ಬುದ್ಧನ ವಿಗ್ರಹದ ಸುತ್ತ ಮುತ್ತ' ಕವಿತೆ ವಿಡಂಬಿಸುತ್ತದೆ.

ಇಂತು ಕಾಡಿದ ಚಿಂತೆ
ಕಾಡು ನಾಡೊಳೆಲ್ಲ ನಾಡಾಡಿಯಾಗಿ ಕುಣಿದಾಗ
ನನಗಿಲ್ಲದ ಬೆಲೆ ನನ್ನ ವಿಗ್ರಹಕ್ಕಿದೆಯೆಂದು
ಬುದ್ಧನ ಬೆಳಕು ನಕ್ಕು
ಮುಗಿಲ ತುತ್ತ ತುದಿಗೆ ಮುಡಿಯ ಮಿಂಚಾಗಿ
ಮಟಾ ಮಾಯವಾಗಿತ್ತು [೫೨]

ಬುದ್ಧನನ್ನು ಮೂರ್ತಿಯಾಗಿಸುವ ಆಡಂಬರ; ಅಂತಿಮವಾಗಿ ಆ ಮೂರ್ತಿಗಳು ಕಳ್ಳತನವಾಗುವ, ಅಂತರರಾಷ್ಟ್ರೀಯ ಬೇಡಿಕೆಯುಳ್ಳ ಕಳ್ಳ ಸರಕಾಗಿಬಿಟ್ಟಿರುವ ದುರಂತವನ್ನು ಈ ಕವಿತೆ ವ್ಯಂಗ್ಯವಾಡುತ್ತದೆ. 'ಬುದ್ಧನ ಬೆಳಕು...... ಮಟಾ ಮಾಯವಾಗಿತ್ತು' ಸಾಲುಗಳು ನಮಗೆ ಬುದ್ಧನ ಮೂರ್ತಿಯನ್ನು ಮಾತ್ರ ಹಿಡಿದಿಟ್ಟುಕೊಳ್ಳಲು ಸಾಧ್ಯವಾಯಿತೇ ಹೊರತು ಆತನ ವಿಚಾರಗಳನ್ನಲ್ಲ ಎಂಬುದನ್ನು ಧ್ವನಿಸುತ್ತವೆ. ಬುದ್ಧನ ವಿಚಾರಗಳು ಮಿಂಚಿ ಮಾಯವಾಗಿವೆ. ಆ ಮಿಂಚನ್ನು ಹಿಡಿದುಕೊಳ್ಳುವ ಸೂಕ್ಷ್ಮತೆಯನ್ನು ಕಳೆದುಕೊಂಡವರು ಬುದ್ಧನ ಮೂರ್ತಿಗಳ ಹಿಂದೆಬಿದ್ದಿದ್ದಾರೆ.

ಬಹುತೇಕ ಕವಿತೆಗಳು ಬುದ್ಧನನ್ನು ಮನುಷ್ಯನ ಹಿಂಸಾ ಪ್ರವೃತ್ತಿ ಮತ್ತು ಯುದ್ಧಗಳ ವಿಡಂಬನೆಗಾಗಿ ಬಳಸಿಕೊಂಡಿವೆ. ಬುದ್ಧ ಪ್ರತಿಪಾದಿಸಿದ್ದು ವಿಶ್ವಶಾಂತಿಯನ್ನು, ಮನುಷ್ಯನ ದುಃಖವನ್ನು ನಿವಾರಿಸಬಹುದಾದ ಮಾರ್ಗಗಳನ್ನು. ಆದರೆ ಇಂದು ಮನುಷ್ಯನಲ್ಲಿ ಹಿಂಸಾ ಪ್ರವೃತ್ತಿಗಳು ಹೆಚ್ಚುತ್ತಿವೆ. ವಿಶ್ವಶಾಂತಿಯನ್ನು ಕದಡುವ ಯುದ್ಧದ ಛಾಯೆ ಜಗತ್ತನ್ನು ಆವರಿಸಿಕೊಂಡಿದೆ. ಬುದ್ಧ ಪೂರ್ಣಿಮೆಯಂದೇ ಅಣುಬಾಂಬ್ ಸ್ಫೋಟಿಸಿ ಬಲಪ್ರದರ್ಶನ ಮಾಡಲಾಗಿದೆ. ಇವೆಲ್ಲವೂ ಬುದ್ಧನ ನಾಡಿನಲ್ಲೇ ನಡೆಯುತ್ತಿರುವ, ಬುದ್ಧನಿಗೆ ವಿರುದ್ಧವಾದ ನಡವಳಿಕೆಗಳು. ಜಗತ್ತಿಗೆ ದಿಕ್ಕಾಗಬೇಕಾಗಿದ್ದ ಬುದ್ಧನನ್ನು ವ್ಯಂಗ್ಯಮಾಡಿ, ಮೂಲೆಗುಂಪು ಮಾಡಿ ತಮ್ಮ ಹಿಂಸೆಯ ಅತಿರೇಕಗಳನ್ನು ಪ್ರದರ್ಶಿಸುತ್ತಿದ್ದಾರೆ. ಮನುಷ್ಯನ ನೆಮ್ಮದಿ, ವಿಶ್ವಶಾಂತಿಗಳು ಕನಸಿನ ಮಾತಾಗುವ ಸ್ಥಿತಿಯಲ್ಲಿವೆ. ಇವೆಲ್ಲವನ್ನು ವಿರೋಧಿಸಲು ನಮ್ಮ ಕವಿಗಳಿಗೆ ಬುದ್ಧ ಒಂದು ನೈತಿಕ ಶಕ್ತಿಯಾಗಿ ಕಂಡಿದ್ದಾನೆ.

ಬುದ್ಧ ಬಯಸಿದ್ದು,
ಭೂಗೋಳವಾಗಲಿ ಬೋಧಿವೃಕ್ಷದ ಹಣ್ಣು
ತೆರೆಯಲಿ ಹೂತುಹೋದ ಜೀವ ಜಲದ ಕಣ್ಣು
ಸುತ್ತಿ ಬರುತ್ತಿದೆ ಮತ್ತೆ ಕತ್ತಲು
ಬಾಳ ಬಟ್ಟೆಯ ತುಂಬ ಹೆಣದ ಬಟ್ಟೆ ಹಾಸಲು
..........................................................
ಜನನದ ಮುನ್ನವೇ ನಮ್ಮ
ಮೃತ್ಯು ಘೋಷಣೆ ಮಾಡಿಯಾಗಿದೆ
ಬಿತ್ತಲಾಗಿದೆ ಅಣು ಅಣು ವಿಭಜಿಸಿ
ಸಾವಿನ ಪರಮಾಣು
ಆಮದಾಗುತ್ತಿದೆ ಒಂದೆಡೆ ಸಾಮಾನ್ಯನ ಬದುಕು
ಸರಬರಾಜಾಗುತ್ತಿದೆ ಇನ್ನೊಂದೆಡೆ ಸಾವಿನ ಸರಕು
ಹೃದಯವನ್ನೇ ಬಾಂಬು ಮಾಡಿಕೊಂಡವರಿಂದು
ವಿಶ್ವಶಾಂತಿ ಮಂತ್ರ ಪಠಿಸುತ್ತಿದ್ದಾರೆ. [೫೩]

ಜಗತ್ತು ಸಾವನ್ನೇ ಸರಕಾಗಿಸಿಕೊಂಡಿದೆ. ಮನುಷ್ಯನ ನೆಮ್ಮದಿ, ಶಾಂತಿ, ಬೌದ್ಧಿಕ ವಿಕಾಸದ ಗುರಿಗಳು ಜಗತ್ತಿನ ಯಾವ ರಾಷ್ಟ್ರಗಳ ಮುಂದೆಯೂ ಇಲ್ಲ. ಭೌತಿಕ ಅಭಿವೃದ್ಧಿ, ಭೋಗ ಸಂಸ್ಕೃತಿ, ಹಿಂಸಾ ಪ್ರಚೋದನೆ, ಪ್ರತಿಷ್ಠೆ ಮುಂತಾದವುಗಳೇ ಮುಖ್ಯವಾಗಿವೆ. ಜಗತ್ತು ನೇತಾಡುವ ಬಾಂಬಿನ ಗೋಲವಾಗಿಬಿಟ್ಟಿದೆ. ಹೀಗೆ ಜಗತ್ತು ಹಿಂಸೆಯ ಅತಿರೇಕಗಳಲ್ಲಿ ವಿಜೃಂಬಿಸುತ್ತಿದೆ. ಬುದ್ಧ ಬೋಧಿಸಿದ್ದು ಶಾಂತಿಯನ್ನು, ವಿಶ್ವಪ್ರೇಮವನ್ನು ಆದರೆ ಜಗತ್ತು ಹಿಂಸೆ, ಯುದ್ಧಗಳ ಹಿಂದೆ ಬಿದ್ದಿದೆ. ಇದಕ್ಕೆ 'ಹೃದಯವನ್ನೇ ಬಾಂಬು' ಮಾಡಿಕೊಂಡಿರುವ ಆಧುನಿಕ ಮನುಷ್ಯನ ವಿಕೃತಿಗಳು ಕಾರಣ. ಜಗತ್ತನ್ನು ಹಿಂಸೆ ಆವರಿಸಿಕೊಂಡಿರುವ ಬಗೆಯನ್ನು ಕಂಡು. ಅತಿಯಾದ ನೋವು, ವಿಷಾದ, ಆಕ್ರೋಶವನ್ನು ಕವಿತೆ ವ್ಯಕ್ತಪಡಿಸುತ್ತದೆ. ಸಮಕಾಲೀನ ಜಗತ್ತಿನಲ್ಲಿ ಬುದ್ಧನ ಪ್ರತಿಪಾದನೆಗಳ ಪ್ರಸ್ತುತತೆಯನ್ನೂ, ಅವುಗಳ ಶ್ರೇಷ್ಟತೆಯನ್ನೂ, ಹೇಳುವುದರ ಜೊತೆಗೆ ಅವುಗಳು ಮನುಷ್ಯನ ಹೃದಯವನ್ನು ಬೆಳಗಬೇಕು ಎಂಬ ಆಶಯವನ್ನು ವ್ಯಕ್ತಪಡಿಸುತ್ತವೆ.

ಮುಂದುವರಿದು ಸಮಕಾಲೀನ ಜಗತ್ತಿನ ವಿಕೃತ ರಾಜಕಾರಣ, ಕೋಮುಹಿಂಸೆ, ಧಾರ್ಮಿಕ ಮೂಲಭೂತವಾದೀತನ, ದುರಾಸೆ, ಭ್ರಷ್ಟಾಚಾರ, ಕಂದಾಚಾರ, ಅಹಂಕಾರ, ಅಜ್ಞಾನ, ಶೋಷಣೆ ಇವೆಲ್ಲವುಗಳ ವಿರುದ್ಧ ತಮ್ಮ ಅಸಮಧಾನವನ್ನೂ, ಪ್ರತಿಭಟನೆಯನ್ನೂ, ಆಕ್ರೋಶವನ್ನು ಹೊರಹಾಕಲು ಬುದ್ಧ ಬಳಕೆಯಾಗಿದ್ದಾನೆ. ಹೀಗೆ ಬುದ್ಧ ಬಳಕೆಯಾಗಿರುವುದು ಬುದ್ಧನ ಪ್ರತಿಪಾದನೆಗಳ ತುರ್ತು ಅಗತ್ಯಗಳನ್ನು ಧ್ವನಿಸುತ್ತದೆ. ಆ ಮೂಲಕ ಕವಿಗಳ ಮಾನವೀಯ ಹಾಗೂ ಜೀವಪರ ತುಡಿತಗಳನ್ನು ಇಲ್ಲಿ ಕಾಣಬಹುದು. ಬುದ್ಧನ ವ್ಯಕ್ತಿತ್ವ, ಪ್ರತಿಪಾದನೆಗಳು ಸಮಕಾಲೀನ ಜಗತ್ತಿನ ಮೌಲ್ಯಗಳಾಗಬೇಕಾದ ತುರ್ತನ್ನು ಕವಿತೆಗಳು ಮಂಡಿಸುತ್ತವೆ.

ಬುದ್ಧ ಅಳುತ್ತಾನೆ
ಬುದ್ಧ ಸಿಟ್ಟಿಗೇಳುತ್ತಾನೆ
ಯುದ್ಧ ಬೇಡವೆಂದ ಬುದ್ಧ
ಬಾಂಬ್ ನೋಡಿ ಕಂಗಾಲಾಗುತ್ತಾನೆ
..................................................
ಡಿಸೆಂಬರ್ ಆರರ ಗ್ಯಾಂಗ್ ಮಸೀದಿ
ಬೀಳಿಸುವುದು ನೋಡಿ ಬುದ್ಧ ಖಿನ್ನನಾಗುತ್ತಾನೆ
ಆಶೆಯೇ ದು:ಖಕ್ಕೆ ಮೂಲವೆಂದ
ಬುದ್ಧ ಜನರ ದುರಾಶೆ ಕಂಡು ನೊಂದುಕೊಳ್ಳುತ್ತಾನೆ
ತಮ್ಮ ಕುರ್ಚಿ ಅಲುಗಾಡುತ್ತಿರುವಾಗ
ಬಾಂಬ್ ಹಾರಿಸುವ ರಾಜಕಾರಣಿಗಳ ಪರಿ ಕಂಡು
ಘೋಖ್ರಾನಿನ ಮರಳುಗಾಡಿನಲ್ಲೂ
ಖೋ ಖೋ ಎಂದು ಬುದ್ಧ ನಗುತ್ತಾನೆ [೫೪]

ಬುದ್ಧ ಮನುಷ್ಯನಲ್ಲಿನ ಕ್ರೌರ್ಯವನ್ನು ಕಂಡು ತನ್ನ ಮೂಲ ಶಾಂತ ಸ್ವಭಾವವನ್ನೇ ಮರೆತಿದ್ದಾನೆ. ಮೇಲಿಂದ ಮೇಲೆ ತಪ್ಪು ಮಾಡುತ್ತಿರುವ ಕತ್ತಲ ಕಡೆಗೇ ಪಯಣಿಸುತ್ತಿರುವ ಮನುಷ್ಯನ ಬದಲಾಗದ ಸ್ವಭಾವಗಳನ್ನು ಕಂಡು ಸ್ವತಹ ಬುದ್ಧನೇ ಸಿಟ್ಟಿಗೆದ್ದಿದ್ದಾನೆ. ಮನುಷ್ಯನ ವಿಕೃತಿ ಬುದ್ಧನನ್ನೇ ಬಲಿಸುವ ಮಟ್ಟಿಗೆ ಬೆಳೆದುನಿಂತಿರುವುದನ್ನು ಈ ಕವಿತೆ ವ್ಯಂಗ್ಯದೊಂದಿಗೆ ಕಟ್ಟಿಕೊಡುತ್ತದೆ. ಈ ಬಗೆಯ ಅಭಿವ್ಯಕ್ತಿಗಳು ಕೇವಲ ವಿರೋಧ, ಪ್ರತಿಭಟನೆಗಳಾಗಿ ನಿಲ್ಲದೆ ತಮ್ಮ ಸಮಕಾಲೀನ ಬದುಕಿನ ದುರಂತಗಳನ್ನು ಹೇಳುವ ನೋವಿನ ದನಿಗಳಾಗಿಯೂ ಕಂಡುಬರುತ್ತವೆ. ಸಮಕಾಲೀನ ಬದುಕನ್ನು ಸರಿಪಡಿಸುವ ಕಾಳಜಿಯನ್ನು ತೋರುತ್ತಲೇ,

ಸರಿಪಡಿಸಬಹುದಾದ ಮಾರ್ಗಗಳ ಬಗೆಗೂ ಗಂಭೀರವಾಗಿ ಚಿಂತಿಸಿವೆ. ಬುದ್ಧನಲ್ಲಿ ಅವೆಲ್ಲವನ್ನು ಕಂಡುಕೊಳ್ಳುವ ಪ್ರಯತ್ನ ಇಲ್ಲಿ ನಡೆದಿದೆ.

ಇನ್ನು ಕೆಲವು ಕವಿತೆಗಳು ಸಮಕಾಲೀನ ಬದುಕನ್ನು ಸರಿಪಡಿಸಲು ಬುದ್ಧನಲ್ಲಿ ದೂರುವ, ಮರುಹುಟ್ಟಿಗಾಗಿ ಹಂಬಲಿಸುವ ಪ್ರಯತ್ನಗಳನ್ನೂ ಮಾಡಿವೆ. ಮನುಷ್ಯನಲ್ಲಿರುವ ಈ ಧೈನ್ಯತೆಯ, ಅಸಹಾಯಕತೆಯ, ಪರಾಧೀನತೆಯ ಪ್ರವೃತ್ತಿಗಳನ್ನು ಕವಿತೆಗಳು ವಿಡಂಬಿಸುತ್ತವೆ. ತಮ್ಮ ಉದ್ಧಾರಕ್ಕಾಗಿ ದೈವದಲ್ಲಿ, ದೊರೆಯಲ್ಲಿ, ಮೊರೆಯಿಡುವ ಮನುಷ್ಯನ ಧೈನ್ಯತೆಯನ್ನು ನಾಗರೀಕತೆಯ ಎಲ್ಲ ಅವಸ್ಥೆಗಳಲ್ಲೂ ಕಾಣಬಹುದು. ಕವಿತೆಗಳೂ ಈ ರೀತಿಯ ಧೈನ್ಯತೆಯ ಸ್ಥಿತಿಗೆ ಇಳಿದಿರುವುದು ವ್ಯವಸ್ಥೆಯ ಅತ್ಯಂತ ದುಸ್ಥಿತಿಯ ಪ್ರತಿಬಿಂಬ. ವ್ಯವಸ್ಥೆ ತನ್ನ ಕೈಮೀರಿ ಹೋಗಿದ್ದರ ಆತ್ಯಂತಿಕ ಸ್ಥಿತಿಯ ಅನಾವರಣದಂತೆ ಕಾಣುತ್ತದೆ. ಆದರೆ ಬುದ್ಧ ಪ್ರತಿಪಾದಿಸಿದ್ದು 'ನಿನಗೆ ನೀನೆ' ಎಂದು. ನಮ್ಮನ್ನು ಕಾಪಾಡುವವರು, ಉದ್ಧರಿಸುವವವರು ಯಾರೂ ಇಲ್ಲ. ತಮ್ಮ ತಮ್ಮ ಉದ್ಧಾರವನ್ನು ತಾವೆ ಕಂಡುಕೊಳ್ಳಬೇಕು ಎಂದು ಬೋಧಿಸಿದ. ಆದರೆ ಮನುಷ್ಯ ಮಾತ್ರ ತನ್ನ ಉದ್ಧಾರಕ್ಕಾಗಿ, ವ್ಯವಸ್ಥೆಯನ್ನು ಸರಿಪಡಿಸಲಿಕ್ಕಾಗಿ 'ದೈವಾವತಾರಕ್ಕೆ', ಮಹಾನ್ ವ್ಯಕ್ತಿಗಳ ಹುಟ್ಟಿಗೆ ಕಾಯ್ದು ಕುಳಿತಿದ್ದಾನೆ. ಈ ಧೈನ್ಯತೆಯ ಸ್ಥಿತಿಯನ್ನು ವಿರೋಧಿಸುತ್ತಲೇ ತಮ್ಮ ಹಾಗೂ ತಮ್ಮ ಕಾಲದ ಸಮಸ್ಯೆಗಳನ್ನು ತಾವೇ ನಿವಾರಿಸಿಕೊಳ್ಳಬೇಕಾದ ಅನಿವಾರ್ಯತೆಯನ್ನು ಕೆಲವು ಕವಿತೆಗಳು ಒತ್ತಿ ಹೇಳುತ್ತವೆ. ಇತಿಹಾಸದಿಂದ ಪಾಠ ಕಲಿಯಬೇಕು, ಪರಂಪರೆಯ ಅರಿವು ವರ್ತಮಾನದ ಮದ್ದಾಗಬೇಕು. ಮಹಾನ್ ವ್ಯಕ್ತಿಗಳು ಭೌತಿಕವಾಗಿ ಇರದಿದ್ದರೂ ಅವರು ಬಿಟ್ಟುಹೋದ ಆಲೋಚನೆಗಳು ನಮ್ಮ ನಡುವೆ ಇವೆ. ಇವುಗಳು ಕೇವಲ ಮೆಚ್ಚುಗೆಯ ಸರಕುಗಳಾಗದ ಹಾಗೆ ನೋಡಿಕೊಂಡರೆ, ಅವು ನಮ್ಮ ಬದುಕಿನ ಭಾಗವಾಗುವ ಹಾಗೆ ಪ್ರಯತ್ನಿಸಿದರೆ ವರ್ತಮಾನದ ತಲ್ಲಣಗಳಿಗೆ ಉತ್ತರ ಸಿಗಬಹುದು.

ಕವಿಯ ಅಂತರಂಗದಲಿ ಕಾವು ಕೂತು
ಹಿಡಿದಿಟ್ಟ ಬುತ್ತಿ ಮಾತು
ಮನುಕುಲದ ಜೀವಧಾತು
ಮೊಳೆಯಲಿಕೆ ಕಾರಣವುಬೇಕೆ?
ಇತಿಹಾಸ ಚಕ್ರ ಗಿರಗಿರನೆ ತಿರುಗಿ
ಬಂದು ನಿಂತಿದೆ ಸೊರಗಿ
ಕೊರಗುತ್ತಾ ಕೂರಬೇಕೆ
ಬೆಳೆಯಬೇಕೆ ಜಟೆಯು
ಕಟ್ಟಬೇಕೆ ಹುತ್ತ
ಹಕ್ಕಿಯನೊಂದ ಕೊಲ್ಲಬೇಕೆ ಬೇಡ? [೫೫]

ಇತಿಹಾಸವನ್ನು ಪುನರಾವರ್ತಿಸದ ಹಾಗೆ ತಡೆಗಟ್ಟಬೇಕಾದರೆ ಬುದ್ಧನ ಪ್ರತಿಪಾದನೆಗಳು ನಮ್ಮ ಅಂತರಂಗದ ದನಿಗಳಾಗಬೇಕು. ಬುದ್ಧ ನಮ್ಮ ಬದುಕಿನ ಉಸಿರಾಗಬೇಕು ಎಂಬ ಹಂಬಲವನ್ನು ಇಲ್ಲಿ ವ್ಯಕ್ತವಾಗಿದೆ. ಆದರೆ ಮನುಷ್ಯ ಮಾತ್ರ ನಾಗರೀಕತೆಯುದ್ದಕ್ಕೂ ಇತಿಹಾಸದ ಪುನರಾವರ್ತನೆಗಾಗಿ ಕಾದುಕುಳಿತಿದ್ದಾನೆ. ಇತಿಹಾಸದಿಂದ ಪಾಠ ಕಲಿಯುವ ಗೋಡವೆಗೇ ಹೋದಂತೆ ಕಾಣುತ್ತಿಲ್ಲ. ಹಾಗಾಗಿ ಹಿಂಸೆ, ಯುದ್ಧಗಳು ನಾಗರೀಕತೆಯುದ್ದಕ್ಕೂ ವಿಜೃಂಭಿಸಿವೆ ಎಂಬ ಅಸಮಧಾನವನ್ನು ಈ ಕವಿತೆ ಹೊರಹಾಕುತ್ತದೆ.

ಬುದ್ಧನೆಂಬ ಚಂದ್ರಬಿಂಬಕ್ಕೆ ಅಂಗೈ ಹಿಡಿದವರ್ಯಾರು
ಅರಿವಿನ ಕಿರಣಗಳು ಹಿಂದೆ ಸರಿದಿವೆ
ಅಂಗುಲಿಮಾಲರು ಗರಿಕೆಯಂತೆ ಚಿಗುರಿದ್ದಾರೆ
ಬುದ್ಧನ,ಶಿವನ,ಜಿನ ಮಹಾವೀರನ

ಚಿತ್ರಪಟಗಳಲ್ಲಿ ಬೆರಳುಗಳು ಕಾಣೆಯಾಗಿವೆ [31]

ಅಂಗುಲಿಮಾಲ ಬುದ್ಧನ ಕರುಣೆಯ ಕಿರಣದಿಂದ ಪರಿವರ್ತಿತನಾಗುತ್ತಾನೆ. ಈ ಪರಿವರ್ತನೆ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಆಗಬೇಕೆಂದು ಬುದ್ಧ ಬಯಸಿದ. ಆದರೆ ಬುದ್ಧನ ಆ ಕರುಣೆಯ ಕಿರಣಕ್ಕೆ ಕೈ ಚಾಚದೆ ಮನುಷ್ಯ ಅಂಗುಲಿಮಾಲನ ಸಂತತಿಯಾಗಿದ್ದಾನೆ. ಚರಿತ್ರೆಯುದ್ಧಕ್ಕೂ ಮನುಷ್ಯ ಎಸಗಿರುವ ಕ್ರೌರ್ಯಗಳಿಗೆ ಲೆಕ್ಕವೇ ಇಲ್ಲ. ಆ ಕ್ರೌರ್ಯದ ಅತಿರೇಕ ಸ್ಥಿತಿ ಅತ್ಯಂತ ಅಮಾನವೀಯವಾದುದು. ಇದಕ್ಕೆಲ್ಲ ಕಾರಣ ಬುದ್ಧನೆಂಬ ಚಂದ್ರಬಿಂಬಕ್ಕೆ ಅಂಗೈ ಹಿಡಿಯದ ಮನುಷ್ಯನ ಅಹಂಕಾರ. ಮಾನವ ನಾಗರೀಕತೆಗೆ ಬುದ್ಧ ಆದರ್ಶವಾಗದೆ ಇರುವುದೇ ಅಂಗುಲಿಮಾಲನ ಸಂತತಿ ಬೆಳೆಯಲು, ಹಿಂಸೆ ವಿಜೃಂಭಿಸಲು ಕಾರಣವಾಗಿದೆ ಎನ್ನುತ್ತದೆ ಕವಿತೆ.

ಬುದ್ಧನನ್ನು ಮರೆತ ಈ ನಾಡು ಇಂದು ಅತ್ಯಂತ ದುಸ್ಥಿತಿಗೆ ಇಳಿದಿದೆ. ಅಜ್ಞಾನ ಅಂಧಕಾರಗಳಲ್ಲಿ ಜನತೆ ಮುಳುಗಿಹೋಗಿದ್ದಾರೆ. ಬುದ್ಧ ಇಲ್ಲಿನ ಜನರಿಗೆ ಆದರ್ಶವಾಗಿ ಉಳಿದಿಲ್ಲ. ಹಾಗಾಗಿಯೇ ಇಲ್ಲಿ ಕೊಳಕು ತುಂಬಿದೆ. ಬುದ್ಧ ಈ ನೆಲದ ಸಂಸ್ಕೃತಿಯನ್ನು ರೂಪಿಸಿಕೊಟ್ಟವನು. ಆದರೆ ಈ ನಾಡು ಮಾತ್ರ ಬುದ್ಧನನ್ನು ತಿರಸ್ಕರಿಸಿ ನಡೆದಿದೆ. ಇದೇ ಈ ನಾಡಿನ ಇಂದಿನ ದುಸ್ಥಿತಿಗೆ ಕಾರಣ. ಬುದ್ಧ ಕೊಟ್ಟ ಕಣ್ಣನ್ನು ಕಳೆದುಕೊಂಡಿದ್ದೇವೆ. ಹಿಂಸೆ, ಯುದ್ಧಗಳನ್ನು ಪ್ರಚೋದಿಸುವ, ಪ್ರಯತ್ನಗಳು ಮೇಲಿಂದ ಮೇಲೆ ನಡೆಯುತ್ತಿವೆ. ಜೀವನಾಶಕ ಅಸ್ತ್ರಗಳ ಹಿಂದೆ ಜಗತ್ತು ಬಿದ್ದು ಬುದ್ಧನ ಜೀವಪ್ರೀತಿ, ಕರುಣೆಗಳು ಸತ್ತುಹೋಗಿವೆ. ವಿಶ್ವಶಾಂತಿಯನ್ನು ಬಯಸಿದ ಬುದ್ಧನ ಜನ್ಮದಿನದಂದೇ ಅಣುಬಾಂಬ್ ಸ್ಫೋಟಿಸಿದ್ದು ಬುದ್ಧನ ನಗೆಯನ್ನೇ ಅಡಗಿಸುವ ಪ್ರಯತ್ನ.

ಬುದ್ಧನ ನಾಡಿನಲ್ಲಿ ಇಂದು
ಅಂದಿನ ಬೆಳಕೇ ಇಲ್ಲ
ಕಾರ್ಗತ್ತಲ ಖಂಡ,
ನಭವೆಲ್ಲ ನೀರು ಸುರಿಯದ ಕಾರ್ಮೋಡ
ಇದು ಸೂರ್ಯ ಮೂಡದ ನಾಡು
...................................................
ಕಣ್ಣು ಕಳೆದ್ಹೋದಾಗ ಬೆಳೆ ಬೆಳಕೆಲ್ಲಿಂದ ಬರಬೇಕು?
ಮರದೊಡಲ ಬಗಿದು ಹೂತಿಟ್ಟ
ಬೀಜಾಣು ಮೊಳೆಯಿತು, ಎಲೆ ಚಿಗಿತು ಕಾಯಾಗಿ
ರೆಂಬೆ ಕೊಂಬೆಯಲ್ಲಾ ಹಣ್ಣು ಬಾಂಬು
ಬೌದ್ಧ ಪೂರ್ಣಿಮೆಯಂದೇ ಈ
ಹಣ್ಣು ಬಾಂಬು ನೆಲಕ್ಕೆ ಬೀಳಬೇಕೆ? [32]

ಯಾವ ಉನ್ನತ ಮಾನವೀಯ ಮೌಲ್ಯಗಳನ್ನು ಬುದ್ಧ ಈ ನಾಡಿನಲ್ಲಿ ಬಿತ್ತಲು ಪ್ರಯತ್ನಿಸಿದನೋ, ಅವು ಈ ನಾಡಿನ ಜನರಲ್ಲಿ ಕಿಂಚಿತ್ತೂ ಬೆಳೆಯಲಿಲ್ಲ. ಬುದ್ಧನನ್ನು ಮರೆತಿದ್ದೇ ಈ ನಾಡಿನ ದುರಂತಕ್ಕೆ ಕಾರಣ. ವಿಶ್ವಕ್ಕೆ ಪ್ರೀತಿ, ಕರುಣೆ, ಶಾಂತಿಯ ಅಮೃತವನ್ನು ಎರೆಯಬೇಕಾಗಿದ್ದ ಈ ನಾಡು ಜೀವನಾಶಕ ಅಸ್ತ್ರದ ಪ್ರಯೋಗದಲ್ಲಿ ತೊಡಗಿರುವುದು ದುರಂತವೇ ಸರಿ ಎಂಬ ಆಕ್ರೋಶ ಕವಿತೆಯಲ್ಲಿ ವ್ಯಕ್ತವಾಗಿದೆ.

ಯಾವ ಮನುಷ್ಯನನ್ನೂ ಬುದ್ಧನಾಗಲು, ಬುದ್ಧನ ಪ್ರತಿಪಾದನೆಗಳನ್ನು ಮೈಗೂಡಿಸಿಕೊಳ್ಳಲು ಸಾಧ್ಯವಾಗದಷ್ಟು ಸಮಕಾಲೀನ ವಾತಾವರಣ ಎಷ್ಟು ಕಲುಷಿತವಾಗಿದೆ. ಇಲ್ಲಿನ ಕ್ರೌರ್ಯ, ಹಿಂಸೆ, ಬಡತನ, ಭ್ರಷ್ಟಾಚಾರ, ಅನೈತಿಕತೆ, ರಾಜಕಾರಣ ಮುಂತಾದವುಗಳು ಮನುಷ್ಯನಲ್ಲಿ ಮಾನವೀಯತೆಯನ್ನೇ ಮರೆಸುತ್ತಿವೆ.

ಇಂತಹ ಪ್ರಕ್ಷುಬ್ಧ ವಾತಾವರಣ ಮನುಷ್ಯನಲ್ಲಿ ಮತ್ತಷ್ಟು ನಿರಾಶೆಯನ್ನು ಹುಟ್ಟುಹಾಕುತ್ತಿದೆ ಎಂಬ ಆತಂಕವನ್ನು ಕೆ. ಕೇಶವಶರ್ಮರ 'ನಾನು ಬುದ್ಧನಾಗುವುದಿಲ್ಲ' ಕವಿತೆ ವ್ಯಕ್ತಪಡಿಸುತ್ತದೆ.

ಅಯ್ಯಾ ಈ ಸುತ್ತಣ ಜಗತ್ತಿಗೆ ಬಂದರೆ
ಪರಿಸರಕ್ಕೆ ಕಾಲನ್ನು ಮೈಯನ್ನು ಮನಸ್ಸನ್ನು
ಹಾಯಿಯಂತೆ ಬಿಚ್ಚಿ ನಿಂತರೆ ನಾನು ಯಾವತ್ತು
ಬುದ್ಧನಾಗುವುದಿಲ್ಲ.
.......................................................
ರಾತ್ರಿಯಲ್ಲಿ ಈ ಪರಿಸರದ ಭೀಕರ ಹಿಡಿತಕ್ಕೆ
ಬಡಕಲು ಹೆಂಡತಿ ಉಪವಾಸ ಮಲಗಿದ ಮಗ
ಕನಸಲ್ಲಿ ಹೆದರಿ ಚೀರಿಡುತ್ತಿದ್ದಾರೆ
ಯಾರಿಗೆ ಬೇಕಾಗುತ್ತದೆ. ಬುದ್ಧನಾಗುವ ಮನಸ್ಸು? [೫೮]

ಸಮಕಾಲೀನ ಬದುಕಿನ ಭೀಕರತೆ ಮನುಷ್ಯನಲ್ಲಿ ಯಾವ ಒಳ್ಳೆಯತನಗಳನ್ನೂ ಬಿತ್ತುತ್ತಿಲ್ಲ. ಕ್ರೌರ್ಯಗಳನ್ನೂ ನಿರಾಶೆಯನ್ನು ಹುಟ್ಟುಹಾಕುತ್ತಿವೆ. ಬುದ್ಧ ರೂಪಿಸಿಕೊಟ್ಟ ಬದುಕಿನ ಕ್ರಮಗಳು ಅರ್ಥವನ್ನು ಕಳೆದುಕೊಂಡಿವೆ ಎಂಬ ಆತಂಕ ಇಲ್ಲಿ ವ್ಯಕ್ತವಾಗಿದೆ. ಬುದ್ಧನನ್ನು ನೆಪವಾಗಿಸಿಕೊಂಡು ಸಮಕಾಲೀನ ಜಗತ್ತಿನ ದುಸ್ಥಿತಿಯನ್ನು ಕವಿತೆ ವಿಡಂಬಿಸುತ್ತಿದೆ.

ಬುದ್ಧ ಇಂದು ಈ ನೆಲಕ್ಕೇ ಅಪರಿಚಿತನಾಗಿಬಿಟ್ಟಿದ್ದಾನೆ. ಈ ನೆಲದಲ್ಲಿ ಹುಟ್ಟಿದ, ಈ ನೆಲದ ಸಂಸ್ಕೃತಿಯನ್ನು, ಬದುಕನ್ನು ರೂಪಿಸಿದ ಬುದ್ಧನನ್ನು ಈ ನೆಲದಲ್ಲಿ ಜೀವಂತವಾಗಿ ಉಳಿಸಿಕೊಳ್ಳಲಿಲ್ಲ. ಬುದ್ಧ ಕಂಡುಕೊಂಡ ಸತ್ಯದ ಬೆಳಕು ಈ ನಾಡನ್ನು ಬೆಳಗುವಂತೆ ಇಲ್ಲಿನ ಜನರು ಮಾಡಲಿಲ್ಲ ಎಂಬ ಆತಂಕ ಮೇಲಿಂದ ಮೇಲೆ ವ್ಯಕ್ತವಾಗಿದೆ.

ಬುದ್ಧ
ನೀ ನಿಂತ ನೆಲದಲ್ಲಿ ನೆರಳಿಲ್ಲ, ಬೆಳಕೂ ಇಲ್ಲ
ಗಡಿಯಾಚೆ ನಿನಗೆ ಮರಣಿಲ್ಲ
ಕತ್ತಲ ಮನೆ ಹುತ್ತ ಸೇರಿದ ಹಾವು ಹೊರಬರಲಿಲ್ಲ
ಈ ನೆಲಕ್ಕೆ ನೀ ಅರ್ಥವಾಗಿಲ್ಲ [೫೯]

ಬುದ್ಧ ಕೊಟ್ಟ ಜ್ಞಾನದ ಬೆಳಕಿನಿಂದ ಈ ನೆಲದ ಮನುಷ್ಯ ತನ್ನ ಅಂತರಂಗವನ್ನು ಬೆಳಗಿಸಿಕೊಳ್ಳಲೇ ಇಲ್ಲ. ತಮ್ಮ ತಮ್ಮ ಅಜ್ಞಾನದ ಹುತ್ತಗಳಲ್ಲಿ ಸೇರಿಕೊಂಡಿರುವ ಅವರು ಹೊರಬರುವ ಪ್ರಯತ್ನವನ್ನೇ ಮಾಡಿಲ್ಲ. ಈ ಹುತ್ತ ಮನುಷ್ಯನನ್ನು ಅಜ್ಞಾನದಲ್ಲಿಟ್ಟಿರುವ ವೈದಿಕ ಧರ್ಮವೇ ಆಗಿದೆ. ವೈದಿಕ ಧರ್ಮ ಈ ದೇಶದ ಜನರ ಬದುಕನ್ನು ನಿರಂತರವಾಗಿ ಕತ್ತಲಲ್ಲಿಡಲು ನಡೆಸುತ್ತಿರುವ ಹುನ್ನಾರಗಳೇ ಬುದ್ಧನಂಥ ಬೆಳಕನ್ನು ಇಲ್ಲವಾಗಿಸುತ್ತಿವೆ. ಈ ನೆಲ ಬುದ್ಧನನ್ನು ಅರಗಿಸಿಕೊಳ್ಳುವುದರಲ್ಲಿ, ತಮ್ಮ ಬದುಕಿನ ಭಾಗವಾಗಿಸಿಕೊಳ್ಳುವುದರಲ್ಲಿ ವಿಫಲವಾಗಿದೆ. ಜಗತ್ತು ಹಿಂಸೆಯ ಬೀಡಾಗಿದೆ. ಶಾಂತಿ ಎಂಬುದು ಕನಸಿನ ಮಾತಾಗುತ್ತಿದೆ. ಅಂಗುಲಿಮಾಲನ ಸಂತತಿ ಹೆಚ್ಚಾಗುತ್ತಿದೆ. ಮಾನವ ಪ್ರೀತಿಯ ಬುದ್ಧನ ನಗುವನ್ನು ಕಂಡು ಜಗತ್ತು ಸಹಿಸುತ್ತಿಲ್ಲ. ಬುದ್ಧನ ನಗುವನ್ನು ಇಲ್ಲವಾಗಿಸುವ ಪ್ರಯತ್ನಗಳು ಇನ್ನಿಲ್ಲದಂತೆ ನಡೆಯುತ್ತಿವೆ. ಪ್ರತಿಯೊಂದು ರಾಷ್ಟ್ರಗಳೂ ನಡೆಸುತ್ತಿರುವ ವಿನಾಶಕಾರೀ ಅಣುಬಲ ಪ್ರದರ್ಶನದ ವಿಕೃತಿಯನ್ನು ಕಂಡು ಬುದ್ಧ ನಗಲಾರದ ಸ್ಥಿತಿ ತಲುಪಿದ್ದಾನೆ.

ಶಾಂತಿ ಪಾರಿವಾಳಗಳ ಬೆರಳುಗಳ
ಕಿತ್ತು ಕೊರಳಿಗೆ ಧರಿಸಿ ನಿಂತ ಅಂಗುಲಿಮಾಲ
ಯಾರ ಶಾಪವೋ, ಯಾರ ನಿಟ್ಟುಸಿರೋ
ಸುತ್ತುವರಿಯುತಿದೆ ಜಾಲ
ಬುದ್ಧ ನಕ್ಕ
ಶಾಂತಿ ತುಂಬಿದ ಮನೆಯ

ಸಾಸಿವೆಗಾಗಿ ಮತ್ತೊಮ್ಮೆ ಗೌತಮಿಯ ಅಲೆದಾಟ
ಸಾವು ತುಂಬಿದ ಸಾಸಿವೆಗಳೆಲ್ಲ
ಸಿಡಿಯುತಿವೆ ಚಟಪಟ
ಬುದ್ಧ ನಕ್ಕ.
ತಾಯ ಎದೆ ಬಗಿದು, ನಗೆ ಸಿಗಿದು,
ಅಷ್ಟಾವಕ್ರ ಹೊರ ಬಂದ
ಅಣು, ರೇಣು, ತೃಣ ಕಾಷ್ಟಗಳಲಿ
ಹರಿದು, ಸಿಡಿದು, ಭೂವ್ಯೋಮ ಹಬ್ಬಿದ
ಬುದ್ಧ ನಕ್ಕ[೬೧]

ಕವಿತೆ ಆಧುನಿಕ ಜಗತ್ತಿನ ಹಿಂಸಾ ಪ್ರೇಮವನ್ನು ವಿಡಂಬಿಸಲು, ಮುಖಾಮುಖಿಯಾಗಲು ಬುದ್ಧನನ್ನು ನೈತಿಕ ಅಸ್ತ್ರವಾಗಿ ಬಳಸಿಕೊಂಡಿದೆ. ತಮ್ಮ ವಿನಾಶಕಾರಿ ಪರಮಾಣು ಅಸ್ತ್ರ ಪ್ರಯೋಗದ ವಿಕೃತಿಯನ್ನು ಮರೆಮಾಚಲು 'ಬುದ್ಧನ ನಗೆ'ಯನ್ನು ಬಳಸಿಕೊಂಡಿರುವುದರ ಬಗ್ಗೆ ಕವಿತೆ ಅಸಮಧಾನ, ಆಕ್ರೋಶಗಳನ್ನು ವ್ಯಕ್ತಪಡಿಸುತ್ತಲೇ ಅದರ ಕ್ರೌರ್ಯದ ನಡೆಗಳನ್ನು ಗುರುತಿಸುತ್ತದೆ. ಯುದ್ಧ ಮತ್ತು ಅದರ ವಿನಾಶಕಾರಿ ಪರಿಣಾಮಗಳನ್ನು ತಪ್ಪಿಸಲು ಪ್ರಯತ್ನಿಸಿ ಅಪಾರವಾದ ಕರುಣೆಯಿಂದ ನಕ್ಕ ಬುದ್ಧ ಇಂದು ಮನುಷ್ಯನ ಹುಚ್ಚಾಟವನ್ನು ಕಂಡು ಮತಿಭ್ರಮಣೆಯಿಂದ ನಗುವಂತಾಗಿರುವುದು ಬುದ್ಧನಿಗೆ ಈ ನೆಲ ತೋರಿಸುತ್ತಿರುವ ಕೃತಘ್ನತೆಯ ಸಂಕೇತವೇ ಆಗಿದೆ. ಇಡೀ ವಿಶ್ವವೇ ಅಣು ಅಸ್ತ್ರಗಳ ಪ್ರಯೋಗಗಳಿಂದಾಗಿ ಅಶಾಂತಿಯ ಬೀಡಾಗುತ್ತಿದೆ. ಶಾಂತಿಯ ಭರವಸೆಗಳು ಇಲ್ಲವಾಗಿವೆ ಎಂಬುದನ್ನು ಈ ಮುಂದಿನ ಕವಿತೆ ಸಶಕ್ತವಾಗಿ ವಿಡಂಬಿಸುತ್ತದೆ.

ಗಲ್ಲಿಯೆಡೆಯ ಕತ್ತಲಿಂದ
ಕತ್ತಲೊಳಗಿನ ಬೆತ್ತಲಿಂದ
ಪೋಖ್ರಾನಿನ ಪೂತನಿಂದ
ಚಾಗಾಯಿಯ ಜಾಗದಿಂದ
ಹೋದಿರೆಲ್ಲ ಪಾರಿವಾಳಗಳೇ
ಹಾರಿ ಹಾರಿ ಪರಾರಿ! [೬೧]

ಮಾನವ ಚರಿತ್ರೆ ತಲುಪಿರುವ ಅತ್ಯಂತ ದುರಂತ ಸ್ಥಿತಿಯ ವಿಡಂಬನೆ ಇದು. ಶಾಂತಿಯ ಪಾರಿವಾಳಗಳು ಈ ಜಗತ್ತಿನಿಂದಲೇ ದೂರ ಹೋಗಿರುವ ಆತಂಕವನ್ನು ವ್ಯಕ್ತಪಡಿಸುವ ಈ ಕವಿತೆ ವಿಶ್ವಶಾಂತಿ ಮತ್ತು ಮೈತ್ರಿಗಳು ಇನ್ನು ಮನುಷ್ಯ ಜಗತ್ತಿನಲ್ಲಿ ಸಾಧ್ಯವಿಲ್ಲದ ಸಂಗತಿಗಳಾಗಿವೆ ಎಂಬ ಭಯಾನಕ ಸತ್ಯವನ್ನು ಧ್ವನಿಸುತ್ತದೆ. ಹೀಗೆ ಹೇಳುತ್ತಲೇ ಜಾಗತಿಕ ಶಾಂತಿಯ ಅಗತ್ಯವನ್ನೂ, ಬುದ್ಧನ ಪ್ರತಿಪಾದನೆಗಳ ತುರ್ತು ಅಗತ್ಯವನ್ನೂ ಒತ್ತಿ ಹೇಳುತ್ತಿದೆ.

ವೈಚಾರಿಕತೆಯನ್ನೂ, ನಿಸರ್ಗ ಸತ್ಯಗಳನ್ನು ಪ್ರತಿಪಾದಿಸಿದ ಬುದ್ಧನನ್ನು ವೈದಿಕೀಕರಣಗೊಳಿಸಲಾಗಿದೆ. ವೈದಿಕ ಧರ್ಮದ ನಂಬಿಕೆಗಳನ್ನು, ಆಚರಣೆಗಳನ್ನು ವೈಚಾರಿಕ ನೆಲೆಯಿಂದ ಮುಖಾಮುಖಿಯಾದ ಬುದ್ಧನನ್ನು ಕಾಲಾನಂತರದಲ್ಲಿ ಪವಾಡ ಪುರುಷನನ್ನಾಗಿ, ದೈವೀಪುರುಷನನ್ನಾಗಿ ಚಿತ್ರಿಸಲಾಗಿದೆ. ಚರಿತ್ರೆಯ ಈ ವಿಚಿತ್ರ ಗತಿಯನ್ನು, ವೈದಿಕಶಾಹಿಯ ಆಕ್ರಮಣಕಾರೀ ನಡೆಯನ್ನು ಇಂದಿಗೂ ಈ ನಾಡಿನಲ್ಲಿ ನೋಡಲು ಸಾಧ್ಯವಿದೆ. ಇದು ಕೇವಲ ಬುದ್ಧನ ವಿಷಯದಲ್ಲಿ ಮಾತ್ರವಲ್ಲ. ಮಾನವತೆಯನ್ನು ಬೆಳಗಲು ಬಂದ ಎಲ್ಲಾ ಮಹಾನ್ ವ್ಯಕ್ತಿತ್ವಗಳನ್ನೂ ಚರಿತ್ರೆ ಹಾಗೆಯೇ ನೋಡಿದೆ.

ಉಪದೇಶ ನುಡಿಯಲಿಲ್ಲ ಕಂತೆ ಕತೆಗಳ ಹಿಡಿಯಲಿಲ್ಲ
ಗೂಢವನುಸುರಿ ದೇವದೂತನೆನಿಸಲಿಲ್ಲ
ಬೆಳೆದ ನೆಲದಿ ತಾನು, ಜನ ಎಲ್ಲವನರಿಯೆ
ನೀನೆಯೆಂದುಲುಹಿ ಚಿಚ್ಛಕ್ತಿಯನಿತ್ತ ಬುದ್ಧ
ಅವತಾರ ಪುರುಷನಾದನಹ !!

..............................................
ಇತಿಹಾಸಕ್ಕೆ ದೇವರೂಪ ಲೇಪನ
ನೀಡಲೆಂದು ಬೇಡುವ ಮೂಢ ನರ್ತನ [53]

ಭಾರತದ ಚರಿತ್ರೆಯುದ್ದಕ್ಕೂ ವೈದಿಕಶಾಹಿ ಎಲ್ಲ ಜ್ಞಾನ ಪರಂಪರೆಗಳನ್ನೂ ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತಾ, ವಿರೂಪಗೊಳಿಸುತ್ತಾ ಬಂದಿರುವ ಬಗೆಯನ್ನು ಕವಿತೆ ಸೂಕ್ಷ್ಮವಾಗಿ ಹಿಡಿದಿಡುತ್ತದೆ. ಬುದ್ಧನ ನಂತರ ಆತನನ್ನೂ, ಆತನ ಪ್ರತಿಪಾದನೆಗಳನ್ನೂ ವೈದಿಕೀಕರಣಗೊಳಿಸಿದ ಚಾರಿತ್ರಿಕ ಸತ್ಯಗಳನ್ನು ನೆನಪಿಸುತ್ತದೆ. ವೈದಿಕಶಾಹೀ ಹುನ್ನಾರಗಳು ವರ್ತಮಾನದಲ್ಲೂ ಪ್ರಭಾವಬೀರುತ್ತಿರುವುದನ್ನು ಗುರುತಿಸುತ್ತಿದೆ. ಬುದ್ಧನನ್ನು ಹೀಗೆ ಚರಿತ್ರೆಯಲ್ಲಿ ವೈದಿಕೀಕರಣಗೊಳಿಸುತ್ತಾ ಬಂದು ಆಧುನಿಕ ಸಂದರ್ಭದಲ್ಲಿ ಅವನನ್ನು ಸಂಪೂರ್ಣವಾಗಿ ಬದಲಾಯಿಸಲಾಗಿದೆ. ಆಧುನಿಕ ಮನುಷ್ಯನ ದಾಹ – ಮೋಹಗಳು, ರಾಜಕಾರಣದ ವಿಕೃತಿಗಳು, ಬುದ್ಧನನ್ನು ತಮ್ಮ ಅಗತ್ಯಗಳಿಗೆ ತಕ್ಕಂತೆ ಬದಲಾಯಿಸಿ ಬಿಟ್ಟಿವೆ. ಇಲ್ಲಿ ಬುದ್ಧ ನಗುವನ್ನು ಮರೆತು ಅಟ್ಟಹಾಸ ಮೆರೆದಿದ್ದಾನೆ. ನಿರ್ಮೋಹವನ್ನು ತೊರೆದು ಮೋಹಿಯಾಗಿದ್ದಾನೆ. ಹೀಗೆ ಬುದ್ಧನನ್ನೂ, ನಮ್ಮೊಳಗೆ ಬೆಳಗಬೇಕಾದ ಬುದ್ಧತ್ವವನ್ನೂ ಬದಲಾಯಿಸಿ ಅವುಗಳಿಗೆ ವಿರುದ್ಧವಾಗಿ ನಡೆಯುತ್ತಿದ್ದೇವೆ ಎಂಬ ನೋವು ಕವಿತೆಗಳಲ್ಲಿ ವ್ಯಕ್ತವಾಗಿದೆ.

ಒಂದಿನಿತು ಬಿಡದೆ ತಪಮಾಡಿದ
ತಪ್ಪಿಗೆ
ಭುವಿ ಬದಲಾಗದಕ್ಕೆ
ಬುದ್ಧ ಸಿಟ್ಟಿಗೆದ್ದಿದ್ದಾನೆ.
..............................................
ಈ ವೇಷದಲ್ಲಿ ನೀವೂ ಅವನನ್ನು
ಗುರುತು ಹಿಡಿಯಲಾರಿರಿ
ಕೂದಲುಗಳು ಹರಡಿಕೊಂಡಿವೆ
ಕಣ್ಣುಗಳು ಕ್ರೌರ್ಯದಿಂದ ಕೆಂಪಾಗಿವೆ.
ಕರಿಮೈಯಲಿ ಬೆವರಿದೆ
ಹಣೆಗೆ ರಕ್ತ ತಿಲಕವಿದೆ
ಕೈಯಲೊಂದು ಕಠಾರಿಯಿದೆ.
ಸಂಸ್ಕೃತಿಯ, ಸತ್ಯದ
ಶಾಂತಿಯ, ಅಹಿಂಸೆಯ, ತಾಳ್ಮೆಯ
ತಲೆಕಡಿದು ಬಿದ್ದಿದೆ.
ಬಿಳಿ ಟೋಪಿಯ
ಡುಮ್ಮ ಹೊಟ್ಟೆಯ
ಕುರ್ಚಿಯ ಕಾಲಿಗೆ ಸಿಕ್ಕು
ಬುದ್ಧ ಕಟುಕನಾಗಿದ್ದಾನೆ
ಈಗ
ಬುದ್ಧ ಬಲಾಗಿದ್ದಾನೆ [54]

ಬುದ್ಧ ಬದಲಾಗದ ಮನುಷ್ಯ ಸ್ವಭಾವಗಳನ್ನು ಕಂಡು ತಾನೆ ಬದಲಾಗಿದ್ದಾನೆ, ಸಿಟ್ಟಿಗೆದ್ದಿದ್ದಾನೆ. ಶಾಂತಮೂರ್ತಿಯಾದ ಬುದ್ಧನನ್ನೇ ಬದಲಾಯಿಸಿಬಿಡುವ ಮಟ್ಟಿಗೆ ಸಮಕಾಲೀನ ವಾತಾವರಣ ಹದಗೆಟ್ಟಿದೆ. ಮುಂದುವರಿದು ಬುದ್ಧನ ಸ್ವಭಾವಗಳಲ್ಲಿ ಬದಲಾವಣೆಯಾಗಲು ಕಾರಣವಾದ ಆಧುನಿಕ ಮನುಷ್ಯನ ವಿಕೃತ ಅಟ್ಟಹಾಸಗಳನ್ನು ಬಯಲು ಮಾಡುತ್ತದೆ. ಈ ಕವಿತೆ ಬುದ್ಧನ ಸುತ್ತಾ ನಡೆಯುತ್ತಿರುವ ರಾಜಕಾರಣವನ್ನೂ, ಸಮಕಾಲೀನ ಮನುಷ್ಯನ ವಿಕೃತ ಸ್ವಭಾವಗಳನ್ನೂ ಒಟ್ಟಿಗೇ ವಿಡಂಬಿಸುತ್ತದೆ. ಆಧುನಿಕ ಜಗತ್ತಿನ ವಿಕಾರಗಳನ್ನು ನೋಡಿ ಸ್ವತಹ ಬುದ್ಧ ಬದಲಾಗಿಹೋಗಿದ್ದಾನೆ. ಇದು ಸಮಕಾಲೀನ, ಜಗತ್ತಿನ ಅತ್ಯಂತ ದುರಂತ ಸ್ಥಿತಿಯನ್ನು ಧ್ವನಿಸುತ್ತಿದೆ. ಎಲ್ಲಾ ಮಾನವೀಯ, ಜೀವಪರ ಮೌಲ್ಯಗಳು ತಮ್ಮ ಅರ್ಥವನ್ನು ಕಳೆದುಕೊಂಡು ನಾಶವಾಗಿವೆ. ಬುದ್ಧನ ನಂಬಿಕೆ, ವಿಶ್ವಾಸಗಳು ತಲೆಕೆಳಗಾಗಿವೆ. ಅಸಹಾಯಕತೆಯಿಂದ ಬುದ್ಧ ತನ್ನ ಮಾರ್ಗವನ್ನೇ

ಬದಲಾಯಿಸಿಕೊಂಡಿದ್ದಾನೆ. ಧರ್ಮದ, ದೇವರ, ವ್ಯಕ್ತಿಯ ಹೆಸರಿನಲ್ಲಿ ನಡೆಯುವ ಹಿಂಸೆಯ ನಾನಾ ರೂಪಗಳನ್ನು ಹಿಡಿದಿಟ್ಟಿದೆ. ಬುದ್ಧನ ಮೂಲಕ ತನ್ನ ಸಮಕಾಲೀನ ಬದುಕಿನ ಅತ್ಯಂತ ಹೀನ ಹಾಗೂ ನರಕ ಸದೃಶ ಸ್ಥಿತಿಯನ್ನು ಚಿತ್ರಿಸುವ ಮೂಲಕ ತನ್ನ ವಿರೋಧವನ್ನು ದಾಖಲು ಮಾಡುವ ಕೆಲಸವನ್ನು ಕವಿತೆ ಮಾಡಿದೆ.

ಸಿದ್ಧಾರ್ಥನನ್ನು ಬುದ್ಧನನ್ನಾಗಿಸಿದ ಜಿಜ್ಞಾಸೆಯ ಮೂಲ ವೈಯಕ್ತಿಕ ಸಮಸ್ಯೆಗಳಿಂದ ಪ್ರೇರಿತವಾದುದಲ್ಲ. ತನ್ನೆದುರಿನ ಮನುಷ್ಯರ ಬದುಕಿನ ಸಂಕಟಗಳಿಗೆ ಸ್ಪಂದಿಸಿದ ಸಂವೇದನಾಶೀಲ ಗುಣದಿಂದಾಗಿ ಆತ ಬುದ್ಧನಾದ. ತನ್ನೆದುರಿನ ಮನುಷ್ಯನ ಸಮಸ್ಯೆ, ಸಂಕಟಗಳಿಗೆ ಸ್ಪಂದಿಸುವ ಮಾನವೀಯ ಸಂವೇದನೆ ಯಾವ ಮನುಷ್ಯರಲ್ಲಿರುತ್ತದೋ ಅವನು ಬುದ್ಧನಾಗಬಲ್ಲ ಎಂಬುದನ್ನು ಬುದ್ಧನ ಜೀವನ ನಮಗೆ ಕಲಿಸಿಕೊಟ್ಟಿದೆ. ಆದರೆ ಸಮಕಾಲೀನ ಪರಿಸ್ಥಿತಿಗಳು ಭಿನ್ನವಾಗಿ ಹೋಗಿವೆ. ಆಧುನಿಕ ಬದುಕಿನ ಒತ್ತಡಗಳು, ಮೋಹಗಳು ಮನುಷ್ಯನಲ್ಲಿ ಆ ಮೂಲ ಸಂವೇದನೆಗಳನ್ನೇ ನಾಶಮಾಡಿವೆ. ತನ್ನೆದುರಿಗೆ ಕಾಣುತ್ತಿರುವ ಯಾವ ಹಿಂಸೆಗಳೂ, ಸಂಕಟಗಳೂ, ದುರಂತ ಸ್ಥಿತಿಗಳೂ ಅವನನ್ನು ಅಲುಗಾಡಿಸುತ್ತಿಲ್ಲ. ಅಷ್ಟು ಸಂವೇದನಾ ಹೀನನಾಗಿದ್ದಾನೆ. ಮನುಷ್ಯ ಆಂತರಿಕ ವಿಕಾಸಕ್ಕಿಂತ ಭೌತಿಕ ಸುಖಗಳಲ್ಲಿಯೇ ಮುಳುಗಿಹೋಗಿದ್ದಾನೆ. ಯಾವ ಸಮಸ್ಯೆಗಳೂ ಆತನಲ್ಲಿ ಜಿಜ್ಞಾಸೆಯನ್ನು ಹುಟ್ಟುಹಾಕುತ್ತಿಲ್ಲ ಎಂಬ ಆತಂಕ ವ್ಯಕ್ತವಾಗಿದೆ. ಮನುಷ್ಯ ತನ್ನ ನಾಗರೀಕತೆಯ ಬೆಳವಣಿಗೆಯ ಹಾದಿಯಲ್ಲಿ ಯಾವ ಉನ್ನತ ಮಾನವೀಯ ಸಂವೇದನೆಗಳನ್ನು ರೂಢಿಸಿಕೊಳ್ಳಬೇಕಾಗಿತ್ತೋ ಅವುಗಳನ್ನು ರೂಢಿಸಿಕೊಳ್ಳದೆ ಸಂವೇದನಾ ಹೀನನಾಗಿಬಿಟ್ಟಿರುವ ದುರಂತವನ್ನು ಕವಿತೆ ಹಿಡಿದಿಟ್ಟಿದೆ. ಬುದ್ಧನಿಗಿದ್ದ ಜಿಜ್ಞಾಸೆ, ಮಾನವೀಯ ಸಂವೇದನೆಗಳು ಎಲ್ಲಿಯವರೆಗೆ ಮನುಷ್ಯನಲ್ಲಿ ನೆಲೆಸುವುದಿಲ್ಲವೋ ಅಲ್ಲಿಯವರೆಗೆ ಮನುಷ್ಯನ ಸಂಕಟಗಳಿಗೆ, ಜಗತ್ತಿನ ಮುಂದಿರುವ ಸವಾಲುಗಳಿಗೆ ಪರಿಹಾರಗಳಿಲ್ಲ ಎಂದು ಹೇಳುತ್ತಲೇ ಸಮಕಾಲೀನ ಮನುಷ್ಯನ ಸಂವೇದನಾಹೀನ ವ್ಯಕ್ತಿತ್ವಗಳನ್ನು ವ್ಯಂಗ್ಯವಾಡುತ್ತಿದೆ.

ಸಮಕಾಲೀನ ಜಗತ್ತಿನ ಕ್ರೌರ್ಯ, ಅನೈತಿಕತೆಗಳ ವಿರುದ್ಧದ ತಮ್ಮ ಸಿಟ್ಟು, ಅಸಮದಾನಗಳನ್ನು ಹೊರಹಾಕಲು ಬುದ್ಧನನ್ನು ಬಳಸಿಕೊಳ್ಳುವ ಅನೇಕ ಕವಿತೆಗಳು ಬುದ್ಧನನ್ನು ಹೀನಸ್ಥಿತಿಗೆ ಇಳಿಸಿರುವ ರಾಜಕಾರಣಗಳನ್ನು ವಿರೋಧಿಸುತ್ತವೆ. ಬುದ್ಧನನ್ನೇ ತಮ್ಮ ರಾಜಕಾರಣದ ವಸ್ತುವಾಗಿಸಿಕೊಳ್ಳುತ್ತಿರುವುದರ ವಿರುದ್ಧ ದನಿ ಎತ್ತುವ ಮೂಲಕ ಬುದ್ಧನಲ್ಲಿ ಬದಲಾವಣೆಯನ್ನು ಪ್ರಚೋದಿಸುತ್ತವೆ. ಈ ಪ್ರಚೋದನೆ ದ್ವೇಷದಿಂದ ಬಂದದ್ದಲ್ಲ. ವ್ಯವಸ್ಥೆಯ ಕ್ರೌರ್ಯವನ್ನು ಸರಿಪಡಿಸಲಾಗದ ಅಸಹಾಯಕತೆಯಿಂದ ಹುಟ್ಟಿದ್ದು.

ನಿತ್ಯ ನಿನ್ನ ತತ್ವಗಳ ಕತ್ತ ಹಿಚುಕುತ್ತ
ಸಾಯಿಸುವ ಜನರ ಮಧ್ಯೆ ಕಲ್ಲಾಗಿ, ಕಥೆಯಾಗಿ,
ಮೂಕ ಸಾಕ್ಷಿಯಾಗಿಹ ನಿನಗೆ
ಸಿಟ್ಟು ಸೇಡುಗಳು ಇಲ್ಲವೇ?
ಅಥವಾ ಅವರನ್ನು ನೋಡಿ ಇನ್ನೂ
ನಿನಗೆ ಕರುಣೆಯೋ ಅಥವಾ ಮರುಕವೋ?[೬೪]

ಬುದ್ಧನಲ್ಲೂ ಸಿಟ್ಟು, ಸೇಡುಗಳನ್ನು ನಿರೀಕ್ಷಿಸುವ ಮಟ್ಟಿಗೆ ಜಗತ್ತು ಭ್ರಷ್ಟವಾಗಿದೆ. ನೋವು ಹತಾಶೆಗಳಿಂದ ವ್ಯಗ್ರವಾದ ಮನಸ್ಥಿತಿಯ ಅಭಿವ್ಯಕ್ತಿಗಳ ಹಾಗೆ ಕವಿತೆ ಕಂಡುಬರುತ್ತದೆ.

ಹೀಗೆ ಬುದ್ಧನ ವ್ಯಕ್ತಿತ್ವದ ಅನನ್ಯತೆ, ಮಾನವೀಯ ಕಾಳಜಿ, ಮಾನವನ ಸಂಕಟಗಳಿಗೆ ಅವನು ನೀಡುವ ಪರಿಹಾರಗಳ ಪ್ರಸ್ತುತತೆಯನ್ನು ಹೇಳುತ್ತಲೇ ಸಮಕಾಲೀನ ಜಗತ್ತಿನ ವಿಕೃತ ಮುಖಗಳನ್ನು, ಮನುಷ್ಯನಲ್ಲಿ

ನೆಲೆಸಿರುವ ಕ್ರೌರ್ಯದ ಅತಿರೇಕಗಳನ್ನು ವಿಡಂಬಿಸಲಾಗಿದೆ. ಇಲ್ಲಿ ಸಮಾಜದ ಎದೆಯೊಡೆದ ಮನಸ್ಸುಗಳು ಮಾತನಾಡುತ್ತಿವೆ. ಸಮಕಾಲೀನ ಕಲುಷಿತ ವಾತಾವರಣವನ್ನು ಕಂಡು ನೋವು, ಹತಾಶೆ, ಸಿಟ್ಟು, ಆಕ್ರೋಶ, ಆತಂಕ, ಅಸಮಧಾನಗಳು ವ್ಯಕ್ತವಾಗಿವೆ. ಇವೆಲ್ಲವನ್ನೂ ತೋಡಿಕೊಳ್ಳುವ ಒಂದು ಮಾರ್ಗವಾಗಿ ಬುದ್ಧ ಬಳಕೆಯಾಗಿದ್ದಾನೆ. ಬುದ್ಧನ ವ್ಯಕ್ತಿತ್ವವನ್ನು ಸಮಕಾಲೀನ ಜಗತ್ತಿನ ಹಲವು ತಲ್ಲಣಗಳ ನಡುವೆ ಇಟ್ಟು ನೋಡುವ ಈ ವಿನೂತನ ಪ್ರಯತ್ನ ಏಕಕಾಲದಲ್ಲಿ ಬುದ್ಧನನ್ನೂ ಸಮಕಾಲೀನ ಮನುಷ್ಯನ ವರ್ತನೆಗಳನ್ನೂ ಅರಿಯುವ ಪ್ರಯತ್ನವಾಗಿದೆ. ಜೊತೆಗೆ ಸಮಕಾಲೀನ ಸಮಸ್ಯೆಗಳಿಗೆ ಬುದ್ಧನಲ್ಲಿ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಯತ್ನವೂ ಆಗಿರುವುದು ವಿಶಿಷ್ಟವಾಗಿದೆ. ಕನ್ನಡ ಕಾವ್ಯ ಬೌದ್ಧ ಗ್ರಹಿಕೆಯೊಂದಿಗೆ ಜಾಗತಿಕ ಹಿಂಸೆಯೊಂದಿಗೆ ಮುಖಾಮುಖಿಯಾಗುತ್ತಿರುವುದು, ಸ್ವವಿಮರ್ಶೆಯಲ್ಲಿ ತೊಡಗಿರುವುದು ನಾವು ಕಳೆದುಕೊಂಡಿರುವ ಬುದ್ಧನ ಅಮೂಲ್ಯ ಜೀವನ ಕ್ರಮಗಳನ್ನು ಮುನ್ನೆಲೆಗೆ ತರುವ ಪ್ರಯತ್ನಗಳಾಗಿಯು ಕಂಡುಬರುತ್ತಿರುವುದು ವಿಶೇಷ.

### ೨ ಯಶೋಧರೆಯ ನೆಲೆಯಿಂದ

ಬುದ್ಧನ ವ್ಯಕ್ತಿತ್ವವನ್ನು ಯಶೋಧರೆಯ ನೆಲೆಯಿಂದ ಒರೆಗೆ ಹಚ್ಚಿ ನೋಡುವ ಪ್ರಯತ್ನವನ್ನು ಹಲವು ಕವಿತೆಗಳು ಮಾಡಿವೆ. ಸಿದ್ಧಾರ್ಥ ಅರಮನೆ, ಮಡದಿ, ಮಗು, ಸುಖ ಭೋಗಗಳನ್ನು ತೊರೆದು ನಡೆದದ್ದೇ ಮಹಾನ್ ತ್ಯಾಗ, ವಿಜಯ ಎಂದೆಲ್ಲಾ ವೈಭವೀಕರಿಸಿ ನೋಡುವ ಪುರುಷ ದೃಷ್ಟಿಕೋನಗಳೇ ಪ್ರಧಾನವಾಗಿರುವ ಸಂದರ್ಭದಲ್ಲಿ ಯಶೋಧರೆಯ ತುಮುಲಗಳಿಗೆ ದನಿ ನೀಡಿರುವುದು ಒಂದು ವಿಶಿಷ್ಟ ಪ್ರಯೋಗ ಅಷ್ಟೇ ಅಲ್ಲ ವ್ಯಕ್ತಿಯನ್ನು, ಚರಿತ್ರೆಯನ್ನೂ ಅರಿಯುವ ಬಹುಮುಖೀ ನೆಲೆಯಾಗಿಯೂ ಮಹತ್ವ ಪಡೆಯಬಲ್ಲದು. ಮಡದಿ, ಮಗು, ಮನೆ ಇವು ಪುರುಷನ ಸಾಧನೆಗೆ ಅಡ್ಡಿ, ಮಾಯೆ, ಎಂದು ಪರಿಭಾವಿಸುವ ಏಕಮುಖೀ ಆಲೋಚನೆಗಳು ಅವುಗಳನ್ನು ತೊರೆದದ್ದೇ ಸಾಧಕನ ಮಹಾನ್ ವಿಜಯವೆಂಬಂತೆ ಸಂಭ್ರಮಿಸುತ್ತವೆ. ಆದರೆ ಅದೇ ಸಂದರ್ಭದಲ್ಲಿ ಹೆಣ್ಣಿಗೂ ಇರಬಹುದಾದ ಆಧ್ಯಾತ್ಮಿಕ ನಿಲುವುಗಳನ್ನು, ಸಾಧನೆಯ ಕನಸುಗಳನ್ನು, ಪ್ರಾಪಂಚಿಕ ಸತ್ಯಗಳನ್ನು ತಿಳಿಯುವ ಬಯಕೆಗಳನ್ನು ಪರಿಗಣಿಸುವುದೇ ಇಲ್ಲ. ಹಾಗೂ ಸಂಸಾರದಲ್ಲಿದ್ದುಕೊಂಡೇ ಪಡೆಯುವ ಅನುಭವದ ಜ್ಞಾನಕ್ಕೆ ಮನ್ನಣೆಯೇ ಇಲ್ಲ. ಹೀಗೆ ಸಂಸಾರವನ್ನು ನಿರಾಕರಿಸುವಲ್ಲಿ ಗಂಡಿಗೆ ಇರುವ ಧಾರ್ಮಿಕ, ಸಾಮಾಜಿಕ ಸ್ವಾತಂತ್ರ್ಯಗಳು ಹೆಣ್ಣಿಗೆ ಇರುವುದಿಲ್ಲ. ಗಂಡು ತನ್ನ ಆಧ್ಯಾತ್ಮಿಕ ಸಾಧನೆಗೆ ಹೆಣ್ಣನ್ನು, ಕುಟುಂಬವನ್ನು 'ಅಡ್ಡಿ' ಎಂದು ಭಾವಿಸಿದಂತೆ ಹೆಣ್ಣು ಭಾವಿಸುವ ಹಾಗಿಲ್ಲ. ಅವಳದೇನಿದ್ದರೂ ಲೌಕಿಕದಲ್ಲಿ ನೆಟ್ಟ ಕಣ್ಣು. ಕುಟುಂಬದ ಜವಾಬ್ದಾರಿಯನ್ನು ಹೊರಬೇಕಾದ ಅನಿವಾರ್ಯತೆ ಅವುಗಳಿಗಿದೆ. ಕುಟುಂಬವನ್ನು ಹೀಗೆ ಏಕಾಏಕಿ ನಿರಾಕರಿಸಿಬಿಡುವ ಗಂಡಿಗೆ ಅದನ್ನು ತೊರೆದದ್ದಕ್ಕಾಗಿ ಪಶ್ಚಾತ್ತಾಪವಾಗಲೀ, ಬಿಟ್ಟುಬಂದವರ ತಳಮಳಗಳ ಬಗೆಗೆ ಚಿಂತೆಯಾಗಲೀ ಇರುವುದಿಲ್ಲ. ಪರಂಪರಾಗತವಾಗಿ ಬಂದ ಪುರುಷ ಕೇಂದ್ರಿತ ಆಲೋಚನೆಗಳು, ಧರ್ಮಗಳು ಹೆಣ್ಣು ಮತ್ತು ಗಂಡುಗಳಲ್ಲಿ ಈ ಮನಸ್ಥಿತಿಯನ್ನು ಬಿತ್ತಿರುವುದು ಇದಕ್ಕೆ ಕಾರಣ. ಆದರೆ ಇಂದು ನಮ್ಮ ದೃಷ್ಟಿಕೋನಗಳು ಬದಲಾಗುತ್ತಿವೆ. ಬೇರೆ ಬೇರೆ ನೆಲೆಯಿಂದ ಭಿನ್ನ ದನಿಗಳು ಇಂದು ಏಳುತ್ತಿವೆ. ಹೀಗಾಗಿ ಬುದ್ಧನ ಬಗೆಗೆ ಮಾತನಾಡುವಾಗ ಇದುವರೆಗೂ ಪ್ರಜ್ಞಾಪೂರ್ವಕವಾಗಿ ಮರೆಯಲಾಗಿದ್ದ ಯಶೋಧರೆ ಇಂದು ಮಾತನಾಡುತ್ತಿದ್ದಾಳೆ. ಯಶೋಧರೆಯಿಲ್ಲದೆ ಬುದ್ಧನ ವ್ಯಕ್ತಿತ್ವ ಅಪೂರ್ಣ, ಹಾಗೂ ಬುದ್ಧನ

ಬಗೆಗೆ ಮಾತನಾಡುವುದು ಅರ್ಧ ಸತ್ಯವಾಗುತ್ತದೆ. ಯಶೋಧರೆಯಿಲ್ಲದೆ ಬುದ್ಧನಿಗೆ ಅಸ್ತಿತ್ವವಿಲ್ಲ ಎಂಬ ನೆಲೆಯ ಆಲೋಚನೆಗಳು ಸಮಾನತೆಯನ್ನು, ಪ್ರತಿಯೊಬ್ಬರ ಅಸ್ಮಿತೆಯನ್ನು ಗೌರವಿಸುವ ನೆಲೆಯವಾಗಿವೆ.

ಮಡದಿ ಮಕ್ಕಳು, ಆಸ್ತಿಪಾಸ್ತಿಗೆ
ಹೆಣಗಿದೆವು, ಅಪ್ರಬುದ್ಧರಾದೆವು
ಮಣ್ಣಿನೊಳಗೆ ಮಣ್ಣಾಗಿ ಹೋದೆವು [೬೫]

ಈ ಸಾಲುಗಳು ಪುರುಷ ಕೇಂದ್ರಿತ ಆಲೋಚನೆಯ ಪ್ರತಿಬಿಂಬಗಳು. ಇವು ಸಾಧನೆ ಸಿದ್ಧಿಗಳನ್ನು ಪುರುಷನಿಗೆ ಸಾಧ್ಯವಾಗುವ, ನಿಲುಕುವ ಕ್ಷೇತ್ರಗಳೆಂದು ಭಾವಿಸಲಾದ ಮನಸ್ಥಿತಿಗಳು ರೂಪಿಸಿದಂತವು. ಆದರೆ ಇದು ಹೆಣ್ಣಿಗೂ ಸಾಧ್ಯವಾಗುವ ನೆಲೆ ಎಂಬ ವಿವೇಚನೆಯನ್ನು ಮಾಡುವುದಿಲ್ಲ. ಸಂಸಾರ ತನ್ನ ಸಾಧನೆಗೆ ಅಡ್ಡಿ ಎಂದಷ್ಟೇ ಅಲ್ಲದೆ ಅವು ತಮ್ಮನ್ನು ಸರ್ವನಾಶಮಾಡುವ ಸಾಧನಗಳೂ ಎಂಬಂತೆ ನೋಡಿರುವುದು; ನಮ್ಮ ಧರ್ಮ, ಸಮಾಜಗಳು ನಮ್ಮ ಸುಪ್ತಪ್ರಜ್ಞೆಯಲ್ಲಿ ತುಂಬಿರುವ ತರತಮ ದೃಷ್ಟಿಕೋನಗಳನ್ನು ತೆರೆದು ತೋರಿಸುತ್ತದೆ. ಈ ಮಾತುಗಳು ಹೆಣ್ಣಿಗೂ ಹೇಳಲು ಸಾಧ್ಯವಾಗುವಂಥವು ಎಂಬುದನ್ನು ಅರಿವಿಗೆ ತಂದುಕೊಂಡಿಲ್ಲದಿರುವುದು ಈ ಕವಿತೆಯಲ್ಲಿ ಕಂಡುಬರುತ್ತದೆ. ಬುದ್ಧನ ಬಗೆಗೆ ಮಾತನಾಡುವ ಬಹುಪಾಲು ಕವಿತೆಗಳು ಯಶೋಧರೆಯನ್ನು ಪ್ರಸ್ತಾಪಿಸುವುದಿಲ್ಲ. ಅಷ್ಟೇ ಅಲ್ಲ ಅವನ ತ್ಯಾಗವನ್ನು ಹೊಗಳುವ ಭರದಲ್ಲಿ ಯಶೋಧರೆಯ ಸ್ಥಿತಿಯನ್ನು, ಆತಂಕವನ್ನು ನೆನೆಸಿಕೊಳ್ಳಲೂ ಹೋಗುವುದಿಲ್ಲ. ಮಧ್ಯರಾತ್ರಿಯಲ್ಲಿ ಎದ್ದುಹೋದ ಸಿದ್ದಾರ್ಥ ಆನಂತರ ಜ್ಞಾನ ಸಂಪಾದಿಸಲು ಹೆಣಗಿದ ರೀತಿಯನ್ನು ವರ್ಣಿಸುವ ಕವಿತೆಗಳು; ಸಿದ್ದಾರ್ಥನನ್ನು ಕಾಣದೆ ಒದ್ದಾಡಿದ ಯಶೋಧರೆಯ ತಳಮಳಗಳನ್ನು ಅಷ್ಟು ಆಸಕ್ತಿಯಿಂದ ಚಿತ್ರಿಸುವುದಿಲ್ಲ. ಸಾಹಿತ್ಯದೊಳಗೇ ನಡೆದಿರುವ ಈ ಸಾಂಸ್ಕೃತಿಕ ರಾಜಕಾರಣವನ್ನು ಗುರುತಿಸುವ, ಅದರ ವಿರುದ್ಧ ಬಂಡಾಯದ ದನಿ ಎತ್ತುವ ಹಲವು ಪ್ರಯತ್ನಗಳು ಕವಿತೆಗಳಲ್ಲಿ ನಡೆದಿವೆ. ಯಶೋಧರೆಯ ತಳಮಳಗಳನ್ನು ಅರಿಯುವ, ಅವಳಿಗೆ ದನಿಯಾಗುವ, ಅವಳನ್ನು ಬುದ್ಧನ ಸಾಧನೆಯ ಮೆಟ್ಟಿಲಾಗಿ ನೋಡುವ, ಪ್ರಯತ್ನಗಳು ವಿರಳವಾಗಿ ನಡೆದಿವೆ. ಅಲಕ್ಷ್ಯಕ್ಕೆ, ತಿರಸ್ಕಾರಕ್ಕೆ ಒಳಗಾದ ಅವಳ ವ್ಯಕ್ತಿತ್ವದ ಘನತೆಯನ್ನು ಗುರುತಿಸುವ ಕೆಲಸವನ್ನು ಕವಿತೆಗಳು ಮಾಡಿವೆ. ಹಾಗೆಯೇ 'ಸಾಧನೆ' ಮತ್ತು 'ಅಡ್ಡಿ' ಕುರಿತಾದ ಪುರುಷ ನಿರ್ವಚನಗಳನ್ನು ಪ್ರಶ್ನಿಸುವ, ಮುರಿದು ಕಟ್ಟುವ ಪ್ರಯತ್ನಗಳನ್ನು ಕವಿತೆಗಳಲ್ಲಿ ಕಾಣಬಹುದು.

ಬುದ್ಧನೊಂದಿಗೆ ಯಶೋಧರೆಯನ್ನು ಮುಖಾಮುಖಿಯಾಗಿಸುವ ಕವಿತೆಗಳು ಬುದ್ಧ ಅರಮನೆಯನ್ನು, ಮಡದಿ, ಮಗನನ್ನು ತೊರೆದು ಹೋಗಲು ಕಾರಣವೆಂದು ಹೇಳಲಾದ 'ಜನಪ್ರಿಯ ಕಥೆ'ಯನ್ನು ಆಧಾರವಾಗಿಟ್ಟುಕೊಂಡು ಪ್ರಶ್ನೆಗಳನ್ನು ಎತ್ತಿವೆ. ಬುದ್ಧ ರಾಜ್ಯವನ್ನು ಕುಟುಂಬವನ್ನು ತೊರೆದು ಹೋದುದಕ್ಕೆ ಸಂಬಂಧಿಸಿದಂತೆ ಎರಡು ಕಾರಣಗಳು ಪ್ರಚಲಿತವಾಗಿವೆ. ಅವುಗಳೆಂದರೆ;

೧. ಮೊದಲನೆಯದು ಬುದ್ಧ ಮೊದಲ ಬಾರಿಗೆ ನೋಡಿದ ರೋಗಿ, ವೃದ್ಧ, ಶವ ಹಾಗೂ ಸನ್ಯಾಸಿಯ ದೃಶ್ಯಗಳು ಆತನನ್ನು ಮನುಷ್ಯನ ದುಃಖಕ್ಕೆ ಕಾರಣಗಳನ್ನು ಹುಡುಕಲು ಪ್ರೇರೇಪಿಸಿತು. ಹಾಗಾಗಿ ಮಡದಿ, ಮಗು ಮಲಗಿರುವಾಗ ಮಧ್ಯರಾತ್ರಿಯಲ್ಲಿ ಯಾರಿಗೂ ಗೊತ್ತಾಗದ ಹಾಗೆ ರಾಜ್ಯವನ್ನು ತೊರೆದು ಕಾಡಿಗೆ ಹೋದ ಎಂಬುದು.

೨. ಎರಡನೆಯದು ಅಂಬೇಡ್ಕರ್ ತಮ್ಮ 'ಬುದ್ಧ ಅಂಡ್ ಹಿಸ್ ಧಮ್ಮ' ಕೃತಿಯಲ್ಲಿ ಹೇಳಿರುವಂತೆ ರೋಹಿಣಿ ನದಿ ನೀರಿನ ಹಂಚಿಕೆಗೆ ಸಂಬಂಧಿಸಿದಂತೆ ಸಾಖ್ಯರು ಮತ್ತು ಕೊಲಿಯನ್ನರ ನಡುವೆ ಉಂಟಾದ ಭಿನ್ನಮತ ಯುದ್ಧಕ್ಕೆ ಕಾರಣವಾದುದನ್ನು ಕಂಡು ಯುದ್ಧವನ್ನು ವಿರೋಧಿಸಿದುದರ ಪರಿಣಾಮವಾಗಿ ದೇಶಭ್ರಷ್ಟನಾಗಿ ಹೋಗಬೇಕಾಗಿ ಬಂದುದು. ಇಲ್ಲಿ ಸಿದ್ಧಾರ್ಥ ರಾಜ್ಯ ತೊರೆದು ಹೋದದ್ದು ಗುಟ್ಟಾಗಿ ಅಲ್ಲ. ಕುಟುಂಬ ಹಾಗೂ ರಾಜ್ಯದ ಎಲ್ಲರಿಗೂ ಗೊತ್ತಿರುವಂತೆಯೇ ಎಂಬುದು ಗಮನಾರ್ಹ.

ಈ ಎರಡೂ ಕಾರಣಗಳಲ್ಲಿ ಎಲ್ಲಾ ಕವಿತೆಗಳೂ ಮೊದಲ ಜನಪ್ರಿಯ ಘಟನೆಯನ್ನೇ ನಂಬಿ ಚರ್ಚಿಸಿವೆ. ಕವಿತೆಗಳು ಯಶೋಧರೆಯ ಮುಖಾಂತರ ಎತ್ತುತ್ತಿರುವ ಪ್ರಶ್ನೆಗಳು ಈ ರೀತಿ ಇವೆ.

೧. ಸಿದ್ಧಾರ್ಥ ತನ್ನ ಮಡದಿಯಾದ ಯಶೋಧರೆಗೆ ತಾನು ರಾಜ್ಯ ತೊರೆದು ಹೋಗುತ್ತಿರುವ ಸಂಗತಿಯನ್ನು ತಿಳಿಸಿ ಹೋಗಲಿಲ್ಲ ಏಕೆ?

೨. ತನ್ನನ್ನೇ ನಂಬಿ ಬಂದ ಮಡದಿಗೆ ಒಂದು ಮಾತು ಹೇಳಿ ಹೋಗಬಹುದಾಗಿತ್ತು. ಆ ಅವಕಾಶವನ್ನೂ ಬುದ್ಧ ಕಳೆದುಕೊಂಡದ್ದು ಅಪರಾಧವಲ್ಲವೇ?

೩. ಅರಮನೆಯಲ್ಲಿದ್ದುಕೊಂಡೇ ಮನುಷ್ಯರ ದುಃಖಗಳಿಗೆ ಕಾರಣ, ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಿರಲಿಲ್ಲವೇ?

೪. ಜಗತ್ತಿನ ದುಃಖ ಮುಖ್ಯವಾದ ಸಿದ್ಧಾರ್ಥನಿಗೆ ತನ್ನ ಮಡದಿ, ಮಗುವಿನ ದುಃಖ ಮುಖ್ಯವಾಗಲಿಲ್ಲ ಏಕೆ?

೫. ಜ್ಞಾನೋದಯ ಜನರ ನಡುವೆ, ಸಮಸ್ಯೆಗಳ ನಡುವೆ ಅನುಭವಗಳಿಂದ ಆಗುವಂತದ್ದೇ? ಅಥವಾ ಏಕಾಂತದಲ್ಲಿ ಆಗುವಂತದ್ದೇ?

೬. ಯಶೋಧರೆ ತನ್ನ ಸಂಕಷ್ಟಗಳ ನಡುವೆ ಕಂಡುಕೊಂಡ ಬದುಕಿನ ಅರ್ಥಗಳಿಗೆ ಯಾವ ಬೆಲೆಯಿದೆ?

೭. ಗಂಡಿನ ಆಧ್ಯಾತ್ಮಿಕ ಸಾಧನೆಗೆ ಸಂಸಾರ ಅಡ್ಡಿಯೇ? ಕುಟುಂಬವನ್ನು ತೊರೆಯುವ ಮುನ್ನ ಗಂಡನ ಕರ್ತವ್ಯದ ಬಗೆಗೆ ಯೋಚಿಸದಿರುವುದು ತಪ್ಪಲ್ಲವೆ?

ಈ ಬಗೆಯ ಪ್ರಶ್ನೆಗಳೊಂದಿಗೆ ಕವಿತೆಗಳು ಬುದ್ಧನೊಂದಿಗೆ ಮುಖಾಮುಖಿಯಾಗಿವೆ. ಈ ಎಲ್ಲಾ ಪ್ರಶ್ನೆಗಳು ಯಶೋಧರೆಯ 'ಅಸ್ತಿತ್ವದ ಪ್ರಶ್ನೆ'ಯ ಹಿನ್ನೆಲೆಯಲ್ಲಿ ಕೇಳಿದವುಗಳಾಗಿ ಕಂಡರೂ ಒಟ್ಟು ಹೆಣ್ಣಿನ ಅಸ್ಮಿತೆಯ ಪರವಾಗಿ ಕೇಳಿದ ಪ್ರಶ್ನೆಗಳೂ ಆಗಿವೆ. ಬುದ್ಧ ರಾಜ್ಯ ತೊರೆದು ಹೋಗಲು ಕಾರಣವೆಂದು ನಂಬಲಾದ ಜನಪ್ರಿಯ ದಂತಕತೆಯನ್ನೇ ಆಧರಿಸಿ ಈ ಪ್ರಶ್ನೆಗಳು ಹುಟ್ಟಿರುವುದರಿಂದ ಇವುಗಳಿಗೆ ವಾಸ್ತವಿಕ ಉತ್ತರಗಳನ್ನು ಕಂಡುಕೊಳ್ಳುವುದು ಅಷ್ಟು ಸುಲಭವಲ್ಲ. ಆದರೂ ಪುರುಷ ಪ್ರಧಾನ ವ್ಯವಸ್ಥೆಯ, ವೈದಿಕಶಾಹಿ ಧಾರ್ಮಿಕ ವ್ಯವಸ್ಥೆಯ ಭಾಗವಾಗಿ ಗಂಡಿನ ಆಧ್ಯಾತ್ಮಿಕ ಸಾಧನೆಯ ತುಡಿತ ಹಾಗೂ ಕುಟುಂಬವನ್ನು ತೊರೆಯುವ ನಿಲುವುಗಳು ಪುರುಷನ ಪ್ರಶ್ನಾತೀತ ಹಕ್ಕುಗಳೆಂಬ ನೆಲೆಯ ಧೋರಣೆಗಳು ಸಿದ್ಧಾರ್ಥನನ್ನು ಹಾಗೆ ಮಾಡಿರಬಹುದು ಎಂಬ ಕಡೆಗೂ, ಹಾಗೂ ಬುದ್ಧ ತಾನು ಹೇಳಿದ್ದರೆ ಯಶೋಧರೆ ತಾನು ಹೋಗಲು ಅಡ್ಡಿಪಡಿಸಬಹುದು ಎಂಬ ಆತಂಕವೂ ಕಾರಣವಾಗಿ ಹೇಳದೆ ಹೋಗಿರಬಹುದು ಎಂದೂ ಚರ್ಚಿಸಲಾಗಿದೆ.

ಯಶೋಧರೆಗೆ ಹೇಳದೆ ಹೋದದ್ದು, ಅವಳ ಸ್ಥಿತಿಯ ಬಗೆಗೆ ಯೋಚಿಸದೇ ಇದ್ದದ್ದು ದ್ರೋಹವೆಂದು ಅನ್ನಿಸುತ್ತದೆ ನಿಜ. ಆದರೆ ಇಲ್ಲಿ ಸಿದ್ಧಾರ್ಥನ ಆಯ್ಕೆ ಯಾವುದಾಗಬೇಕಿತ್ತು ಎಂಬ ಪ್ರಶ್ನೆ ಎದುರಾಗುತ್ತದೆ. ಪ್ರಾಪಂಚಿಕ ಸತ್ಯಗಳನ್ನು ಅರಿಯುವ ಆತನ ಕುತೂಹಲ, ಮನುಷ್ಯನ ಸಂಕಟಗಳಿಗೆ ಉತ್ತರಗಳನ್ನು ಹುಡುಕುವ ತುಡಿತಗಳ ಮುಂದೆ ಅವನಿಗೆ ಕುಟುಂಬ ಮುಖ್ಯವಾಗಿ ಕಾಣಿಸದೇ ಇದ್ದಿರಬಹುದು. ಸಿದ್ಧಾರ್ಥ ವೈದಿಕ ಆಧ್ಯಾತ್ಮಿಕ ವಿವೇಚನೆಯಂತೆ ಮೋಕ್ಷ ಸಾಧನೆಗಾಗಿ ಹೀಗೆ ಎಲ್ಲವನ್ನೂ ತೊರೆದು ಹೋದವನಲ್ಲ ಎಂಬುದು, ಆತ ಬುದ್ಧನಾದ ನಂತರ ಮರಳಿ ಜನರ ಬಳಿಗೆ ಬರುವುದು, ಯಶೋಧರೆಯ ಮುಂದೆ ಬಂದು ನಿಲ್ಲುವುದು, ಆತನ ಮಾನವೀಯ ಕಾಳಜಿಗಳು ಮೇಲಿನ ಪ್ರಶ್ನೆಗಳ ಬಗೆಗೆ ಅನುಮಾನ ತಾಳುವ ಹಾಗೆ ಮಾಡುತ್ತವೆ. ತನ್ನನ್ನು, ಜಗತ್ತನ್ನು ಕಾಡುವ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳಲು, ತನ್ನ ಆಂತರಿಕ ತಳಮಳಗಳ ಒತ್ತಡದಿಂದ ಹೋದದ್ದಾದ್ದರಿಂದ ಈ ಬಗೆಯ ಪ್ರಶ್ನೆಗಳು ಸಮಂಜಸವೆನಿಸುವುದಿಲ್ಲ. ಇನ್ನು ರಾಜ್ಯದಲ್ಲಿದ್ದುಕೊಂಡೇ ಮನುಷ್ಯನ ಸಂಕಟಗಳಿಗೆ ಉತ್ತರವನ್ನು ಕಂಡುಕೊಳ್ಳಲು ಸಾಧ್ಯವಿರಲಿಲ್ಲವೇ ಎಂಬ ಪ್ರಶ್ನೆ ಮುಖ್ಯವಾದುದಾದರೂ ಬುದ್ಧನದು ವೈಯಕ್ತಿಕ ಸಮಸ್ಯೆಗಳಾಗಿರಲಿಲ್ಲ. ಹಾಗೂ ಸಮೂದಾಯದ ಬದುಕಿನಲ್ಲಿ ದೊಡ್ಡ ಪರಿವರ್ತನೆಯನ್ನು ತರಬಯಸುವ ತುಡಿತವುಳ್ಳ ವ್ಯಕ್ತಿತ್ವವಾದ ಕಾರಣ ವೈಯಕ್ತಿಕ ಅಧಿಕಾರ, ಸುಖಭೋಗಗಳು ಮುಖ್ಯವಾಗಲಿಲ್ಲ ಎಂದೆನಿಸುತ್ತದೆ. ಅಧಿಕಾರ, ಸಂಪತ್ತುಗಳು ನಿಸ್ವಾರ್ಥ ಸೇವೆಗಳಾಗಲು ಎಂದಿಗೂ ಸಾಧ್ಯವಿಲ್ಲ ಎಂಬ ಅರಿವು ಬುದ್ಧನಿಗಾಗಿರಬಹುದು. ಬುದ್ಧನನ್ನು, ಆತ ಆರಿಸಿಕೊಂಡ ದಾರಿಯನ್ನು ಕುರಿತು ಎದ್ದಿರುವ, ಬುದ್ಧನಿಗೆ ರಾಜ್ಯ ಅರಮನೆ, ಸಂಸಾರವನ್ನು ತೊರೆಯುವ ಅನಿವಾರ್ಯತೆ ಇತ್ತೇ? ಅವನು ಬುದ್ಧನಾದ ಬಳಿಕ ಮಾಡಿದ ಕಾರ್ಯಗಳನ್ನು ರಾಜನಾಗಿದ್ದುಕೊಂಡೆ ಮಾಡಲು ಸಾಧ್ಯವಾಗುತ್ತಿರಲಿಲ್ಲವೆ? ಎಂಬ ಪ್ರಶ್ನೆಗಳಿಗೆ ಲಂಕೇಶ್ ನೀಡುವ ಉತ್ತರ ಸೂಕ್ತವಾದುದು ಎಂದೆನಿಸುತ್ತದೆ. "ಭಾರತಕ್ಕೆ ಸ್ವಾತಂತ್ರ ಬಂದ ದಿನ ನೆಹರು ಪಟೇಲರೆಲ್ಲ ಸಂಭ್ರಮದಿಂದ ಕೂಗಾಡುತ್ತಿದ್ದ ದಿನ, ಗಾಂಧೀಜಿ ಕಲ್ಕತ್ತದಲ್ಲಿ ಒಬ್ಬಂಟಿಯಾಗಿ ಓಡಾಡುತ್ತಿದ್ದರು. ಎರಡೂವರೆ ಸಾವಿರ ವರ್ಷಗಳ ಬಳಿಕ ಬುದ್ಧನ ಅಂಶಗಳನ್ನು ಪಡೆದು ಬಂದ ಗಾಂಧಿ ಪ್ರಧಾನಿಯಾಗಿ ಆಗಲಿ, ರಾಷ್ಟ್ರಾಧ್ಯಕ್ಷನಾಗಿ ಆಗಲಿ ಅಧಿಕಾರ ಸ್ವೀಕರಿಸುವ ಸ್ಥಿತಿಯಲ್ಲಿ ಇರಲಿಲ್ಲ. ಈ ಬಾಪುವಿನದೂ ಕೂಡ ಬುದ್ಧನ ದಾರಿಯಾಗಿತ್ತು."[೬೬]

ಮುಂದುವರಿದು ಕಾಡಿಗೆ ಹೋಗಿ ಬುದ್ಧ ಪಡೆದುಕೊಂಡ ಜ್ಞಾನ ಮಿಗಿಲೆನ್ನುವುದಾದರೆ ಯಶೋಧರೆ ತನ್ನ ಬದುಕಿನ ಸಂಕಷ್ಟಗಳಲ್ಲೇ ಪಡೆದುಕೊಂಡ ಜ್ಞಾನಕ್ಕೆ ಯಾವ ಅಸ್ತಿತ್ವವಿದೆ? ಎಂಬ ಪ್ರಶ್ನೆಯೂ ಏಳುತ್ತದೆ. ಆಕೆಯದು ಹೆಣ್ಣಿನ 'ಕೌಟುಂಬಿಕ ಜ್ಞಾನ' ಎಂಬ ಕಾರಣಕ್ಕೆ ತಿರಸ್ಕೃತವೇ? ಎಂಬ ಪ್ರಶ್ನೆಗಳೂ ಮುಖ್ಯವಾದವುಗಳೇ. ಇವು ಪರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಎತ್ತಿದ ಪ್ರಶ್ನೆಗಳಾಗಿ ಕಂಡುಬರುತ್ತವೆ. ಆದರೆ ಬುದ್ಧನ ಒಟ್ಟು ಆಲೋಚನೆ ಪ್ರತಿಪಾದನೆಗಳ ಹಿನ್ನೆಲೆಯಿಂದ ನೋಡಿದಾಗ ಬುದ್ಧನಲ್ಲಿ ಆ ಬಗೆಯ ಶೋಷಕ ಮನಸ್ಥಿತಿಗಳಿದ್ದವು ಎಂದೆನಿಸುವುದಿಲ್ಲ. ತನ್ನ ಬಿಕ್ಕು ಸಂಘದಲ್ಲಿ ಮಹಿಳೆಯರಿಗೆ ಅವಕಾಶವನ್ನು ಬುದ್ಧ ನಿರಾಕರಿಸಿದ್ದಕ್ಕೆ ಅವನದೇ ಆದ ವೈಯಕ್ತಿಕ ಕಾರಣಗಳಿದ್ದವೇ ಹೊರತು ಹೆಣ್ಣಿಗೆ ಆಧ್ಯಾತ್ಮಿಕ ಸ್ವಾತಂತ್ರ್ಯವನ್ನು ನಿರಾಕರಿಸುವ ತರತಮದ ನಿಲುವಿನಿಂದ ಆದದ್ದಲ್ಲ. ಕೊನೆಗೆ ತನ್ನ ಬಿಕ್ಕು ಸಂಘದಲ್ಲಿ ಮಹಿಳೆಯರಿಗೂ ಅವಕಾಶ ಕಲ್ಪಿಸಿಕೊಡುತ್ತಾನೆ.

ಈ ಎಲ್ಲ ಪ್ರಶ್ನೆಗಳು ಸಿದ್ಧಾರ್ಥ ರಾಜ್ಯ ತೊರೆದು ಹೋದದಕ್ಕೆ ಇರುವ ದಂತಕತೆಯನ್ನು ಆಧರಿಸಿ ಹುಟ್ಟಿಕೊಂಡವುಗಳಾದ ಕಾರಣ ಬುದ್ಧನ ಸುತ್ತ ಎದ್ದಿರುವ ಈ ಪ್ರಶ್ನೆಗಳಿಗೆ ನೈಜ ಉತ್ತರಗಳನ್ನು ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ. ಅಂಬೇಡ್ಕರ್ ಹೇಳಿರುವ ಚಾರಿತ್ರಿಕ ಸಂಗತಿಯ ಪ್ರಕಾರ ಸಿದ್ಧಾರ್ಥ ಎಲ್ಲರಿಗೂ ಗೊತ್ತಿರುವ ಹಾಗೆಯೇ ರಾಜ್ಯವನ್ನು ತೊರೆದು ಹೋಗುತ್ತಾನೆ. ಯುದ್ಧ ಉಂಟುಮಾಡಬಹುದಾದ ಹಿಂಸೆಯನ್ನು ತಪ್ಪಿಸುವ ಸಲುವಾಗಿ ದೇಶಭ್ರಷ್ಟನಾಗಿ ಹೋಗಬೇಕಾಗುತ್ತದೆ. ಹೀಗೆ ಹೋದವನು ಅಂತಿಮವಾಗಿ ಪ್ರಾಪಂಚಿಕ ಸತ್ಯಗಳ ಅರಿವು ಪಡೆದು ತಾನು ಕಂಡುಕೊಂಡ ಸತ್ಯಗಳನ್ನು ಜನರಿಗೆ ತಿಳಿಸಲು ಮರಳಿ ರಾಜ್ಯಕ್ಕೆ ಬರುತ್ತಾನೆ. ತನ್ನ ಮನೆಗೂ ಬರುತ್ತಾನೆ. ಆದರೆ ಸಿದ್ಧಾರ್ಥನಾಗಿ ಅಲ್ಲ ಬಿಕ್ಕುವಾಗಿ. ಈ ನೆಲೆಯಲ್ಲಿ ನೋಡಿದಾಗ ಮೇಲಿನ ಪ್ರಶ್ನೆಗಳು ಗಂಭೀರವೆನಿಸುವುದಿಲ್ಲ. ಆದರೂ ಈ ಪ್ರಶ್ನೆಗಳು ಪಿತೃಸಂಸ್ಕೃತಿಯ ವ್ಯವಸ್ಥೆಯಲ್ಲಿ ಹೆಣ್ಣನ್ನು ನಡೆಸಿಕೊಳ್ಳುತ್ತಿರುವುದರ ವಿರುದ್ಧ ಎತ್ತಿದ ಪ್ರಶ್ನೆಗಳಾಗಿ ಮುಖ್ಯವೆನಿಸುತ್ತವೆ. ಇವು ಕೇವಲ ಬುದ್ಧನ ವಿರುದ್ಧ ಎತ್ತಿದ ಪ್ರಶ್ನೆಗಳಾಗಿ ಕಾಣದೆ ಒಟ್ಟು ಹೆಣ್ಣಿನ ವಿರುದ್ಧದ ಸಾಂಸ್ಕೃತಿಕ ರಾಜಕಾರಣಗಳ ವಿರುದ್ಧ ಎತ್ತಿದ ಪ್ರಶ್ನೆಗಳಾಗಿ ಕಂಡುಬರುತ್ತವೆ.

ಈ ಪ್ರಶ್ನೆಗಳನ್ನು ಕವಿತೆಗಳ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಚರ್ಚಿಸಬಹುದು. ಸಂಗು ಹುಂಡೇಕಾರ ರ 'ಸಾಕ್ಷಾತ್ಕಾರ' ಕವಿತೆ ಯಶೋಧರೆಯ ಸ್ವಗತ ರೂಪದ್ದು. ಈ ಕವಿತೆಯಲ್ಲಿ ಯಶೋಧರೆ ಸಿದ್ಧಾರ್ಥ ತನ್ನನ್ನು ಮಧ್ಯರಾತ್ರಿಯಲ್ಲಿ ತೊರೆದು ಹೋದದ್ದನ್ನು ಪ್ರಶ್ನಿಸುತ್ತಾಳೆ. ಸಿದ್ಧಾರ್ಥ ಮಧ್ಯರಾತ್ರಿಯಲ್ಲಿ ಎದ್ದು ಹೋದಾಗ ನಾನು ನಿದ್ರಿಸುತ್ತಿರಲಿಲ್ಲ. ಎಚ್ಚರವಾಗಿಯೇ ಇದ್ದೆ, ಎಲ್ಲವನ್ನೂ ಗಮನಿಸುತ್ತಿದ್ದೆ ಎನ್ನುತ್ತಾಳೆ. ತನಗೆ ಒಂದು ಮಾತು ಹೇಳಿ ಹೋಗಬಹುದೇನೋ ಎಂದು ಕಾಯುತ್ತಿದ್ದೆ ಎನ್ನುತ್ತಾಳೆ. ಆದರೆ ಸಿದ್ಧಾರ್ಥ ಕನಿಷ್ಠ ಹೇಳುವ ಸೌಜನ್ಯವನ್ನು ತೋರದುದಕ್ಕೆ ಅವಳಿಗೆ ಅಸಮಧಾನವಿದೆ. ಹೆಂಡತಿಯಾಗಿ ತನ್ನ ಸ್ಥಾನ ಮತ್ತು ತ್ಯಾಗಕ್ಕೆ ಸಿಕ್ಕ ಈ ತಿರಸ್ಕಾರ ಅವಳನ್ನು ಸಿಟ್ಟಿಗೆಬ್ಬಿಸಿದೆ. ಅವನನ್ನೇ ನಂಬಿಬಂದ ತನಗೆ ಒಂದು ಮಾತು ಹೇಳುವ ಕಾಳಜಿಯನ್ನೂ ತೋರದುದು ಅವಳ ಅಸ್ತಿತ್ವವನ್ನೇ ಪ್ರಶ್ನಿಸುವಂತಾಗಿದೆ.

ನನಗಿನ್ನೂ ನೆನಪಿದೆ
ಆ ಮಧ್ಯರಾತ್ರಿಯಲಿ
ನನ್ನ ತೋಳ್ತೆಕ್ಕೆಯಿಂದವರು
ಸರಿದೆದ್ದು ಹೋಗುವಾಗ
ನಾನಿದ್ದೆ
ನಿದ್ದೆ ಹೋಗಿರಲಿಲ್ಲ[11]

ಎನ್ನುವಲ್ಲಿ ಸಿದ್ಧಾರ್ಥನಿಗೆ ಒಂದು ಬಗೆಯ ಎಚ್ಚರವಾದರೆ ಇವಳಿಗೂ ಇನ್ನೊಂದು ಬಗೆಯ ಎಚ್ಚರವಾಗಿರುವುದನ್ನು ಕವಿ ಗುರುತಿಸಿದ್ದಾರೆ. ಇವಳದ್ದು ಎಲ್ಲವನ್ನೂ ಕಳೆದುಕೊಳ್ಳುವ ನೋವಿನ ಎಚ್ಚರ. ತನ್ನನ್ನೇ ನಂಬಿ ಬಂದವಳಿಗೆ ಒಂದು ಮಾತೂ ಹೇಳದೆ ಹೋದದ್ದು ದ್ರೋಹವಾಗಿ ಕಾಣಿಸಿದೆ. ಸಿದ್ಧಾರ್ಥನ ಆಂತರಿಕ ತಳಮಳ, ಒತ್ತಡಗಳೇನೇ ಇದ್ದರೂ ಕೈ ಹಿಡಿದವಳ ಸ್ಥಿತಿಯ ಕಿಂಚಿತ್ ಚಿಂತೆಯಾದರೂ ಇರಬೇಡವೇ ಎಂಬ ಪ್ರಶ್ನೆ ಮಾನವೀಯವಾದುದೇ ಆಗಿದೆ.

ನೋವೆಲ್ಲವನು
ನನ್ನ ಉಡಿಯಲ್ಲಿರಿಸಿ
ಒಂದು ಮಾತೂ ಹೇಳದೆ
ಹೋದವರು ಮತ್ತೆ ಕಂಡಾಗ
ದೇವರಾಗಿದ್ದರು

ಪಾಪ ಮುಕ್ತರಾಗಿದ್ದರು.[೬೮]

ಈ ಸಾಲುಗಳು ಹೆಣ್ಣಿನ ಪ್ರಶ್ನಿಸುವ ಹಕ್ಕನ್ನೇ ಕಿತ್ತುಕೊಂಡ ಧಾರ್ಮಿಕ ಮೊಗವಾಡಗಳನ್ನು ಧ್ವನಿಸುತ್ತವೆ. ಯಶೋಧರೆ ಪ್ರಶ್ನಿಸುವಂತಿಲ್ಲ. ಏಕೆಂದರೆ ಸಿದ್ಧಾರ್ಥ ಇಂದು ದೇವರಾಗಿದ್ದಾನೆ. ದೇವರನ್ನು ಪ್ರಶ್ನಿಸುವುದು, ವಿರೋಧಿಸುವುದು ಅಪರಾಧ. ಅದು ಗಂಡಿನ ಪಾಪಮುಕ್ತ ಸ್ಥಿತಿ, ಆತ ಪ್ರಶ್ನಾತೀತ ಎಂಬ ಗ್ರಹಿಕೆಗಳನ್ನು ಬಿತ್ತಿರುವ ಧರ್ಮಗಳನ್ನು ಇದು ವಿರೋಧಿಸುತ್ತದೆ. ಯಶೋಧರ ಸಿದ್ಧಾರ್ಥನನ್ನು ಮತ್ತೆ ಕಾಣುವ ವೇಳೆಗೆ ಬುದ್ಧನಾಗಿದ್ದ. ಬುದ್ಧನಾಗಿ ಮರಳಿ ಯಶೋಧರೆಯ ಮುಂದೆ ನಿಂತಾಗ ಯಶೋಧರೆ ತನ್ನೊಳಗೇ ಅಂದುಕೊಳ್ಳುತ್ತಾಳೆ.

ಸಾಕ್ಷಾತ್ಕಾರವಾದದ್ದು
ನನಗೋ........ ಅವರಿಗೋ.........
ಬಾಯಿಬಿಟ್ಟರೆ
ಹೊತ್ತಿ ಉರಿಯುತ್ತದೆ ಲೋಕ
ಸುಮ್ಮನಿದ್ದರೆ
ಬೂದಿಯಾಗುತ್ತವೆ ಕನಸುಗಳು [೬೯]

ಇದು ಗಂಭೀರವಾದ ಪ್ರಶ್ನೆ. ಎಲ್ಲವನ್ನೂ ತೊರೆದು ಎಲ್ಲೋ ದೂರದಲ್ಲಿ ಕಂಡುಕೊಂಡ ಪ್ರಾಪಂಚಿಕ ಅರಿವನ್ನು 'ಸಾಕ್ಷಾತ್ಕಾರ' ಎನ್ನಬಹುದಾದರೆ ಬದುಕಿನ ಕುಲುಮೆಯಲ್ಲಿ ಎಲ್ಲ ಭಾರವನ್ನು ಹೊತ್ತು, ಸಂಕಷ್ಟಗಳಿಗೆ ಮೈಯೊಡ್ಡಿ ಪಡೆದುಕೊಂಡ ಅನುಭವಗಳು ಹಾಗಾದರೆ ಏನು? ಸಾಕ್ಷಾತ್ಕಾರವಾದದ್ದು ಯಾರಿಗೆ? ತನಗೋ, ಅವರಿಗೋ ಎಂದು ಪ್ರಶ್ನಿಸಿಕೊಳ್ಳುವ ಮೂಲಕ 'ಜ್ಞಾನದ ಸಾಕ್ಷಾತ್ಕಾರ'ವನ್ನೇ ಅನುಮಾನದಿಂದ ನೋಡುತ್ತಾಳೆ. ಸಂಸಾರದಲ್ಲಿದ್ದುಕೊಂಡೇ, ಅದರ ಎಲ್ಲಾ ಅನುಭವಗಳಿಗೆ ತನ್ನನ್ನು ಒಡ್ಡಿಕೊಂಡೇ ತಾನು ಕಂಡುಕೊಂಡ 'ಅರಿವು' 'ಸಾಕ್ಷಾತ್ಕಾರ'ವಲ್ಲವೇ? ಎಂದು ಪ್ರಶ್ನಿಸುತ್ತಾಳೆ. ಆದರೆ ಇವಳ ಜ್ಞಾನಕ್ಕೆ ಈ ಲೋಕದಲ್ಲಿ ಅಸ್ತಿತ್ವವಿಲ್ಲ, ಬೆಲೆಯಿಲ್ಲ. ಏಕೆಂದರೆ ಸಾಕ್ಷಾತ್ಕಾರವೆಂಬುದನ್ನು ಸಂಸಾರದ ನಿರಾಕರಣೆಯಿಂದ ಗಂಡು ಮಾತ್ರ ಗಳಿಸಬಹುದಾದ ಅನುಭೂತಿ ಎಂಬಂತೆ ನಮ್ಮ ಧರ್ಮ, ಸಾಮಾಜಗಳು ನಂಬಿಸಿವೆ. ಹೀಗಿರುವಾಗ ಅವಳ ಅನುಭವದ ಜ್ಞಾನಕ್ಕೆ ಬೆಲೆ ಎಲ್ಲಿದೆ? ಯಶೋಧರೆ ಮೌನವಾಗಿರುವವರೆಗೆ ಬುದ್ಧನಿಗೆ ಬೆಲೆ. 'ಬಾಯಿಬಿಟ್ಟರೆ' ಇದುವರೆಗಿನ ಎಲ್ಲಾ ಲೋಕಗ್ರಹಿಕೆಗಳೂ ತಲೆಕೆಳಗಾಗುತ್ತವೆ. ಈ ಸಾಲುಗಳು ಪುರುಷ ಕೇಂದ್ರಿತ ಏಕ ದೃಷ್ಟಿಕೋನದ ಲೋಕಗ್ರಹಿಕೆಗಳನ್ನು ನಿರಾಕರಿಸುತ್ತವೆ. ಕೇವಲ ಗಂಡಿನ ಅನುಭವ ಲೋಕಗಳೇ ಪೂರ್ಣ ಜ್ಞಾನವಲ್ಲ. ಹೆಣ್ಣಿನ ಅನುಭವಲೋಕಗಳೂ ಮುಖ್ಯ. ಹೆಣ್ಣಿನ ಅನುಭವಗಳನ್ನು ನಿರಾಕರಿಸಿದ ಯಾವುದೇ ಜ್ಞಾನದ ನಿರ್ವಚನ ತನಗೆ ತಾನೇ ಅರ್ಧಸತ್ಯ ಎಂಬುದನ್ನು ಈ ಸಾಲುಗಳು ಧ್ವನಿಸುತ್ತವೆ. ಹಾಗೆ 'ಬಾಯಿಬಿಟ್ಟರೆ' ಆಗಬಹುದಾದ ಪರಿಣಾಮಗಳು, ಸುಮ್ಮನಿದ್ದರೆ ಅನುಭವಿಸಬೇಕಾದ ಯಾತನೆಗಳು ಚರಿತ್ರೆಯುದ್ದಕ್ಕೂ ಹೆಣ್ಣನ್ನು ನಡೆಸಿಕೊಂಡು ಬಂದಿರುವ ರೀತಿಯನ್ನು ಧ್ವನಿಸುತ್ತವೆ. ಆಕೆ ಬಾಯಿಬಿಟ್ಟರೆ ಹೊರಡಬಹುದಾದ ಸತ್ಯಗಳು ಈ ಲೋಕವನ್ನೇ 'ಉರಿಸುತ್ತವೆ' ಎಂಬುದು ಆಕೆಯ ಒಡಲಲ್ಲಿರುವ ನೋವು, ಸಂಕಟದ ಕೆಂಡಗಳ ತೀವ್ರತೆಯನ್ನೂ, 'ಸುಮ್ಮನಿದ್ದರೆ ಬೂದಿಯಾಗುತ್ತವೆ ಕನಸುಗಳು' ಎಂಬುದು ಚರಿತ್ರೆಯುದ್ದಕ್ಕೂ ನೋವು ನುಂಗಿ, ಕನಸುಗಳನ್ನು ಬೂದಿಮಾಡಿಕೊಂಡು ಬದುಕಿದ 'ಅವಳ' ದುರಂತ ಬದುಕನ್ನು ಧ್ವನಿಸುತ್ತದೆ. ನಿಜಕ್ಕೂ ಬದುಕಿನಿಂದ ಪಾಠ ಕಲಿತವಳು ಯಶೋಧರೆ. ಆದರೆ ಅವಳು ಅನುಭವದಿಂದ ಕಂಡುಕೊಂಡ ಸತ್ಯಗಳನ್ನು ಹೇಳಲಾಗದ ಸ್ಥಿತಿ ಇದೆ. ಏಕೆಂದರೆ ಅವಳು ಮನುಷ್ಯಳು, ಅದರಲ್ಲೂ ಹೆಣ್ಣು. ಬುದ್ಧನಾದರೋ ದೇವರು, ಪಾಪಮುಕ್ತ. ಹೆಣ್ಣಿನ ಅನುಭವಲೋಕಗಳಿಗೆ ಈ ಧರ್ಮ, ಸಮಾಜಗಳಲ್ಲಿ ಮಾನ್ಯತೆಯಿಲ್ಲದ್ದನ್ನೂ, ಅವಳೇನಿದ್ದರೂ ಗಂಡಿನ ಸಾಧನೆಯ 'ಮೆಟ್ಟಿಲಾಗಿ' ಮಾತ್ರ ಇರಬೇಕಾದ

ಸ್ಥಿತಿಯನ್ನೂ ಈ ಕವಿತೆ ಪ್ರಶ್ನಿಸುತ್ತದೆ. ತನ್ನ ಅಸ್ತಿತ್ವಕ್ಕೆ ಬೆಲೆಯಿಲ್ಲದ ಸ್ಥಿತಿಯ ತಳಮಳಗಳು ಯಶೋಧರೆಯಲ್ಲಿ ವ್ಯಕ್ತವಾಗ್ತಿವೆ. ಮೇಲ್ನೋಟಕ್ಕೆ ಯಶೋಧರೆಗೆ ಸಂಬಂಧಿಸಿದ ಪ್ರಶ್ನೆಗಳಾಗಿ ಕಂಡುಬರುವ ಇವು ಕೇವಲ ಅವಳ ಪ್ರಶ್ನೆಗಳಾಗಿ ನಿಲ್ಲದೆ ಒಟ್ಟು ಹೆಣ್ಣಿನ ಪ್ರಶ್ನೆಗಳಾಗಿ ನಿಲ್ಲುತ್ತಿರುವುದು ವಿಶೇಷ.

ರೂಪಾ ಹಾಸನ ಅವರ 'ಮಹಾ ಪರಿನಿರ್ವಾಣ' ಕವಿತೆ ಸಂಸಾರವನ್ನು ತೊರೆದು ಹೋದ ಹಾಗೂ ಜ್ಞಾನೋದಯವಾದ ನಂತರ ತನ್ನ ಬಿಕ್ಕು ಸಂಘದಲ್ಲಿ ಹೆಂಗಸರಿಗೆ ಪ್ರವೇಶ ನಿರಾಕರಿಸಿದ ಬುದ್ಧನ ಧೋರಣೆಯನ್ನು ವಿಡಂಬಿಸುತ್ತಲೇ ಆನಂತರದಲ್ಲಿ ಬುದ್ಧನಲ್ಲಿ ಹೆಣ್ಣನ್ನು ಕುರಿತ ನಿಲುವುಗಳಲ್ಲಾದ ಬದಲಾವಣೆಗಳನ್ನು ಗುರುತಿಸುತ್ತದೆ.

ಒಂದಿಷ್ಟೇ ಕಣ್ತೆರೆದು ನೋಡಿ
ಥಟ್ಟನೆ ಮುಚ್ಚುವ ತಥಾಗತ!
ಅವಳ ನೋವಿಗೆ ಮಿಡುಕುವನೇ?
ತನ್ನ ಸಂಘಕ್ಕೇ ಹೆಣ್ಣ ನಿರಾಕರಿಸಿ
ಅವಳೊಡಲನೇ ಅಪಮಾನಿಸಿ
ಈ ಹಸಿಮಣ್ಣನೊದ್ದು ಮೇಲೇರಿದವನು?
ಆದರೀಗ. . . .
ಈರುಳ್ಳಿ ಹೆಚ್ಚುವ ನೆವದಲಿ
ಒಳಗಿನ ಸಂಕಟಕ್ಕೇ ಬಾಯ್ಬಂದು
ದಳ ದಳ ಉದುರುವ ಅವಳ ಕಣ್ಣೀರಿಗೆ
ಈಗೀಗ ಅವನ ಕಣ್ಣಂಚಿನಲ್ಲೂ
ಕಂಡೂ ಕಾಣದಂತೆ ನೀರ ಪಸೆಯೇ?[೨೦]

ಈ ಕವಿತೆ ಬುದ್ಧನ ವ್ಯಕ್ತಿತ್ವದ ದೌರ್ಬಲ್ಯಗಳನ್ನು ಗುರುತಿಸುತ್ತಲೇ ಆತನ ವ್ಯಕ್ತಿತ್ವದಲ್ಲಾದ ವಿಕಾಸವನ್ನೂ ಗುರುತಿಸುತ್ತಿದೆ. ಬುದ್ಧ ಯಶೋಧರೆಗೆ ದ್ರೋಹ ಮಾಡಿದ್ದಾನೆ ಎಂಬ ಪ್ರಶ್ನೆ ಹೆಣ್ಣಿನ ನೆಲೆಯಿಂದ ನಿಜವೆನಿಸಿದರೂ ಬುದ್ಧನ ಒಟ್ಟು ಮಾನವೀಯ ಸ್ಪಂದನದ ನೆಲೆಯಿಂದ ನೋಡಿದಾಗ ಅದು ದ್ರೋಹ ಮತ್ತು ದೌರ್ಬಲ್ಯದ ಹಾಗೆ ಕಾಣುವುದಿಲ್ಲ.

ದಯಾನಂದರ 'ಬಾಗಿಲ ಬಳಿಯೆ ಬೋಧಿವೃಕ್ಷ', ಎಸ್.ವಿ. ಪ್ರಭಾವತಿಯವರ 'ಮೆಟ್ಟಿಲುಗಳು', ಸತ್ಯನಾರಾಯಣರಾವ್ ಅಣತಿಯವರ 'ನಗುವ ಬುದ್ಧ', ವಿ.ಜಿ.ಭಟ್ಟರ 'ಯಶೋಧರೆಯ ಪ್ರಶ್ನೆಗಳು', ಜಡೆಪ್ಪ ಶಿ. ಮಾಳಗೌಡ್ರ ಅವರ 'ಬುದ್ಧನಂತೆ ನಾನಲ್ಲ', ಭಾಗ್ಯಲಕ್ಷ್ಮಿ ಸು. ಅವರ 'ಬಿಂಬವೇ ತಾನಾದ ಯಶೋಧರೆ' ಮುಂತಾದ ಕವಿತೆಗಳು ಯಶೋಧರೆಯ ತಳಮಳಗಳನ್ನು, ಕೊರಗನ್ನು ಚಿತ್ರಿಸುತ್ತಲೆ ಅವಳ ನೆಲೆಯಿಂದ ಬುದ್ಧನ ವ್ಯಕ್ತಿತ್ವ ನೋಡಿವೆ. ಬುದ್ಧ ಮುಖ್ಯವಾದಷ್ಟೇ ಯಶೋಧರೆಯ ಒಳಗಿನ ತಳಮಳಗಳೂ ಚರಿತ್ರೆಯಲ್ಲಿ ಮುಖ್ಯವಾಗಬೇಕು, ಅವಳ ನೋವುಗಳಿಗೆ ದನಿ ನೀಡಬೇಕು ಎಂಬ ತುಡಿತಗಳು ಈ ಕವಿತೆಗಳಲ್ಲಿ ವ್ಯಕ್ತವಾಗಿವೆ.

### ೪.೨.೪ ಬುದ್ಧ: ಜಗತ್ತಿನ ಮುಂದಿರುವ ಅಂತಿಮ ಆಯ್ಕೆಯಾಗಿ :

ಕೋಮುಹಿಂಸೆ, ಜನಾಂಗೀಯ ಹಿಂಸೆ, ಭಯೋತ್ಪಾದನೆ, ಯುದ್ಧ, ಜಾಗತೀಕರಣ ಹಾಗೂ ಆಧುನಿಕ ಅಭಿವೃದ್ಧಿಯ ಪರಿಕಲ್ಪನೆಗಳು ತಂದೊಡ್ಡಿರುವ ಆತಂಕಗಳು, ಅನೈತಿಕ ರಾಜಕಾರಣ ಮುಂತಾದವು ಜಗತ್ತನ್ನು ತಲ್ಲಣಗೊಳಿಸಿವೆ. ಮನುಷ್ಯನ ಅಂತರಂಗವನ್ನು ಬೆಳಗಬೇಕಾದ ಧರ್ಮಗಳು ಅಜ್ಞಾನವನ್ನೂ, ಹಿಂಸೆಯನ್ನೂ ಪ್ರಚೋದಿಸುತ್ತಿವೆ. ಭೋಗ ಸಂಸ್ಕೃತಿ ಮನುಷ್ಯನಲ್ಲಿ ಮಾನವೀಯತೆಯನ್ನು ಮರೆಸುತ್ತಿದೆ. ಹೀಗೆ ಪ್ರಕ್ಷುಬ್ಧ ಹಾಗೂ ವಿನಾಶಕಾರಿ ಹಂತವನ್ನು ತಲುಪಿರುವ ಮನುಷ್ಯ ಜಗತ್ತು ನೆಮ್ಮದಿಗಾಗಿ, ಶಾಂತಿಗಾಗಿ ಹಪಹಪಿಸುತ್ತಿದೆ. ಇಂಥ

ಸಂದರ್ಭದಲ್ಲಿ ಜಗತ್ತು ಯಾವ ಕಡೆ ಮುಖಮಾಡಬೇಕಾಗಿದೆ? ಜಗತ್ತಿನ ಮುಂದಿರುವ ಅಂತಿಮ ಆಯ್ಕೆಯಾದರೂ ಯಾವುದು? ಎಂಬ ಪ್ರಶ್ನೆಗಳು ಕಾಡುತ್ತವೆ. ಇಂಥ ಸಂದರ್ಭದಲ್ಲಿ ಕನ್ನಡ ಕಾವ್ಯ ಆಧುನಿಕ ಜಗತ್ತಿನ ವಿಕಾರಗಳೊಂದಿಗೆ ಬುದ್ಧನನ್ನು ಮುಖಾಮುಖಿಯಾಗಿಸುವ ಕೆಲಸಮಾಡಿದೆ. ಮನುಷ್ಯ ಜಗತ್ತಿನ ಎಲ್ಲಾ ಸಮಸ್ಯೆಗಳಿಗೆ ಮದ್ದಾಗಿ ಬುದ್ಧನ ಕಡೆಗೆ ನೋಡಿದೆ. ಬುದ್ಧನಲ್ಲಿ ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಬಹುದಾದ ಸಾಧ್ಯತೆಗಳನ್ನು ತೋರಿಸಿಕೊಡುವ ಪ್ರಯತ್ನದಲ್ಲಿ ತೊಡಗಿಸಿಕೊಂಡಿದೆ.

ಪ್ರಭು ಯೇಸುವಿಗೆ ಮೊಳೆ ಹೊಡೆದ
ಸುತ್ತಿಗೆಗಿರಲಿಲ್ಲ ಬೋಧಿ ಹಿಡಿ
ಶಿಲುಬೆಯಾಗಲಿಲ್ಲ ಬೋಧಿ ವೃಕ್ಷ
ಗೋಡ್ಸೆ ಬಂದೂಕಿಗೆ ಇದ್ದಿದ್ದರೆ
ಬೋಧಿ ವೃಕ್ಷದ ಹಿಡಿ
ಹಾರುತ್ತಿರಲಿಲ್ಲ ಗಾಂಧೀಜಿಗೆ ಗುಂಡು
ಹೇ ರಾಮ್ .... ಚೀತ್ಕಾರವಾಗುತ್ತಿರಲಿಲ್ಲ
ಬಿಕ್ಕುವಾದನು ತನ್ನ ಕ್ರೌರ್ಯ ಕತ್ತರಿಸಿ
ಅಂಗುಲಿಮಾಲ ಬುದ್ಧನ ದಯೆಯಿಂದ
ಸುಜ್ಞಾನ ನೀಡು ಓ ಬೋಧಿ ವೃಕ್ಷ
ಜಗ ತೊಡಲಿ ಸಮತೆಯ ಹಸಿರು ದೀಕ್ಷೆ.[೭೧]

ಜಗತ್ತನ್ನು ಆವರಿಸಿಕೊಂಡಿರುವ ಹಿಂಸೆ, ಕ್ರೌರ್ಯಗಳನ್ನು ಗೆಲ್ಲಲು ಇರುವ ಏಕೈಕ ದಾರಿ ಎಂದರೆ ಅದು ಬುದ್ಧನ ಮಾರ್ಗ ಮಾತ್ರ ಎಂಬುದನ್ನು ಈ ಕವಿತೆ ಹೇಳುತ್ತದೆ. ಜಗತ್ತು ಬುದ್ಧನ ಹಾದಿಯಲ್ಲಿ ಸಾಗಿದ್ದಿದ್ದರೆ ಮಾನವ ಚರಿತ್ರೆ ಇಷ್ಟು ಹಿಂಸೆಯಿಂದ ಕೂಡಿರಬೇಕಾಗಿರಲಿಲ್ಲ ಎನ್ನುತ್ತಲೇ ಇಂದು ಜಗತ್ತಿನ ಮುಂದಿರುವ ಏಕೈಕ ಆಯ್ಕೆ ಬುದ್ಧ ಎಂಬುದನ್ನೂ ಧ್ವನಿಸುತ್ತದೆ. ಬೋಧಿ ವೃಕ್ಷವೊಂದೇ ಜಗತ್ತನ್ನು ಪ್ರೀತಿ, ಕರುಣೆಗಳಿಂದ ಸಲಹುವ ಏಕೈಕ ಮಮತೆಯ ಸೆಲೆಯಾಗಿ ಕಂಡಿದೆ.

ಧರೆ ಹೊತ್ತಿ ಉರಿಯುತ್ತಿದೆ
ಸುತ್ತಲೂ ಬೆಂಕಿಯ ಜ್ವಾಲೆ
ನಡು ಮಧ್ಯೆ ಶಾಂತಿಮರ ಹಾಗೆಯೇ ನಿಂತಿದೆ
ಬೇರಲ್ಲಿ ಕರುಣೆಯ ನೀರು ತುಂಬಿಸಿಕೊಂಡು
ಹಸಿರೊಡೆಸುವ ಕಾಲನಿಗಾಗಿ ಕಾದು
ಶಾಂತಿ-ಶಾಂತಿ-ಶಾಂತಿ ಎಂದು
. . . . . . . . . . . . . .
ಶಾಂತಿ ನೀಡಬೇಕಿದೆ- ಜನಕೆ
ದಯೆ ಕರುಣೆ-ಮಮತೆ, ಮೈತ್ರಿಯ, ಸೋದರತೆ
ತೋರಬೇಕಿದೆ- ಜನಕೆ
ಮುರಿದ ಬುದ್ಧಿ ಮರದ ಕೊಂಬೆಗಳ ಚಿಗುರಿಸಿ
ಮರದ ತುಂಬಾ ಹಸಿರೊದಿಸಿ
ಬೆಳದಿಂಗಳ ಹೂವುಗಳ ಮುಡಿಸ ಬೇಕಿದೆ-ಮನಕೆ.[೭೨]

ಜಗತ್ತು ಕತ್ತಲೆ, ಹಿಂಸೆಗಳಿಂದ ತುಂಬಿಹೋಗಿ ಭರವಸೆಗಳೇ ಇಲ್ಲದಿರುವಂತ ದಿಕ್ಕೆಟ್ಟ ಸ್ಥಿತಿಯಲ್ಲಿ ಏಕೈಕ ಆಸರೆಯಾಗಿ ಬುದ್ಧ ಕಾಣುತ್ತಿದ್ದಾನೆ. ಆತ ಜಗತ್ತನ್ನು 'ಶಾಂತಿ-ಸೈರಣೆ, ಪ್ರೀತಿ-ಪ್ರೇಮ, ದಯೆ-ಕರುಣೆ, ಮಮತೆ-ಮೈತ್ರಿ, ಸೋದರತೆಗಳಿಂದ' ಕಾಪಾಡಲು ಕಾಯುತ್ತಿದ್ದಾನೆ. ಎಲ್ಲಾ ಕ್ರೌರ್ಯಗಳನ್ನು ಸಹಿಸಿಯೂ, ಕ್ರೌರ್ಯದ ಹೃದಯದಲ್ಲೂ ಪ್ರೀತಿಯನ್ನು ಚಿಗುರಿಸುವ ಭರವಸೆಯಿಂದ ಜಗತ್ತಿನ ಶಾಂತಿಗಾಗಿ ಕಾದುಕೂತಿರುವ 'ಶಾಂತಿಮರ' ಬುದ್ಧ ಎನ್ನುತ್ತದೆ ಈ ಕವಿತೆ. ಪ್ರತಿ ಮನುಷ್ಯನಲ್ಲೂ ಬುದ್ಧನ ಶಾಂತಿ ಮಂತ್ರವನ್ನು ಬಿತ್ತಬೇಕಿದೆ.

ಆಗ ಮಾತ್ರ ಜಗತ್ತು ಹಿಂಸೆಯಿಂದ ಮುಕ್ತಿಹೊಂದಲು ಸಾಧ್ಯ ಎಂಬ ನಿಲುವು ಕವಿತೆಯಲ್ಲಿ ವ್ಯಕ್ತವಾಗಿದೆ. ಎಲ್ಲ ಒಳಿತು ಕೆಡಕುಗಳ ಮೂಲ ಮನುಷ್ಯನ ಮನಸ್ಸೇ ಆಗಿರುವುದರಿಂದ ಆ ಮನಸ್ಸಿನ ಪರಿವರ್ತನೆ ಹಾಗೂ ನಿಯಂತ್ರಣವೊಂದೇ ನೈಜ ಪರಿಹಾರವಾಗಿ ಕಾಣುತ್ತಿದೆ. ಬುದ್ಧ ಮನುಷ್ಯನ ದುಃಖಕ್ಕೆ ಕಂಡುಕೊಂಡ ಬಹುಮುಖ್ಯ ಪರಿಹಾರ ಮಾರ್ಗ ಇದು. ಯಾವ ಭೌತಿಕ ಮಾರ್ಗಗಳಿಂದಲೂ ಸಾಧ್ಯವಾಗದ್ದು ಮನಸ್ಸಿನ ಪರಿವರ್ತನೆಯಿಂದ ಸಾಧ್ಯ, ಶುದ್ಧ ಜೀವನ ಮಾರ್ಗದಿಂದ ಸಾಧ್ಯ ಎಂಬುದನ್ನು ಬುದ್ಧ ಜಗತ್ತಿಗೆ ತೋರಿಸಿಕೊಟ್ಟ. ಶಸ್ತ್ರ ಮಾರ್ಗದ ಮುಖೇನ ಜಗತ್ತನ್ನು ಗೆಲ್ಲುವ ಹಾಗೂ ದೇಶ ಕಟ್ಟುವ ಹುಮ್ಮಸ್ಸಿನಿಂದ ಹೊರಟಿರುವ ಮನುಷ್ಯನಿಗೆ ಅದರ ಪರಿಣಾಮಗಳ ಬಿಸಿ ಈಗ ತಟ್ಟುತ್ತಿದೆ. ಇಂಥ ಸಂದರ್ಭದಲ್ಲಿ ಬುದ್ಧನ ಪ್ರತಿಪಾದನೆಗಳು ಮಹತ್ವ ಪಡೆಯುತ್ತಿವೆ. ಪಂಚಶೀಲ ತತ್ವಗಳು, ಅಷ್ಟಾಂಗ ಮಾರ್ಗಗಳು, ಪ್ರಾಪಂಚಿಕ ಚಿರಸತ್ಯಗಳನ್ನು ಬೋಧಿಸಿದ ಬುದ್ಧ ಇವು ಮನುಷ್ಯನ ಅಂತರಂಗ ಹಾಗೂ ಬಹಿರಂಗದ ಶುದ್ಧಿಗೆ ಸಹಾಯಕವಾಗುತ್ತವೆ ಎನ್ನುತ್ತಾನೆ. ಶುದ್ಧ ಮನಸ್ಸು, ಶುದ್ಧ ಜೀವನ, ಶುದ್ಧ ಆಲೋಚನೆಗಳಿಂದ ಹಾಗೂ ಪ್ರೀತಿ, ಕರುಣೆ ಪೂರ್ಣಜ್ಞಾನಗಳಿಂದ ಜಗತ್ತನ್ನು ಪರಿವರ್ತಿಸಲು ಸಾಧ್ಯ ಎಂಬುದನ್ನು ತೋರಿಸಿಕೊಟ್ಟವನು ಬುದ್ಧ.

ಸ್ವರ್ಗಕ್ಕೂ ಮಿಗಿಲಾದದ್ದು ನಿಸರ್ಗ
ಎಂದವನು ಬುದ್ಧ
ಶಿಲೆಯಲ್ಲಿ, ಪಾವಕದಲ್ಲಿ
ಹಿಮದಲ್ಲೂ ಇರಬಲ್ಲಾತ
ಅರಿತವರ ನಗೆಯಲ್ಲೂ
ಅರಿಯದವರ ಅಳುವಿನಲ್ಲೂ.[೭೩]

ಬುದ್ಧ ಇಂದು ಜಗತ್ತಿಗೆ ಏಕೆ ಬೇಕಾಗಿದ್ದಾನೆ ಎಂದರೆ ನಿಸರ್ಗ ಧರ್ಮವನ್ನು ಬೋಧಿಸಿದ ಎಂಬ ಕಾರಣಕ್ಕಾಗಿ. ದೇವರು, ಧರ್ಮ, ಆಚರಣೆ, ಮೋಕ್ಷ, ಸ್ವರ್ಗ, ನರಕಗಳೆಂಬ ಸುಳಿಯಲ್ಲಿ ಸಿಲುಕಿಸಿ ಮನುಷ್ಯ ಮನುಷ್ಯರ ಮೇಲೆ ಕ್ರೌರ್ಯ ಎಸಗುವಂತೆ ಮಾಡುತ್ತಿರುವ ಇಂದಿನ ಹಲವು ಧರ್ಮಗಳನ್ನು ನೋಡಿದರೆ ಜಗತ್ತಿಗೆ ಇಂದು ಬೇಕಾಗಿರುವ ನಿಜವಾದ ಧರ್ಮ ಯಾವುದು ಎಂಬುದು ಗೊತ್ತಾಗುತ್ತದೆ. "ಧರ್ಮ ಯುದ್ಧದ ನಾಡಿನಲ್ಲಿ ಧರ್ಮನಿರಸನದ ಬಗ್ಗೆ ಮಾತನಾಡಿ ಆ ಧರ್ಮಗಳ ಸಾಂಸ್ಕೃತಿಕ ಕ್ರೌರ್ಯವನ್ನು ಕಣ್ಣಾರೆ ಕಂಡು ಮನನೊಂದು ಮನುಷ್ಯ ಧರ್ಮವೊಂದನ್ನು ಕಟ್ಟಿ ಬೆಳೆಸಿದ ಕ್ರಾಂತಿಕಾರಿ ಮತ್ತು ಬಹುದೊಡ್ಡ ಸಮಾಜ ಸುಧಾರಕ ಬುದ್ಧ".[೭೪] ಈ ಮಾತುಗಳು ಜಗತ್ತಿಗೆ ಬುದ್ಧನ ವಿಶಿಷ್ಟ ಕೊಡುಗೆಯನ್ನು ತಿಳಿಸುತ್ತವೆ.

ಕಳಚಿ ಬಿಸುಡಿಬಿಡು
ಪುರಾಣಪಂಡಿತಮಂಡಿತ ಕಂತೆಗಳ
ತೆರೆ ಕಣ್ಣ ನಿಗಿನಿಗಿ ಉರಿವ ಬಾಳ ನಿಜಕೆ
ನಂಬದಿರು ಪ್ರಶ್ನಿಸದೆ, ನನ್ನನೂ ಕೂಡ
ಹುಡುಕು ನಿನ್ನಂತರಂಗಕೆ ತಗುವ ಉತ್ತರ
ಮೀಯಲಿ ಕಾಯ ಚಿತ್ತಶುದ್ಧಿಯಲಿ
ತಲೆ ಬಾಗು ಚಲಿಸುತಿಹ ಧರ್ಮಚಕ್ರದ ಗತಿಗೆ
ನಿನಗೆ ನೀನೆ ಗೆಳೆಯ, ನಿನಗೆ ನೀನೇ
ಆತ ತೋರಿದ ದಾರಿ ಹೊನ್ನ ಬೆಳಕಿನ ದಾರಿ
ಬೆಳಕು ಸೋಜ್ವಲವಾಗಿ ಬೆಳಗಬೇಕು
ಮಾನವತೆ ಅರಿವಿನಲಿ ತೊಳಗಬೇಕು.[೭೫]

ಬುದ್ಧ ದೇವರಿದ್ದಾನೆ ಎಂದಾಗಲೀ, ತಾನೇ ದೇವರೆಂದಾಗಲೀ, ದೇವದೂತನೆಂದಾಗಲೀ ಕರೆದುಕೊಂಡವನಲ್ಲ. ಹಾಗೆಯೇ ಯಾರೋ ಹೇಳಿದ್ದಾರೆ ಎಂದ ಮಾತ್ರಕ್ಕೆ, ಧರ್ಮ, ಶಾಸ್ತ್ರಗಳು ಹೇಳಿವೆ ಎಂಬ ಕಾರಣಕ್ಕೆ

ಯಾವುದನ್ನೂ ನಂಬಬೇಡಿ ಎಂದು ಬೋಧಿಸಿದ. ಸ್ವತಹ ತಾನು ಹೇಳಿದ್ದನ್ನೂ ನಂಬಬೇಕಾಗಿಲ್ಲ. ನಿಮ್ಮ ಅಂತರಂಗಕ್ಕೆ ಸರಿ ಎನ್ನಿಸಿದ್ದನ್ನು ನಂಬುವ ಅದರಂತೆ ನಡೆಯುವ ಸ್ವಾತಂತ್ರ್ಯ ಪ್ರತಿಯೊಬ್ಬರಿಗೂ ಇದೆ ಎಂದು ಬೋಧಿಸಿದ. ಜಗತ್ತಿನ ಯಾವ ಧರ್ಮ, ದೇವದೂತರೂ ಹೇಳಿರದ ಈ ಮಾತನ್ನು ಬುದ್ಧ ಹೇಳಿದ್ದಾನೆ. ಬುದ್ಧ ಜಗತ್ತಿಗೆ ದೇವರಿಲ್ಲದ ಧರ್ಮ ಹಾಗೂ ಆಧ್ಯಾತ್ಮಿಕತೆಯನ್ನು ರೂಪಿಸಿಕೊಟ್ಟವನು. ದೇವರು, ಧರ್ಮಗಳು ಮನುಷ್ಯನಲ್ಲಿನ ಹಿಂಸೆ ಮತ್ತು ಶೋಷಕ ಪ್ರವೃತ್ತಿಗಳನ್ನು ಪ್ರಚೋದಿಸುತ್ತಿರುವ ಇಂದಿನ ಸಂದರ್ಭದಲ್ಲಿ ಬುದ್ಧನ ಈ ಪ್ರತಿಪಾದನೆ ಹೆಚ್ಚು ಮಹತ್ವ ಪಡೆಯುವಂಥದ್ದು. ಪ್ರತಿಯೊಬ್ಬ ಮನುಷ್ಯನೂ ತಮ್ಮ ಅಂತರಂಗದ ವಿಕಾಸವನ್ನು ಮಾಡಿಕೊಳ್ಳುವ ಮೂಲಕ ತಮ್ಮನ್ನು ಆವರಿಸಿಕೊಂಡಿರುವ ಅಜ್ಞಾನವನ್ನು ತೊಡೆದುಕೊಳ್ಳಲು ಸಾಧ್ಯ. ಆಗ ಅವರು ಪ್ರಾಪಂಚಿಕ ಚಿರಸತ್ಯಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಆ 'ಅರಿವು' ಪಡೆಯುವ ಮನುಷ್ಯರು ತಮ್ಮೆಲ್ಲಾ ವಿಕಾರಗಳನ್ನು ಕಳೆದುಕೊಳ್ಳುತ್ತಾರೆ. ಅಂಥವರಿಂದ ಯಾವ ಶೋಷಣೆ, ಹಿಂಸೆಗಳೂ, ಜೀವವಿರೋಧಿ ಕೃತ್ಯಗಳೂ ನಡೆಯಲಾರವು. ಮನುಷ್ಯನ ಬದುಕನ್ನು ನಿಯಂತ್ರಿಸುವ ದೈವಶಕ್ತಿಯೊಂದಿದೆ ಎಂದು ನಂಬಿಸುತ್ತಿರುವ ಸಂದರ್ಭದಲ್ಲಿ ಬುದ್ಧ 'ನಿನಗೆ ನೀನೇ' ಎಂಬ 'ಅರಿವಿನ ಬೆಳಕು' ಕೊಟ್ಟ. ಆ ಅರಿವಿನ ಬೆಳಕೇ ಇಂದು ಮಾನವತೆಯನ್ನು ಬೆಳಗಬೇಕಾಗಿರುವ ಅಂತಿಮ ಮಾರ್ಗವಾಗಿ ಕಾಣುತ್ತಿದೆ.

ಪ್ರೀತಿ, ಕರುಣೆಗಳು ಮನುಷ್ಯನಲ್ಲಿ ಸ್ಥಾಯಿ ಗುಣಗಳಾಗಿ ಉಳಿದಾಗ ಮಾತ್ರ ತಮ್ಮನ್ನೂ, ತಮ್ಮ ಎದುರಿಗಿರುವವರನ್ನೂ ಪರಿವರ್ತಿಸಲು ಸಾಧ್ಯ ಎಂಬುದನ್ನು ಬುದ್ಧ ಕಂಡುಕೊಂಡಿದ್ದ. ಇವು ಇಂದಿನ ಹಿಂಸೆ ತುಂಬಿದ ಜಗತ್ತಿಗೆ ತೀರಾ ಅನಿವಾರ್ಯವಾಗಿರುವ ಮಾರ್ಗಗಳಾಗಿವೆ.

ಮೋಸ ದುರಾಸೆಯ ನಡುವೆ
ನೀನೊಂದು ಭರವಸೆ
ಆ ನಗು ಮಾಸದಿರಲಿ
ನಿನ್ನೊಳಗಿನ ಬುದ್ಧ ಸಾಯದಿರಲಿ
ನಮಗೊಬ್ಬ ಗುರು ಹುಟ್ಟಿಬರಲಿ.[೨೬]

ಜಗತ್ತಿನ ವಿದ್ರೋಹಕಾರೀ ವಾತಾವರಣದ ನಡುವೆ ಇಂದು ನಮ್ಮ ಮುಂದಿರುವ ಭರವಸೆ ಬುದ್ಧ ಮಾತ್ರವಾಗಿದ್ದಾನೆ. ಅವನು ಮಾತ್ರ ಜಗತ್ತಿನಲ್ಲಿ ನಗುವನ್ನು ಮಾಸದಂತೆ ಕಾಪಿಡಬಲ್ಲ. ಹಾಗಾಗಿ ಪ್ರತಿ ಮನುಷ್ಯನೊಳಗೂ ಒಬ್ಬೊಬ್ಬ ಬುದ್ಧ ಜೀವಂತವಾಗಿದ್ದಾಗ ಮಾತ್ರ, ಬುದ್ಧನ ನಗು ಪ್ರತಿಯೊಬ್ಬರಲ್ಲೂ ಮಾಸದಂತೆ ಇದ್ದಾಗ ಮಾತ್ರ ಜಗತ್ತಿನಲ್ಲಿ ಶಾಂತಿಯನ್ನು ನಿರೀಕ್ಷಿಸಲು ಸಾಧ್ಯ ಎಂಬುದನ್ನು ಕವಿತೆ ಧ್ವನಿಸುತ್ತದೆ.

ಯುದ್ಧವನ್ನೂ, ಹಿಂಸೆಯನ್ನೂ ಪ್ರಚೋದಿಸುತ್ತಿರುವ ಶಕ್ತಿಗಳನ್ನು ರಕ್ತರಹಿತ ಮಾರ್ಗದ ಮೂಲಕ ಗೆಲ್ಲುವ ಸಾಧ್ಯತೆಗಳನ್ನು ಬುದ್ಧ ತೋರಿಸಿಕೊಟ್ಟ, ಹಿಂಸೆಗೆ ಹಿಂಸೆ ಪರಿಹಾರವಾಗಲಾರದು. ಹಿಂಸೆಯನ್ನು ಪ್ರೀತಿಯಿಂದ ಗೆಲ್ಲಬೇಕು. ಕೇಡಿನ ನಾಶ ಅದಕ್ಕೆ ಪರಿಹಾರವಲ್ಲ. ಕೇಡಿನ ಪರಿವರ್ತನೆ ಆಗಬೇಕಾದುದು ಮುಖ್ಯ. ಆಗ ಮಾತ್ರ ಸಂಪೂರ್ಣವಾಗಿ ಕೇಡನ್ನು ತೊಡೆದುಹಾಕಲು ಸಾಧ್ಯ ಎಂಬ ಅಮೂಲ್ಯ ತಿಳಿವನ್ನು ಬುದ್ಧ ಜಗತ್ತಿಗೆ ನೀಡಿದ. ಇದನ್ನು ಜಗತ್ತು ಅರಗಿಸಿಕೊಳ್ಳಬೇಕಿದೆ.

ಆಧುನಿಕ ರಾಷ್ಟ್ರ ಹಾಗೂ ಸರ್ಕಾರಗಳು, ಅವುಗಳ ಅಭಿವೃದ್ಧಿಯ ಮಂತ್ರಗಳು ಜೀವವಿರೋಧಿ ಧೋರಣೆಯಿಂದ ಕೂಡಿವೆ. ಇವು ಮನುಷ್ಯನ ಬದುಕನ್ನು ಇನ್ನಷ್ಟು ಸಂಕಷ್ಟದಲ್ಲಿ ಸಿಲುಕಿಸುತ್ತಿವೆ. ಇವು ಪರೋಕ್ಷವಾಗಿ ಪ್ರಕ್ಷುಬ್ಧತೆಯನ್ನು, ಅಶಾಂತಿಯನ್ನು ಹುಟ್ಟುಹಾಕುತ್ತಿವೆ. ಗಲಭೆಗಳಿಗೂ, ಸಂಘರ್ಷಗಳಿಗೂ

ಕಾರಣವಾಗಿ ಹಿಂಸೆಯನ್ನು ಹುಟ್ಟುಹಾಕುತ್ತಿವೆ. ಹಾಗಾಗಿ ಪ್ರಭುತ್ವವು ಜೀವಪರ ಕಾಳಜಿಯಿಂದ ನಡೆಯಬೇಕಾದ ಅಗತ್ಯವಿದೆ. ವಿನಾಶಕಾರಿ ಅಸ್ತ್ರಗಳನ್ನೇ ತನ್ನ ಬಲವೆಂದು ಪ್ರದರ್ಶಿಸುತ್ತಿರುವ ಜಗತ್ತಿನ ರಾಷ್ಟ್ರಗಳು ಅಮೂಲ್ಯ ಜೀವಗಳನ್ನು ಅವುಗಳ ಶಕ್ತಿಯನ್ನು ಮುಖ್ಯವೆಂದು ಪರಿಗಣಿಸುವುದೇ ಇಲ್ಲ. ಜೀವಗಳನ್ನು ಬಲಿಕೊಟ್ಟು ಸಾಧಿಸುವುದಾದರೂ ಏನನ್ನು? ಎಂಬ ಸಾಮಾನ್ಯ ವಿವೇಚನೆಯನ್ನೂ ಮರೆತು ಜನರಲ್ಲಿ ರಾಷ್ಟ್ರ ಪ್ರೇಮದ ಹೆಸರಿನಲ್ಲಿ ಹಿಂಸೆಯನ್ನು ಪ್ರಚೋದಿಸಲಾಗುತ್ತಿರುವ ಇಂದಿನ ಸಂದರ್ಭದಲ್ಲಿ ಬುದ್ಧನ ಜೀವಪರ ಪ್ರತಿಪಾದನೆಗಳು ಮುಖ್ಯವೆನಿಸುತ್ತವೆ. ಮನುಷ್ಯನ ವೈಯಕ್ತಿಕ ನೆಲೆಯಿಂದ ಜಾಗತಿಕ ನೆಲೆಯವರೆಗೆ ಎಲ್ಲಾ ಬಗೆಯ ಜೀವವಿರೋಧಿ ಪ್ರವೃತ್ತಿಗಳನ್ನು ತೊಡೆದುಕೊಳ್ಳಬಹುದಾದ ಮಾರ್ಗಗಳನ್ನು ಬುದ್ಧ ತೋರಿಸಿದ. ಅಜ್ಞಾನಗಳನ್ನು ತೊಡೆದುಕೊಳ್ಳುವ ಮೂಲಕ ಜ್ಞಾನಮುಖಿಯಾಗಿ ವಿಕಾಸಹೊಂದುವ ಪ್ರಕ್ರಿಯೆಗಳು ಪ್ರತಿಯೊಬ್ಬ ಮನುಷ್ಯನಲ್ಲೂ ಆದಾಗ ಜಗತ್ತಿನ ಎಲ್ಲಾ ಸಮಸ್ಯೆ, ಸಂಕಟಗಳೂ ಪರಿಹಾರವಾಗುತ್ತವೆ ಎಂಬ ನಂಬಿಕೆ ಬುದ್ಧನಿಗಿತ್ತು.

> ಅಯ್ಯೋ ಯೋಧ-
> ನಿನ್ನ ಪೇಟ ಕೊಡವಿ ನೋಡು
> ಲಕ್ಷಾಂತರ ಬುದ್ಧರಿದ್ದಾರೆ
> ನಿನ್ನ ಬಟ್ಟೆ, ಮೆಟ್ಟು
> ಎಲ್ಲದರಲ್ಲಿ ಅಡಗಿ ಕುಂತಿದ್ದಾರೆ.
> ನಾಳೆ ನೀನು, ನಿನ್ನ ಮಕ್ಕಳು
> ಅವರ ಮಕ್ಕಳು
> ಕುಡಿಯುವ ನೀರಿನಲ್ಲಿ
> ಉಣ್ಣುವ ಅನ್ನದಲ್ಲಿ
> ಉಸಿರಾಡುವ ಗಾಳಿಯಲ್ಲಿ
> ಬುದ್ಧನಿರುತ್ತಾನೆ.[೭೭]

ಬುದ್ಧನನ್ನು ಬದುಕಿನ ಜೀವಂತಿಕೆಯಲ್ಲಿ ಕಂಡುಕೊಳ್ಳಬೇಕಾದ ಅಗತ್ಯವನ್ನು ಈ ಕವಿತೆ ಹೇಳುತ್ತಿದೆ. ಹಿಂಸೆ, ಯುದ್ಧದ ಪ್ರಚೋದನೆಗೆ ಒಳಗಾದ ಯೋಧನಲ್ಲೂ ಶಾಂತಿಯನ್ನು ಅರಳಿಸುವ ಶಕ್ತಿ ಬುದ್ಧನಿಗಿದೆ. ಎಂಥ ಹಿಂಸೆಗೂ ಜಗ್ಗದೆ ಬುದ್ಧ ಇರುತ್ತಾನೆ. ಏಕೆಂದರೆ ಬುದ್ಧನೆಂಬುವವನು ಮಾನವತೆಯ ಜೀವಂತಿಕೆಯೇ ಆಗಿದ್ದಾನೆ. ಹಾಗಾಗಿ ಬುದ್ಧ ಎಲ್ಲೆಲ್ಲೂ, ಎಲ್ಲದರಲ್ಲೂ ಕಾಣಿಸಬಲ್ಲ. ಹಿಂಸೆ, ಯುದ್ಧ, ಶೋಷಣೆ, ಮುಂತಾದ ರಾಕ್ಷಸೀ ಪ್ರವೃತ್ತಿಗಳು ಜಗತ್ತಿನಲ್ಲಿ ಅಶಾಂತಿಯನ್ನು ಬಿತ್ತುತ್ತಿರುವ ಸನ್ನಿವೇಶದಲ್ಲಿ ಅವೆಲ್ಲದರ ವಿರುದ್ಧ ಧ್ವನಿ ಎತ್ತುತ್ತಿರುವ ಕನ್ನಡ ಕಾವ್ಯ ಅವುಗಳನ್ನು ಬುದ್ಧನ ಮುಖೇನ ಮುಖಾಮುಖಿಯಾಗಿದೆ. ಬುದ್ಧನ ಪ್ರತಿಪಾದನೆಗಳು ಜಗತ್ತಿನ ಮುಂದಿರುವ ಅಂತಿಮ ಆಯ್ಕೆಗಳಾಗಿ ಕನ್ನಡ ಕವಿಗಳಿಗೆ ಕಂಡಿವೆ. ಜಾಗತಿಕ ಹಿಂಸೆಗೆ ಬುದ್ಧನಲ್ಲಿ ಪರಿಹಾರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಇವರು ಮಾಡಿದ್ದಾರೆ. ಇದು ಬುದ್ಧನ ಆಲೋಚನೆಗಳ ಜೀವಪರತೆ ಮತ್ತು ಸರ್ವಕಾಲಿಕತೆಯನ್ನು ತೋರಿಸುತ್ತದೆ. ಮನುಷ್ಯನ ನೆಮ್ಮದಿ ಮತ್ತು ವಿಕಾಸವನ್ನೇ ಮುಖ್ಯವಾಗಿಸಿಕೊಂಡ ಜಗತ್ತಿನ ಏಕೈಕ ಆಲೋಚನೆಯಾಗಿ ಬುದ್ಧನ ವಿಚಾರಗಳು ಕಂಡುಬರುತ್ತವೆ. ಹೊಸಗನ್ನಡ ಕಾವ್ಯ ತನ್ನ ಯುದ್ಧವಿರೋಧೀ ನಿಲುವುಗಳನ್ನು ಬುದ್ಧನ ಮುಖೇನ ವ್ಯಕ್ತಪಡಿಸಿರುವುದು ಬುದ್ಧನನ್ನು ತನ್ನ ಆಲೋಚನಾ ಪ್ರಜ್ಞೆಯ ಅಂತಿಮ ಆಯ್ಕೆಯಾಗಿರಿಸಿಕೊಂಡಿರುವುದರ ಸೂಚಕವಾಗಿದೆ.

## ಕೊನೆ ಟಿಪ್ಪಣಿ

೧. ಟೀಕೆ ಟಿಪ್ಪಣಿ, ಸಂಪುಟ ೧, ಲಂಕೇಶ್ ಪಿ., ಪು.ಸಂ. ೨೪೫
೨. ಅದೇ, ಪು.ಸಂ. ೨೪೬
೩. ಬುದ್ಧ ಭಾರತ, (ಸಂ) ಮುನಿವೆಂಕಟಪ್ಪ ವಿ., ದಮ್ಮ ಪದ, ರವೀಂದ್ರನಾಥ ಠಾಗೂರ್, ಪು.ಸಂ.೧೪೫
೪. ಟೀಕೆ ಟಿಪ್ಪಣಿ, ಸಂಪುಟ ೧, ಲಂಕೇಶ್ ಪಿ., ಪು.ಸಂ. ೨೪೫
೫. ಅದೇ, ಪು.ಸಂ. ೨೪೪
೬. ಸಾಹಿತ್ಯ ಸಂಕಥನ, ಡಿ.ಆರ್. ನಾಗರಾಜ್. ಪು.ಸಂ. ೧೦೨
೭. ಅದೇ, ಪು.ಸಂ.೧೦೩
೮. ಅದೇ, ಹೆಚ್ಚಿನ ವಿವರಗಳಿಗೆ – ಮಹದೇವ ಸುಂಕನಪುರ ಅವರ ಲೇಖನ 'ಅರಿವೆಂಬ ಗುರು ಹುಡುಕುತ್ತಾ'. ಪು. ಸಂ. ೨೮೮. ಈ ಲೇಖನದಲ್ಲಿ ಬೌದ್ಧ ಧರ್ಮ ಬುದ್ಧನ ಕಾಲಾ ನಂತರದಲ್ಲಿ ಮಲೆ ಮಹದೇಶ್ವರ, ಮಂಟೆಸ್ವಾಮಿ ಪರಂಪರೆಗಳಲ್ಲಿ ಹಾಗೂ ಜನಪದ, ದಲಿತ ನೀಲಗಾರ ಪರಂಪರೆಗಳಲ್ಲಿ ಉಳಿದು ಬಂದಿರುವುದನ್ನು ಕುರಿತು ಚರ್ಚಿಸುತ್ತಾರೆ.
೯. ಕುವೆಂಪು ಸಮಗ್ರ ಕಾವ್ಯ, ಸಂಪುಟ ೧, (ಸಂ) ಕೆ.ಸಿ. ಶಿವಾರೆಡ್ಡಿ, ಪು.ಸಂ. ೫೧೩
೧೦. ಅಂಬಿಕಾತನಯದತ್ತರ ಸಮಗ್ರ ಕಾವ್ಯ, ಸಂಪುಟ ೧, (ಸಂ) ವಾಮನಬೇಂದ್ರೆ, ಪು.ಸಂ.೨೪೦
೧೧. ಅದೇ, ಪು.ಸಂ. ೨೪೧
೧೨. ಅದೇ, ಪು.ಸಂ. ೨೪೦
೧೩. ಮಹಾಮೌನ, (ಸಂ) ಲಿಂಗಣ್ಣ ಗೋನಾಲ, ನಿರ್ಮಾಣ ಕಾಯ, ವಿ.ಕೃ.ಗೋಕಾಕ್, ಪು.ಸಂ.೪
೧೪. ಅದೇ, ಬುದ್ಧಸ್ಮಿತ, ಕೆ.ಎಸ್.ನ ಪು.ಸಂ. ೬
೧೫. ಅದೇ, ಬುದ್ಧನೆಂಬ ಬೆಳಕು ; ಮುಳ್ಳೂರು ನಾಗರಾಜ್, ಪು.ಸಂ. ೫೧
೧೬. ನೀಲಕುರಂಜಿ, ಸತ್ಯನಾರಾಯಣರಾವ್ ಅಣತಿ, ಪು.ಸಂ. ೩೯
೧೭. ಸಮಗ್ರ ಕಾವ್ಯ, ಚೆನ್ನವೀರ ಕಣವಿ, ಪು.ಸಂ. ೧೧೦
೧೮. ಸಮಗ್ರ ಕಾವ್ಯ, ಜಿ.ಎಸ್.ಎಸ್, ಪು.ಸಂ. ೩೨೩
೧೯. ಸಮಗ್ರ ಕಾವ್ಯ ಬಿ.ಸಿ. ರಾಮಚಂದ್ರಶರ್ಮ ಪು.ಸಂ. ೩೪೮
೨೦. ಮಹಾಮೌನ, (ಸಂ) ಲಿಂಗಣ್ಣ ಗೋನಾಲ, ಬುದ್ಧನ ಅಮೃತ ವಾಣಿ, ಕಯ್ಯಾರ ಕಿಯ್ಯಣ್ಣ ರೈ, ಪು.ಸಂ ೧೭
೨೧. ಬುದ್ಧ ಭಾರತ, (ಸಂ) ಮುನಿವೆಂಕಟಪ್ಪ ವಿ., ಬುದ್ಧನೆಂಬ ಬೆಳಕು, ಬಂಜಗೆರೆ ಜಯಪ್ರಕಾಶ್, ಪು.ಸಂ. ೨೨೧
೨೨. ಸಮಗ್ರ ಕಾವ್ಯ, ಜಿ.ಎಸ್. ಸಿದ್ದಲಿಂಗಯ್ಯ , ಪು.ಸಂ೪೧೦
೨೩. ಮಹಾಮೌನ, (ಸಂ) ಲಿಂಗಣ್ಣ ಗೋನಾಲ, ಬುದ್ಧ ನಗೆ, ಶ್ಯಾಮಸುಂದರ ಬಿದರಕುಂದಿ ಪು.ಸಂ.೪೯
೨೪. ಅದೇ, ಬುದ್ಧ ಮತ್ತು ಹೂವು, ಸವಿತಾ ನಾಗಭೂಷಣ ಪು. ಸಂ.೯೧
೨೫. ಅದೇ, ಬೌದ್ಧ ಪೌರ್ಣಿಮೆ, ಕೊಟ್ರೇಶ್ ಆರಾಧ್ಯಮಠ ಪು.ಸಂ. ೧೧೩
೨೬. ಅದೇ, ಜ್ಯೋತಿ, ಶಕುಂತಲಮ್ಮ ಸಿ.ಎ., ಪು,ಸಂ.೧೧೯
೨೭. ಸಾಹಿತ್ಯ ಸಂಕಥನ, ಡಿ.ಆರ್. ನಾಗರಾಜ್. ಪು.ಸಂ. ೧೦೩
೨೮. ಅದೇ, ಪು.ಸಂ. ೧೦೩
೨೯. ಮಹಾಮೌನ, (ಸಂ) ಲಿಂಗಣ್ಣ ಗೋನಾಲ, ಮಹಾಮೌನ, ಜಿ. ಕೆ. ರವೀಂದ್ರ ಕುಮಾರ್, ಪು.ಸಂ. ೬೭
೩೦. ಬುದ್ಧ ಭಾರತ, (ಸಂ) ಮುನಿವೆಂಕಟಪ್ಪ ವಿ., ಬುದ್ಧನೆಂಬ ಬೆಳಕು, ಬಂಜಗೆರೆ ಜಯಪ್ರಕಾಶ್, ಪು.ಸಂ. ೨೧೯
೩೧. ಮಹಾಮೌನ, (ಸಂ) ಲಿಂಗಣ್ಣ ಗೋನಾಲ, ಬುದ್ಧಸ್ಮಿತ, ಕೆ.ಎಸ್.ನ ಪು.ಸಂ. ೬
೩೨. ಅದೇ, ಪು.ಸಂ. ೬
೩೩. ಅದೇ, ಪು.ಸಂ.೯
೩೪. ಅದೇ, ಪು.ಸಂ. ೭
೩೫. ಅದೇ, ಪು.ಸಂ. ೧೦
೩೬. ಸಮಗ್ರ ಕಾವ್ಯ, ಬಿ.ಸಿ. ರಾಮಚಂದ್ರಶರ್ಮ ಪು.ಸಂ. ೩೪೯
೩೭. ಮಹಾಮೌನ, (ಸಂ) ಲಿಂಗಣ್ಣ ಗೋನಾಲ, ಬುದ್ಧ ನಗೆ, ಶ್ಯಾಮಸುಂದರ ಬಿದರಕುಂದಿ ಪು.ಸಂ.೪೯
೩೮. ಅದೇ, ಬುದ್ಧ ನಕ್ಕ, ಸಿದ್ಧರಾಮ ಹಿರೇಮಠ ಪು.ಸಂ. ೭೯

೩೯. ಬುದ್ಧ ನಕ್ಕ, ಸಿದ್ದರಾಮ ಹಿರೇಮಠ, ಪುಟ.ಸಂ ೮೦
೪೦. ಅದೇ, ಬುದ್ಧ ನಗೆ, ಶ್ಯಾಮಸುಂದರ ಬಿದರಕುಂದಿ ಪು.ಸಂ.೪೯
೪೧. ಸಮಗ್ರ ಕಾವ್ಯ, ಬಿ.ಸಿ. ರಾಮಚಂದ್ರಶರ್ಮ ಪು.ಸಂ. ೩೪೯
೪೨. ಅದೇ, ಪು.ಸಂ. ೩೫೦
೪೩. ಅದೇ. ಪು.ಸಂ.೩೫೧
೪೪. ಅದೇ. ಪು.ಸಂ.೩೫೨
೪೫. ಮಹಾಮೌನ, (ಸಂ) ಲಿಂಗಣ್ಣ ಗೋನಾಲ, ಬುದ್ಧನೂ ನಾನು, ಚಂದ್ರಶೇಖರ ಪಾಟೀಲ, ಪು.ಸಂ೨೭
೪೬. ಅದೇ,ಬುದ್ಧನ ಪದ್ಯಗಳು, ಕೆ.ವಿ. ತಿರುಮಲೇಶ್, ಪು.ಸಂ.೨೮
೪೭. ಅದೇ,ಪು.ಸಂ. ೩೦
೪೮. ಅದೇ,ಪು.ಸಂ. ೩೨
೪೯. ಅದೇ,ಪು.ಸಂ.೩೬
೫೦. ಅದೇ,ಪು.ಸಂ ೩೮
೫೧. ಅದೇ,ಪು.ಸಂ.೩೧
೫೨. ಅದೇ, ಬುದ್ಧನ ವಿಗ್ರಹದ ಸುತ್ತ ಮುತ್ತ, ವಸಂತ ಕುಷ್ಟಗಿ, ಪು.ಸಂ. ೪೨
೫೩. ಅದೇ, ಬುದ್ಧ ನಗಲಿಲ್ಲ. ಜಂಬಣ್ಣ ಅಮರಚಿಂತ, ಪು.ಸಂ.೪೩
೫೪. ಅದೇ,ಬುದ್ಧ ನಗುತ್ತಾನೆ, ಸರಜೂ ಕಾಟ್ಕರ್ ಪು.ಸಂ. ೪೭
೫೫. ನೀಲ ಕುರುಂಜಿ, ಸತ್ಯನಾರಾಯಣ ರಾವ್, ಅಣತಿ ಪು.ಸಂ. ೪೦
೫೬. ಮಹಾಮೌನ, (ಸಂ) ಲಿಂಗಣ್ಣ ಗೋನಾಲ, ಕರುಣದ ಕಿರಣ, ಮೂಡ್ನಕೂಡು ಚಿನ್ನಸ್ವಾಮಿ, ಪು.ಸಂ.೬೪
೫೭. ಅದೇ, ಬುದ್ಧನ ನಾಡಿನಲ್ಲಿ ಇಂದು, ಅರ್ಜುನಗೊಳಸಂಗಿ, ಪು.ಸಂ೭೩
೫೮. ಅದೇ, ನಾನು ಬುದ್ಧನಾಗುವುದಿಲ್ಲ ಕೆ. ಕೇಶವಶರ್ಮ, ಪು.ಸಂ.೭೫
೫೯. ಅದೇ,ಆಸೆ ದುಃಖಕ್ಕೆ ಕಾರಣ, ಪ್ರಭು ಖಾನಾಪುರ, ಪು.ಸಂ. ೭೮
೬೦. ಅದೇ, ಬುದ್ಧ ನಕ್ಕ, ಸಿದ್ಧರಾಮ ಹಿರೇಮಠ, ಪು.ಸಂ. ೭೯
೬೧. ಅದೇ, ಆಗಮಿಸಿರಿ ಆಗಮಗಳೇ, ವಸಂತಕುಮಾರ್ ಪೆರ್ಲ, ಪು.ಸಂ.೮೫
೬೨. ಅದೇ, ದೇವಪಂಜರ, ವಿಠಲ ರಾವ್ ಗಾಯಕವಾಡ್, ಪು.ಸಂ. ೮೨
೬೩. ಅದೇ, ಬುದ್ಧ ಬದಲಾಗಿದ್ದಾನೆ, ಜಗದೀಶ್ ಪೂಜಾರ್, ಪು.ಸಂ. ೮೭ ಪ
೬೪. ಅದೇ, ಬದ್ಧನಾಗಿ ಬುದ್ಧನಾದೆ, ಈ. ಬ್ಹಿ. ಬಿಳೇಕಲ್, ಪು.ಸಂ. ೧೫೯
೬೫. ಅದೇ, ಬುದ್ಧ ಮತ್ತು ನಾವು, ಎಲ್. ಗಿರಿಜಾರಾಜ್, ಪು.ಸಂ. ೧೦೯
೬೬. ಟೀಕೆ ಟಿಪ್ಪಣಿ, ಸಂಪುಟ ೧ ಲಂಕೇಶ್ ಪಿ., ಪು.ಸಂ. ೨೪೬
೬೭. ಮಹಾಮೌನ, (ಸಂ) ಲಿಂಗಣ್ಣ ಗೋನಾಲ, ಸಾಕ್ಷಾತ್ಕಾರ, ಸಂಗು ಹುಂಡೇಕಾರ, ಪು.ಸಂ. ೯೮
೬೮. ಅದೇ, ಪು.ಸಂ. ೯೮,
೬೯. ಅದೇ, ಪು.ಸಂ. ೯೮,
೭೦. ಕಾವ್ಯಬೋಧಿ, ಹೆಚ್.ಎಸ್.ಅನುಪಮ, ಮಹಾ ಪರಿನಿರ್ವಾಣ, ರೂಪಾ ಹಾಸನ, ಪು.ಸಂ. ೧೧೫
೭೧. ನೆಲದ ತಳಮಳ, (ಸಂ) ಚಂದ್ರಶೇಖರ ತಾಳ್ಯ, ಕುಂಸಿ ಉಮೇಶ, ವೃಕ್ಷಂ ಶರಣಂ ಗಚ್ಛಾಮಿ....., ನಾಗೇಶ್ ಸೋಸ್ಲೆ, ಪು.ಸಂ. ೬೫
೭೨. ಅದೇ, ಒಂದು ಮರ ಮತ್ತು ಮೌನ, ಮುಳ್ಳೂರು ಶಿವಮಲ್ಲು, ಪು.ಸಂ.೬೨
೭೩. ಕವಿತೆ ೨೦೦೧, (ಸಂ) ಜಿ. ಕೆ. ರವೀಂದ್ರಕುಮಾರ್, ಅಳುವ ಬುದ್ಧ, ಮೂಡ್ನಾಕೂಡು ಚಿನ್ನಸ್ವಾಮಿ, ಪು.ಸಂ.೧೬
೭೪. ಬುದ್ಧ ಭಾರತ, (ಸಂ) ಮುನಿವೆಂಕಟಪ್ಪ ವಿ., ಬೆಳಕಿಗೆ ಶರಣು. ಡಾ.ಎಸ್. ಚಂದ್ರಕಿರಣ್, ಪು.ಸಂ. ೨೩೫
೭೫. ನೆಲದ ತಳಮಳ, (ಸಂ) ಚಂದ್ರಶೇಖರ ತಾಳ್ಯ, ಕುಂಸಿ ಉಮೇಶ, ಬೋಧಿಸತ್ವ, ಮೋಹನ ಹಬ್ಬು, ಪು.ಸಂ. ೩೫
೭೬. ಅದೇ, ನನ್ನೊಳಗಿನ ಬುದ್ಧ, ನಿರ್ಮಲ ಈ. ಶೆಟ್ಟರ, ಪು.ಸಂ.೫೭
೭೭. ಕವಿತೆ ೨೦೦೧, (ಸಂ) ಜಿ.ಕೆ. ರವೀಂದ್ರ ಕುಮಾರ್, ಬುದ್ಧ ಕವಿತೆ, ಸವಿತಾ ನಾಗಭೂಷಣ, ಪು.ಸಂ. ೮೧

# ಅಧ್ಯಾಯ ೫

## ಬಸವಣ್ಣನ ವ್ಯಕ್ತಿತ್ವ ಶೋಧ : ವೈಚಾರಿಕತೆಯ ನಂದದ ಬೆಳಕು

೫.೧ ಬಸವಣ್ಣನ ವ್ಯಕ್ತಿತ್ವ : ತಾತ್ವಿಕ ಗ್ರಹಿಕೆ

೫.೨ ಆಧುನಿಕ ಕನ್ನಡ ಕಾವ್ಯ ಕಂಡ ಬಸವಣ್ಣ : ಸಮಾನತೆಯ ಸಮಾಜ ನಿರ್ಮಾಣದ ಕನಸು

೫.೨.೧ ಬಸವಣ್ಣನ ವ್ಯಕ್ತಿತ್ವದ ಅನನ್ಯತೆಯ ಶೋಧ

೫.೨.೨ ಬಸವಣ್ಣನ ವ್ಯಕ್ತಿತ್ವ : ಸಾಂಸ್ಕೃತಿಕ ಮುಖಾಮುಖಿ

೧. ಪ್ರಸಂಶೆ ಮತ್ತು ಆರಾಧನಾ ನೆಲೆ

೨. ಸ್ವ ವಿಮರ್ಶೆ, ತೀವ್ರ ವಿಷಾದ ಮತ್ತು ಸಾಂಸ್ಕೃತಿಕ ವಿಡಂಬನೆಯ ನೈತಿಕ ಶಕ್ತಿಯಾಗಿ

೫.೨.೩ ಸಮಕಾಲೀನ ವ್ಯಕ್ತಿತ್ವಗಳನ್ನು ರೂಪಿಸುವ ಶ್ರದ್ಧೆಯ ಆದರ್ಶವಾಗಿ

# ಅಧ್ಯಾಯ ೫

## ಬಸವಣ್ಣನ ವ್ಯಕ್ತಿತ್ವ ಶೋಧ : ವೈಚಾರಿಕತೆಯ ನಂದದ ಬೆಳಕು

### ೫.೧ ಬಸವಣ್ಣನ ವ್ಯಕ್ತಿತ್ವ : ತಾತ್ವಿಕ ಗ್ರಹಿಕೆ

ಕನ್ನಡ ನಾಡು ಕಂಡ ಉನ್ನತ ವ್ಯಕ್ತಿಗಳಲ್ಲಿ ಬಸವಣ್ಣ ಒಬ್ಬರು. ಆಧುನಿಕ ಸಂದರ್ಭದಲ್ಲಿ ಸಾಮಾಜಿಕ, ಧಾರ್ಮಿಕ, ಆರ್ಥಿಕ ಬಿಕ್ಕಟ್ಟುಗಳ ಪರಿಹಾರಕ್ಕಾಗಿ ಇಂದು ಯಾವ ಜೀವಪರ ನೆಲೆಯ ಕಾರ್ಯ-ಯೋಜನೆಗಳನ್ನು ಕನಸುತ್ತಿದ್ದೇವೆಯೋ, ಅವುಗಳ ಹಾದಿಯಲ್ಲಿ ಸಾಗಲು ಪ್ರಯತ್ನಿಸುತ್ತಿದ್ದೇವೆಯೋ ಅದಕ್ಕಾಗಿ ಹನ್ನೆರಡನೆ ಶತಮಾನದಷ್ಟು ಹಿಂದೆಯೇ ಬಸವಣ್ಣ ಪ್ರಯತ್ನಿಸಿದ್ದ, ಹೋರಾಡಿದ್ದ. ಸಕಲ ಜೀವರಿಗೆ ಲೇಸನ್ನು ಬಯಸುವುದೇ ಧರ್ಮ, ಕಾಯಕವೇ ಕೈಲಾಸ, ದಯವೇ ಧರ್ಮದ ಮೂಲ, ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ, ಎಂದು ಸಾರುವುದರ ಮೂಲಕ ಮನುಕುಲದ ಉದ್ಧಾರಕ್ಕಾಗಿ ಶ್ರಮಿಸಿದ ಮಹಾನ್ ಮಾನವತಾವಾದಿ. ಬಸವಣ್ಣ ಅಂದು ಹಾಕಿಕೊಟ್ಟ ಸುಧಾರಣೆಯ ಮಾರ್ಗಗಳು ಇಂದಿಗೂ ಪ್ರಸ್ತುತ. ಬಸವಣ್ಣ ತೋರಿದ ಮಾನವಪ್ರೀತಿ ಸಕಲ ಜೀವಿಗಳಿಗೂ ಅನ್ವಯಿಸುವಂತದ್ದು. ಹಾಗಾಗಿ ಬಸವಣ್ಣನ ವ್ಯಕ್ತಿತ್ವ ಮತ್ತು ಅವನ ಚಿಂತನೆಗಳು ಯಾವುದೋ ಒಂದು ಸಮುದಾಯಕ್ಕೆ, ಒಂದು ಜಾತಿಗೆ, ಒಂದು ಕುಲಕ್ಕೆ ಮಾತ್ರ ಸೀಮಿತವಾದುವಲ್ಲ. ಒಟ್ಟು ಮಾನವ ನಾಗರೀಕತೆಯ ಒಳಿತಿನ ಸೂತ್ರಗಳಾಗಿ, ಸಮಾನತೆಯ ಸಾಮಾಜಿಕ ವಿಕಾಸದ ಹಾದಿಯಾಗಿ ಕಂಡುಬರುತ್ತವೆ.

ಭಾರತದ ಸಾಮಾಜಿಕ ಮತ್ತು ಧಾರ್ಮಿಕ ಇತಿಹಾಸದಲ್ಲಿ ಬಸವಣ್ಣನ ವ್ಯಕ್ತಿತ್ವಕ್ಕೆ ಮಹತ್ವದ ಸ್ಥಾನವಿದೆ. ಹನ್ನೆರಡನೆಯ ಶತಮಾನದಲ್ಲಿ ಬದುಕಿದ್ದ ಐತಿಹಾಸಿಕ ವ್ಯಕ್ತಿಯಾದ ಬಸವಣ್ಣನ ಬದುಕು, ಹೋರಾಟ, ಚಿಂತನೆಗಳು ಇಂದಿಗೂ ಚರ್ಚೆಗೊಳಗಾಗುತ್ತಿವೆ. ಹನ್ನೆರಡನೆ ಶತಮಾನದಿಂದ ಕನ್ನಡ ಸಾಹಿತ್ಯ ಮತ್ತು ಜನಮಾನಸದಲ್ಲಿ ಉಳಿದುಕೊಂಡು, ನಿರಂತರವಾಗಿ ಮರುಹುಟ್ಟು ಪಡೆಯುತ್ತಾ, ಜಿಜ್ಞಾಸೆಗಳನ್ನು ಹುಟ್ಟುಹಾಕುತ್ತಾ ಬಂದಿರುವ ಬಸವಣ್ಣನ ಚಿಂತನೆ ಮತ್ತು ಆಲೋಚನೆಗಳು ಆತನ ವ್ಯಕ್ತಿತ್ವದ ಸಂಕೀರ್ಣತೆ ಹಾಗೂ ಅನನ್ಯತೆಗೆ ಸಾಕ್ಷಿಯಾಗಿವೆ. ಬಸವಣ್ಣ ಹೀಗೆ ಸುದೀರ್ಘವಾಗಿ ಕನ್ನಡದ ಮನಸ್ಸುಗಳನ್ನು ಕಾಡಲು ಕಾರಣವೇನು ಎಂಬುದು ಕುತೂಹಲಕಾರಿ ಸಂಗತಿ. ಹಾಗಾಗಿಯೇ ಬಸವಣ್ಣನ ತಾತ್ವಿಕ ನಿಲುವುಗಳನ್ನು, ವ್ಯಕ್ತಿತ್ವದ ಬಹುಮುಖ್ಯ ಚಹರೆಗಳನ್ನು ಗುರುತಿಸಿಕೊಳ್ಳುವುದು ಹಾಗೂ ಅಧ್ಯಯನಕ್ಕೆ ಒಳಪಡಿಸುವುದು ಅಗತ್ಯ ಹಾಗೂ ಆಸಕ್ತಿದಾಯಕ ಸಂಗತಿಯಾಗಿದೆ.

ಬಸವಣ್ಣನ ಸಾಮಾಜಿಕ, ಧಾರ್ಮಿಕ, ಆರ್ಥಿಕ ಚಿಂತನೆಗಳು ಯಾವುದೋ ಒಂದು ಕಾಲಘಟ್ಟಕ್ಕೆ, ಯಾವುದೋ ಒಂದು ಜನಾಂಗಕ್ಕೆ ಮಾತ್ರ ಸೀಮಿತವಾಗಿರದೆ ಸಾರ್ವಕಾಲಿಕ ಹಾಗೂ ಸರ್ವಮಾನ್ಯವಾಗಬಹುದಾದ ಎಲ್ಲಾ ಲಕ್ಷಣಗಳನ್ನು ಒಳಗೊಂಡಿವೆ. ಹಾಗಾಗಿ ಪ್ರಸ್ತುತ ಸಂದರ್ಭದಲ್ಲಿ ಸಾಮಾಜಿಕ, ಧಾರ್ಮಿಕ, ಆರ್ಥಿಕ ಅಸಮಾನತೆ ಹಾಗೂ ಅಸಮತೋಲನಗಳನ್ನು ಕುರಿತಂತೆ ಆಲೋಚಿಸುವಾಗ, ಅದಕ್ಕೆ ಪರಿಹಾರಗಳನ್ನು ಕಂಡುಕೊಳ್ಳಲು ಪ್ರಯತ್ನಿಸುವಾಗ, ಬಸವಣ್ಣ ಮತ್ತೆ ಮತ್ತೆ ನಮ್ಮ ನಡುವೆ ಚರ್ಚೆಗೊಳಗಾಗಿದ್ದಾನೆ. ಅಲ್ಲದೆ ಬಸವಣ್ಣನ ತತ್ವ ಸಿದ್ಧಾಂತಗಳು 'ವ್ಯಕ್ತಿ ಘನತೆ' ಹಾಗೂ 'ಅಂತರಂಗ ಶುದ್ಧಿಯ' ಹಿನ್ನೆಲೆಯಲ್ಲಿ ರೂಪುಗೊಂಡವುಗಳಾದುದರಿಂದ ವ್ಯಕ್ತಿಯ ಅಸ್ತಿತ್ವಕ್ಕೆ ದಕ್ಕೆಯುಂಟಾದ ಸಂದರ್ಭಗಳಲ್ಲಿ, ಅವುಗಳನ್ನು ಮರುಕಟ್ಟುವ ಸನ್ನಿವೇಶಗಳಲ್ಲಿ ಬಸವಣ್ಣನ ತತ್ವ ಸಿದ್ಧಾಂತಗಳ ಪ್ರಸ್ತುತತೆಯನ್ನು ಅರಿಯುವ ನಿರಂತರ ಪ್ರಯತ್ನ ಸಾಹಿತ್ಯವಲಯದಲ್ಲಿ ನಡೆದಿದೆ.

ಕನ್ನಡ ಕವಿಗಳ ಗ್ರಹಿಕೆ ಹಾಗೂ ಆಲೋಚನೆಗಳು ಬಸವಣ್ಣನ ವ್ಯಕ್ತಿತ್ವವನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಪ್ರಜ್ಞಾಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ ಬಸವಣ್ಣ ಮತ್ತು ಅವನ ಸಮಕಾಲೀನ ಸಂದರ್ಭಗಳನ್ನು ಪುನಃ ಪುನಃ ತಮ್ಮದೇ ಆದ ರೀತಿಯಲ್ಲಿ ಮುಖಾಮುಖಿಯಾಗಲು ಪ್ರಯತ್ನಿಸುತ್ತವೆ. ಇದರ ಫಲವಾಗಿ ಬಸವಣ್ಣನನ್ನು ಕುರಿತಾದ ಕನ್ನಡ ಸಾಹಿತ್ಯದ ಬಹುಮುಖ್ಯ ಎನ್ನಬಹುದಾದ ರಚನೆಗಳೂ ಕೂಡ ಬಸವಣ್ಣನನ್ನು ಒಂದಲ್ಲಾ ಒಂದು ರೀತಿಯಲ್ಲಿ ವಿಮರ್ಶೆಯ ಮೂಸೆಯಲ್ಲಿ ಒರೆಗೆ ಹಚ್ಚುತ್ತಾ, ಅವನ ವ್ಯಕ್ತಿತ್ವದ ತುಡಿತ ಮಿಡಿತಗಳ ಹಿಂದಿನ ಒಳತೋಟಗಳನ್ನು ಹಿಡಿದಿಡಲು ಪ್ರಯತ್ನಿಸುತ್ತವೆ. ಜೊತೆಗೆ ಬಸವಣ್ಣನ ವ್ಯಕ್ತಿತ್ವ ಹಾಗೂ ಅವನ ಆಶಯಗಳನ್ನು ಮುರಿದುಕಟ್ಟುತ್ತಾ, ಪುನರ್ ನಿರೂಪಣೆಗೆ ಒಳಪಡಿಸುತ್ತಾ ಅವನ ತತ್ವಗಳನ್ನು ಸಮಕಾಲೀನ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದಲ್ಲಿ ಇಟ್ಟು ನೋಡಲು ಪ್ರಯತ್ನಿಸುತ್ತವೆ. ಈ ನಿಟ್ಟಿನಲ್ಲಿ ಕನ್ನಡ ಕಾವ್ಯ ಕಟ್ಟಿಕೊಡುವ ಬಸವಣ್ಣನ ವ್ಯಕ್ತಿತ್ವವನ್ನು ೧೨ನೇ ಶತಮಾನದ ವಚನ ಚಳುವಳಿ ಹಾಗೂ ಸಮಕಾಲೀನ ಸಮಾಜದ ತಲ್ಲಣಗಳೊಂದಿಗೆ ಸಮೀಕರಿಸಿ ಅಧ್ಯಯನ ನಡೆಸುವುದು ಸಾಹಿತ್ಯಾಧ್ಯಯನದ ಬಹುಮುಖ್ಯ ಅಗತ್ಯಗಳಲ್ಲಿ ಒಂದು. ಹೀಗಾಗಿ ಬಸವಣ್ಣನನ್ನು ಕುರಿತಂತೆ ಇದುವರೆಗೂ ನಡೆದಿರುವ ತಾತ್ವಿಕ ಚರ್ಚೆ, ಚಿಂತನೆಗಳನ್ನೂ ಒಳಗೊಂಡಂತೆ ಆಧುನಿಕ ಕನ್ನಡ ಕಾವ್ಯ ಕಟ್ಟಿಕೊಡುವ ಬಸವಣ್ಣನ ವ್ಯಕ್ತಿತ್ವವನ್ನು ಈ ಅಧ್ಯಯನದಲ್ಲಿ ಸಮಗ್ರವಾಗಿ ಚರ್ಚೆಗೆ ಒಳಪಡಿಸಲು ಪ್ರಯತ್ನಿಸಲಾಗಿದೆ.

ಸೃಜನಶೀಲ ಮನಸ್ಸುಗಳು ಸದಾಕಾಲ ತಮ್ಮ ಪರಂಪರೆಯ ಮಾನವೀಯ ವ್ಯಕ್ತಿತ್ವಗಳನ್ನು ಹಾಗೂ ಸಾಂಸ್ಕೃತಿಕ ಬದುಕಿನ ಮೇಲೆ ಗಾಢವಾಗಿ ಪ್ರಭಾವ ಬೀರಿದ ವ್ಯಕ್ತಿತ್ವಗಳನ್ನು ಹತ್ತು ಹಲವು ರೂಪಗಳಲ್ಲಿ ಗ್ರಹಿಸಲು, ಪುನರ್ ವ್ಯಾಖ್ಯಾನಿಸಲು ನಿರಂತರವಾಗಿ ಪ್ರಯತ್ನಿಸುತ್ತಿರುತ್ತವೆ. ಈ ರೀತಿ ಕಟ್ಟಲ್ಪಟ್ಟ ವ್ಯಕ್ತಿತ್ವಗಳು ಕೃತಿಕಾರನ ಸೃಜನಶೀಲ ಅಭಿವ್ಯಕ್ತಿಯೊಂದಿಗೆ ಅವರು ರೂಪಿಸುತ್ತಿರುವ 'ವ್ಯಕ್ತಿತ್ವಗಳ' ಅಗೋಚರ ಮುಖಗಳನ್ನೂ, ಅವುಗಳ ಬಹುಮುಖ ಪ್ರತಿಭೆಗಳನ್ನೂ ಕಟ್ಟಲು ಪ್ರಯತ್ನಿಸುತ್ತಿರುತ್ತವೆ. ಇದರ ಭಾಗವಾಗಿ ಬಸವಣ್ಣನನ್ನು ಕುರಿತಂತೆ ರಚನೆಗೊಂಡಿರುವ ಶಿಷ್ಟ ಮತ್ತು ಜನಪದ ಸಾಹಿತ್ಯವನ್ನು ಗುರುತಿಸಲು ಸಾಧ್ಯ. ಇವು ಬಸವಣ್ಣನ ತತ್ವ ಸಿದ್ಧಾಂತಗಳೊಂದಿಗೆ ನಿರಂತರವಾಗಿ ಮುಖಾಮುಖಿಯಾಗುತ್ತಾ, ಅವುಗಳೊಂದಿಗೆ ಅನುಸಂಧಾನಗೊಳ್ಳುತ್ತಾ, ಮರುಹುಟ್ಟು ಪಡೆಯುತ್ತಾ ರೂಪುಗೊಳ್ಳುತ್ತಿರುತ್ತವೆ. ಹಾಗಾಗಿ ಈ ರಚನೆಗಳು ಬಸವಣ್ಣನ ವ್ಯಕ್ತಿತ್ವವನ್ನು

ಸಮಗ್ರವಾಗಿ ಗ್ರಹಿಸುವಲ್ಲಿ ಸಹಾಯಕವಾಗಬಲ್ಲವು. ಎಲ್ಲಾ ಆಕರಗಳ ಹಿನ್ನೆಲೆಯಲ್ಲಿ ಬಸವಣ್ಣನ ವ್ಯಕ್ತಿತ್ವವನ್ನು ಎರಡು ಮುಖ್ಯ ನೆಲೆಗಳಲ್ಲಿ ಗುರುತಿಸಲು ಸಾಧ್ಯ. ಮೊದಲನೆಯದು ಬಸವಣ್ಣನ ವಚನಗಳ ಮೂಲಕವೇ ರೂಪುಗೊಳ್ಳಬಹುದಾದ ಅವನ ವ್ಯಕ್ತಿತ್ವದ ಚಹರೆ. ಎರಡನೆಯದು ವಚನ ಚಳುವಳಿ ಮತ್ತು ಸಮಕಾಲೀನ ವಚನಕಾರರ ತಾತ್ವಿಕ ಭಿತ್ತಿಯಲ್ಲಿ ರೂಪುಗೊಂಡಿರುವ ಬಸವಣ್ಣನ ವ್ಯಕ್ತಿತ್ವ ಹಾಗೂ ಕಾಲಾ ನಂತರದಲ್ಲಿ ಬಸವಣ್ಣನನ್ನು ಕುರಿತು ರಚನೆಯಾಗಿರುವ ಅನೇಕ ಕೃತಿಗಳಲ್ಲಿ ನಡೆಸಲಾಗಿರುವ ಗ್ರಹಿಕೆಯ ಪ್ರಯತ್ನಗಳು.

ಈ ಎರಡೂ ಆಕರಗಳು ಬಸವಣ್ಣನ ವ್ಯಕ್ತಿತ್ವದ ಸಮಗ್ರತೆಯನ್ನು ಗ್ರಹಿಸುವ ದೃಷ್ಟಿಯಿಂದ ಮುಖ್ಯವಾದವುಗಳಾಗಿವೆ. ಬಸವಣ್ಣನ ವಚನಗಳು ಆತನ ವ್ಯಕ್ತಿತ್ವವನ್ನು ಅರಿಯುವಲ್ಲಿ ನೈಜ ಆಕರಗಳಾಗಬಲ್ಲುವು. ಅವು ಮಾತ್ರ ಅವನ ವ್ಯಕ್ತಿತ್ವವನ್ನು 'ಮನುಷ್ಯ ಮಾತ್ರ' ನೆಲೆಯಲ್ಲಿ ಗ್ರಹಿಸಿಕೊಳ್ಳಲು ಸಹಕರಿಸುತ್ತವೆ. ಬಸವಣ್ಣನನ್ನು ಕುರಿತ ಇತರ ರಚನೆಗಳು, ನಂಬಿಕೆ, ದಂತಕತೆ ಮುಂತಾದವುಗಳು ಬಸವಣ್ಣನ ವ್ಯಕ್ತಿತ್ವವನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡುತ್ತವಾದರೂ ಅವುಗಳ ಗ್ರಹಿಕೆಯಲ್ಲಿ ಕೆಲವು ಮಿತಿಗಳನ್ನೂ, ತಪ್ಪುಗಳನ್ನೂ ಗುರುತಿಸಲು ಸಾಧ್ಯ. ಇವು ಬಸವಣ್ಣನನ್ನು ಅವತಾರಿ, ದೈವವೆಂದು ಅಲೌಕಿಕ ನೆಲೆಯಲ್ಲಿ ನೋಡಿವೆ. ಬಸವಣ್ಣನನ್ನು ಹನ್ನೆರಡನೆ ಶತಮಾನದ ಸಾಮಾಜಿಕ, ಧಾರ್ಮಿಕ, ರಾಜಕೀಯ ಬಿಕ್ಕಟ್ಟು-ಸಂಘರ್ಷಗಳ ನಡುವೆ ಹೋರಾಡಿದ ಒಬ್ಬ ಹೋರಾಟಗಾರ, ಚಿಂತಕ, ಕನಸುಗಾರ, ಮಾನವೀಯ ಮಿಡಿತವುಳ್ಳ ಸಹೃದಯನನ್ನಾಗಿ, ಬಾಹ್ಯ ಮತ್ತು ಆಂತರಿಕವಾಗಿ ದೊಡ್ಡ ಸಂಘರ್ಷವನ್ನು ಎದುರಿಸಿದ ವಿಕಾಸಶೀಲ ವ್ಯಕ್ತಿತ್ವವಾಗಿ ನೋಡಬೇಕಾದ ಅಗತ್ಯವಿದೆ. ಹಾಗಾಗಿ ಬಸವಣ್ಣನನ್ನು ಅಲೌಕಿಕ ವ್ಯಕ್ತಿತ್ವವಾಗಿ ನೋಡುವುದನ್ನು ಮೀರಿ ಸಾಮಾಜಿಕ, ರಾಜಕೀಯ, ಧಾರ್ಮಿಕ ವಾಸ್ತವಗಳ ನಡುವೆ ಬಸವಣ್ಣನ ವ್ಯಕ್ತಿತ್ವ ಪ್ರಕಟಗೊಳ್ಳಬಹುದಾದ ಸಾಧ್ಯತೆಗಳನ್ನು ಕಂಡುಕೊಳ್ಳಬೇಕಾದ ಅಗತ್ಯವಿದೆ. ಏಕೆಂದರೆ ಬಸವಣ್ಣನ ವ್ಯಕ್ತಿತ್ವ ಏಕರೂಪಿಯಾದದ್ದಲ್ಲ, ಬಹುರೂಪಿಯಾದದ್ದು. ಅದು ಭಿನ್ನ ಭಿನ್ನ ಗ್ರಹಿಕೆ ಹಾಗೂ ಆಯಾಮಗಳಿಂದ ಕೂಡಿರುವಂತದ್ದು. ಹಾಗೆಯೇ ಬಸವಣ್ಣನ ವ್ಯಕ್ತಿತ್ವ ಗ್ರಹಿಕೆ ಸಂಕೀರ್ಣತೆಯಿಂದ ಕೂಡಿದ್ದು, ಅವನ ಚಿಂತನೆಗಳನ್ನು ಕುರಿತಂತೆ ಪರವಾದ ಆಲೋಚನೆಗಳಿರುವಂತೆ, ವಿರುದ್ಧವಾದ ಆಲೋಚನೆಗಳೂ ಇವೆ. ಬಸವಣ್ಣನ ವ್ಯಕ್ತಿತ್ವದ ಗ್ರಹಿಕೆ ಯಾಕೆ ಇಷ್ಟು ಸಂಕೀರ್ಣ ಹಾಗೂ ಬಹುರೂಪಿಯಾದದ್ದು ಎಂಬುದಕ್ಕೆ ರಹಮತ್ ತರೀಕೆರೆಯವರು ಎರಡು ಕಾರಣಗಳನ್ನು ಗುರುತಿಸುತ್ತಾರೆ. "ಇಂತಹ ಬಹುರೂಪಿ ಚಿತ್ರಗಳಿಗೆ ಮೊದಲ ಕಾರಣ ಸ್ವತಃ ಬಸವಣ್ಣನ ವಚನಗಳೆ. ಕಾರ್ಲ್‌ಮಾರ್ಕ್ಸ್ ಅಥವಾ ಯಾವುದೇ ತತ್ವಜ್ಞಾನಿಯಂತೆ ಬಸವಣ್ಣ ತನ್ನ ಚಿಂತನೆಗಳನ್ನು ತರ್ಕಬದ್ಧವಾಗಿ ವೈಜ್ಞಾನಿಕವಾಗಿ ಮಂಡಿಸಲಿಲ್ಲ. ತಾನೊಬ್ಬ ಸಾಮಾಜಿಕ, ಧಾರ್ಮಿಕ ಚಳುವಳಿಗಾರನಾಗಿ, ಒಬ್ಬ ಕವಿಯಾಗಿ ವಚನಗಳನ್ನು ರಚಿಸಿದ. ಈ ವಚನಗಳು ಕಲ್ಯಾಣದ ಅವನ ಬದುಕಿನ ವಿಭಿನ್ನ ಸಂದರ್ಭಗಳಲ್ಲಿ, ಆ ಸಂದರ್ಭಕ್ಕೆ ಪ್ರತಿಕ್ರಿಯೆಯಾಗಿ ರಚನೆಯಾದವು. ತಪ್ಪು ಮಾಡುತ್ತಾ, ತನ್ನ ಸಂಗಾತಿಗಳಿಂದ ಕಲಿಯುತ್ತಾ, ಬೆಳೆದ ವಿನಯವಂತಿಕೆ ಇರುವ ಬಸವಣ್ಣನ ಬೆಳವಣಿಗೆಯ ಭಾಗವಾಗಿ ಹುಟ್ಟಿದವು. ಆದಿಯಿಂದ ತುದಿತನಕ ಇರುವಂತಹ ಸುಸಂಬದ್ಧವಾದ ಚಿಂತನೆಯಲ್ಲಿ ಪರಸ್ಪರ ಭಿನ್ನದನಿಗಳಿವೆ, ವೈರುಧ್ಯಗಳಿವೆ".[?] ಎನ್ನುವ ಮಾತುಗಳು ಬಸವಣ್ಣನ ವ್ಯಕ್ತಿತ್ವ ಗ್ರಹಿಕೆಯಲ್ಲಿನ ಸಂಕೀರ್ಣತೆಯನ್ನು ತಿಳಿಸುತ್ತವೆ. ಮಾನವಪರ ಚಿಂತಕನೊಬ್ಬ ಸಮಾಜ ಸುಧಾರಕನೂ, ಧಾರ್ಮಿಕ ಚಳುವಳಿಗಾರನೂ, ತತ್ವಜ್ಞಾನಿಯೂ, ವಿಚಾರವಾದಿಯೂ ಜೊತೆಗೆ ಕವಿಯೂ ಆಗಿದ್ದ ಸಂದರ್ಭದಲ್ಲಿ ಏನೆಲ್ಲಾ

ಸಂಘರ್ಷಗಳನ್ನು ಎದುರಿಸಬೇಕಾಗುತ್ತದೋ ಆ ಎಲ್ಲಾ ಸಂಘರ್ಷ, ದ್ವಂದ್ವ-ಗೊಂದಲ, ಸಂದಿಗ್ಧತೆಗಳು ಬಸವಣ್ಣನ ವ್ಯಕ್ತಿತ್ವದಲ್ಲಿ ಕಂಡುಬರುತ್ತವೆ.

ಬಸವಣ್ಣನ ವ್ಯಕ್ತಿತ್ವ ಗ್ರಹಿಕೆಯಲ್ಲಿನ ಸಂದಿಗ್ಧತೆಗಳನ್ನು ರಹಮತ್ ತರೀಕೆರೆ ಈ ರೀತಿ ಗುರುತಿಸುತ್ತಾರೆ "ಬಸವಣ್ಣನ ಮೇಲೆ ಬಹುರೂಪಿ ಚಿತ್ರಗಳು ಸಿಗಲು ಇನ್ನೊಂದು ಕಾರಣ ನಮ್ಮ ಜಾತಿ ಸಮಾಜದ ವಿಚಿತ್ರ ಪರಿಸ್ಥಿತಿ. ಬಸವಣ್ಣನನ್ನು ಕುರಿತು ನಮ್ಮ ತಿಳುವಳಿಕೆಯು ಕೇವಲ ಅವನ ವಚನಗಳ ಶೈಕ್ಷಣಿಕ ಓದಿನಿಂದ ಬಂದದ್ದಲ್ಲ. ಸಮಾಜದೊಂದಿಗೆ ಸೆಣಸಾಡುತ್ತ, ಈ ಹೋರಾಟದಲ್ಲಿ ಬಸವಣ್ಣನನ್ನು ಬಳಸುತ್ತ ಪಡೆದುಕೊಂಡದ್ದು. ನಮ್ಮ ಸಮಾಜದಲ್ಲಿ ಜಾತಿ ಪದ್ಧತಿ, ವೈದಿಕಶಾಹಿ, ಅಸ್ಪೃಶ್ಯತೆ ಇವೆಲ್ಲ ಇರದಿದ್ದರೆ, ಬಸವಣ್ಣ ಈಗಿನಷ್ಟು ಮುಖ್ಯವಾಗುತ್ತಿದ್ದನೇ ಎಂಬ ಪ್ರಶ್ನೆ ಕೇಳಿಕೊಂಡರೆ ಇದು ಗೊತ್ತಾಗುತ್ತದೆ. ಯಾವತ್ತೂ ಚರಿತ್ರೆ ವರ್ತಮಾನಕ್ಕೆ ಮುಖ್ಯವಾಗುವುದು ಚರಿತ್ರೆಯಾಗಿ ಅಲ್ಲ. ವರ್ತಮಾನವನ್ನು ಅರ್ಥಮಾಡಿಕೊಳ್ಳಲು ವರ್ತಮಾನವನ್ನು ನಮಗೆ ಬೇಕಾದಂತೆ ರೂಪಿಸಿಕೊಂಡು ಬದುಕಲು."[2] ಹೀಗಾಗಿ ಪ್ರತಿಯೊಬ್ಬ ಬರಹಗಾರರೂ ಕೂಡ ತಮ್ಮ ಗ್ರಹಿಕೆ, ಆಲೋಚನೆ, ಚಿಂತನೆ, ಪರಿಸರ, ಪ್ರಭಾವ, ಅನುಭವ, ಸಾಮಾಜಿಕ ಸನ್ನಿವೇಶಗಳ ಅಗತ್ಯಗಳಿಗೆ ತಕ್ಕಂತೆ ತಮ್ಮ ಎದುರಿಗಿರುವ ವ್ಯಕ್ತಿಯನ್ನು ಗ್ರಹಿಸುತ್ತಾರೆ. ಹಾಗಾಗಿ ಬಸವಣ್ಣನನ್ನು ಕುರಿತಂತೆ ಬಂದಿರುವ ರಚನೆಗಳು ಭಿನ್ನ ಭಿನ್ನ ಆಯಾಮಗಳಿಂದ, ಭಿನ್ನ ಭಿನ್ನ ನೋಟಕ್ರಮಗಳಿಂದ ಕೂಡಿವೆ. ಈ ಕಾರಣಗಳಿಂದಾಗಿ ಬಸವಣ್ಣನ ವ್ಯಕ್ತಿತ್ವದ ಏಕರೂಪಿ ಚಿತ್ರಣವನ್ನಾಗಲಿ, ಅವನ ಚಿಂತನೆಗಳನ್ನು ಕುರಿತಂತೆ ಒಂದೇ ರೀತಿಯ ಗ್ರಹಿಕೆಗಳನ್ನಾಗಲಿ ಮಾಡುವುದು ಆ ವ್ಯಕ್ತಿತ್ವಕ್ಕೆ ಮಾಡುವ ಅಪಚಾರವಾಗುತ್ತದೆ. ಬಸವಣ್ಣನ ಚಿಂತನೆಗಳು ಹಾಗೂ ಹೋರಾಟಗಳೊಂದಿಗೆ ಸಮಕಾಲೀನ ಬದುಕು ಮತ್ತು ಸಾಮಾಜಿಕ, ಧಾರ್ಮಿಕ, ರಾಜಕೀಯ ಸಮಸ್ಯೆಗಳನ್ನು ತಳುಕು ಹಾಕಿ ನೋಡುವ ಕ್ರಮಗಳು ಮುಖ್ಯ. ಜೊತೆಗೆ ಸಮಾಜದ ಬೇರೆ ಬೇರೆ ಸ್ತರಗಳಿಂದ ಬಂದವರು ನಡೆಸುವ ಅನುಸಂಧಾನದ ವಿಧಾನಗಳು ಬಸವಣ್ಣನ ವ್ಯಕ್ತಿತ್ವವನ್ನು ಬಹುರೂಪಿ, ಅನನ್ಯ, ಹಾಗೂ ಸಂಕೀರ್ಣವಾಗಿಸಿವೆ. ಈ ಅನುಸಂಧಾನದ ಮುಖೇನ ಸಿಗುವ ತಿಳುವಳಿಕೆಯಲ್ಲಿ ಬಸವಣ್ಣನಷ್ಟೇ ಅಲ್ಲದೆ ಇತರೆ ವಚನಕಾರರು, ವಚನ ಚಳುವಳಿಯ ಸಮೂಹವೆ ಸೇರಿಕೊಂಡಿರುತ್ತದೆ. ಬಸವಣ್ಣನ ವ್ಯಕ್ತಿತ್ವದ ತಾತ್ವಿಕ ಗ್ರಹಿಕೆಯೆಂಬುದು ಕೇವಲ ಬಸವಣ್ಣನನ್ನೆ ಕೇಂದ್ರವಾಗಿರಿಸಿಕೊಂಡು ನಡೆಸುವ ಅಲೋಚನೆಯೂ ಅಲ್ಲ. ಹಾಗಾದಾಗ ಅದು ಸರಳೀಕರಣವಾಗಿಬಿಡುತ್ತದೆ. ಏಕೆಂದರೆ ರಹಮತ್ ತರೀಕರೆಯವರು ಗುರುತಿಸುವಂತೆ "ಬಸವಣ್ಣ ತನ್ನ ತತ್ವವನ್ನು ಸಾಮೂಹಿಕ ಚಳುವಳಿಯಲ್ಲಿ ಪಡೆದುಕೊಂಡವನು. ಅವನು ತನ್ನ ಅಕ್ಕಪಕ್ಕದ ಪರಿಸರದಿಂದ ಬೆಳೆದವನು ಎಂಬುದನ್ನು ಅವನ ವಚನಗಳೂ, ಅವನ ಸಂಗಾತಿಗಳ ವಚನಗಳೂ ಅವನ ಮೇಲೆ ಬಂದ ಕೃತಿಗಳೂ ಸ್ಪಷ್ಟವಾಗಿ ಸೂಚಿಸುತ್ತವೆ."[3] ಆದ್ದರಿಂದ ಬಸವಣ್ಣನ ವ್ಯಕ್ತಿತ್ವವನ್ನು ಒಟ್ಟು ವಚನ ಚಳುವಳಿಯ ಸಂದರ್ಭದಲ್ಲಿಟ್ಟು ಗ್ರಹಿಸಬೇಕಾಗುತ್ತದೆ. ಜೊತೆಗೆ ಆ ಕಾಲದ ಸಾಮಾಜಿಕ, ಸಾಂಸ್ಕೃತಿಕ ಸನ್ನಿವೇಶಗಳನ್ನೂ, ಅದನ್ನು ಬದಲಾಯಿಸುವ ತುರ್ತು, ಅನಿವಾರ್ಯತೆ, ಒತ್ತಡಗಳೆಲ್ಲವನ್ನೂ ಒಟ್ಟಿಗೆ ಇಟ್ಟು ನೋಡಬೇಕಾಗುತ್ತದೆ. ಅಷ್ಟೇ ಮುಖ್ಯವಾಗಿ ನಮ್ಮ ಸಮಕಾಲೀನ ಸಾಂಸ್ಕೃತಿಕ ಸಮಸ್ಯೆ-ಸವಾಲುಗಳ ನಡುವೆ ಇಟ್ಟು ಅರ್ಥೈಸಿಕೊಳ್ಳುವ ಅಗತ್ಯತೆಯೂ ಇದೆ. ಆಗ ಮಾತ್ರ ಬಸವಣ್ಣನ ವ್ಯಕ್ತಿತ್ವದ ಒಟ್ಟು ಚಿತ್ರಣ ಸಿಗುತ್ತದೆ.

ಬಸವಣ್ಣನ ವ್ಯಕ್ತಿತ್ವ ಕುರಿತಾದ ನಿರ್ವಚನಗಳು ಆತನ ವಚನಗಳು ಮತ್ತು ವಚನ ಚಳುವಳಿಯ ಯಶಸ್ಸು ಮತ್ತು ಸೋಲನ್ನು ಅವಲಂಬಿಸಿ ರೂಪಿತವಾಗಿವೆ. ವಚನ ಚಳುವಳಿ ಹಾಗೂ ಆನಂತರದ ಎಲ್ಲ ಬೆಳವಣಿಗೆಗಳೂ ಬಸವಣ್ಣನನ್ನು ಕೇಂದ್ರವಾಗಿರಿಸಿಕೊಂಡೇ ಚರ್ಚಿತವಾಗಿವೆ. ಇದಕ್ಕೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಬಸವಣ್ಣ ಮತ್ತು ಆತನ ನೇತೃತ್ವದಲ್ಲಿ ನಡೆದ ಸಾಮಾಜಿಕ, ಧಾರ್ಮಿಕ ಕ್ರಾಂತಿಯನ್ನು ಕೇಂದ್ರವಾಗಿಟ್ಟುಕೊಂಡು ರಚನೆಯಾದ ಸಾಹಿತ್ಯ ಕೃತಿಗಳೇ ಸಾಕ್ಷಿ. ಇವು ಬಸವಣ್ಣನ ತಾತ್ವಿಕ ನಿಲುವು, ಹೋರಾಟಗಳನ್ನು ಭಿನ್ನ ನೆಲೆಗಳಿಂದ ಎದುರುಗೊಳ್ಳುತ್ತವೆ.

ಬಸವಣ್ಣನ ವ್ಯಕ್ತಿತ್ವ ಒಂದು ಸ್ಥಿರ, ಸ್ಪಷ್ಟ ಚಿಂತನೆಗಳಿಂದ ರೂಪುಗೊಂಡಂತಹ ಸಿದ್ಧಮಾದರಿಯದ್ದಲ್ಲ. ತನ್ನ ಜೀವಿತದುದ್ದಕ್ಕೂ ದ್ವಂದ್ವ, ಗೊಂದಲಗಳನ್ನು ಎದುರಿಸುತ್ತಾ ರೂಪುಗೊಂಡದ್ದು. ಅಷ್ಟೇ ಅಲ್ಲ ಕನ್ನಡ ಸಾಹಿತ್ಯದಲ್ಲಿ ಮತ್ತು ಸಮಾಜದಲ್ಲಿ ಬೇರೆ ಬೇರೆ ಕಾಲ, ಸಂದರ್ಭ, ಚಿಂತನೆಗಳೊಂದಿಗೆ ಅನುಸಂಧಾನಕ್ಕೆ ಒಳಪಟ್ಟು ಇನ್ನೂ ರೂಪುಗೊಳ್ಳುತ್ತಲೇ ಇರುವ ಚಲನಶೀಲ ವ್ಯಕ್ತಿತ್ವ. ಹಾಗಾಗಿ ಬಸವಣ್ಣನ ವ್ಯಕ್ತಿತ್ವ ಹಲವು ಚಹರೆಗಳ ಒಟ್ಟಂದವೆನ್ನಬಹುದು. ಅವನೊಬ್ಬ ಕವಿ, ಬಂಡಾಯಗಾರ, ಸುಧಾರಕ, ಭಕ್ತ, ಗೊಂದಲ–ದೌರ್ಬಲ್ಯಗಳುಳ್ಳ ಸಾಮಾನ್ಯ ಮನುಷ್ಯ, ಎಲ್ಲ ಹಿರಿಮೆ, ಅಹಂಕಾರಗಳನ್ನು ತೊರೆದುಕೊಳ್ಳಬಯಸಿದ ವಿನಯವಂತ. ಬದುಕನ್ನು ಅಪಾರವಾಗಿ ಪ್ರೀತಿಸುವವನು. ಮಹಾ ಮಾನವತಾವಾದಿ, ತನ್ನಂತೆ ಪರರನ್ನೂ ಬಗೆವ ಹೃದಯವಂತ. ಹಾಗಾಗಿ ಆ ವ್ಯಕ್ತಿತ್ವವನ್ನು ಅದರ ನಿಜ ವಿಸ್ತಾರದ ನೆಲೆಯಲ್ಲಿಯೇ ಬೇರೆ ಬೇರೆ ನೆಲೆಗಳಿಂದ ಮುಖಾಮುಖಿಯಾಗಿಯೇ ಗ್ರಹಿಸುವ ತುರ್ತು ಇದೆ.

ಬಸವಣ್ಣನ ವ್ಯಕ್ತಿತ್ವದ ತಾತ್ವಿಕ ಗ್ರಹಿಕೆಯನ್ನು ಅವನ ಬದುಕು, ಬರಹ, ಚಿಂತನೆ ಆಲೋಚನೆಗಳ ಒಟ್ಟು ತಾತ್ವಿಕತೆಯ ಹಿನ್ನೆಲೆಯಲ್ಲಿಯೇ ಗ್ರಹಿಸಬೇಕಾಗುತ್ತದೆ. ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ ಬಸವಣ್ಣನ ವ್ಯಕ್ತಿತ್ವ ಎಷ್ಟು ಸಂಕೀರ್ಣವೋ ಅಷ್ಟೇ ಸರಳ. ಎಷ್ಟು ಜಟಿಲವೋ ಅಷ್ಟೇ ಬಂಧಮುಕ್ತ. ಏಕೆಂದರೆ ಬಸವಣ್ಣನ ಬದುಕು ಮತ್ತು ಬರಹ ಎರಡನ್ನೂ ಬೇರೆ ಬೇರೆಯಾಗಿ ನೋಡದೆ ಅವೆರಡನ್ನೂ ಒಟ್ಟಿಗೆ ಇಟ್ಟು ನೋಡಿದಾಗ ಬಸವಣ್ಣನ ಬದುಕು ಮತ್ತು ಚಿಂತನೆಗಳ ನಡುವಿನ ಸಾಮ್ಯತೆ ಸರಳವಾಗಿ ಗೋಚರವಾಗುತ್ತದೆ. ಬಸವಣ್ಣನ ಒಟ್ಟು ಆಲೋಚನೆಯ ಆಶಯ ಸಮಾನತೆಯ ಸಮಾಜವನ್ನು ರೂಪಿಸುವುದು. ಇದರ ಸಲುವಾಗಿ ಬಸವಣ್ಣ ಹಲವು ಹೋರಾಟಗಳನ್ನು ರೂಪಿಸಿದ್ದನು. ತನ್ನ ವ್ಯಕ್ತಿತ್ವವನ್ನು ನಿರಂತರವಾದ ಆತ್ಮವಿಮರ್ಶೆ, ವಿಡಂಬನೆಯ ಮೂಲಕ ರೂಪಿಸಿಕೊಳ್ಳುವುದರೊಂದಿಗೆ ತನ್ನೆದುರಿನ ಸಾಂಸ್ಕೃತಿಕ ಬದುಕಿನಲ್ಲಿ ದೊಡ್ಡ ಪರಿವರ್ತನೆಯನ್ನು ತರುವ ಕ್ರಾಂತಿಕಾರಿ ಪ್ರಯತ್ನಗಳನ್ನೂ ಮಾಡಿದನು. ಇಂಥ ವ್ಯಕ್ತಿತ್ವ ಕಾಲಕ್ರಮೇಣ ದೈವವಾಗಿ, ಪವಾಡ ಪುರುಷನಾಗಿ, ಕಾರಣಿಕನಾಗಿ, ಜಾತಿಯ ನಾಯಕನಾಗಿ, ಧರ್ಮದ ಪ್ರವಾದಿಯಾಗಿ, ಭಕ್ತನಾಗಿ ಚಿತ್ರಿತಗೊಂಡಿದ್ದಾನೆ. ಬಸವಣ್ಣನನ್ನು, ತನ್ನ ವ್ಯಕ್ತಿತ್ವವನ್ನೂ, ಸಮಾಜವನ್ನೂ ಸುಧಾರಿಸಿಕೊಳ್ಳುವ ನಿಟ್ಟಿನಲ್ಲಿ ನಿರಂತರವಾಗಿ ಹೋರಾಡಿದ, ಚಿಂತಿಸಿದ ಒಬ್ಬ ಸಾಧಕನನ್ನಾಗಿ ನೋಡುವ ಬದಲಾಗಿ ಆತನನ್ನು ಒಬ್ಬ ಪರಿಪೂರ್ಣ ಸಾಧಕನನ್ನಾಗಿ, ಪವಾಡ ಪುರುಷನನ್ನಾಗಿ ಮಾತ್ರ ಗ್ರಹಿಸುವ ಪ್ರಯತ್ನಗಳು ಯತೇಚ್ಚವಾಗಿ ನಡೆದಿವೆ. ಇವು ಬಸವಣ್ಣನನ್ನು ಪಾರ್ಶ್ವಿಕವಾಗಿ ಹಾಗೂ ವೈಭವೀಕರಿಸಿ ನೋಡುವ ಪ್ರಯತ್ನಗಳೇ ಹೊರತು ನೈಜ ನೆಲೆಯಲ್ಲಿ ಗ್ರಹಿಸುವ ಪ್ರಯತ್ನಗಳಲ್ಲ. ಹಾಗಾಗಿ ಬಸವಣ್ಣನನ್ನು ಕುರಿತ ಬಹುತೇಕ ರಚನೆಗಳು ಅವನ ಸಾಧನೆಯ ಒಂದು ಮುಖದ ಕಡೆಗೆ ಮಾತ್ರ

ಗಮನವನ್ನು ಹರಿಸಿವೆ ಎಂಬುದು ಸತ್ಯವಾದರೂ, ಅಲ್ಪ ಪ್ರಮಾಣದ ರಚನೆಗಳಾದರೂ ಬಸವಣ್ಣನ ವ್ಯಕ್ತಿತ್ವದ ಶ್ರೇಷ್ಠತೆಯ ಜೊತೆಗೇ ಅವನ ವ್ಯಕ್ತಿತ್ವದ ಬಿರುಕುಗಳನ್ನು, ದೌರ್ಬಲ್ಯಗಳನ್ನೂ, ದ್ವಂದ್ವ-ಗೊಂದಲಗಳನ್ನು ಗುರುತಿಸುವ ಪ್ರಯತ್ನ ಮಾಡಿವೆ. ಜೊತೆಗೆ ಅಂದಿನ ವೈದಿಕಶಾಹಿ ವ್ಯವಸ್ಥೆಗೆ ಎದುರಾದ ಬಸವಣ್ಣನ ಕ್ರಾಂತಿಕಾರಕತನವನ್ನೂ ಹಿಡಿದಿಡುತ್ತವೆ. ಹಾಗಾಗಿ ಬಸವಣ್ಣನ ವ್ಯಕ್ತಿತ್ವ ಗ್ರಹಿಕೆಯ ಪ್ರಯತ್ನಗಳು, ಅದರ ಮಿತಿಗಳು ಮತ್ತು ಸಾಧ್ಯತೆಗಳನ್ನು ಗುರುತಿಸಿಕೊಂಡೇ ಆ ವ್ಯಕ್ತಿತ್ವವನ್ನು ಅರಿಯಬಹುದಾದ ದಾರಿಗಳನ್ನು ಕಂಡುಕೊಳ್ಳಬೇಕಾದ ಅವಶ್ಯಕತೆಯಿದೆ. ಈ ಹಿನ್ನೆಲೆಯಲ್ಲಿ ಬಸವಣ್ಣನ ವ್ಯಕ್ತಿತ್ವವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ವೈದಿಕ ಧರ್ಮದ ವರ್ಣಾಶ್ರಮ ವ್ಯವಸ್ಥೆಯ ಆಧಾರದ ಮೇಲೆ ರೂಪಿತವಾದ ಸಮಾಜದಲ್ಲಿ ಜಾತಿ ಶ್ರೇಣೀಕರಣ ಪ್ರಭಲವಾಗಿ ಬೇರೂರಿತ್ತು. ಅಲ್ಲದೆ ಜಾತಿ ಶ್ರೇಣೀಕರಣವು ಶೋಷಣೆಯ ಬಹುಮುಖ್ಯ ಅಸ್ತ್ರವಾಗಿ ಬಳಕೆಯಾಗುತ್ತಿತ್ತು. ದುಡಿಯುವ ಶ್ರಮಿಕ ವರ್ಗ ಜಾತಿಯ ಕಾರಣಕ್ಕೆ ಕೀಳಾಗಿ, ಅಮಾನವೀಯವಾಗಿ ಬದುಕಬೇಕಾಗಿತ್ತು. ಸಾಮಾಜಿಕ ಕ್ರೌರ್ಯವನ್ನು ಗಮನಿಸಿದ ಬಸವಣ್ಣ ಜಾತಿ ಶ್ರೇಣೀಕರಣವನ್ನು ತೊಡೆದುಹಾಕಿ ಸಮಾನತೆಯ ಸಮಾಜವನ್ನು ನಿರ್ಮಿಸುವ ಫಣತೊಟ್ಟನು. ಅದಕ್ಕಾಗಿ ವೈದಿಕ ಧರ್ಮ ಹಾಗೂ ಅದರ ಆಧಾರದ ಮೇಲೆ ರಚಿತವಾದ ಸಾಮಾಜಿಕ ರಚನೆಯನ್ನೆ ಬುಡಮೇಲು ಮಾಡಲು ಪ್ರಯತ್ನಿಸಿದ. ಮೊದಲನೆಯದಾಗಿ ವೈದಿಕ ಧರ್ಮಕ್ಕೆ ಎದುರಾಗಿ ಎಲ್ಲಾ ಕೆಳಜಾತಿಯ ಸಮುದಾಯಗಳು ಸಮಾನ ನೆಲೆಯಲ್ಲಿ ಒಂದುಗೂಡಿ ಬದುಕುವ ಧರ್ಮವೊಂದನ್ನು ಹುಟ್ಟುಹಾಕಿದನು. ದೇವಾಲಯಗಳ ನಿರ್ಮಾಣವನ್ನು, ದೇವರುಗಳನ್ನು, ಬಹುದೇವತಾ ಆರಾಧನೆಯನ್ನು ನಿರಾಕರಿಸಿದನು. ಯಾವುದೇ ಜಾತಿ ತಾರತಮ್ಯವಿಲ್ಲದ, ವೃತ್ತಿ ಕಸುಬುಗಳ ಬಗೆಗೆ ಕೀಳುತನವಿಲ್ಲದ ಪ್ರತಿ ವ್ಯಕ್ತಿಯ ಘನತೆಯನ್ನೂ, ಸ್ವಾತಂತ್ರ್ಯವನ್ನೂ ಎತ್ತಿ ಹಿಡಿಯುವ ಜೀವನ ಧರ್ಮವನ್ನು ಪ್ರತಿಪಾದಿಸಿದ. ಆತ ನಿರ್ಮಿಸಲು ಹೊರಟ ಸಮಾಜವು ಸ್ವಾತಂತ್ರ್ಯ, ಸಮಾನತೆ, ಸೋದರತ್ವಗಳಿಂದ ಕೂಡಿದುದಾಗಿತ್ತು. ಶ್ರಮಿಕ ವರ್ಗದವರ ಹೆಸರುಗಳಿಗೆ ಅಂಟಿಕೊಂಡಿದ್ದ ಅಸ್ಪೃಶ್ಯತೆಯ ಕಿಲುಬನ್ನು ತೊಲಗಿಸಿ ಎಲ್ಲರನ್ನೂ ಸಮಾನವಾಗಿ ಕಾಣಬೇಕಾದ ಪ್ರಜ್ಞೆಯನ್ನು ಬೆಳೆಸಲು ಪ್ರಯತ್ನಿಸಿದನು. ತಾನು ಕಂಡ ಕನಸಿನ ಸಮಾನತೆಯ ಸಮಾಜಕ್ಕೆ ಬೇಕಾದ ಸಾಮಾಜಿಕ ವ್ಯಕ್ತಿತ್ವಗಳನ್ನು ರೂಪಿಸುವ ಪ್ರಯತ್ನ ಮಾಡಿದ. ತಾನು ಪ್ರತಿಪಾದಿಸಿದ ಸಮಾನತೆಯ ತತ್ವಗಳನ್ನು ಪಾಲಿಸುವ ವ್ಯಕ್ತಿತ್ವಗಳನ್ನು 'ಶರಣ'ರೆಂದು ಕರೆದು, ಅವರಿಂದ ಕೂಡಿದ ವಿಶಿಷ್ಟವಾದ ಶರಣ ಸಮಾಜವನ್ನು ಕಟ್ಟುವ ಪ್ರಯತ್ನದಲ್ಲಿ ಗಂಭೀರವಾಗಿ ತೊಡಗಿಸಿಕೊಂಡಿದ್ದನು. ಶರಣ ಸಮಾಜದಲ್ಲಿ ವೈದಿಕ ಸಮಾಜ ಅಂಚಿಗೆ ಸರಿಸಿದ್ದ, ಗುರುತಿಸದೇ ಇದ್ದ, ಮುಖ್ಯ ಎಂದು ಪರಿಗಣಿಸದೇ ಇದ್ದ ಅನೇಕ ಜನರು ಮುನ್ನೆಲೆಗೆ ಬರುವಂತಾಯಿತು. ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯಗಳನ್ನು ಮೊದಲಬಾರಿಗೆ ಇಲ್ಲಿ ಅನುಭವಿಸುವಂತಾಯಿತು. ಈ ಪಲ್ಲಟ 'ಕೀಳುಜಾತಿ'ಯ ಜನರಲ್ಲಿ ಆತ್ಮಸ್ಥೈರ್ಯವನ್ನು ಮೂಡಿಸಿತು. ಸಾಮಾಜಿಕ ಕ್ರಾಂತಿಯಲ್ಲಿ ತೊಡಗುವ ಕಿಡಿಯನ್ನು ಪ್ರತಿಯೊಬ್ಬರ ಅಂತರ್ಯದಲ್ಲಿ ಹೊತ್ತಿಸಿತು. ಇಂತಹ ಒಂದು ಕ್ರಾಂತಿಕಾರಿ ಬದಲಾವಣೆಯ ಹಿಂದೆ ಬಸವಣ್ಣನ ಚಿಂತನೆ, ಪ್ರೇರೇಪಣೆಗಳ ಪ್ರಭಾವವಿದೆ. "ಬಸವಣ್ಣ ಮಧ್ಯಯುಗದ ವೀರಶೈವ ಧಾರ್ಮಿಕ ಚಳುವಳಿಯ ನಾಯಕನಾಗಿದ್ದ. ಕನ್ನಡ ವಚನಗಳು ಆ ಚಳುವಳಿಯ ಪ್ರಮುಖ ಪಠ್ಯಗಳು. ವೀರಶೈವ ಚಳುವಳಿಯು ಬಡವರು, ಕೆಳಜಾತಿಯವರು ಮತ್ತು ಅಸ್ಪೃಶ್ಯರ ಸಲುವಾಗಿ, ಅವರಿಂದಲೇ ಉಳ್ಳವರು ಮತ್ತು ಸವಲತ್ತುಗಳನ್ನುಳ್ಳವರ ವಿರುದ್ಧ ತೊಡಗಿದ

ಒಂದು ಸಾಮಾಜಿಕ ಪಲ್ಲಟ. ಅಕ್ಷರಸ್ಥ ಪಂಡಿತರ ವಿರುದ್ಧ ಅನಕ್ಷರಸ್ಥರ, ಶಿಲೆಯ ವಿರುದ್ಧ ರಕ್ತ ಮಾಂಸಗಳ ದಂಗೆ".[೪] ಎ.ಕೆ.ರಾಜಾನುಜನ್‌ರ ಈ ಮಾತು ಸಮಾನತೆಯ ಸಮಾಜ ನಿರ್ಮಾಣಕ್ಕಾಗಿ ಬಸವಣ್ಣ ಕೆಳಜಾತಿಗಳ ಸಂಘಟನೆಯನ್ನು ಮಾಡಿದ್ದರ ಹಿಂದಿನ ಉದ್ದೇಶವನ್ನು ಧ್ವನಿಸುತ್ತದೆ.

ಜಾತಿವ್ಯವಸ್ಥೆ ಹಾಗೂ ಅದರಿಂದ ನಿರ್ಮಾಣವಾಗಿರುವ ಶ್ರೇಣೀಕರಣ ಪದ್ಧತಿ ನಮ್ಮ ಸಮಾಜದ ದೊಡ್ಡ ಕಳಂಕವಾಗಿದೆ. ಇದನ್ನು ಬೇರು ಸಹಿತ ತೊಡೆದುಹಾಕುವುದು ಬಸವಣ್ಣನ ಮೂಲ ಉದ್ದೇಶಗಳಲ್ಲೊಂದಾಗಿತ್ತು. ಅದಕ್ಕಾಗಿ ವರ್ಣಸಂಕರದ ಅಸ್ತ್ರವನ್ನು ಬಳಸಿದ ಬಸವಣ್ಣ ಅಂತರ್ಜಾತಿಯ ವಿವಾಹವನ್ನು ಉತ್ತೇಜಿಸುವ ಮೂಲಕ ಕ್ರಾಂತಿಕಾರಿ ಕೆಲಸಕ್ಕೆ ಪ್ರೇರಣೆಯಾಗುತ್ತಾನೆ. ಅಂದಿನ ಸಮಾಜದಲ್ಲಿ ಸಮಾನತೆ, ಭ್ರಾತೃತ್ವವನ್ನು ತರುವ ಸಲುವಾಗಿ ಜಾರಿಗೆ ತಂದ ವಿಶಿಷ್ಟ ಪ್ರಯತ್ನ ದಾಸೋಹ ಪರಿಕಲ್ಪನೆ. ಎಲ್ಲಾ ಶ್ರಮಿಕ ವರ್ಗದವರೂ ತಮ್ಮ ಪ್ರಾಮಾಣಿಕ ದುಡಿಮೆಯ ಒಂದಂಶವನ್ನು ದಾಸೋಹನಿಧಿಗೆ ನೀಡುತ್ತಿದ್ದರು. ಇದು ಶರಣ ಸಮಾಜದ ಆರ್ಥಿಕ ಸ್ವಾವಲಂಬನೆಗೆ ಕಾರಣವಾಯಿತು. ಹಾಗಾಗಿಯೇ ಪ್ರಭುತ್ವ ಹಾಗೂ ವೈದಿಕ ಸಮಾಜಕ್ಕೆ ಶರಣ ಸಮಾಜ ಸಡ್ಡು ಹೊಡೆಯಲು ಸಾಧ್ಯವಾದದ್ದು. ದಾಸೋಹದಲ್ಲಿ ಎಲ್ಲ ಜಾತಿಯ ಶ್ರಮಿಕರು ಹಂಚಿ ಬದುಕುವ, ಹಂಚಿ ಉಣ್ಣುವ, ಭೇದಗಳನ್ನು ಭಗ್ನಗೊಳಿಸುವ ವಿಶಿಷ್ಟ ಪ್ರಯತ್ನಗಳನ್ನು ಮಾಡುತ್ತಾರೆ. ಇದು ಹೊಸ ಸಾಮಾಜಿಕ ಪರಿಕಲ್ಪನೆಗೆ ನಾಂದಿಹಾಡಿತು. ಶೋಷಣೆಯಿಲ್ಲದ, ಭಿನ್ನಾಭಿಪ್ರಾಯವಿಲ್ಲದ, ತಾರತಮ್ಯವಿಲ್ಲದ, ಹೆದರಿಕೆಗಳಿಲ್ಲದ ಸ್ವಾಭಿಮಾನಿ ಸಮಾಜದ ಕನಸು ಅದು.

ವೈದಿಕ ಸಮಾಜದ ಮತ್ತೊಂದು ಕೊಳಕು ಲಿಂಗತಾರತಮ್ಯದ್ದು. ಹೆಣ್ಣಿನ ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಮತ್ತು ಆರ್ಥಿಕ ಸ್ವಾತಂತ್ರ್ಯಗಳನ್ನು ನಿರಾಕರಿಸಿದ್ದ ವೈದಿಕ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಶರಣ ಸಮಾಜವು ಹೆಣ್ಣಿಗೆ ಕೆಲ ಕ್ಷೇತ್ರಗಳ ಮಟ್ಟಿಗಾದರೂ ಪುರುಷನಷ್ಟೇ ಸಮಾನ ಸ್ವಾತಂತ್ರ್ಯವನ್ನು ನೀಡುವ ಆಶಯವನ್ನು ಒಳಗೊಂಡಿತ್ತು. ಅವಳಿಗಿದ್ದ ಮಿತಿಗಳನ್ನು ನಿರಾಕರಿಸಿ ಸಮಾನತೆ ಮತ್ತು ಸ್ವಾತಂತ್ರ್ಯಗಳನ್ನು ನೀಡುವ ಪ್ರಯತ್ನ ಇಲ್ಲಿ ಆರಂಭವಾಯಿತು. ಬಸವಣ್ಣನ ನೇತೃತ್ವದ ವಚನ ಚಳುವಳಿ ವೈದಿಕ ಸಂಸ್ಕೃತಿ ಹೆಣ್ಣಿನ ಸುತ್ತ ಹೆಣೆದಿದ್ದ 'ಮಿಥ್'ಗಳನ್ನು ಸಕಾರಣವಾಗಿಯೇ ನಿರಾಕರಿಸುತ್ತದೆ. ಹೆಣ್ಣು ಗಂಡಿನ ಆಧ್ಯಾತ್ಮಿಕ ಸಾಧನೆಗೆ ಅಡ್ಡಿ, ಅವಳು ಮಾಯೆ, ಅವಳಿಗೆ ಧಾರ್ಮಿಕ ಸ್ವಾತಂತ್ರ್ಯವಿಲ್ಲ, ಅಬಲೆ ಎಂಬ ಎಲ್ಲ ಆರೋಪಗಳನ್ನು ತೊಡೆದು ಹಾಕಲು ಪ್ರಾಮಾಣಿಕವಾಗಿ ಪ್ರಯತ್ನಿಸಿರುವುದನ್ನು ಕಾಣಬಹುದು. ಶರಣ ಸಮಾಜದಲ್ಲಿ ಹೆಣ್ಣನ್ನು ಪುರುಷನಷ್ಟೇ ಸಮಾನಳನ್ನಾಗಿ ನಡೆಸಿಕೊಳ್ಳುವ ಪ್ರಯತ್ನಗಳು ನಡೆದವು.[೫] ಅನುಭವ ಮಂಟಪದಲ್ಲಿ ಪುರುಷರಿಗೆ ಸಮಾನವಾಗಿ ಚರ್ಚೆಯಲ್ಲಿ ತೊಡಗುವ ತಮ್ಮ ಅರಿವನ್ನು, ಅನುಭವಗಳನ್ನು ಹಂಚಿಕೊಳ್ಳುವ ಸ್ವಾತಂತ್ರ್ಯವನ್ನು ನೀಡಲಾಗಿತ್ತು. ವೇಶ್ಯೆಯರೂ ಕೂಡ ಅನುಭವ ಮಂಟಪದಲ್ಲಿ ಪ್ರವೇಶ ಪಡೆದಿದ್ದರು ಹಾಗೂ ಅವರ ಅರಿವಿಗೂ, ಅಭಿವ್ಯಕ್ತಿಗೂ ಮಾನ್ಯತೆ ಇತ್ತು ಎಂಬುದು ಸಮಾನತೆಯ ಸಮಾಜ ನಿರ್ಮಿಸ ಹೊರಟ ಬಸವಣ್ಣನ ಕ್ರಾಂತಿಕಾರಕ ನಿಲುವುಗಳನ್ನು ತಿಳಿಸುತ್ತದೆ.

ವೈದಿಕ ಧರ್ಮದ ಅನುತ್ಪಾದಕ ಸಾಮಾಜಿಕ ಸ್ವರೂಪವನ್ನು ಪಲ್ಲಟಿಸಿ ಉತ್ಪಾದಕ ಮತ್ತು ಸ್ವಾವಲಂಬಿ ಸಮಾಜವನ್ನು ನಿರ್ಮಿಸುವ ಕ್ರಾಂತಿಯನ್ನು ಬಸವಣ್ಣ ಹುಟ್ಟು ಹಾಕಿದ್ದನು. ತಾನು ನಿರ್ಮಿಸಿದ ಹೊಸ ಶರಣ ಸಮಾಜದಲ್ಲಿ ತನ್ನ ಆಶಯಗಳು ಈಡೇರಬೇಕಾದರೆ ತನ್ನ ಕನಸಿನ ಸಮಾಜ ಸಾಕಾರಗೊಳ್ಳಬೇಕಾದರೆ ಸಾಮಾಜಿಕ ವ್ಯಕ್ತಿತ್ವಗಳು ಬಹುಮುಖ್ಯ. ಹಾಗಾಗಿ ಬಸವಣ್ಣನಿಗೆ ವ್ಯಕ್ತಿಯ ವ್ಯಕ್ತಿತ್ವ ಸುಧಾರಣೆ ಹಾಗೂ

ರೂಪಿಸುವಿಕೆ ಬಹುದೊಡ್ಡ ಜವಾಬ್ದಾರಿಯಾಗಿ ಕಂಡಿದೆ. ಸ್ವತಃ ತನ್ನ ವ್ಯಕ್ತಿತ್ವದ ಓರೆಕೋರೆಗಳನ್ನು ತಿದ್ದಿಕೊಳ್ಳುವ, ಆತ್ಮಾವಲೋಕನದಲ್ಲಿ ತೊಡಗುವ ಬಸವಣ್ಣ ಶರಣರಲ್ಲಿ ವ್ಯಕ್ತಿತ್ವ ಶುದ್ಧತೆಗೆ ಒತ್ತು ನೀಡುತ್ತಾನೆ. ಅಂತರಂಗ ಬಹಿರಂಗ ಶುದ್ಧತೆ, ನಿಜವಾದ ಭಕ್ತನ ಲಕ್ಷಣ. ಈ ಶುದ್ಧತೆಯಿಲ್ಲದವರು ಭಕ್ತ ಸಮಾಜದ ಹೊರಗಿನ ಭವಿಗಳು. ಬಸವಣ್ಣ ನಿರ್ಮಿಸ ಹೊರಟ ಸಮಾಜದಲ್ಲಿ ಭಕ್ತ ಮತ್ತು ಭವಿ ಎಂಬ ಎರಡು ವರ್ಗಗಳನ್ನು ಕಾಣುತ್ತೇವೆ. ಶರಣ ಧರ್ಮವನ್ನು ನಿರಾಕರಿಸಿದವರು ಭವಿಗಳಾಗುತ್ತಾರೆ. ಭಕ್ತನಾದವನು ಶರಣ ಸಂಸ್ಕೃತಿಯ ಶರತ್ತುಗಳನ್ನು ಪಾಲಿಸಲೇಬೇಕಾಗುತ್ತದೆ. ಶೋಷಣೆ ರಹಿತ, ಅಪರಾಧ ರಹಿತ, ಹಿಂಸಾ ರಹಿತ ಸಮಾಜದ ಕನಸು ಬಸವಣ್ಣನದು. ಅದನ್ನು ಸಾಕಾರಗೊಳಿಸುವ ಪ್ರಯತ್ನದಲ್ಲಿ ಸ್ವತಹ ತೊಡಗಿದ ಹಾಗೂ ಅದರ ಎಲ್ಲಾ ಸಾಧಕ ಬಾಧಕಗಳನ್ನು, ಸಂಘರ್ಷಗಳನ್ನು ಅನುಭವಿಸಿದ ವ್ಯಕ್ತಿತ್ವ ಬಸವಣ್ಣನದು. ಬಸವಣ್ಣನ ವ್ಯಕ್ತಿತ್ವದ ತಾತ್ವಿಕತೆಯನ್ನು ಆತನ ವೈಯಕ್ತಿಕ ಹಾಗೂ ಸಾಮಾಜಿಕ ನೆಲೆಯಲ್ಲಿ ಕಂಡುಕೊಳ್ಳಬೇಕಾದ ಅಗತ್ಯವನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಹಾಗಾಗಿ ಈ ಎರಡೂ ನೆಲೆಗಳಲ್ಲಿ ಗೋಚರಿಸುವ, ನಿರೂಪಣೆಗೊಳ್ಳುವ ಬಸವಣ್ಣನ ವ್ಯಕ್ತಿತ್ವದ ವೈಶಿಷ್ಟ್ಯಗಳನ್ನು ಹೀಗೆ ಗುರುತಿಸಿಕೊಳ್ಳಬಹುದು.

೧. ವೈದಿಕ ಧರ್ಮದ ವಿರೋಧ ಮತ್ತು ಪರ್ಯಾಯದ ಚಿಂತನೆ: ವೈದಿಕ ಧರ್ಮ ಮೂಲತಃ ಅಸಮಾನತೆ ಮತ್ತು ಶ್ರೇಣೀಕರಣಕ್ಕೆ ಪ್ರಾಮುಖ್ಯತೆಯನ್ನು ನೀಡಿರುವಂತದ್ದು. ಮನುಷ್ಯನನ್ನು ಹುಟ್ಟಿನಿಂದ ಸಾಯುವವರೆಗೂ ಹಲವು ರೀತಿಯ ಅಧೀನತೆ ಮತ್ತು ಶ್ರೇಣೀಕರಣಕ್ಕೆ ಒಳಪಡಿಸಿ, ಅವರ ವ್ಯಕ್ತಿತ್ವವನ್ನು ಕುಂಠಿತಗೊಳಿಸುವುದು ಇದರ ಮೂಲ ಆಶಯ. ಈ ಶ್ರೇಣೀಕರಣ ವ್ಯವಸ್ಥೆ ಪ್ರಧಾನ ವ್ಯವಸ್ಥೆಗೆ ಅನುಕೂಲಕರವಾಗಿದ್ದು, ತನ್ನ ಅಧೀನತೆಗೆ ಒಳಪಟ್ಟವರನ್ನು ಹಲವು ರೀತಿಯಲ್ಲಿ ಶೋಷಣೆಗೆ ಗುರಿಪಡಿಸಲು ಅನುಕೂಲಕರವಾಗಿದೆ. ವೈದಿಕ ಧರ್ಮದ ಪರಿಸರದಲ್ಲಿ ಹುಟ್ಟಿದ ಬಸವಣ್ಣನಿಗೆ ಆ ಪರಿಸರದ ಜೀವವಿರೋಧಿ ಲಕ್ಷಣಗಳೆ ಪ್ರತಿಭಟಿಸುವ ಗುಣವನ್ನು ಕಲಿಸಿರಬೇಕು. ಬಸವಣ್ಣನ ವೈದಿಕ ವಿರೋಧಿ ಬಂಡಾಯದ ನಿಲುವುಗಳು ವ್ಯಕ್ತವಾಗುವುದು ಆತನ ಬಾಲ್ಯದಲ್ಲಿಯೇ, ವೈದಿಕ ಆಚರಣೆಯಾದ ಉಪನಯನವನ್ನು ವಿರೋಧಿಸುವಲ್ಲಿ. ಅಲ್ಲಿಂದ ಮುಂದೆ ಆತನ ಬದುಕು ಮತ್ತು ಚಿಂತನೆಗಳು ವೈದಿಕ ಧರ್ಮ ಮತ್ತು ಅದರ ಎಲ್ಲಾ ಬಂಧನಗಳಿಂದ ಬಿಡಿಸಿಕೊಳ್ಳುವ ಹಾಗೂ ಅದಕ್ಕೆ ಪರ್ಯಾಯವನ್ನು ಮಾನವೀಯ, ಜೀವಪರ ನೆಲೆಗಳಲ್ಲಿ ಕಂಡುಕೊಳ್ಳುವ ಮಾರ್ಗದಲ್ಲಿ ಸಾಗುತ್ತವೆ. ಭಕ್ತಿ, ದೇವರು, ಧರ್ಮ, ಸ್ವರ್ಗ, ನರಕ, ಜಾತಿ, ಜ್ಞಾನ, ಶ್ರೇಷ್ಠ, ಕನಿಷ್ಠ, ಬದುಕಿನ ಸಾರ್ಥಕ್ಯ, ಭಾಷೆ ಮತ್ತು ಅಭಿವ್ಯಕ್ತಿ ಈ ಎಲ್ಲಾ ಪರಿಕಲ್ಪನೆಗಳಿಗೆ ಸಂಬಂಧಿಸಿದಂತೆ ನಿರೂಪಿಸಲಾಗಿರುವ ಹಾಗೂ ಸಮಾಜದ ಮೇಲೆ ಹೇರಲಾಗಿರುವ ಎಲ್ಲಾ ಬಗೆಯ ವೈದಿಕ ನಿರ್ವಚನಗಳನ್ನು ನಿರಾಕರಿಸಿ ಅವುಗಳಿಗೆ ಪರ್ಯಾಯಗಳನ್ನು ಕಟ್ಟಿಕೊಟ್ಟದ್ದು ಬಸವಣ್ಣನ ಮಹಾನ್ ಸಾಧನೆ. ಸ್ವತಹ ತನ್ನ ಸುತ್ತ ಹೆಣೆದುಕೊಂಡಿದ್ದ ವೈದಿಕ ಬಂಧನಗಳನ್ನು ಬಿಡಿಸಿಕೊಳ್ಳುವ ಕೆಲಸದಲ್ಲಿ ಬಸವಣ್ಣ ನಿರಂತರವಾಗಿ ತೊಡಗಿಕೊಂಡಿರುವುದನ್ನು ಗುರುತಿಸಬಹುದು. 'ಹಾರುವ'ನೆಂಬುವ ಜಾತಿಶ್ರೇಷ್ಠತೆಯಿಂದ ತನ್ನನ್ನು ತಾನು ಕೀಳಾಗಿಸಿಕೊಳ್ಳುವ, ಸಾಮಾನ್ಯ ಮನುಷ್ಯನಾಗುವ ತೀವ್ರ ತುಡಿತವನ್ನು ವ್ಯಕ್ತಪಡಿಸುತ್ತಾನೆ. ಬಸವಣ್ಣ ತನ್ನನ್ನು ಕೀಳು ಎಂದು ಭಾವಿಸುವ, ಕೀಳಾಗಿಸಿಕೊಳ್ಳುವ ಪ್ರಕ್ರಿಯೆಯೆ 'ಮೇಲಾಗುವ' ಕ್ರಮದ ವಿರುದ್ಧ ತೋರುವ ತೀವ್ರವಾದ ಪ್ರತಿಭಟನೆ. ಇದು ಸಂಸ್ಕೃತಿಯ ಮೇಲ್ಮುಖ ಚಲನೆಗೆ ವಿರುದ್ಧವಾದ ಪ್ರಭಲ ಪರ್ಯಾಯವೊಂದರ ಹುಡುಕಾಟ ಕೂಡ.

'ಪರದ' ಬಗೆಗೆ ಚಿಂತಿಸುವ ವೈದಿಕ ಧರ್ಮವನ್ನು ತಿರಸ್ಕರಿಸಿ 'ಇಹದ' ಬದುಕಿಗೆ ಮಹತ್ವ ನೀಡುತ್ತಾನೆ ಬಸವಣ್ಣ. ಸ್ವರ್ಗ- ನರಕಗಳ ಬಗೆಗಿನ ವೈದಿಕ ನಿಲುವುಗಳನ್ನು ವಿರೋಧಿಸಿ ಅವುಗಳನ್ನು ನಮ್ಮ ಬದುಕು ಮತ್ತು ಭಾಷಾ ಸಂಸ್ಕೃತಿಯ ನೆಲೆಯಲ್ಲಿ ನಿರ್ವಚಿಸಿಕೊಳ್ಳುವ ಅಗತ್ಯವನ್ನು ಒತ್ತಿಹೇಳುತ್ತಾನೆ. "ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ" ಎನ್ನುವ ಬಸವಣ್ಣನ ವಚನದ ಸಾಲುಗಳು ಭಾಷಿಕ ಸಂವಹನದ ಮೂಲಕ ಸಾಧಿಸಬಹುದಾದ ಆಧ್ಯಾತ್ಮಿಕ ಸಾಧನೆಯನ್ನು ತಿಳಿಸುತ್ತದೆ. ದೇವರನ್ನು ತಮ್ಮ ಬದುಕಿನ ಕ್ರಮದ ಹೊರಗೆ, ಗುಡಿ ಗುಂಡಾಂತರಗಳ ಮೂಲಕ, ಆಚರಣೆ ವ್ರತಗಳಂತಹ ಅನುತ್ಪಾದಕ ಹಾಗೂ ಕಾಲಹರಣ ಚಟುವಟಿಕೆಗಳ ಮೂಲಕ ಕಾಣುವ ವೈದಿಕ ಧರ್ಮದ ಎದುರು ಕಾಯಕತತ್ವ ಹಾಗೂ ಶ್ರಮ ಸಂಸ್ಕೃತಿಯ ಮೂಲಕ ದೇವರನ್ನು ಕಂಡುಕೊಳ್ಳುವ, ದೈವತ್ವದ ಮಟ್ಟಕ್ಕೇರುವ, ಸಾಧನೆಯ ಹಾದಿಯನ್ನು ಬಸವಣ್ಣ ತೋರುತ್ತಾನೆ. 'ಕಾಯಕವೇ ಕೈಲಾಸ' ಎಂಬುದು ಶ್ರಮಸಂಸ್ಕೃತಿಯ ಮೂಲಮಂತ್ರವಾಗಿದೆ. ಶ್ರಮದ ಬದುಕು, ಆ ಮೂಲಕ ಬದುಕಿನ ಸ್ವಾವಲಂಬನೆ, ಆತ್ಮಸ್ಥೈರ್ಯಗಳು ವೈಯಕ್ತಿಕ ಮತ್ತು ಸಾಮಾಜಿಕ ಉತ್ಪಾದನೆಯನ್ನು ಹೆಚ್ಚಿಸುವುದರ ಜೊತೆಗೆ ದುಡಿಮೆಯ ಧರ್ಮವನ್ನು ರೂಢಿಸಿಕೊಡುತ್ತದೆ. ಇದು ದೈವವನ್ನು, ಪರವನ್ನು, ಕುರಿತು ಧ್ಯಾನಿಸುವುದನ್ನು ನಿರಾಕರಿಸುತ್ತದೆ. ಹೀಗೆ ಸ್ಥಾವರ ದೇವಾಲಯ ಪರಿಕಲ್ಪನೆಯನ್ನು ನಿರಾಕರಿಸಿ ಜಂಗಮ ಪರಿಕಲ್ಪನೆಯನ್ನು, ಇಷ್ಟಲಿಂಗ ಪರಿಕಲ್ಪನೆಯನ್ನು ದೇಹವೆ ದೇವಾಲಯವಾಗುವ, ಕಾಯಕದಲ್ಲೆ ದೈವ ಸಾಕ್ಷಾತ್ಕಾರವನ್ನು ಕಾಣುವ ಮಾರ್ಗಗಳನ್ನು ತೋರಿಸಿಕೊಡುತ್ತಾನೆ. ಅರಮನೆಗೆ ಪರ್ಯಾಯವಾಗಿ ಮಹಾಮನೆಯನ್ನೂ, ಸಂಸ್ಕೃತಕ್ಕೆ ಪರ್ಯಾಯವಾಗಿ ಕನ್ನಡವನ್ನೂ, ಪಂಡಿತರ ಅಭಿವ್ಯಕ್ತಿಗೆ ಇದ್ದ ಮಾನ್ಯತೆಯನ್ನು ನಿರಾಕರಿಸಿ ಜನಸಾಮಾನ್ಯರ ಅನುಭವ ಮತ್ತು ಅರಿವಿನ ಅಭಿವ್ಯಕ್ತಿಗೆ ಮಾನ್ಯತೆ ಮತ್ತು ಘನತೆಯನ್ನು ತಂದುಕೊಡುತ್ತಾನೆ. ರಾಜಸಭೆಯ ಪಂಡಿತರ ಚರ್ಚೆ-ಗೋಷ್ಠಿಗಳಿಗೆ ಪರ್ಯಾಯವಾಗಿ ಶ್ರಮಸಂಸ್ಕೃತಿಯ, ಕೆಳಸಮುದಾಯದ ಜನರನ್ನೊಳಗೊಂಡ ಅನುಭವ ಮಂಟಪದ ಕಲ್ಪನೆ, ಜಾತಿ ಶ್ರೇಣೀಕರಣ, ಅದರ ಶೋಷಣೆಯನ್ನು ತೊಡೆಯಲು ಸಮಾನತೆಯ ನೆಲೆಯ ಶರಣ ಧರ್ಮದ ಪರಿಷ್ಕರಣೆ, ಲಿಂಗ ತಾರತಮ್ಯವನ್ನು ತೊಡೆದು ಸ್ತ್ರೀ ಪುರುಷ ಸಮಾನತೆಯನ್ನು ಸಾಧಿಸಿದ್ದು ಹೀಗೆ ಬಸವಣ್ಣ ವೈದಿಕ ಧರ್ಮ ಮತ್ತು ಸಂಸ್ಕೃತಿಗೆ ಪರ್ಯಾಯವಾಗಿ ದೇಸಿ ನೆಲೆಯ ಧರ್ಮ ಮತ್ತು ಬದುಕಿನ ಕ್ರಮಗಳನ್ನು ಶೋಧಿಸಿಕೊಟ್ಟದ್ದು ಇಡೀ ಮಾನವ ಚರಿತ್ರೆಯಲ್ಲಿಯೆ ಕ್ರಾಂತಿಕಾರಿ ಘಟನೆ. "ಬಸವತತ್ವದಲ್ಲಿ ಎರಡು ಮುಖ್ಯ ಧ್ವನಿಗಳಿವೆ. ಇವನ್ನು ವೈದಿಕ ಯಜಮಾನಿಕೆಯ ವಿರುದ್ಧದ ಬಂಡಾಯ ಹಾಗೂ ಕೆಳಜಾತಿ ಮತ್ತು ಕಸುಬುಗಳ ಪರವಾದ ತಾಯ್ತನ ಎಂದು ಕರೆಯಬಹುದು."[೬] ಎಂಬ ರಹಮತ್ ತರೀಕೆರೆಯವರ ಅಭಿಪ್ರಾಯ ಬಸವಣ್ಣನ ವ್ಯಕ್ತಿತ್ವವನ್ನು ಸಹಜವಾಗಿಯೇ ಗುರುತಿಸುತ್ತದೆ. ಬಸವಣ್ಣನ ವ್ಯಕ್ತಿತ್ವದಲ್ಲಿ ಅಡಕವಾಗಿದ್ದ ಜೀವಪರ ಕಾಳಜಿ ಮತ್ತು ಪೊರೆಯುವ ಗುಣವನ್ನು ತರೀಕರೆಯವರು ತಾಯ್ತನದ ಗುಣ ಎಂದು ಕರೆಯುತ್ತಾರೆ. ಬಸವಣ್ಣನ ವ್ಯಕ್ತಿತ್ವಕ್ಕೆ ಅನನ್ಯತೆಯನ್ನು, ಮಹತ್ವವನ್ನು ತಂದುಕೊಟ್ಟಿದ್ದರಲ್ಲಿ ಈ ತಾಯ್ತನದ ಗುಣ ಪ್ರಧಾನವಾದದ್ದು ಎನ್ನಬಹುದು.

೨. ಕಾಯಕ ತತ್ವ ಮತ್ತು ಶ್ರಮ ಸಂಸ್ಕೃತಿಯ ಘನತೆ : ವೈದಿಕ ಧರ್ಮದ ಅನುತ್ಪಾದಕ ಬದುಕು, ಜಾತಿ ಶ್ರೇಣೀಕರಣ ಹಾಗೂ ವೃತ್ತಿ ಕಸುಬುಗಳ ಬಗೆಗೆ ಇದ್ದ ಕೀಳುತನದ ಮನೋಭಾವನೆಯ ವಿರುದ್ಧ ಬಸವಣ್ಣ ರೂಪಿಸಿದ ವಿಶಿಷ್ಟ ಪರಿಕಲ್ಪನೆ ಕಾಯಕ ತತ್ವ. ಬಸವಣ್ಣನ ಕಾಯಕ ತತ್ವ ದೈಹಿಕ ಶ್ರಮ, ಮಿತವಾದ ಆಸೆ ಮತ್ತು ಪ್ರಾಮಾಣಿಕತೆ ಮೂರನ್ನೂ ಸಮ್ಮಿಳಿತಗೊಂಡು ರೂಪುಗೊಂಡದ್ದು. ಹಾಗಾಗಿಯೇ ಅದಕ್ಕೊಂದು

ಪರಿಪೂರ್ಣತೆ ಮತ್ತು ಮಾನ್ಯತೆ ದೊರೆಯುತ್ತದೆಂಬುದು ಬಸವಣ್ಣನ ನಿಲುವಾಗಿತ್ತು. ಅದಕ್ಕಾಗಿಯೇ ಬಸವಣ್ಣ ತನ್ನ ಅನುಯಾಯಿಗಳಿಗೆ ಕಾಯಕದಲ್ಲಿ ನಿರತರಾಗುವಂತೆ ಪ್ರೇರೇಪಿಸಿದನು. ಕಾಯಕತತ್ವ ಏಕಕಾಲಕ್ಕೆ ಶ್ರಮದ ಮಹತ್ವವನ್ನೂ ಮತ್ತು ಶ್ರಮಕ್ಕೆ ಸಿಗಬೇಕಾದ ಮಾನ್ಯತೆಯನ್ನೂ ಧ್ವನಿಸುತ್ತದೆ. ಹಾಗಾಗಿ ಬಸವಣ್ಣನ ಕಾಯಕತತ್ವ ವರ್ಗ ತಾರತಮ್ಯ ಮತ್ತು ಹುಟ್ಟಿನ ಹಿನ್ನೆಲೆಯಿಂದ ರೂಪುಗೊಂಡಿದ್ದ ಶ್ರೇಣೀಕರಣ ವ್ಯವಸ್ಥೆಗೆ ಸಂಪೂರ್ಣ ವಿರುದ್ಧವಾದ ಸಮಾಜವೊಂದರ ನಿರ್ಮಾಣದ ಕಡೆಗೆ ಮುಖಮಾಡಿತ್ತು. ಹಾಗಾಗಿ ಹನ್ನೆರಡನೆ ಶತಮಾನದಲ್ಲಿ ವಿವಿಧ ವೃತ್ತಿ ಕಸುಬುದಾರರು ಬಸವಣ್ಣನ ನೇತೃತ್ವದಲ್ಲಿ ಎದ್ದ ದಂಗೆಯ ಫಲ ಈ ಕಾಯಕ ತತ್ವ ಇದು ದುಡಿಯುವ ವರ್ಗದ ಶ್ರಮ ಹಾಗೂ ಕಸುಬುಗಳ ಬಗೆಗೆ ಇದ್ದ ವೈದಿಕ ಮನಸ್ಥಿತಿಯನ್ನು ಪಲ್ಲಟಗೊಳಿಸುವ ಸಲುವಾಗಿ ರೂಪುಗೊಂಡದ್ದು. ಜಾತಿಗೂ ವೃತ್ತಿಗೂ ಇರುವ ಸಂಬಂಧ, ವೃತ್ತಿಯ ಬಗೆಗೆ ಇರುವ ಕೀಳುತನ ಇವುಗಳನ್ನು ನಿರಾಕರಿಸಿ ರಾಜ್ಯದ ಆದಾಯ ಹಾಗೂ ಸಾಮಾಜಿಕ ಭದ್ರತೆಯಲ್ಲಿ ಶ್ರಮದ ಮಹತ್ವವನ್ನು ಮನವರಿಕೆ ಮಾಡುವ ಪ್ರಯತ್ನವಾಗಿ ಬಸವಣ್ಣ ಈ ಪರಿಕಲ್ಪನೆಯನ್ನು ಹುಟ್ಟುಹಾಕುತ್ತಾನೆ. ಇದು ಶ್ರಮಿಕ ವರ್ಗದ ಸ್ವಾವಲಂಬಿ ಬದುಕಿಗೆ, ಆತ್ಮಸ್ಥೈರ್ಯಕ್ಕೆ ಮತ್ತು ರಾಜ್ಯಾಡಳಿತದ ಬಹುಮುಖ್ಯ ಆರ್ಥಿಕ ಆಧಾರ ಸ್ತಂಭ ಎಂಬ ಘನತೆಯನ್ನು ಶ್ರಮಿಕ ವರ್ಗದವರಲ್ಲಿ ತಂದುಕೊಡಲು ಸಹಕಾರಿಯಾಯಿತು. ಯಾವ ಸಮಾಜದಲ್ಲಿ ತಮ್ಮನ್ನು 'ಕೀಳು' ಎಂದು ತಮ್ಮ ವೃತ್ತಿ, ಬದುಕನ್ನು ತುಚ್ಛವಾಗಿ ಕಾಣಲಾಗುತ್ತಿತ್ತೋ ಅದೇ ಸಮಾಜದ ಆಧಾರ ಈ ಶ್ರಮಿಕ ವರ್ಗ ಎಂಬುದನ್ನು ಮೇಲ್ಜಾತಿ, ವರ್ಗ ಮತ್ತು ಪ್ರಭುತ್ವಕ್ಕೆ ಮನವರಿಕೆ ಮಾಡಿಕೊಟ್ಟ ಬಹುಮುಖ್ಯ ಕ್ರಾಂತಿ ಇದು.

ಹುಟ್ಟು ಪ್ರತಿಯೊಬ್ಬನ ಸ್ಥಾನ ಮತ್ತು ವೃತ್ತಿಯನ್ನು ನಿರ್ಧರಿಸುತ್ತಿದ್ದ ಸಂದರ್ಭದಲ್ಲಿ ಪ್ರತಿಯೊಬ್ಬ ಶ್ರಮಜೀವಿಯನ್ನು ಗೌರವ ಘನತೆಯಿಂದ ನೋಡುವ ದೃಷ್ಟಿಯನ್ನೂ, ಸಂಪತ್ತಿನ ಶೇಖರಣೆಯ ಬಗೆಗಿನ ನಿರಾಸಕ್ತಿಯನ್ನೂ, ಪ್ರಾಮಾಣಿಕ ದುಡಿಮೆಯನ್ನೂ 'ಕಾಯಕ ಸಂಸ್ಕೃತಿ' ಒಳಗೊಂಡಿತ್ತು. ಕಾಯಕದಲ್ಲಿ ಆಧ್ಯಾತ್ಮಿಕ ಅನುಭವಗಳನ್ನೂ, ಸಿದ್ಧಿಯನ್ನೂ ಪಡೆಯಬಹುದು ಎಂಬ ನಿಲುವು ಬಸವಣ್ಣನದಾಗಿತ್ತು. ವೈದಿಕ ಧರ್ಮ, ಸಮಾಜ ಪ್ರತಿಪಾದಿಸುವ ಶ್ರಮರಹಿತ ಬದುಕಿನ ನಿರರ್ಥಕತೆಯನ್ನು ಹಾಗೂ ಪರದ ಬಗೆಗಿನ ತಲ್ಲೀನತೆಯನ್ನು ಬಸವಣ್ಣನ ಕಾಯಕ ಸಂಸ್ಕೃತಿ ವಿರೋಧಿಸುತ್ತದೆ. 'ವೇದವನೋದುವ ಹಾರುವ, ತೊಗಲು ಹದ ಮಾಡುವ ಡೋರಹನಿಗಿಂತ ಮೇಲಲ್ಲ' ಎಂದು ಎಲ್ಲ ಕೆಲಸಗಳಿಗೂ, ಅದನ್ನು ನಿರ್ವಹಿಸುವವರಿಗೂ ಘನತೆಯನ್ನು ತಂದುಕೊಟ್ಟವನು ಬಸವಣ್ಣ. ಇದು ಶ್ರಮಿಕ ವರ್ಗದಲ್ಲಿ ತಮ್ಮ ಶ್ರಮ ಮತ್ತು ಅದರ ಮಹತ್ವದ ಅರಿವು ಮೂಡಿಸುವಲ್ಲಿ ಹಾಗೂ ಅವರಲ್ಲಿ ಆತ್ಮಸ್ಥೈರ್ಯ ಮತ್ತು ಸ್ವಾವಲಂಬನೆಯನ್ನು ಹುಟ್ಟುಹಾಕಲು ಸಾಧ್ಯವಾಯಿತು.

೩. ಪ್ರಜಾಪ್ರಭುತ್ವವಾದಿ ಆಲೋಚನೆಗಳು ಮತ್ತು ಅನುಷ್ಠಾನ ಪ್ರಕ್ರಿಯೆ: ಬಸವಣ್ಣನ ಚಿಂತನೆ ಮತ್ತು ಚಳುವಳಿಯ ಪ್ರಕ್ರಿಯೆಗಳು ಮಾನವೀಯ ಹಾಗೂ ಜೀವಪರ ನೆಲೆಯವಾಗಿದ್ದವು. ವಚನ ಚಳುವಳಿಯ ಕೇಂದ್ರ ಆಶಯ ವ್ಯಕ್ತಿ ಸ್ವಾತಂತ್ರ್ಯ ಹಾಗೂ ಘನತೆಯನ್ನು ಗೌರವಿಸುವುದಾಗಿತ್ತು. ಈ ನಿಟ್ಟಿನಲ್ಲಿ ಬಸವಣ್ಣನ ಚಿಂತನೆ ಹಾಗೂ ಹೋರಾಟದ ಪ್ರಕ್ರಿಯೆಗಳು ಪ್ರಜಾಪ್ರಭುತ್ವ ತತ್ವಗಳ ತಳಹದಿಯ ಮೇಲೆ ರೂಪಿತವಾದವುಗಳಾಗಿವೆ. ಅನುಭವ ಮಂಟಪದ ಮೂಲಕ ಕಲ್ಪಿಸಿಕೊಡಲಾದ ಅಭಿವ್ಯಕ್ತಿ ಸ್ವಾತಂತ್ರ್ಯ ವೈದಿಕ ಪರಂಪರೆಯಲ್ಲಿ ಧ್ವನಿ ಕಳೆದುಕೊಂಡವರು ತಮ್ಮ ಆಲೋಚನೆ, ಅನಿಸಿಕೆಗಳನ್ನು ಮುಕ್ತವಾಗಿ ಅಭಿವ್ಯಕ್ತಿಸಲು ನೀಡಿದ ಮೊಟ್ಟಮೊದಲ ಅವಕಾಶ ಎಂದೆನಿಸುತ್ತದೆ. ಏಕೆಂದರೆ ಶರಣ ಸಮಾಜ ಎಂಬ ಪರಿಕಲ್ಪನೆಯ ಮೂಲಕ ಕಲ್ಪಿಸಲಾದ ಸ್ವಾತಂತ್ರ್ಯ,

ಸಮಾನತೆ, ಭ್ರಾತೃತ್ವದ ಭಾವನೆ ಹಾಗೂ ಸಹಬಾಳ್ವೆಯ ಅವಕಾಶಗಳು ಎಲ್ಲರನ್ನೂ ಸಮಾನವಾಗಿ ನೋಡುವ, ಎಲ್ಲರಿಗೂ ಸಮಾನ ಅವಕಾಶಗಳನ್ನು ಕಲ್ಪಿಸುವ ಆಶಯದಿಂದ ಕೂಡಿದವುಗಳಾಗಿವೆ. ಹಾಗಾಗಿ 'ಮಹಾಮನೆ'ಯ ಚಟುವಟಿಕೆಗಳು ಹಾಗೂ 'ದಾಸೋಹ'ದ ಮೂಲಕ ಕಲ್ಪಿಸಲಾದ ಸಹಭಾಗಿತ್ವ ವೃತ್ತಿಕಸುಬುಗಳಲ್ಲಿ ತಾರತಮ್ಯದ ನಿವಾರಣೆ, ಲಿಂಗ ಸಮಾನತೆಯ ಅವಕಾಶಗಳು, ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ, ಆರ್ಥಿಕ ಬದುಕಿನಲ್ಲಿ ಸರ್ವರ ಸಹಭಾಗಿತ್ವ ಹಾಗೂ ಸಮಾನವಾಗಿ ನಡೆಸಿಕೊಳ್ಳುವಿಕೆ, ರಾಜಾಶ್ರಯದಲ್ಲಿದ್ದ ಸಾಹಿತ್ಯದ ಸಾರ್ವತ್ರೀಕರಣ ಇವೆಲ್ಲವೂ ಬಸವಣ್ಣನ ಪ್ರಜಾಸತ್ತಾತ್ಮಕ ಆಲೋಚನೆಗೆ ಹಿಡಿದ ಕನ್ನಡಿಯಾಗಿವೆ. ಮೊದಲ ಬಾರಿಗೆ ಪ್ರಜಾಸತ್ತಾತ್ಮಕ ನೆಲೆಯ ಸಮಾಜದ ಕಲ್ಪನೆಯನ್ನು ನೀಡಿದವನು ಬಸವಣ್ಣ. ಅದರ ಅನುಷ್ಠಾನಕ್ಕಾಗಿ ಸರ್ವವಿಧದಲ್ಲೂ ಶ್ರಮಿಸಿದಾತ. ಆತ ಸ್ಥಾಪಿಸಿದ ಮಹಾಮನೆ ಮತ್ತು ಅನುಭವ ಮಂಟಪಗಳು ಧರ್ಮಕೇಂದ್ರಿತ ಹಾಗೂ ಪ್ರಭುತ್ವ ಕೇಂದ್ರಿತ ಸಾಮಾಜಿಕ, ರಾಜಕೀಯ ವ್ಯವಸ್ಥೆಗಳಿಗೆ ಪರ್ಯಾಯವಾಗಿ ರೂಪಿಸಿದ ಪ್ರಜಾಸತ್ತಾತ್ಮಕ, ಉದಾರವಾದಿ ಕೇಂದ್ರಗಳು. ಮಹಾಮನೆಯ ಪರಿಕಲ್ಪನೆಯು ಅರಮನೆ ಮತ್ತು ರಾಜಪ್ರಭುತ್ವದ ಎದುರಿಗೆ ನಿರ್ಮಿಸಲಾದ ಪ್ರಜಾಸತ್ತಾತ್ಮಕ ಕಾರ್ಯಸೌಧವಾಗಿ ಕಂಡುಬರುತ್ತದೆ. ಮಹಾಮನೆ ಶರಣ ಸಮಾಜದ ಸರ್ವರಿಗೂ ತೆರೆದ ಮನೆ. ಎಲ್ಲರೂ ಪಾಲ್ಗೊಳ್ಳುವ, ಎಲ್ಲರನ್ನೂ ಸಮಾನವಾಗಿ ನಡೆಸಿಕೊಳ್ಳುವ ಶರಣರ ದುಡಿಮೆಯಿಂದಲೇ ನಡೆಯುವ ಒಂದು ಸಮುದಾಯ ಸಹಭಾಗಿತ್ವದ ವಿಶಿಷ್ಟ ಬದುಕಿನ ಮಾದರಿ. ಹಾಗೆಯೆ ಅನುಭವ ಮಂಟಪ ಎಲ್ಲರ ಅರಿವು ಮತ್ತು ಅಭಿವ್ಯಕ್ತಿಗಳನ್ನು ಗೌರವಿಸುವ ಸಮಾಜದ ಎಲ್ಲ ವ್ಯವಹಾರಗಳಲ್ಲೂ ಎಲ್ಲರೂ ಪಾಲ್ಗೊಳ್ಳಲು ಅವಕಾಶ ಕಲ್ಪಿಸಿದ ಅರಿವಿನ ಅಭಿವ್ಯಕ್ತಿ ಸೌಧ. ಜ್ಞಾನ, ಶಿಕ್ಷಣದ ಮೇಲೆ ವೈದಿಕಶಾಹಿ ವಿಧಿಸಿದ್ದ ನಿರ್ಬಂಧಗಳನ್ನು ನಿರಾಕರಿಸಿ ಅದಕ್ಕೆ ಪರ್ಯಾಯವಾಗಿ ಕಟ್ಟಿಕೊಂಡ ಶ್ರಮಸಂಸ್ಕೃತಿ ಸಮಾಜದ ಅರಿವಿನ ಚಾವಡಿ. ಇಂಥ ವಿಶಿಷ್ಟ ಕಲ್ಪನೆ ಮತ್ತು ಪ್ರಯೋಗ ಪ್ರಜಾಪ್ರಭುತ್ವವಾದಿ ಚಿಂತನೆಯ ಜಾಡನ್ನು ಸೂಚಿಸುತ್ತದೆ. ಇಷ್ಟೆ ಅಲ್ಲದೆ ಬಸವಣ್ಣನ ಅನೇಕ ವಚನಗಳು ಪ್ರಜಾಸತ್ತಾತ್ಮಕ ಆಶಯಗಳನ್ನೇ ಎತ್ತಿಹಿಡಿಯುತ್ತವೆ.

ಬಸವಣ್ಣನ ನೇತೃತ್ವದಲ್ಲಿ ನಡೆದ ವಚನ ಚಳುವಳಿ ರೂಪಿಸ ಹೊರಟ ಸಾಮಾಜಿಕ ವ್ಯವಸ್ಥೆಯ ಬಹುಮುಖ್ಯ ಲಕ್ಷಣ ದೇಸೀ ಸಂಸ್ಕೃತಿಯ ಅನನ್ಯತೆಯನ್ನು ಗುರುತಿಸುವಿಕೆ ಹಾಗೂ ಅದರ ಕಡ್ಡಾಯ ಪಾಲನೆ. ಇದೂ ಕೂಡ ಪ್ರಜಾಪ್ರಭುತ್ವ ಚಿಂತನೆಯ ಒಂದು ಅಂಶ. ಬೌದ್ಧಿಕ ಮತ್ತು ಆಧ್ಯಾತ್ಮಿಕ ಭಾಷೆಯಾಗಿದ್ದ ಸಂಸ್ಕೃತ ಹೆಂಗಸರು ಮತ್ತು ಶೂದ್ರರು 'ಮುಟ್ಟಬಾರದ' ಭಾಷೆಯಾಗಿತ್ತು. ಮಡಿವಂತಿಕೆಯ ಭಾಷೆಯಾಗಿತ್ತು. ಇಂಥ ಸಂದರ್ಭದಲ್ಲಿ ಜನರಾಡುವ ದೇಸೀ ಭಾಷೆಯಾದ ಕನ್ನಡಕ್ಕೆ ಮಾನ್ಯತೆಯನ್ನು ನೀಡಿದ್ದು, ಮಹಾಮನೆಯ, ಅನುಭವ ಮಂಟಪದ ಭಾಷೆಯನ್ನಾಗಿ ಮಾಡಿದ್ದು ವಿಶಿಷ್ಟ ಪ್ರಯತ್ನ ಹಾಗೂ ಸಾಧನೆ. ಇಲ್ಲಿ ಕನ್ನಡ ಜ್ಞಾನದ ಭಾಷೆಯಾಗಿ ತನ್ನನ್ನು ತಾನು ದುಡಿಸಿಕೊಂಡಿತು. ಶ್ರಮಿಕ ವರ್ಗದ ಜೀವನಾನುಭವಗಳ ಸರಳ ಅಭಿವ್ಯಕ್ತಿಗೆ, ಇದುವರೆಗೂ ಕಾಣದ ಬದುಕಿನ ಅನನ್ಯ ಅನುಭವಲೋಕಗಳ ಅಭಿವ್ಯಕ್ತಿಗೆ ಶೂದ್ರರ ಭಾಷೆ ಬಳಕೆಯಾಗುವಂತೆ ಮಾಡಿದುದು ಬಹುಮುಖ್ಯ ಪ್ರಜಾಪ್ರಭುತ್ವವಾದಿ ಪ್ರಕ್ರಿಯೆ. ತನ್ನ ಆಯ್ಕೆಯ ಸಮರ್ಥನೆಗಾಗಿ ಬಸವಣ್ಣ "ಅನ್ಯರ ಬಾವಿಯ ಸಿಹಿನೀರಿಗಿಂತ ಮನೆ ಬಾವಿಯ ಉಪ್ಪುನೀರೇ ಲೇಸು ಕಂಡಯ್ಯ" ಎನ್ನುತ್ತಾನೆ. ಇದರಿಂದ ನಿರ್ಲಕ್ಷಿತ ಸಮುದಾಯದ ಅನುಭವಲೋಕ ಮಹಾಮನೆಯಲ್ಲಿ ತೆರೆದುಕೊಳ್ಳುವಂತಾಯ್ತು. ಹಾಗೆ ನೋಡಿದರೆ ನಿಜವಾದ ದಲಿತಾನುಭವಗಳ ಲೋಕ ತೆರೆದುಕೊಂಡದ್ದು, ಪ್ರಧಾನ ಅನುಭವಲೋಕಗಳಿಗೆ ಪರ್ಯಾಯವಾಗಿ ಶೂದ್ರ

ಅನುಭವಲೋಕಗಳ ಬಂಡಾಯ ಶುರುವಾದದ್ದು ೧೨ನೆ ಶತಮಾನದಲ್ಲಿಯೆ ಎನ್ನಬಹುದು. ಕಾಯಕದ ಮೂಲಕ ಕಲ್ಯಾಣದ ಶ್ರೀಮಂತಿಕೆಯನ್ನು ಹೆಚ್ಚಿಸುವುದರ ಜೊತೆಗೆ ತಮ್ಮ ಅನುಭವ, ಅರಿವುಗಳನ್ನು ತಮ್ಮ ಭಾಷೆಯಲ್ಲಿಯೇ, ತಮ್ಮ ಅನುಭವ ಲೋಕದ ಪ್ರತಿಮೆಗಳ ಮೂಲಕವೆ ಅಭಿವ್ಯಕ್ತಿಸುವ ಸ್ವಾತಂತ್ರ್ಯ ಸಿಕ್ಕಿದ್ದು ಅರಿವಿನ ಶ್ರೀಮಂತಿಕೆಗೆ ಕಾರಣವಾಯಿತು. ಕನ್ನಡದ ಬೆಳವಣಿಗೆಗೆ, ಶ್ರಮ ಸಂಸ್ಕೃತಿಯ ಶೂದ್ರರ ಜೀವನಾನುಭವಗಳು ಚರಿತ್ರೆಯ ಮುನ್ನೆಲೆಗೆ ಬರಲು ಸಾಧ್ಯವಾಯಿತು. ಹೀಗೆ ಬಸವಣ್ಣ ಪ್ರಜಾಪ್ರಭುತ್ವವಾದಿ ಚಿಂತನೆ ಹಾಗೂ ಅದರ ಅನುಷ್ಠಾನದ ಮೊದಲಿಗನಾಗಿ ಕಂಡುಬರುತ್ತಾನೆ.

೪. ಶುದ್ಧ ಮಾನವೀಯ ಚಿಂತನೆ ಮತ್ತು ಮನುಷ್ಯ ಘನತೆಯ ಪ್ರತಿಪಾದನೆ : ಬಸವಣ್ಣನ ವ್ಯಕ್ತಿತ್ವದ ಹಿರಿಮೆಯಿರುವುದು ತನ್ನನ್ನು ತಾನು ಸಾಮಾನ್ಯ ಮನುಷ್ಯನನ್ನಾಗಿ ರೂಪಿಸಿಕೊಳ್ಳುವ ಪ್ರಕ್ರಿಯೆಯಲ್ಲಿ. ಹೀಗಾಗಿ ಬಸವಣ್ಣ ತನ್ನ ವ್ಯಕ್ತಿತ್ವಕ್ಕೆ ಅಂಟಿಕೊಂಡು ಬಂದಿದ್ದ 'ಶ್ರೇಷ್ಠ' ಎಂಬ ಅಭಿದಾನದ ಹೊರೆಯನ್ನು ಇಳಿಸಿಕೊಳ್ಳಲು ನಿರಂತರವಾಗಿ ಪ್ರಯತ್ನಿಸುತ್ತಾನೆ. 'ತಾನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯ', 'ತಾನು ಮಾದಾರ ಚೆನ್ನಯ್ಯನ ಮನೆಯ ದಾಸಿಯ ಮಗ, ಕಕ್ಕಯ್ಯನ ಮನೆಯ ದಾಸಿಯ ಮಗಳು ಬೆರಣಿ ಹಾಯಲು ಹೋಗಿ ಅಲ್ಲಿ ಅವರ ಸಂಗದಿಂದ ಜನಿಸಿದವನೆಂದು' ಹೇಳಿಕೊಳ್ಳುವಲ್ಲಿ ಯಾವ ಹಿಂಜರಿಕೆಯನ್ನೂ ತೋರುವುದಿಲ್ಲ. ಅದರ ಮೂಲಕ ಹುಟ್ಟಿನಿಂದ ನಿರ್ಧಾರವಾಗುವ ಶ್ರೇಷ್ಠತೆಯನ್ನು ಸಂಪೂರ್ಣ ನಿರಾಕರಿಸುತ್ತಾನೆ. ಮಾತ್ರವಲ್ಲದೆ 'ತನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎನ್ನುವ ಬಸವಣ್ಣನ ಮಾತುಗಳು ಅವನ ಶುದ್ಧ ಹಾಗೂ ಸಾಮಾನ್ಯ ಮನುಷ್ಯ ಮಾತ್ರವಾಗುವ ತುಡಿತವನ್ನು ತಿಳಿಸುತ್ತದೆ. ಅಲ್ಲದೆ ತನ್ನೆಲ್ಲಾ ಅಂತರಂಗದ ಹೊಯ್ದಾಟ, ದ್ವಂದ್ವ, ಗೊಂದಲಗಳನ್ನು, ತಪ್ಪುಗಳನ್ನು ಹೇಳಿಕೊಂಡು, ಸರಿಪಡಿಸಿಕೊಳ್ಳುವ ವಿನಯವಂತಿಕೆಯನ್ನು ವ್ಯಕ್ತಪಡಿಸುತ್ತಾನೆ. ಹೀಗೆ ತನ್ನ ವ್ಯಕ್ತಿತ್ವಕ್ಕೆ ಅಂಟಿಕೊಂಡ ಜಾತಿ ಶ್ರೇಷ್ಠ, ಜ್ಞಾನಿ, ನಾಯಕ, ದೈವವೆಂಬ ಎಲ್ಲ ಹೊರೆಗಳನ್ನು ಕಳಚಿಕೊಂಡು ಸಾಮಾನ್ಯನಾಗಲು ನಿರಂತರವಾಗಿ ಪ್ರಯತ್ನಿಸುತ್ತಾನೆ. ಸಾಮಾನ್ಯತೆಯಲ್ಲಿಯೇ ಮನುಷ್ಯತ್ವದ ಘನತೆಯಿದೆ ಎಂಬುದನ್ನು ಪ್ರತಿಪಾದಿಸುತ್ತಾನೆ. 'ತನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬುದು 'ಶಿವನಿಗಿಂತ ಶಿವಶರಣರೇ ಶ್ರೇಷ್ಠರೆ'ಂಬ ಮಾತುಗಳು ಪ್ರತಿಯೊಬ್ಬರ ವ್ಯಕ್ತಿ ಘನತೆಯನ್ನು ಎತ್ತಿಹಿಡಿಯುವ ಪ್ರಯತ್ನವಾಗಿದೆ. ಇಲ್ಲವಾದಲ್ಲಿ ಹರಳಯ್ಯ, ಡೋಹರ ಕಕ್ಕಯ್ಯ, ಗಜೇಶ ಮಸಣಯ್ಯ, ರೆಮ್ಮವ್ವೆ, ಉರಿಲಿಂಗ ಪೆದ್ದಿ, ಆಯ್ದಕ್ಕಿ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ, ಸೂಳೆ ಸಂಕವ್ವೆಯರಂಥ ಅಲಕ್ಷಿತ ಸಮುದಾಯದ ವ್ಯಕ್ತಿತ್ವಗಳು ಚರಿತ್ರೆಯ ಪುಟಗಳಲ್ಲಿ ಉಳಿಯಲು, ವಚನ ಚಳುವಳಿಯ ಭಾಗವಾಗಲು ಸಾಧ್ಯವಾಗುತ್ತಿರಲಿಲ್ಲ.

ಬಸವಣ್ಣ ತನ್ನ ಕಾಯಕ ಮತ್ತು ದಾಸೋಹ ತತ್ವಗಳ ಮೂಲಕ ವ್ಯಕ್ತಿಯಲ್ಲಿ ಆತ್ಮಸ್ಥೈರ್ಯವನ್ನು ತುಂಬುವ, ತನ್ನ ದುಡಿಮೆ ಹಾಗೂ ಕಸುಬುಗಳ ಬಗೆಗೆ ಗೌರವವನ್ನು ಹೊಂದುವ ಸ್ವಪ್ರಜ್ಞೆಯನ್ನು ಜಾಗೃತಗೊಳಿಸುತ್ತಾನೆ. ಸ್ವತಂತ್ರ ಆಲೋಚನೆ, ಅಭಿವ್ಯಕ್ತಿ, ದುಡಿಮೆಯಿಂದಾಗಿ ಪ್ರತಿ ವ್ಯಕ್ತಿಯೂ ಉನ್ನತ ಸ್ಥಾನಕ್ಕೇರಬಹುದು, ಆತ್ಮಘನತೆಯನ್ನು ಹೊಂದಬಹುದು ಎಂಬುದು ಬಸವಣ್ಣನ ನಿಲುವಾಗಿತ್ತು. ಇದು ಪ್ರಜಾಸತ್ತಾತ್ಮಕ ಆಶಯದ ಅತ್ಯುತ್ತಮ ಮಾದರಿ ಎಂದರೆ ತಪ್ಪಾಗಲಾರದು.

೫. ಆಧುನಿಕ ಸಂವೇದನೆ ಮತ್ತು ಬದುಕಿನ ಬಗೆಗೆ ಅದಮ್ಯ ಪ್ರೀತಿ : ಬಸವಣ್ಣನ ಒಟ್ಟು ಚಿಂತನೆಯಲ್ಲಿ ಉದಾರವಾದಿ ಹಾಗೂ ಪ್ರಜಾಸತ್ತಾತ್ಮಕ ನಿಲುವುಗಳಿರುವುದು ಸ್ಪಷ್ಟ. ಮಾನವ ಬದುಕು ಹಾಗೂ ಸಮಾಜ,

ಧರ್ಮ, ಆಧ್ಯಾತ್ಮ, ರಾಜಕೀಯ, ಹಾಗೂ ಆರ್ಥಿಕತೆಗೆ ಸಂಬಂಧಿಸಿದಂತೆ ಆತನ ಆಲೋಚನೆಗಳು, ಚಳುವಳಿ ಮತ್ತು ಸ್ಥಿತ್ಯಂತರಗಳು ಅತ್ಯಂತ ಆಧುನಿಕವಾದವುಗಳು. ವ್ಯಕ್ತಿ ಸ್ವಾತಂತ್ರ್ಯ, ಜಾತಿ ಮತ್ತು ಕಸುಬುಗಳಿಗಿದ್ದ ಕೀಳುತನವನ್ನು ನಿವಾರಿಸುವ ಪ್ರಯತ್ನ, ಲಿಂಗ ಸಮಾನತೆ, ಅಭಿವ್ಯಕ್ತಿ ಸ್ವಾತಂತ್ರ್ಯ, ಜಾತಿ ವಿರೋಧಿ ನಿಲುವುಗಳು, ಕಾಯಕ ಸಂಸ್ಕೃತಿ, ಅದನ್ನಾದರಿಸಿದ ಆರ್ಥಿಕ ಸ್ವಾವಲಂಬನೆ, ಸಮುದಾಯದ ಸಹಭಾಗಿತ್ವ, ವ್ಯಕ್ತಿತ್ವ ಶುದ್ಧತೆ ಬಸವಣ್ಣನ ಆಲೋಚನೆಗಳ ಈ ಎಲ್ಲ ವಿಚಾರಗಳು ಇಂದಿನ ಆದರ್ಶ ಕಲ್ಯಾಣ ರಾಜ್ಯಗಳ ಕನಸುಗಳನ್ನು ಪ್ರತಿಪಾದಿಸುತ್ತಿರುವ ಎಲ್ಲಾ ರಾಜಕೀಯ ಚಿಂತಕರ ಪ್ರತಿಪಾದನೆಗಳ ಮೇಲೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಪ್ರಭಾವ ಇರುವುದನ್ನು ಗುರುತಿಸಬಹುದು. ಆಧುನಿಕ ಸಾಹಿತ್ಯ, ಸಂಸ್ಕೃತಿ ಚಿಂತಕರುಗಳು ಇಂದು ಹುಡುಕುತ್ತಿರುವ ಹಾಗೂ ಮುನ್ನಲೆಗೆ ತರಬಯಸಿದ ದೇಸಿ ಸಂಸ್ಕೃತಿ ಹಾಗೂ ಅಲಕ್ಷಿತ ಸಮುದಾಯದ ಜೀವನಾನುಭವಗಳನ್ನು ಬಸವಣ್ಣ ಹನ್ನೆರಡನೆ ಶತಮಾನದಲ್ಲಿಯೇ ತರಲು ಪ್ರಯತ್ನಿಸಿದ್ದ ಹಾಗೂ ಆ ನಿಟ್ಟಿನಲ್ಲಿ ಯಶಸ್ವಿಯಾಗಿದ್ದ.

ಜಿ. ಬಿ. ದೇಸಾಯಿ ಅವರು ಬಸವಣ್ಣನ ವ್ಯಕ್ತಿತ್ವವನ್ನು ಕುರಿತಂತೆ "ಸ್ವತಃ ಅವರೊಬ್ಬ ತತ್ವಜ್ಞಾನಿಯಾಗಿದ್ದು ಸಮಾಜದ ಎಲ್ಲ ವರ್ಗಗಳ ಸೇವೆ ಹಾಗೂ ಉದ್ಧಾರಕ್ಕಾಗಿ ಶ್ರಮಿಸಿದರು. ತಮ್ಮ ಕ್ರಾಂತಿಕಾರಿ ವಿಚಾರಗಳನ್ನು ಆಚರಣೆಗೆ ತಂದ ಕ್ರಿಯಾಶೀಲ ನಾಯಕರಾಗಿದ್ದರು. ಬಸವೇಶ್ವರರೊಬ್ಬ ದೂರದೃಷ್ಟಿಯುಳ್ಳ ವ್ಯಕ್ತಿಯಷ್ಟೇ ಆಗಿರದೆ ತಮ್ಮ ಸಮಕಾಲೀನರಿಗಿಂತ ತಮ್ಮ ವಿಚಾರ ಹಾಗೂ ಧ್ಯೇಯಗಳಲ್ಲಿ ಎಷ್ಟೋ ಪಟ್ಟು ಮುಂದಿದ್ದರು. ಈ ನಿಟ್ಟಿನಲ್ಲಿ ಸಮಾಜದಲ್ಲಿ ಅವರು ಸಾಗಿದ ಮಾರ್ಗ ನಿಜವಾಗಿಯೂ ಆಧುನಿಕತೆಯಿಂದ ಕೂಡಿತ್ತು. ಈಗಿನ ಕೆಲವರು ಪ್ರಸ್ತುತದಲ್ಲಿರುವ ತಾಂತ್ರಿಕತೆಯಿಂದ ಕೂಡಿದ ಸಮಾಜವನ್ನು 'ಆಧುನಿಕ' ಅಥವಾ 'ಆಧುನಿಕತೆಯ ಪ್ರಕ್ರಿಯೆ' ಎಂದು ಕರೆಯುತ್ತಾರೆ. ಆದರೆ ಪ್ರಾಚೀನ ಸಾಂಪ್ರದಾಯಿಕತೆಯಿಂದ ಹೊರಬಂದಿರುವ ಪ್ರಕ್ರಿಯೆಯೇ ನಿಜವಾದ 'ಆಧುನಿಕತೆ'. ಈ ಬದಲಾವಣೆಯ ಪ್ರಕ್ರಿಯೆಯು ಮಾನವೀಯ ತತ್ವಗಳ ಆಧಾರದ ಮೇಲೆ ವಿವೇಚನೆಯಿಂದ ಕೂಡಿದ ಉತ್ತಮ ಸಮಾಜವಾಗಿರಬೇಕು"[2] ಎನ್ನುವ ಮಾತುಗಳು ಬಸವಣ್ಣನ ಆಧುನಿಕ ಪ್ರಜ್ಞೆಯನ್ನು ಮತ್ತು ಆಯಾ ಕಾಲಘಟ್ಟದ ಜಡತೆಯಿಂದ ಬಿಡುಗಡೆ ಹೊಂದುವುದೇ ನಿಜವಾದ ಆಧುನಿಕತೆ ಎಂಬುದನ್ನು ಧ್ವನಿಸುತ್ತದೆ. ಈ ನಿಟ್ಟಿನಲ್ಲಿ ಬಸವಣ್ಣ ಇಂದಿಗೂ ಕೂಡ ಆಧುನಿಕ ಎನಿಸಬಹುದಾದ ಚಿಂತನೆಗಳನ್ನು ಒಳಗೊಂಡಿದ್ದನು ಎನ್ನಬಹುದು.

ಬಸವಣ್ಣನ ದೃಷ್ಟಿಯಲ್ಲಿ ಆಧುನಿಕತೆ ಎಂಬುದು ಬದುಕನ್ನು ನಿರಾಕರಿಸಿದ, ಸಾಮಾಜಿಕ ಬಂಧಗಳಿಂದ ಬಿಡಿಸಿಕೊಳ್ಳುವ, ಜೀವವಿರೋಧಿಯಾದ ನೆಲೆಯದ್ದಲ್ಲ. ಅದು ಎಲ್ಲಾ ಜೀವಿಗಳ ಬದುಕುವ ಅದಮ್ಯ ಚೈತನ್ಯವನ್ನು ಪೋಷಿಸುವ ನೆಲೆಯದ್ದು. ಹಾಗಾಗಿಯೇ ಬಸವಣ್ಣ ಪರದ ಬದುಕಿನ ಆಕಾಂಕ್ಷೆಗಿಂತ ಇಹದ ಬದುಕಿಗೆ ಮನ್ನಣೆ ನೀಡುವುದು. ಇಹದ ಬದುಕಿನ ಶುದ್ಧತೆ, ಸಾರ್ಥಕತೆಗೆ ಒತ್ತು ನೀಡಿದ ಬಸವಣ್ಣ ಇದರಲ್ಲೇ ಮೋಕ್ಷ, ಸ್ವರ್ಗ, ಸಾರ್ಥಕತೆಗಳನ್ನು ಕಂಡುಕೊಳ್ಳುವ, ತಾನೆ ದೇವರ ಆವಾಸವಾಗುವ ಪ್ರಕ್ರಿಯೆಯನ್ನು ಕುರಿತು ಚಿಂತಿಸುತ್ತಾನೆ. ಬಸವಣ್ಣನ ಚಿಂತನೆಗಳು ಹಾಗೂ ಆತನ ಚಳುವಳಿಯ ಎಲ್ಲಾ ಆಶಯಗಳೂ ನಿಜವಾದ ಅರ್ಥದಲ್ಲಿ, ಮಾನವೀಯ ನೆಲೆಯ ಸಾರ್ಥಕತೆಗೆ ಹತ್ತಿರವಾಗಿವೆ.

೬. ನಿರಂತರ ವ್ಯಕ್ತಿತ್ವ ಶುದ್ಧೀಕರಣ ಪ್ರಕ್ರಿಯೆ ಮತ್ತು ಆತ್ಮವಿಮರ್ಶೆ : ಈ ಪ್ರಕ್ರಿಯೆಗೆ ಎರಡು ನೆಲೆಗಳಿವೆ. ಮೊದಲನೆಯದ್ದು ವೈಯಕ್ತಿಕವಾದದ್ದು, ಎರಡನೆಯದ್ದು ಸಾಮಾಜಿಕವಾದುದ್ದು. ಬಸವಣ್ಣ ವ್ಯಕ್ತಿಯ ಅಂತರಂಗ ಮತ್ತು ಬಹಿರಂಗ ಶುದ್ಧತೆಗೆ ಮಹತ್ವ ನೀಡುತ್ತಾನೆ. ಈ ಎರಡೂ ನೆಲೆಯಲ್ಲಿ ಪರಿಶುದ್ಧನಾದವನು 'ಭಕ್ತ',

'ಶರಣ'ನಾಗುತ್ತಾನೆ. ತನ್ನ ವ್ಯಕ್ತಿತ್ವದ ಓರೆ ಕೋರೆಗಳನ್ನು, ದೋಷಗಳನ್ನು ಹೇಳಿಕೊಳ್ಳುವ ಮತ್ತು ತಿದ್ದಿಕೊಳ್ಳುವ ಪ್ರಾಮಾಣಿಕ ವ್ಯಕ್ತಿಯನ್ನು ಬಸವಣ್ಣನಲ್ಲಿ ಕಾಣುತ್ತೇವೆ. ಇದು ವ್ಯಕ್ತಿಯೊಬ್ಬ ಮನುಷ್ಯತ್ವದ ಎತ್ತರಕ್ಕೆ ಏರುವ ಹಂಬಲವನ್ನು ನಿರಂತರವಾಗಿ ಉಳಿಸಿಕೊಂಡಾಗ ಮಾತ್ರ ವ್ಯಕ್ತಿತ್ವದಲ್ಲಿ ಉನ್ನತಿ ಮತ್ತು ಘನತೆಯನ್ನು ತಂದುಕೊಳ್ಳಲು ಸಾಧ್ಯ ಎಂಬುದನ್ನು ಧ್ವನಿಸುತ್ತದೆ. ಹಾಗೆಯೇ ಸಾಮಾಜಿಕ ವ್ಯಕ್ತಿತ್ವಗಳು ಕೂಡ ನಿರಂತರ ಆತ್ಮವಿಮರ್ಶೆಯ ಮೂಲಕ ತಮ್ಮ ವ್ಯಕ್ತಿತ್ವಗಳನ್ನು ಸುಧಾರಿಸಿಕೊಂಡರೆ ಆದರ್ಶ ಸಮಾಜವನ್ನು ರೂಪಿಸಲು ಸಾಧ್ಯ. ವ್ಯಕ್ತಿ ಬದಲಾಗದೆ ಸಮಾಜದ ಬದಲಾವಣೆ ಸಾಧ್ಯವಿಲ್ಲ. ಹಾಗಾಗಿ ಸಾಮಾನ್ಯ ವ್ಯಕ್ತಿತ್ವಗಳ ಸುಧಾರಣೆ ಮತ್ತು ರೂಪಿಸುವಿಕೆಗೆ ಬಸವಣ್ಣ ಒತ್ತು ಕೊಡುತ್ತಾನೆ.

ಒಟ್ಟಾರೆಯಾಗಿ ಬಸವಣ್ಣ ಒಬ್ಬ ಕವಿಯಾಗಿ ಸುಧಾರಕನಾಗಿ, ತತ್ವಜ್ಞಾನಿಯಾಗಿ, ದೇಸಿ ಚಿಂತಕನಾಗಿ, ಒಬ್ಬ ಸಾಮಾನ್ಯ ಮನುಷ್ಯನಾಗಿ ಬದುಕು ಮತ್ತು ಚಿಂತನೆಗಳೆರಡರಲ್ಲೂ ಪರಿಶುದ್ಧತೆಗಾಗಿ ನಿರಂತರ ತುಡಿದವನಾಗಿ ಕಂಡುಬರುತ್ತಾನೆ. ಬಸವಣ್ಣನ ವಚನಗಳು ಅವನ ಒಟ್ಟು ಚಿಂತನೆಯ ಹಾಗೂ ಹೋರಾಟದ ಆಶಯಗಳನ್ನು ಪ್ರತಿಬಿಂಬಿಸುತ್ತವೆ. ಆತನ ಸಮಗ್ರ ವ್ಯಕ್ತಿತ್ವದ ದರ್ಶನವನ್ನು ಮಾಡುತ್ತವೆ.

ಹೀಗಿದ್ದಾಗ್ಯೂ ಬಸವಣ್ಣನ ಚಿಂತನೆ ಹಾಗೂ ವಚನ ಚಳುವಳಿಯ ಕೆಲವು ಅಂಶಗಳು, ಹೋರಾಟದ ಪ್ರಕ್ರಿಯೆಗಳು ನಂತರದ ಕಾಲಘಟ್ಟಗಳಲ್ಲಿ ಪ್ರಶ್ನಿಸಲ್ಪಟ್ಟಿರುವುದನ್ನು, ಅವುಗಳೊಂದಿಗೆ ಮುಖಾಮುಖಿಯಾಗಿರುವುದನ್ನು ಆಧುನಿಕ ಸಾಹಿತ್ಯದಲ್ಲಿ ಬಸವಣ್ಣನನ್ನು ಮತ್ತು ಶರಣ ಚಳುವಳಿಯನ್ನು ಕುರಿತು ಬಂದಿರುವ ಕೃತಿಗಳು ತಿಳಿಸುತ್ತವೆ. ಇಲ್ಲೆಲ್ಲಾ ಬಸವಣ್ಣ ಮತ್ತು ಶರಣ ಚವಳುವಳಿಯನ್ನು ಭಿನ್ನ ದೃಷ್ಟಿಕೋನಗಳಿಂದ ವಿಮರ್ಶೆಗೆ ಒಳಪಡಿಸುವ ಮೂಲಕ ಅವನ ವ್ಯಕ್ತಿತ್ವದ ಮಿತಿಗಳನ್ನೂ, ದ್ವಂದ್ವಗಳನ್ನೂ ಹಾಗೂ ಅನನ್ಯತೆಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಬಸವಣ್ಣನ ವ್ಯಕ್ತಿತ್ವದ ಕಾಲಾತೀತವಾದ ಗುಣಮೌಲ್ಯಗಳ ಹುಡುಕಾಟ ಮತ್ತು ಅವರ ಬಗೆಗಿನ ಸ್ಥಾಪಿತ ತೀರ್ಮಾನಗಳ ಪರಿಶೀಲನೆ ಇವೆರಡೂ ಅತ್ಯಂತ ಅಗತ್ಯವಾಗಿ ಆಗಬೇಕಾಗಿರುವ ಕೆಲಸಗಳು. ಏಕೆಂದರೆ ಬಸವಣ್ಣನ ಬಗೆಗೆ ಮತ್ತು ಅವನ ನಾಯಕತ್ವದ ವಚನ ಚಳುವಳಿಯ ಬಗೆಗೆ ಇನ್ನು ಅವಕಾಶವಿಲ್ಲ ಎಂಬಷ್ಟರ ಮಟ್ಟಿಗೆ ವರ್ಣನೆಗಳು ಆಗಿ ಹೋಗಿವೆ. ಬಸವಣ್ಣನ ವ್ಯಕ್ತಿತ್ವ ಸಕಾರಣವಾಗಿಯೇ ಆರಾಧನೆಗೆ, ವೈಭವೀಕರಣಕ್ಕೆ ಒಳಗಾಗಿದೆ. ಆದರೆ ಕಪಟರಾಳ ಕೃಷ್ಣರಾವ್, ಎಸ್.ಎಸ್. ಹಿರೇಮಠ, ಪಿ.ಎಸ್.ಪಾಟೀಲ್, ಕೆ.ಜಿ.ನಾಗರಾಜಪ್ಪ, ರಹಮತ್ ತರೀಕೆರೆ, ಎಂ.ಎಸ್.ಆಶಾದೇವಿ ಮುಂತಾದ ಕೆಲವು ವಿದ್ವಾಂಸರು ಬಸವಣ್ಣ ಮತ್ತು ಆತನ ನೇತೃತ್ವದ ವಚನ ಚಳುವಳಿಯ ಬಗೆಗೆ ಎತ್ತಿರುವ ಸಕಾರಣವಾದ ಪ್ರಶ್ನೆಗಳು ಬಸವಣ್ಣನ ವ್ಯಕ್ತಿತ್ವವನ್ನು ಬೇರೆ ಬೇರೆ ಆಯಾಮಗಳಲ್ಲಿ ಗ್ರಹಿಸಬೇಕಾದ ಅಗತ್ಯವನ್ನು ಒತ್ತಾಯಿಸುತ್ತವೆ. ಕೆಳಜಾತಿಯವರ ಆಹಾರ, ನಂಬಿಕೆ, ಸಂಸ್ಕೃತಿ, ದೈವಗಳ ನಿರಾಕರಿಸಿದ್ದು, ಬಹುದೇವತೆಗಳ ನಿರಾಕರಣೆ, ಇಷ್ಟಲಿಂಗದ ಪರಿಕಲ್ಪನೆ, ಜನಿವಾರವನ್ನು ಕಿತ್ತೊಗೆದು ಶಿವದಾರವನ್ನು ಒಪ್ಪಿಕೊಂಡದ್ದು, ವೀರಶೈವ ಧರ್ಮ ಮುಂದೆ ಶೋಷಕ ಜಾತಿಯಾಗಿ ಮಾರ್ಪಾಡಾದದ್ದು, ಅಂತರ್ಜಾತೀಯ ವಿವಾಹದಂತ ಕ್ರಾಂತಿಕಾರಿ ಪ್ರಯತ್ನಗಳಿಗೆ ಕೈಹಾಕಿದ್ದು, ಶುದ್ಧತೆಯ ಪ್ರಶ್ನೆ, ಹೆಣ್ಣನ್ನು ಕುರಿತ ಬಸವಣ್ಣನ ನಿಲುವು, ಭಕ್ತ ಮತ್ತು ಭವಿಯ ಪರಿಕಲ್ಪನೆಗಳು ಹೀಗೆ ಇನ್ನು ಮುಂತಾದ ಹಲವು ಪ್ರಶ್ನೆಗಳನ್ನು ಬಸವಣ್ಣ ಮತ್ತು ಆತನ ನಾಯಕತ್ವದ ವಚನ ಚಳುವಳಿಯ ಬಗೆಗೆ ಎತ್ತಲಾಗಿದೆ. ಇವುಗಳನ್ನು ಅವುಗಳ ಎಲ್ಲಾ

ಆಯಾಮಗಳಲ್ಲಿ ಚರ್ಚಿಸುವ ಮೂಲಕವಾಗಿಯೇ ಬಸವಣ್ಣನ ವ್ಯಕ್ತಿತ್ವದ ಶಕ್ತಿ ಮತ್ತು ಮಿತಿಗಳನ್ನು ಕಂಡುಕೊಳ್ಳಬೇಕಾಗಿದೆ. ಮಂಟೇಸ್ವಾಮಿ ಕಾವ್ಯ ಬಸವಣ್ಣ ಮತ್ತು ವಚನ ಚಳುವಳಿಯೆಂಬ ಆದರ್ಶಗೋಪುರವನ್ನು ಒಡೆಯುವ ಕ್ರಮ, ನಮ್ಮ ಸಾಂಸ್ಕೃತಿಕ ಜಡತೆಯನ್ನು ನಿವಾರಿಸಿಕೊಳ್ಳಬೇಕಾದ ಅಗತ್ಯವನ್ನು ಒತ್ತಾಯಿಸುತ್ತಿರುವುದು ಯಾವುದೇ ವ್ಯಕ್ತಿತ್ವವನ್ನು ಎದುರುಗೊಳ್ಳಬೇಕಾದ ಮಾರ್ಗವನ್ನು ತೋರಿಸುತ್ತದೆ. ಮಂಟೇಸ್ವಾಮಿ ಕಾವ್ಯ ಎತ್ತುವ ದಾಸೋಹ, ಶುಚಿತ್ವ, ಲಿಂಗಧಾರಣೆ, ಆಹಾರ, ಮಡಿ–ಮೈಲಿಗೆ, ಶರಣ ಪರಿಕಲ್ಪನೆ ಮುಂತಾದುವುಗಳಿಗೆ ಸಂಬಂಧಿಸಿದ ಪ್ರಶ್ನೆಗಳು ಬಸವಣ್ಣನ ವ್ಯಕ್ತಿತ್ವದ ಹಲವು ಮಿತಿಗಳನ್ನು, ವಚನ ಚಳುವಳಿಯ ನಂತರದ ಅತಿರೇಕ ಬೆಳವಣಿಗೆಗಳನ್ನು ಬಯಲುಮಾಡುತ್ತವೆ. ಈ ಬಗೆಯ ಗ್ರಹಿಕೆಯ ಪ್ರಯತ್ನಗಳಿಂದ ಮಾತ್ರ ಯಾವುದೇ ವ್ಯಕ್ತಿತ್ವವನ್ನು ನೈಜವಾಗಿ ಗ್ರಹಿಸಲು ಸಾಧ್ಯ. ಈ ತಾತ್ವಿಕ ವಿಚಾರಗಳ ಹಿನ್ನೆಲೆಯಲ್ಲಿ ಬಸವಣ್ಣನ ವ್ಯಕ್ತಿತ್ವವನ್ನು ಗ್ರಹಿಸಿರುವ ಆಧುನಿಕ ಕನ್ನಡ ಕಾವ್ಯದ ಪ್ರಯತ್ನಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ೫.೨ ಆಧುನಿಕ ಕನ್ನಡ ಕಾವ್ಯ ಕಂಡ ಬಸವಣ್ಣ : ಸಮಾನತೆಯ ಸಮಾಜ ನಿರ್ಮಾಣದ ಕನಸು.

ಹೊಸಗನ್ನಡ ಕಾವ್ಯ ಸಂದರ್ಭದಲ್ಲಿ ಬಸವಣ್ಣನನ್ನು ಕುರಿತು ರಚನೆಯಾಗಿರುವ ಕವಿತೆಗಳು ಬಸವಣ್ಣನ ವ್ಯಕ್ತಿತ್ವವನ್ನು ಕುರಿತ ಇತರ ಸಾಹಿತ್ಯ ಪ್ರಕಾರಗಳಿಗಿಂತ ಭಿನ್ನವಾಗಿ ಅನುಸಂಧಾನ ನಡೆಸಿವೆ. ಕಾವ್ಯದ ಬಹುಮುಖ್ಯ ಲಕ್ಷಣಗಳಾದ ಪ್ರತಿಮೆ, ರೂಪಕ, ಸಂಕೇತಗಳ ಮೂಲಕ ಸೂಕ್ಷ್ಮವಾಗಿ ಗ್ರಹಿಸಲು ಮಾಡಿರುವ ಪ್ರಯತ್ನ ಆತನ ವ್ಯಕ್ತಿತ್ವವನ್ನು ಹಲವು ಆಯಾಮಗಳಲ್ಲಿ ಹಿಡಿದಿಡಲು ಸಹಾಯಕವಾಗಿದೆ. ಈ ಕವಿತೆಗಳು ಬಸವಣ್ಣನ ವ್ಯಕ್ತಿತ್ವವನ್ನು ಸಮಕಾಲೀನ ಸಾಂಸ್ಕೃತಿಕ ಬಿಕ್ಕಟ್ಟು ಮತ್ತು ಸವಾಲುಗಳ ನಡುವೆ ಇಟ್ಟು ನೋಡಿರುವ ಪ್ರಯತ್ನ ವಿಶಿಷ್ಟವಾದದ್ದು. ವಿವಿಧ ತಾತ್ವಿಕ ಗ್ರಹಿಕೆಗಳ ಹಿನ್ನೆಲೆಯಲ್ಲಿ ಬಸವಣ್ಣನನ್ನು ಮುಖಾಮುಖಿಯಾಗುವ ಕವಿತೆಗಳು ಸಮಕಾಲೀನ ತುರ್ತುಗಳಿಗೆ ಪರಿಹಾರವನ್ನು ಕಂಡುಕೊಳ್ಳುವ ಹಾಗೂ ಚರಿತ್ರೆಯನ್ನು, ಅದರ ರಚನಾ ಕ್ರಮಗಳನ್ನು ಮರುನಿರೂಪಿಸುವ ಪ್ರಯತ್ನಗಳಾಗಿ ಮೂಡಿಬಂದಿವೆ.

೧೨ನೇ ಶತಮಾನದಲ್ಲಿ ಸಾಮಾಜಿಕ, ಧಾರ್ಮಿಕ ಮತ್ತು ವೈಚಾರಿಕ ಕ್ರಾಂತಿಗೆ ಕಾರಣರಾದ ಬಸವಣ್ಣ ಆ ಕಾಲಾನಂತರದ ಜನಮಾನಸದಲ್ಲಿ ಪೌರಾಣಿಕ ವ್ಯಕ್ತಿಯಾಗಿ, ಅವತಾರ ಪುರುಷನಾಗಿ, ದೈವವಾಗಿ, ಮಾನವತಾವಾದಿಯಾಗಿ ಚಿತ್ರಿತಗೊಂಡಿದ್ದಾನೆ. ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಬಸವಣ್ಣನ ವ್ಯಕ್ತಿತ್ವ ಚಿಂತನೆಗಳು ಕನ್ನಡದ ಸೃಜನಶೀಲ ಮನಸ್ಸುಗಳನ್ನು ಅಪಾರವಾಗಿ ಪ್ರಭಾವಿಸಿವೆ. ಬಸವಣ್ಣನನ್ನು ಕುರಿತ ಕವಿತೆ, ಕಥೆ, ಕಾದಂಬರಿ, ನಾಟಕ, ವ್ಯಕ್ತಿಚಿತ್ರ ಬರಹಗಳು, ಜೀವನಚರಿತ್ರೆಗಳು, ಲೇಖನಗಳು, ವಿಮರ್ಶೆಗಳೂ ಹೇರಳವಾಗಿ ರಚನೆಗೊಂಡಿವೆ. ಬಸವಣ್ಣನನ್ನು ಕುರಿತು ರಚನೆಗೊಂಡಿರುವ ಕವಿತೆಗಳನ್ನು ತತ್ಕಾಲೀನ ಮತ್ತು ಸಮಕಾಲೀನ ಸಮಾಜದ ಆಶಯ, ತುಡಿತ ಮಿಡಿತಗಳೊಂದಿಗೆ ಹೋಲಿಸಿ ಅಧ್ಯಯನ ನಡೆಸುವುದು ಸೂಕ್ತ. ಹೀಗಾಗಿ ಚರಿತ್ರೆಯಲ್ಲಿ ಆಗಿಹೋದ, ತಮ್ಮ ಬದುಕು ಮತ್ತು ಚಿಂತನೆಗಳ ಮೂಲಕ ತನ್ನ ಸುತ್ತಣ ಸಮಾಜ ಮತ್ತು ಬದುಕನ್ನು ಪ್ರಭಾವಿಸಿದ ಅದರಲ್ಲಿ ಹೊಸ ಬದಲಾವಣೆಯನ್ನು ತರಲು ಪ್ರಯತ್ನಿಸಿದ ಬಸವಣ್ಣನ ವ್ಯಕ್ತಿತ್ವವನ್ನು

ಆಧುನಿಕ ಕನ್ನಡ ಕಾವ್ಯಲೋಕ ಗ್ರಹಿಸಿರುವ, ಎದುರುಗೊಂಡಿರುವ ಬಗೆ ಮತ್ತು ಆ ವ್ಯಕ್ತಿತ್ವದೊಂದಿಗೆ ಸಮಕಾಲೀನ ಸಾಮಾಜಿಕ ಸ್ಥಿತಿಗತಿಗಳನ್ನು ನಿವೇದಿಸಿಕೊಳ್ಳುವಾಗ ಎದುರಾಗುವ ಸಂದಿಗ್ಧತೆಗಳು ಹಾಗೂ ಅದರೊಂದಿಗೆ ನಡೆಸುವ ಅನುಸಂಧಾನದ ಕ್ರಮಗಳನ್ನು ಕುರಿತಂತೆ ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ವ್ಯಕ್ತಿತ್ವಗಳನ್ನು ಕುರಿತು ರಚನೆಯಾಗಿರುವ ಕವಿತೆಗಳಿಗೆ ಬಹುಮುಖ್ಯವಾಗಿ ಎರಡು ಮುಖಗಳಿರುತ್ತವೆ. ಒಂದು ಆರಾಧನೆ, ಇನ್ನೊಂದು ವಿಮರ್ಶಾತ್ಮಕ ಒಳನೋಟ. ಮೊದಲನೆಯದರಲ್ಲಿ ವ್ಯಕ್ತಿಯನ್ನು ಕುರಿತ ಗೌರವ, ಭಕ್ತಿ, ಉತ್ಸವ, ವಿಜೃಂಭಣೆ, ಭಜನೆ, ಮೆರವಣಿಗೆ, ಉತ್ಪ್ರೇಕ್ಷೆ, ಧನ್ಯತಾಭಾವ ಇತ್ಯಾದಿಗಳು ವ್ಯಕ್ತವಾಗುತ್ತವೆ. ಸಾಹಿತ್ಯ ಹಾಗೂ ವೈಚಾರಿಕ ದೃಷ್ಟಿಯಿಂದ ಈ ರೀತಿಯ ರಚನೆಗಳು ಹೆಚ್ಚು ಮಹತ್ವದವೆನಿಸುವುದಿಲ್ಲ. ಈ ಕವಿತೆಗಳು ಹೊಗಳಲೆಂದೊ, ಭಕ್ತಿಯ ನಮನಗಳನ್ನು ಸಲ್ಲಿಸಲೆಂದೊ, ಧನ್ಯತಾಭಾವವನ್ನು ವ್ಯಕ್ತಪಡಿಸಲೆಂದೊ ರಚಿತವಾದವುಗಳು. ಆದರೆ ಎರಡನೆಯ ಬಗೆಯ ರಚನೆಗಳು ಹಾಗಲ್ಲ. ಕವಿಗಳು ವ್ಯಕ್ತಿಗಳ ವ್ಯಕ್ತಿತ್ವವನ್ನು, ಸಾಧನೆ – ಸಿದ್ಧಿಗಳನ್ನು, ಇತಿಮಿತಿಗಳನ್ನೂ ಸೋಲು– ಗೆಲುವುಗಳನ್ನು ವೈಚಾರಿಕ ನೆಲೆಗಟ್ಟಿನಲ್ಲಿ ತೂಗಿನೋಡುವ, ವಿಮರ್ಶಿಸುವ, ಪ್ರಶ್ನಿಸುವ, ಅನುಮಾನಿಸುವ, ವಿರೋಧಿಸುವ ಮೂಲಕ ಆ ವ್ಯಕ್ತಿತ್ವಗಳಿಗೆ ವ್ಯಾಪಕತೆಯನ್ನು ನೀಡುವುದರೊಂದಿಗೆ ಅವರ ಹಲವು ಮುಖಗಳನ್ನು ಅನಾವರಣಗೊಳಿಸುತ್ತವೆ. ಹಾಗಾಗಿ ಇವು ಹೆಚ್ಚು ಅರ್ಥವತ್ತಾದ ಹಾಗೂ ಮಹತ್ವದ ರಚನೆಗಳೆನಿಸಿಕೊಳ್ಳುತ್ತವೆ. ಬಸವಣ್ಣನನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳು ಈ ಎರಡೂ ನೆಲೆಗಳಲ್ಲಿ ಅಭಿವ್ಯಕ್ತಿಗೊಂಡಿರುವುದನ್ನು ಕಾಣಬಹುದು.

ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಬಸವಣ್ಣನ ವ್ಯಕ್ತಿತ್ವ ಶೋಧದ ಪ್ರಕ್ರಿಯೆಗಳನ್ನು, ಅವುಗಳ ಹಿಂದಿನ ಕಾಳಜಿಗಳನ್ನು, ಅವುಗಳ ಸಾಂಸ್ಕೃತಿಕ ಆಯಾಮಗಳನ್ನು ಚರ್ಚಿಸಲಾಗಿದೆ. ಬಸವಣ್ಣನನ್ನು ಕುರಿತು ರಚನೆಗೊಂಡಿರುವ ಒಟ್ಟು ಕವಿತೆಗಳನ್ನು ಮೂರು ನೆಲೆಗಳಲ್ಲಿ ಗುರುತಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧. ಬಸವಣ್ಣನ ವ್ಯಕ್ತಿತ್ವದ ಅನನ್ಯತೆಯ ಶೋಧ
೨. ಬಸವಣ್ಣನ ವ್ಯಕ್ತಿತ್ವ : ಸಾಂಸ್ಕೃತಿಕ ಮುಖಾಮುಖಿ
೩. ಸಮಕಾಲೀನ ವ್ಯಕ್ತಿತ್ವಗಳನ್ನು ರೂಪಿಸುವ ಶ್ರದ್ಧೆಯ ಆದರ್ಶವಾಗಿ

**೫.೨.೧ ಬಸವಣ್ಣನ ವ್ಯಕ್ತಿತ್ವದ ಅನನ್ಯತೆಯ ಶೋಧ** : ಬಸವಣ್ಣನನ್ನು ಕುರಿತಾದ ಕವಿತೆಗಳು ಬಸವಣ್ಣನನ್ನು ಕೀರ್ತಿಸುವುದರೊಂದಿಗೆ ಅವನ ಬದುಕಿನ ವಿಭಿನ್ನ ಮುಖಗಳನ್ನು ಅನಾವರಣ ಗೊಳಿಸುವ ಪ್ರಯತ್ನ ಮಾಡಿವೆ. ಬಸವಣ್ಣನನ್ನು ಕುರಿತಾದ ಕವನಗಳನ್ನು ಎರಡು ಗುಂಪುಗಳಾಗಿ ವಿಭಾಗಿಸಬಹುದು. ಮೊದಲನೆಯದು ಆ ವ್ಯಕ್ತಿತ್ವವನ್ನು ಕುರಿತಾದ ಭಕ್ತಿ, ಆರಾಧನೆ, ಗೌರವಪೂರ್ವಕ ವಿವೇಚನೆಗೆ ಸಂಬಂಧಿಸಿದ್ದು. ಎರಡನೆಯ ಮಾದರಿ ಆ ವ್ಯಕ್ತಿತ್ವದ ಬಹುಮುಖತೆಯನ್ನೂ, ಸಾರ್ವತ್ರಿಕತೆಯನ್ನೂ ಪ್ರಚುರಪಡಿಸುವುದಕ್ಕೆ ಸಂಬಂಧಿಸಿದ್ದು. ಇದು ವ್ಯಕ್ತಿತ್ವದ ಅನನ್ಯತೆಯನ್ನು ಹಿಡಿದಿಡಲು ಪ್ರಯತ್ನಿಸುತ್ತದೆ. ಇಲ್ಲಿನ ಕವಿತೆಗಳಲ್ಲಿ ಬಸವಣ್ಣನ ವೈಯಕ್ತಿಕ ಮತ್ತು ಸಾಮಾಜಿಕ ಬದುಕಿನ ವಿವರಗಳು ಆರಾಧನೆಯ ನೆಲೆಯನ್ನು ಮೀರಿ ಅವನ ಸಿದ್ಧಾಂತಗಳ ಪ್ರಸ್ತುತತೆಯನ್ನು ಕುರಿತು ಮಾತನಾಡುತ್ತವೆ. ಬಸವಣ್ಣ ಪ್ರಸ್ತುತ ಸಂದರ್ಭದಲ್ಲಿ ಏಕೆ ಮುಖ್ಯ ಎಂಬುದನ್ನು ಕುರಿತು ಚರ್ಚಿಸುತ್ತವೆ. ಈ ಬಗೆಯ ಕವನಗಳಲ್ಲಿ ಬಸವಣ್ಣನ ಜೀವನ ವಿವರಗಳೊಂದಿಗೆ ಬಸವಣ್ಣನ ತತ್ವ,

ಚಿಂತನೆ, ಆಲೋಚನೆಗಳನ್ನು ಅರಿಯುವ, ಅವುಗಳ ಸಾಮಾಜಿಕ ಮಹತ್ವವನ್ನು ಗುರುತಿಸುವ ಪ್ರಯತ್ನವಿದೆ. ಈ ಗುಂಪಿನ ಕವನಗಳು ಬಸವಣ್ಣನ ಬದುಕು, ಬರಹ, ಹಾಗೂ ಸಮಾಜಮುಖಿ ಕಾರ್ಯಚಟುವಟಿಕೆಗಳನ್ನು ಗಮನದಲ್ಲಿಟ್ಟುಕೊಂಡು ಆತನ ವ್ಯಕ್ತಿತ್ವವನ್ನು ಚಿತ್ರಿಸಲು ಪ್ರಯತ್ನಿಸಿವೆ. ಜೊತೆಗೆ ಇಂತಹ ಕವನಗಳು ಬಸವಣ್ಣನ ವ್ಯಕ್ತಿತ್ವವನ್ನು, ಅವನ ಸಾಧನೆ ಸಿದ್ಧಿಗಳನ್ನು, ಬದುಕು ಹೋರಾಟಗಳನ್ನು ವಿಮರ್ಶೆಗೆ ಒಳಗು ಮಾಡುತ್ತವೆ. ವ್ಯಕ್ತಿತ್ವವನ್ನು ಅನುಮಾನಿಸುವ, ಪ್ರಶ್ನಿಸುವ, ವರ್ತಮಾನದ ಹಲವು ಸಮಸ್ಯೆ, ಬಿಕ್ಕಟ್ಟುಗಳನ್ನು ವ್ಯಕ್ತಿತ್ವದೊಂದಿಗೆ ಮುಖಾಮುಖಿಯಾಗಿಸುವುದರ ಮೂಲಕ ಆ ವ್ಯಕ್ತಿತ್ವದ ವಿಶಿಷ್ಟತೆಯನ್ನು, ವಿವಿಧ ಮುಖಗಳನ್ನು ಶೋಧಿಸುವ ವಿಶಿಷ್ಟ ಪ್ರಯತ್ನಗಳಾಗಿ ಈ ಬಗೆಯ ಕವನಗಳು ಕಂಡುಬರುತ್ತವೆ. ಇವು ಸಾಮಾನ್ಯರಲ್ಲಿ ಅಸಾಮಾನ್ಯರಾದ ವ್ಯಕ್ತಿತ್ವಗಳ ಸಾರ್ವತ್ರಿಕತೆಯನ್ನೂ ವಿಶ್ವವ್ಯಾಪಕತೆಯನ್ನೂ ಗುರುತಿಸುವ ವಿಶಿಷ್ಟ ಪ್ರಯತ್ನಗಳಾಗಿರುವಂತೆಯೇ ಅಂತಹ ವ್ಯಕ್ತಿತ್ವದ ಇತಿಮಿತಿಗಳನ್ನೂ, ಸೋಲು ಗೆಲುವುಗಳನ್ನೂ, ಶಕ್ತಿ ದೌರ್ಬಲ್ಯಗಳನ್ನೂ ಗುರುತಿಸುತ್ತಿರುತ್ತವೆ. ಇಂಥ ರಚನೆಗಳು ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಮಹತ್ವದವೆನಿಸುತ್ತವೆ. ಈ ಕವನಗಳ ವಿಶೇಷತೆ ಎಂದರೆ ಇವು ವ್ಯಕ್ತಿತ್ವವನ್ನು ಕುರಿತಾದ ನಮ್ಮ ಗ್ರಹಿಕೆಯನ್ನು ತಿದ್ದುತ್ತವೆ, ಅರಿವನ್ನು ವಿಸ್ತರಿಸುತ್ತವೆ, ನೋಡಬೇಕಾದ ದೃಷ್ಟಿಯನ್ನು ಒದಗಿಸುತ್ತವೆ, ಮರುಚಿಂತನೆಗೆ ಒಳಪಡಿಸುತ್ತವೆ. ವರ್ತಮಾನದ ಜಗತ್ತಿಗೆ ಏಕೆ ಮತ್ತು ಹೇಗೆ ಇಂತಹ ವ್ಯಕ್ತಿತ್ವಗಳು ಅಗತ್ಯವೆಂಬುದನ್ನು ಪ್ರತಿಪಾದಿಸುತ್ತವೆ. ಈ ನಿಟ್ಟಿನಲ್ಲಿ ಕನ್ನಡ ಕಾವ್ಯ ನಡೆಸುತ್ತಿರುವ ಬಸವಣ್ಣನ ವ್ಯಕ್ತಿತ್ವದ ಅನನ್ಯತೆಯನ್ನು ಕುರಿತ ಶೋಧದ ನೆಲೆಗಳನ್ನು ಗುರುತಿಸುವ, ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಭಿನ್ನ ತಾತ್ವಿಕತೆ, ಭಿನ್ನ ಸಾಮಾಜಿಕ, ವೈಚಾರಿಕ ಸಂದರ್ಭಗಳಿಂದ ಬಂದ ಕವಿಗಳು ಬಸವಣ್ಣನನ್ನು ಮುಖಾಮುಖಿಯಾಗುವ ಬಗೆ, ಅವರ ಬದುಕು, ಸಾಧನೆ-ಸಿದ್ಧಿ, ಚಿಂತನೆಗಳೊಂದಿಗೆ ನಡೆಸುವ ಚಿಂತನ ಮಂಥನ, ಹಾಗೂ ಅವುಗಳ ಮೂಲಕ ಅಭಿವ್ಯಕ್ತಗೊಳ್ಳುವ ವಿಚಾರಗಳು ಭಿನ್ನತೆ ಹಾಗೂ ವಿಶಿಷ್ಟತೆಯಿಂದ ಕೂಡಿದವುಗಳಾಗಿರುತ್ತವೆ. ಹಾಗಾಗಿ ಬಸವಣ್ಣನನ್ನು ಕುರಿತಾದ ಕವನಗಳು ಬಸವಣ್ಣನ ವ್ಯಕ್ತಿತ್ವದ ಹಲವು ಮುಖಗಳನ್ನು ಪರಿಚಯಿಸುವುದರೊಂದಿಗೆ ಅದರ ಪ್ರಸ್ತುತತೆಯನ್ನು ನಿಕಷಕ್ಕೆ ಒಡ್ಡುತ್ತವೆ.

ಕನ್ನಡ ಕವಿಗಳು ಬಸವಣ್ಣನ ವ್ಯಕ್ತಿತ್ವವನ್ನು ಅವನ ಬದುಕು, ಬರಹ, ಚಿಂತನೆ, ಸಾಧನೆಗಳ ಹಿನ್ನೆಲೆಯಲ್ಲಿ ಗುರುತಿಸಲು ಪ್ರಯತ್ನಿಸಿದ್ದಾರೆ. ಇಲ್ಲಿ ಬಸವಣ್ಣನಿಗೆ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಬಗೆಗೆ ಹೆಮ್ಮೆ ಅಹಂಕಾರಗಳಿಲ್ಲದಿರುವುದು, ರಾಜನ ಆಸ್ಥಾನದಲ್ಲಿ ಮಂತ್ರಿ ಪದವಿಯಲ್ಲಿದ್ದರೂ ಅದರ ಹಂಗಿಲ್ಲದೇ ಬದುಕುವ ಪರಿ, ನಡೆ ನುಡಿಯನ್ನು ಕುರಿತಾದ ಆತ್ಮವಿಮರ್ಶೆ, ಸಾಮಾಜಿಕ-ಧಾರ್ಮಿಕ ಪರಿವರ್ತನೆಗಾಗಿ ಹೋರಾಟವನ್ನು ರೂಪಿಸಿದ್ದು, ಸಮಾನತೆಯ ಕನಸು ಕಂಡಿದ್ದು, ಭಾಷೆಯನ್ನು ದುಡಿಸಿಕೊಂಡು ಕನ್ನಡ ಭಾಷೆ, ಸಾಹಿತ್ಯದಲ್ಲಿ ಕ್ರಾಂತಿಕಾರಕ ಬದಲಾವಣೆಗಳಿಗೆ ಕಾರಣವಾದದ್ದು ಮುಂತಾದ ವಿಶಿಷ್ಟ ಅಂಶಗಳನ್ನು ಮುನ್ನೆಲೆಗೆ ತರುವ ಮೂಲಕ ಅವನ ಬದುಕಿನ ಸಾರ್ಥಕತೆಯನ್ನು ಗುರುತಿಸಲು ಪ್ರಯತ್ನಿಸಿದ್ದಾರೆ.

ಬಸವಣ್ಣನ ವ್ಯಕ್ತಿತ್ವದ ಬಹುಮುಖ್ಯ ಸಾಧನೆ ಅವನು ವೈದಿಕ ಪರಂಪರೆಗೆ ಮುಖಾಮುಖಿಯಾದದ್ದು ಹಾಗೂ ಅದುವರೆಗಿನ ಧಾರ್ಮಿಕ ಪರಂಪರೆಯ ಹಿಡಿತದಿಂದ ಜನರನ್ನು ಹೊರತರಲು ಪ್ರಯತ್ನಿಸಿದ ವಿಧಾನಕ್ಕೆ ಸಂಬಂಧಿಸಿದ್ದು. ಬಸವಣ್ಣ ತನ್ನ ಸಮಕಾಲೀನ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಶ್ರೇಣೀಕೃತ ವರ್ಣ ವ್ಯವಸ್ಥೆ, ಜಾತಿ,

'ಪರ'ದ ಬಗೆಗಿನ ಚಿಂತನೆಗಳಿಗೆ ವಿರುದ್ಧವಾಗಿ ಕಾಯಕ ಜೀವಿಗಳ ಸಮಸಮಾಜದ ನಿರ್ಮಾಣವನ್ನು, ಇಹದ ಬದುಕಿನ ಮಹತ್ವವನ್ನು, ಇಹದಲ್ಲೇ ಬದುಕಿನ ಸಾರ್ಥಕತೆಯನ್ನು ಕಾಣುವ ಬಗೆಯನ್ನು ತೋರಿಸಿಕೊಟ್ಟನು. ಇವು ಕನ್ನಡದ ಕವಿಗಳು ಬಸವಣ್ಣನನ್ನು ಮೆಚ್ಚಲು ಕಾರಣವಾದ ಬಹುಮುಖ್ಯ ಅಂಶಗಳಾಗಿವೆ. ಬಸವಣ್ಣನ ಬದುಕಿನ ಈ ಮಾದರಿಯನ್ನು ಅನೇಕ ಕವಿಗಳು ತಮ್ಮದೇ ಆದ ರೀತಿಯಲ್ಲಿ ಮತ್ತೆ ಮತ್ತೆ ಚರ್ಚಿಸುವುದರ ಮೂಲಕ ಏಕೆ ಬಸವಣ್ಣ ಮುಖ್ಯ ಎಂಬುದನ್ನು ತಿಳಿಸಲು ಪ್ರಯತ್ನಿಸಿದ್ದಾರೆ.

ಅಂದಿನ ಸಮಾಜದಲ್ಲಿ ಜಾತಿ ಶ್ರೇಣೀಕರಣವು ಶೋಷಣೆಯ ಬಹುಮುಖ್ಯ ಅಸ್ತ್ರವಾಗಿ ಬಳಕೆಯಾಗುತ್ತಿತ್ತು. ದುಡಿಯುವ ಶ್ರಮಿಕ ವರ್ಗ ಜಾತಿಯ ಕಾರಣಕ್ಕೆ ಕೀಳಾಗಿ, ಅಮಾನವೀಯವಾಗಿ ಬದುಕಬೇಕಾಗಿತ್ತು. ಈ ಸಾಮಾಜಿಕ ಕ್ರೌರ್ಯವನ್ನು ಗಮನಿಸಿದ ಬಸವಣ್ಣ ಜಾತಿ ಶ್ರೇಣೀಕರಣವನ್ನು ತೊಡೆದುಹಾಕಿ ಸಮಾನತೆಯ ಸಮಾಜವನ್ನು ನಿರ್ಮಿಸುವ ಸಲುವಾಗಿ ಹೋರಾಟಕ್ಕಿಳಿಯುತ್ತಾನೆ. ಅದಕ್ಕಾಗಿ ವೈದಿಕ ಧರ್ಮ ಹಾಗೂ ಅದರ ಆಧಾರದ ಮೇಲೆ ರಚಿತವಾದ ಸಾಮಾಜಿಕ ರಚನೆಯನ್ನೇ ಬುಡಮೇಲು ಮಾಡಲು ಪ್ರಯತ್ನಿಸಿದ. ಮೊದಲನೆಯದಾಗಿ ವೈದಿಕ ಧರ್ಮಕ್ಕೆ ಎದುರಾಗಿ ಎಲ್ಲಾ ಕೆಳಜಾತಿಯ ಸಮುದಾಯಗಳು ಸಮಾನ ನೆಲೆಯಲ್ಲಿ ಒಂದುಗೂಡಿ ಬದುಕಲು ಅವಕಾಶವಿರುವ ಧರ್ಮ, ಸಮಾಜವನ್ನು ಹುಟ್ಟುಹಾಕಲು ಪ್ರಯತ್ನಿಸಿದನು. ಜಾತಿಯನ್ನು ತೊಡೆದು ಹಾಕಲು ಅಂತರ್ಜಾತೀಯ ವಿವಾಹವನ್ನು ಮಾಡಿಸುವ ಕ್ರಾಂತಿಕಾರಕ ಪ್ರಯತ್ನಗಳಿಗೆ ಕೈಹಾಕಿದನು. ತಳ ಸಮೂದಾಯದವರ ಬದುಕಿನ ಘನತೆಯನ್ನು ಎತ್ತಿಹಿಡಿಯುವ ಪ್ರಯತ್ನ ಮಾಡಿದನು. ಈ ಪಲ್ಲಟ 'ಕೀಳುಜಾತಿ' ಎಂದು ಕರೆಕಲ್ಪಡುತ್ತಿದ್ದ ಜನರಲ್ಲಿ ಹೊಸ ಅರಿವನ್ನು ಮೂಡಿಸಿತು. ಸಾಮಾಜಿಕ ಕ್ರಾಂತಿಯಲ್ಲಿ ತೊಡಗುವ ಕಿಡಿಯನ್ನು ಪ್ರತಿಯೊಬ್ಬರ ಆಂತರ್ಯದಲ್ಲಿ ಹೊತ್ತಿಸಿತು. ಇದನ್ನು ಬಸವರಾಜ ಕಲ್ಗುಡಿಯವರು ಈ ರೀತಿ ಗುರುತಿಸುತ್ತಾರೆ. "ತಾನು ನಿರ್ಮಿಸಿದ ಹೊಸ ಶರಣ ಸಮಾಜದಲ್ಲಿ ತನ್ನ ಆಶಯಗಳು ಈಡೇರಬೇಕಾದರೆ ತನ್ನ ಕನಸಿನ ಸಮಾಜ ಸಾಕಾರಗೊಳ್ಳಬೇಕಾದರೆ ಸಾಮಾಜಿಕ ವ್ಯಕ್ತಿತ್ವಗಳು ಬಹುಮುಖ್ಯ. ಹಾಗಾಗಿ ವ್ಯಕ್ತಿಯ ವ್ಯಕ್ತಿತ್ವ ಸುಧಾರಣೆ ಹಾಗೂ ರೂಪಿಸುವಿಕೆ ಬಹುದೊಡ್ಡ ಜವಾಬ್ದಾರಿಯಾಗಿ ಕಂಡಿದೆ ಬಸವಣ್ಣನಿಗೆ. ಹಾಗಾಗಿ ಸ್ವತಃ ತನ್ನ ವ್ಯಕ್ತಿತ್ವದ ಓರೆಕೋರೆಗಳನ್ನು ತಿದ್ದಿಕೊಳ್ಳುವ, ಆತ್ಮಾವಲೋಕನದಲ್ಲಿ ತೊಡಗುವ ಬಸವಣ್ಣ ಶರಣರಲ್ಲಿ ವ್ಯಕ್ತಿತ್ವ ಶುದ್ಧತೆಗೆ ಒತ್ತು ನೀಡುತ್ತಾನೆ. ಅಂತರಂಗ ಬಹಿರಂಗ ಶುದ್ಧತೆ, ನಿಜವಾದ ಭಕ್ತನ ಲಕ್ಷಣ. ಈ ಶುದ್ಧತೆಯಿಲ್ಲದವರು ಭಕ್ತಸಮಾಜದ ಹೊರಗಿನ ಭವಿಗಳು. ಬಸವಣ್ಣ ನಿರ್ಮಿಸ ಹೊರಟ ಸಮಾಜದಲ್ಲಿ ಭಕ್ತ ಮತ್ತು ಭವಿ ಎಂಬ ಎರಡು ವರ್ಗಗಳನ್ನು ಕಾಣುತ್ತೇವೆ. ಶರಣ ಧರ್ಮವನ್ನು ನಿರಾಕರಿಸಿದವರು ಭವಿಗಳಾಗುತ್ತಾರೆ. ಭಕ್ತನಾದವನು ಶರಣ ಸಂಸ್ಕೃತಿಯ ಶರತ್ತುಗಳನ್ನು ಪಾಲಿಸಲೇಬಾಕಾಗುತ್ತದೆ. ಶೋಷಣೆ ರಹಿತ, ಅಪರಾಧ ರಹಿತ, ಹಿಂಸಾ ರಹಿತ ಸಮಾಜದ ಕನಸು ಬಸವಣ್ಣನದು. ಅದನ್ನು ಸಾಕಾರಗೊಳಿಸುವ ಪ್ರಯತ್ನದಲ್ಲಿ ಸ್ವತಹ ತೊಡಗಿದ ಹಾಗೂ ಅದರ ಎಲ್ಲಾ ಸಾಧಕ ಬಾಧಕಗಳನ್ನು, ಸಂಘರ್ಷಗಳನ್ನು ಅನುಭವಿಸಿದ ವ್ಯಕ್ತಿತ್ವ ಬಸವಣ್ಣನದು"[೮]. ಎಂಬ ಮಾತುಗಳು ಬಸವಣ್ಣನ ತಳಸಮುದಾಯಗಳನ್ನು ಸಂಘಟಿಸುವ ಪರಿಶ್ರಮದ ಹಿಂದಿನ ಸಮಾನತೆಯ ಸಮಾಜ ನಿರ್ಮಾಣದ ಕನಸುಗಳನ್ನು ಧ್ವನಿಸುತ್ತದೆ. ಹಾಗೆಯೇ ಬಸವಣ್ಣನ ವ್ಯಕ್ತಿತ್ವದ ಬಹುಮುಖತೆಯನ್ನೂ, ಅನನ್ಯತೆಯನ್ನು ಸಮರ್ಥವಾಗಿಯೇ ಹಿಡಿದಿಡುತ್ತದೆ.

ವರ್ಣಾಶ್ರಮ ವ್ಯವಸ್ಥೆಯ ವಿರೋಧ ಮತ್ತು ವಿಜ್ಞಾನ – ವೈಚಾರಿಕತೆಯನ್ನು ತಮ್ಮ ಒಟ್ಟು ತಾತ್ವಿಕತೆಯ ಒಂದಂಶವಾಗಿ ಪರಿಗಣಿಸಿರುವ ಕುವೆಂಪು ಬಸವಣ್ಣನ ವ್ಯಕ್ತಿತ್ವದ ಅನನ್ಯತೆಯನ್ನು ಹಿಡಿದಿಡುವ ಪರಿ ವಿಶಿಷ್ಟವಾದುದು. ಬಸವಣ್ಣನನ್ನು ವ್ಯವಸ್ಥೆಯ ಬದಲಾವಣೆಗಾಗಿ ಹಂಬಲಿಸಿದ, ಜಾತಿ ಪದ್ಧತಿಯ ನಾಶಕ್ಕಾಗಿ ಹೋರಾಡಿದ, ದಲಿತರಿಗೂ ಅರಿವನ್ನು ನೀಡಿದ 'ಆಧ್ಯಾತ್ಮ ಕ್ರಾಂತಿವೀರ'ನನ್ನಾಗಿ ಗುರುತಿಸುತ್ತಾರೆ. ಬಸವಣ್ಣನ ವ್ಯಕ್ತಿತ್ವವನ್ನು ಅವನ ಒಟ್ಟು ಚಟುವಟಿಕೆಗಳ ಹಿನ್ನೆಲೆಯಲ್ಲಿ ಹಿಡಿದಿಡುವ ಸಮರ್ಥ ಪ್ರಯತ್ನ ಮಾಡಿದೆ. ಕುವೆಂಪುರವರ 'ಶ್ರೀ ಬಸವೇಶ್ವರರಿಗೆ' ಕವಿತೆ ಬಸವಣ್ಣನ ವ್ಯಕ್ತಿತ್ವ ಕುರಿತ ಅತ್ಯಂತ ಪ್ರಮುಖವಾದ ಕವನ.

> ಕಾರ್ತಿಕದ ಕತ್ತಲಲಿ ಆಕಾಶ ದೀಪವಾಗಿ
> ನೀ ಬಂದೆ,
> ಬಟ್ಟೆಗೆಟ್ಟವರಿಗೊಂದು ದೊಂದಿ ದಿಕ್ಕಾಗಿ
> ಎಂಟು ಶತಮಾನಗಳ ಹಿಂದೆ,
> ಅಗ್ನಿ ಖಡ್ಗವನಾಂತ ಓ ಆಧ್ಯಾತ್ಮ ಕ್ರಾಂತಿವೀರ
> ದೇವದಯೆಯೊಂದು ಹೇ ಧೀರಾವತಾರ,
> ಶ್ರೀ ಬಸವೇಶ್ವರಾ!
> ಜಾತಿ ಪದ್ಧತಿಯ ಹೋಮ ಕೂಪಕ್ಕೆ
> ಬಿದ್ದು, ವೈದಿಕರ ಯಜ್ಞತಾಪಕ್ಕೆ
> ಬಲಿವೋದ ದಲಿತ ಜೀವರನೆತ್ತಿ ಮತಿ ವಿಚಾರಕ್ಕೆ,
> ಕಾಯಕದ ದಿವ್ಯ ತತ್ವದ ಸುಕ್ಷೇಮ ಧರ್ಮನಾಕಕ್ಕೆ
> ನಡೆಸಿದ ಮಹಾತ್ಮನೆ, ನಿನಗೆ ನಮೋನಮಃ! [5]

ಎನ್ನುವ ಮೂಲಕ ಬಸವಣ್ಣನ ವ್ಯಕ್ತಿತ್ವದ ಸಮಾಜಮುಖಿ ಚಲನೆಯ ಆಶಯಗಳನ್ನು ಹಿಡಿದಿಡಲು ಪ್ರಯತ್ನಿಸುತ್ತಾರೆ. ನಮ್ಮ ಸಮಾಜದ ದೊಡ್ಡ ಕಳಂಕ ಜಾತಿ ವ್ಯವಸ್ಥೆ. ಇದನ್ನು ತೊಡೆದು ಹಾಕುವುದು ಬಸವಣ್ಣನ ಉದ್ದೇಶವಾಗಿತ್ತು. ಅದಕ್ಕಾಗಿ ವರ್ಣಸಂಕರದ ಅಸ್ತ್ರವನ್ನು ಬಳಸಿದ ಬಸವಣ್ಣ ಅಂತರ್ಜಾತಿಯ ವಿವಾಹವನ್ನು ಜರುಗಿಸುವ ಕ್ರಾಂತಿಕಾರಿ ಕೆಲಸವನ್ನು ಮಾಡುತ್ತಾನೆ. ಕುವೆಂಪು ಇದನ್ನು ಅತ್ಯಂತ ಮಹತ್ವದ ನಡೆ ಎಂದು ಗುರುತಿಸುತ್ತಾರೆ. ಅದರ ಜೊತೆಗೆ ಬಸವಣ್ಣ ಪ್ರತಿಪಾದಿಸಿದ 'ಕಾಯಕ' ಮತ್ತು 'ದಾಸೋಹ'ದ ಪರಿಕಲ್ಪನೆಗಳೂ ಕೂಡ ಶೋಷಿತರನ್ನು ಮುನ್ನೆಲೆಗೆ ತರುವ ಪ್ರಯತ್ನಗಳಾಗಿದ್ದವು ಎಂಬುದನ್ನು ಕವಿತೆ ಗುರುತಿಸುತ್ತದೆ. ಬಸವಣ್ಣ ಪ್ರತಿಪಾದಿಸಿದ 'ಕಾಯಕ ಮತ್ತು ದಾಸೋಹ'ವನ್ನು ಕುರಿತಾದ ಆಲೋಚನೆಗಳು ಸಮಾಜದಲ್ಲಿ ಭ್ರಾತೃತ್ವ, ಸಮಾನತೆಯನ್ನು ತರುವ ಸಲುವಾಗಿ ಜಾರಿಗೆ ತಂದ ವಿಶಿಷ್ಟ ಪ್ರಯತ್ನಗಳಾಗಿದ್ದವು. ದಾಸೋಹ ತತ್ವದಿಂದಾಗಿ ಎಲ್ಲಾ ಶ್ರಮಿಕ ವರ್ಗದವರೂ ತಮ್ಮ ಪ್ರಾಮಾಣಿಕ ದುಡಿಮೆಯ ಒಂದಂಶವನ್ನು ಸಮುದಾಯದ ಒಳಿತಿಗಾಗಿ ನೀಡುತ್ತಿದ್ದರು. ಇದು ಶರಣ ಸಮಾಜದ ಆರ್ಥಿಕ ಸ್ವಾವಲಂಬನೆಗೆ ಕಾರಣವಾಯಿತು. ಹಾಗಾಗಿಯೇ ಪ್ರಬಲ ಪ್ರಭುತ್ವ ಹಾಗೂ ವೈದಿಕ ಸಮಾಜಕ್ಕೆ ಶರಣ ಸಮಾಜ ಸೆಡ್ಡುಹೊಡೆಯಲು ಸಾಧ್ಯವಾದದ್ದು ಎಂಬುದನ್ನು 'ಸುಕ್ಷೇಮ ಧರ್ಮನಾಕಕ್ಕೆ ಕರೆದೊಯ್ದ ಮಹಾತ್ಮ' ಎಂಬ ಸಾಲುಗಳು ಅರ್ಥಪೂರ್ಣವಾಗಿ ಹಿಡಿದಿಡುತ್ತವೆ. ಈ ದಾಸೋಹದಲ್ಲಿ ಎಲ್ಲ ಜಾತಿಯ ಶ್ರಮಿಕರು ಸಮಾನವಾಗಿ ಬದುಕುವ, ಹಂಚಿ ಉಣ್ಣುವ, ಭೇದಗಳನ್ನು ಭಗ್ನಗೊಳಿಸುವ ವಿಶಿಷ್ಟ ಪ್ರಯತ್ನಗಳನ್ನು ಮಾಡುತ್ತಾರೆ. ಇದು ಹೊಸ ಸಾಮಾಜಿಕ ವ್ಯವಸ್ಥೆಗೆ ನಾಂದಿಹಾಡಿತು. ಶೋಷಣೆಯಿಲ್ಲದ, ಭಿನ್ನಾಭಿಪ್ರಾಯವಿಲ್ಲದ, ತಾರತಮ್ಯವಿಲ್ಲದ, ಹೆದರಿಕೆಗಳಿಲ್ಲದ ಸ್ವಾಭಿಮಾನೀ ಸಮಾಜ ನಿರ್ಮಾಣದ ಕನಸು ಅದು ಎಂಬುದನ್ನು ಕುವೆಂಪು ಅವರ 'ಶ್ರೀ ಬಸವೇಶ್ವರರಿಗೆ' ಕವನ ಸಮರ್ಥವಾಗಿ

ಹಿಡಿದಿಡುತ್ತದೆ. ಜೊತೆಗೆ ಇಂತಹ ಸಮಾಜ ನಿರ್ಮಾಣದ ಕನಸನ್ನು ಕಂಡ, ಅದಕ್ಕಾಗಿ ಶ್ರಮಿಸಿದ ಬಸವೇಶ್ವರರಿಗೆ ತನ್ನ ಹೃದಯಪೂರ್ವಕ ವಂದನೆಗಳನ್ನು ಸಮರ್ಪಿಸುತ್ತಾರೆ.

ಕುವೆಂಪುರವರ 'ಶ್ರೀ ಬಸವೇಶ್ವರಿಗೆ' ಕವನ ಕೇವಲ ಬಸವಣ್ಣನ ವ್ಯಕ್ತಿತ್ವಕ್ಕೆ ನುಡಿನಮನಗಳನ್ನು ಸಲ್ಲಿಸುವ ನೆಲೆಗೆ ಮಾತ್ರ ನಿಂತುಬಿಡುವುದಿಲ್ಲ. ಅದು ಬಸವಣ್ಣನ ಸಮಾಜಮುಖಿ ಚಲನೆಯ ಹಿಂದಿನ ಏಳುಬೀಳುಗಳನ್ನು ಹಿಡಿದಿಡುತ್ತಲೆ, ತನ್ನೆಲ್ಲಾ ಮಿತಿಗಳ ನಡುವೆಯೂ ಕೂಡ ಬಸವಣ್ಣ ಏಕೆ ಮುಖ್ಯ ಎಂಬುದನ್ನು ಗಟ್ಟಿಯಾಗಿ ಕಟ್ಟಿಕೊಡಲು ಪ್ರಯತ್ನಿಸುತ್ತದೆ. ಜೊತೆಗೆ ಏನೆಲ್ಲಾ ಅವಕಾಶಗಳಿದ್ದರೂ, ದಾರಿತೋರುವ ಮಾರ್ಗದರ್ಶಕನಾಗಿ ನೀನಿದ್ದರೂ ನಾವು ನಿನ್ನೆತ್ತರಕ್ಕೆ ಏರಲಾರೆವು ಎನ್ನುವ ಆತ್ಮವಿಮರ್ಶೆಯೂ, ಅದರ ಬಗೆಗೆ ತೀವ್ರ ವಿಷಾಧವೂ ಕವನದಲ್ಲಿ ಮೂಡಿಬಂದಿದೆ. ಹಾಗಾಗಿಯೇ 'ಮತದ ಉಸುಬಿಗೆ ಸಿಲುಕಿ ತತ್ತರಿಸುತ್ತಿರುವ' ನಮ್ಮನ್ನು ಉದ್ಧರಿಸಲು ಬಸವಣ್ಣನೇ ಮತ್ತೊಮ್ಮೆ ಅವತರಿಸಬೇಕು ಎಂಬ ಭಿನ್ನಹವೂ, ಅದರಿಂದಾದರೂ 'ವಿಜ್ಞಾನ ವೇದಾಂತ ತೀರ್ಥದಿಂದ ಶುಚಿಗೊಂಡ' ಹೊಸ ಸಮಾಜ ನಿರ್ಮಾಣವಾಗಬಹುದೆಂಬ ಆಶಾವಾದವೂ ವ್ಯಕ್ತವಾಗುತ್ತದೆ.

ಜಿ.ಎಸ್.ಎಸ್. 'ಬಸವಣ್ಣನವರಿಗೆ' ಕವಿತೆಯಲ್ಲಿ ಬಸವಣ್ಣನನ್ನು ಜನರ ನಡುವೆಯೇ, ಸಾಮಾಜಿಕ ಸಮಸ್ಯೆಗಳ ನಡುವೆಯೇ ಇದ್ದು ತನ್ನ ಬದುಕನ್ನು ಉನ್ನತೀಕರಿಸಿಕೊಂಡ 'ಸಾಧಕವೀರ'ನನ್ನಾಗಿ, ಆತ್ಮಾವಲೋಕನದಿಂದ ಆತ್ಮಶುದ್ಧಿಯ ಶಿಖರಕ್ಕೇರಿದ ಪರಿಶುದ್ಧ ವ್ಯಕ್ತಿತ್ವವಾಗಿ ಗ್ರಹಿಸುತ್ತಾರೆ. ಬಸವಣ್ಣನಂತೆ ಏನೆಲ್ಲಾ ಸಾಧಿಸಿದ ವ್ಯಕ್ತಿಗಳು ಹಲವರಿದ್ದರೂ ಅವರೆಲ್ಲರಿಗಿಂತ ಬಸವಣ್ಣ ಹೇಗೆ ಭಿನ್ನ ಹಾಗೂ ಮುಖ್ಯ ಎಂಬುದನ್ನು ಗುರುತಿಸುತ್ತಾರೆ.

> ನೀನಲ್ಲ ಏಕಾಂಗಿ ; ನೀನಲ್ಲ ಯಾವುದೋ ದೂರ
> ಗುಹಾವಾಸದೇಕಾಂತದಲಿ ಬದುಕಿದ ಸಿದ್ಧ ಉರ
> ದುದ್ದ ಶಿರದುದ್ದವಾದ ನಾನಾವರ್ಣಗಳ ಸಂಸಾರ
> ದಲೆಗಳ ನಡುವೆ ಹೋರಾಡುತ್ತಲೇ ನಿಂತ ಸಾಧಕವೀರ
> ನೀನು, ಅಧಿಕಾರ ಐಶ್ವರ್ಯಗಳ ನಾಯಿ ಕೂಗಿನ ನಡುವೆ
> ಪರಮ ಸುಜ್ಞಾನಿಗಳ ನಡುವೆ
> ಮತ ಮೌಢ್ಯಗಳ ನಡುವೆ ಸದ್ದಿರದೆ ಕೈ ಮುಗಿದು
> ನಿಂತ ದೀಪದ ಕಂಬ . . . ."[೧೦]

ಇಲ್ಲಿ ಜಿ.ಎಸ್.ಎಸ್. ಬಸವಣ್ಣನನ್ನು ಏಕಾಂಗಿಯಾಗಿ, ಗುಹೆಯ ಏಕಾಂತ ವಾಸವನ್ನು ಬಯಸದೆ, ಶಿರದುದ್ಧ, ಉರದುದ್ಧ ಇದ್ದ ಸಂಸಾರದಲೆಗಳ ನಡುವೆ ಹೋರಾಡುತ್ತಲೇ ನಿಂತ ಸಾಧಕವೀರನೆಂದು ಗುರುತಿಸುತ್ತಾರೆ. ಏಕೆಂದರೆ ಬಸವಣ್ಣ ತನ್ನ ಹೋರಾಟವನ್ನು ತನ್ನ ಬದುಕಿನ ಭಾಗವಾಗಿಯೇ ಆರಂಭಿಸಿದವನು. ಆ ಹೋರಾಟಕ್ಕಾಗಿ ಸಂಸಾರ ಹಾಗೂ ಸಮುದಾಯದ ಸಂಬಂಧಗಳನ್ನು ಕಳಚಿಕೊಂಡು ಹೋದವನಲ್ಲ. ಅವೆಲ್ಲವುಗಳ ನಡುವೆ ಹೋರಾಡುತ್ತಲೇ ತನ್ನ 'ಹೋರಾಟದ' ಹಾದಿಯನ್ನು ಕಂಡುಕೊಂಡವನು. ಬಸವಣ್ಣ ತನ್ನ ಬದುಕಿನುದ್ದಕ್ಕೂ ಸಂಸಾರ, ಸಮಾಜ ಸುಧಾರಣೆ ಹಾಗೂ ಆಧ್ಯಾತ್ಮ ಸಾಧನೆಯಲ್ಲಿ ಸಮತೋಲನವನ್ನು ಕಾಯ್ದುಕೊಂಡು ಬಂದವನು. ವೈದಿಕ ಧರ್ಮ ಸಂಸಾರವನ್ನು ಬಂಧನವೆಂದು ಗುರುತಿಸಿದರೆ ಬಸವಣ್ಣ ಅದರೆಲ್ಲಾ ಏಳು ಬೀಳುಗಳ ನಡುವೆಯೇ ತನ್ನ ಅಸ್ತಿತ್ವವನ್ನು ಗುರುತಿಸಿಕೊಂಡ ಸಾಧಕ ಎಂಬುದನ್ನು ಕವಿ ಗುರುತಿಸುತ್ತಾರೆ. ಇಲ್ಲಿ 'ಶಿರದುದ್ದ' 'ಉರದುದ್ಧ' ಮತ್ತು 'ನಾನಾವರ್ಣಗಳ ಸಂಸಾರದಲೆಗಳು' ಎಂಬ ಪದಗಳು

ಬಸವಣ್ಣನ ಎದುರಿಗಿದ್ದ ಸವಾಲುಗಳ ತೀವ್ರತೆಯನ್ನು, ಎಡರು ತೊಡರುಗಳನ್ನೂ, ಅವುಗಳ ಪ್ರಾಬಲ್ಯವನ್ನೂ ಧ್ವನಿಸುತ್ತಲೆ ಅವನು ಅವುಗಳನ್ನು ಮೀರಿದ ಬಗೆಯನ್ನೂ ಕವಿತೆ ಹಿಡಿದಿಡುತ್ತದೆ. ಮುಂದುವರೆದು ಕವನ ಬಸವಣ್ಣನ ಸಮಕಾಲೀನ ಸನ್ನಿವೇಶವನ್ನು ಕಟ್ಟಿಕೊಡಲು ಪ್ರಯತ್ನಿಸುತ್ತದೆ. ಬಸವಣ್ಣನ ಸುತ್ತ ಅಧಿಕಾರ, ಐಶ್ವರ್ಯಗಳಿಂದ ಕೂಡಿದ ಜನರೂ, ಮತ ಮೌಢ್ಯಗಳನ್ನು ನಂಬಿ ಆಚರಿಸುತ್ತಿದ್ದ ಸಾಮಾನ್ಯ ಜನರು ಮಾತ್ರ ಇರಲಿಲ್ಲ. ಜಾತಿ, ಧರ್ಮ, ಅಹಂಕಾರಗಳ ಅಂಧಕಾರದಲ್ಲಿ ಮುಳುಗಿದ್ದ 'ಸುಜ್ಞಾನಿ'ಗಳನ್ನು ಎದುರುಗೊಳ್ಳಬೇಕಾದ ಪರಿಸ್ಥಿತಿ ಕೂಡ ಬಸವಣ್ಣನದಾಗಿತ್ತು. ಇಷ್ಟೆಲ್ಲಾ ಸಂಕಷ್ಟಗಳ ನಡುವೆಯೂ ಬಸವಣ್ಣ ಅದನ್ನು ಮೀರಿದ ಪರಿ ವಿಶಿಷ್ಟವಾದದ್ದು. ಅದನ್ನು ಕವಿ 'ಸದ್ದಿರದೆ ನಿಂತ ದೀಪದ ಕಂಬಕ್ಕೆ' ಹೋಲಿಸಿದ್ದಾರೆ. ಇಲ್ಲಿ ದೀಪದ ಕಂಬದ ಹೋಲಿಕೆ ಅದರ ದೃಢತೆಯನ್ನು ಸಾರುತ್ತಲೇ ತನ್ನ ಸುತ್ತಲಿನ ಪರಿಸರವನ್ನು ಹಮ್ಮುಬಿಮ್ಮುಗಳಿಲ್ಲದೆ ಬೆಳಗುವ ವೈಶಿಷ್ಟ್ಯವನ್ನೂ ಎತ್ತಿಹಿಡಿಯುತ್ತದೆ. ದೀಪದ ಕಂಬದ ನಿರ್ಭಿಡತೆ, ನಿಶ್ಚಿಂತತೆ ಹಾಗೂ ತನ್ನ ಸುತ್ತಲನ್ನು ಬೆಳಗುವ ಪ್ರಶಾಂತತೆ ಬಸವಣ್ಣನ ವ್ಯಕ್ತಿತ್ವದ ಬಹುಮುಖತೆಯನ್ನೂ, ಅನನ್ಯತೆಯನ್ನೂ ಧ್ವನಿಸುತ್ತದೆ. ಈ ಕವನದಲ್ಲಿ ಕವಿ ಬಸವಣ್ಣನ ವ್ಯಕ್ತಿತ್ವದ ಎರಡು ಮುಖ್ಯ ಗುಣಗಳನ್ನು ಗುರುತಿಸುತ್ತಾರೆ. ಮೊದಲನೆಯದು ಬಸವಣ್ಣನ ಹೋರಾಟದ ಕ್ರಮವನ್ನು ಕುರಿತಾದದ್ದು. ಎರಡನೆಯದು ಅದನ್ನು ಮುನ್ನಡೆಸುವ ಹಾದಿಗೆ ಸಂಬಂಧಿಸಿದ್ದು. ಇವೆರಡನ್ನೂ ಬಸವಣ್ಣ ಸಮೀಕರಿಸಿಕೊಂಡು ಮುನ್ನಡೆದ ಬಗೆ ಅವನ ವ್ಯಕ್ತಿತ್ವಕ್ಕೊಂದು ವಿಶಿಷ್ಟತೆಯನ್ನು ತಂದುಕೊಡುತ್ತದೆ ಎಂಬುದನ್ನು ಜಿ.ಎಸ್.ಎಸ್. ಗುರುತಿಸಿದ್ದಾರೆ.

ಬಸವಣ್ಣನ ವ್ಯಕ್ತಿತ್ವದ ಮಹತ್ವದ ಗುಣವೆಂದರೆ 'ಆತ್ಮಾವಲೋಕನ' ಅಥವಾ 'ಆತ್ಮವಿಮರ್ಶೆ'ಗೆ ಸಂಬಂಧಿಸಿದ್ದು. ವ್ಯಕ್ತಿ ಮಹಾತ್ಮನಾಗಿ ರೂಪುಗೊಳ್ಳುವ ಬಗೆ ಇದು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಪ್ರತಿಯೊಂದು ನಡೆಯನ್ನೂ ಹೀಗೆ ವಿಮರ್ಶಿಸಿಕೊಳ್ಳುವ ಮೂಲಕ ಎತ್ತರಕ್ಕೆ ಏರಲು ಸಾಧ್ಯ. ಆದರೆ ಈ ಗುಣ ಎಲ್ಲರಲ್ಲೂ ಸಿಗುವುದು ಸಾಧ್ಯವಿಲ್ಲ. ಯಾರೋ ಕೆಲವು ವ್ಯಕ್ತಿಗಳು ಮಾತ್ರ ತಾನು ಮಾಡಿದ ಕಾರ್ಯ ಮತ್ತು ಅದರ ಫಲಗಳನ್ನು ಕುರಿತು ಪುನರಾವಲೋಕಿಸುತ್ತಾ, ಅದರ ಸಾಧಕ ಬಾಧಕಗಳನ್ನು ಕುರಿತು ಚಿಂತಿಸುತ್ತಾ ವಿಕಾಸಶೀಲವಾಗಿ ಬೆಳೆಯಲು ಪ್ರಯತ್ನಿಸುತ್ತಾರೆ. ಹಾಗಾದಾಗ ಮಾತ್ರ ಅವರ ವ್ಯಕ್ತಿತ್ವಕ್ಕೊಂದು ನಿರ್ದಿಷ್ಟ ತಾತ್ವಿಕ ಭಿತ್ತಿ ಸಿಗಲು ಸಾಧ್ಯ. ಆದರೆ ತನ್ನ ತಪ್ಪನ್ನು ಒಪ್ಪಿ ತಿದ್ದಿ ನಡೆಯುವುದು ಸಾಮಾನ್ಯವಾದ ಕೆಲಸವಲ್ಲ. ಎಂತಹ ಅಸಾಮಾನ್ಯ ವ್ಯಕ್ತಿಯಾದರೂ ಕೂಡ ಸಮುದಾಯದೆದುರು ತನ್ನ ತಪ್ಪನ್ನು ಒಪ್ಪಿ ತಿದ್ದಿಕೊಳ್ಳುವ ಪ್ರಾಮಾಣಿಕತೆಯನ್ನು ಮೆರೆಯುವುದು ವಿರಳ. ಆದರೆ ಇದು ಬಸವಣ್ಣನ ವ್ಯಕ್ತಿತ್ವದ ಭಾಗವಾಗಿದ್ದದ್ದನ್ನು ಜಿ.ಎಸ್.ಎಸ್. ಗುರುತಿಸುತ್ತಾರೆ.

ಇರಬಹುದು ನಿನಗಿಂತ ದೊಡ್ಡವರು, ಅನುಭಾವದಲ್ಲಿ
ಮೇಲೇರಿ ಬಯಲಾದವರು ; ಇರಬಹುದು
ನಿನಗಿಂತಲೂ ದೊಡ್ಡ ತ್ಯಾಗಿಗಳು, ವಿರಾಗಿಗಳು
ಇರಲಾರರೆಂದೇ ತೋರುತಿದೆ ನಿನ್ನಂತೆ ನಿನ್ನೊಳಗಿನಂಕು-
ಡೊಂಕುಗಳನ್ನು ಕಂಡುಕೊಂಡವರು,
ಇರಲಾರರೆಂದೇ ತೋರುತಿದೆ ನಿನ್ನಂತೆ ಒಳಗು ಹೊರಗುಗಳನ್ನು
ಮುಚ್ಚು ಮರೆಯಿಲ್ಲದೆಯೆ ದಿನವೂ ಬಿಚ್ಚಿಟ್ಟು
ಒಗೆದು ಮಡಿಮಾಡಿ ಇಷ್ಟದೈವದ ಗುಡಿಗೆ ನಡೆ
ಮಡಿಯಾಗಿ ಹಾಸಿದವರು;. . . . . [೧೧]

ಇಲ್ಲಿ ಕವಿ ಬಸವಣ್ಣನ ವ್ಯಕ್ತಿತ್ವದ ಹಿರಿಮೆಯನ್ನು ಗುರುತಿಸಲು ಪ್ರಯತ್ನಿಸಿರುವ ಬಗೆ ವಿಶೇಷವಾದುದು. ಏಕೆಂದರೆ ಸಮಾಜ ಸುಧಾರಣೆಗಾಗಿ ಸದಾ ತುಡಿಯುವ ಮನಸ್ಸುಗಳು ನಮ್ಮ ನಡುವೆ ಹಲವಾರಿವೆ. ಸದಾ ಅದರ ಜಪದಲ್ಲೇ ತಲ್ಲೀನರಾಗಿರುವ, ಅದಕ್ಕಾಗಿ ಸಮಾಜವನ್ನು ವಿಮರ್ಶಿಸುವ ವ್ಯಕ್ತಿಗಳಿಗೇನು ಕಡಿಮೆಯಿಲ್ಲ. ಆದರೆ ಅವರ ನಿಜವಾದ ಕಾಳಜಿ ಕಂಡುಬರುವುದು ಅವರ ಬದುಕಿನ ಕ್ರಮದಲ್ಲಿ. ಬಸವಣ್ಣನ ಬದುಕಿನ ಕ್ರಮ ಇದನ್ನು ಸಾಬೀತುಪಡಿಸುತ್ತದೆ. ಸದಾ ತನ್ನನ್ನು ಸಮರ್ಥಿಸಿಕೊಂಡು ಬೇರೆಯವರೆಡೆಗೆ ಬೆರಳುಮಾಡಿ ತೋರಿಸುವ ಸಮಾಜದೆದುರು ಬಸವಣ್ಣ ಮುಖ್ಯವಾಗುವುದು ತನ್ನ ತಪ್ಪನ್ನು ಅರಿಯಲು ಮತ್ತು ಅದನ್ನು ತಿದ್ದಿಕೊಳ್ಳಲು ಪ್ರಯತ್ನಿಸುವುದರಿಂದ. ಹೀಗೆ ತನ್ನ ವ್ಯಕ್ತಿತ್ವವನ್ನು ನಿರಂತರವಾಗಿ ನಿಕಷಕ್ಕೆ ಒಡ್ಡಿಕೊಂಡ, ಪಾರದರ್ಶಕವಾಗಿ ಎಲ್ಲರೆದುರಿಗೂ ತಿರೆದಿಟ್ಟ ಬಸವಣ್ಣನ ನಡೆ ವಿಶಿಷ್ಟವಾದದ್ದು. ಇದರಿಂದಾಗಿ ಬಸವಣ್ಣನ ಬದುಕಿನ ಕ್ರಮವೇ ಇತರರಿಗೆ ಮಾರ್ಗದರ್ಶಕವಾಗುವ ಸಾಧ್ಯತೆಗಳಿರುವುದರಿಂದ ಈ ಆತ್ಮಾವಲೋಕನ ಕವಿಗೆ ಬಹಳ ಮುಖ್ಯವಾಗಿ ಕಂಡಿದೆ. ಇದು ವ್ಯಕ್ತಿ ಹಾಗೂ ಸಮಾಜದ ಉನ್ನತಿಗೆ, ಸ್ವಾಸ್ಥತೆಗೆ ಅತ್ಯಂತ ಅಗತ್ಯವಾದ ಗುಣ. ವರ್ತಮಾನದಲ್ಲಿ ಇದರ ಮಹತ್ವ ಬಹಳಷ್ಟಿದೆ ಎಂಬುದನ್ನು ಜಿ.ಎಸ್.ಎಸ್. ಗುರುತಿಸುತ್ತಾರೆ

ಬಸವಣ್ಣನ ವ್ಯಕ್ತಿತ್ವದ ಬಹುಮುಖ್ಯ ಗುಣಗಳಲ್ಲಿ ಆಧ್ಯಾತ್ಮ ಮತ್ತು ಲೌಕಿಕವನ್ನು ಅಭಿನ್ನವಾಗಿ ಗ್ರಹಿಸುವ ಕ್ರಮ ಕೂಡ ಒಂದು. ಬಸವಣ್ಣ ಆಧ್ಯಾತ್ಮ ಸಾಧನೆಗಾಗಿ ಎಲ್ಲವನ್ನೂ ತೊರೆದು ಹೋದವನಲ್ಲ. ಸಾಮಾಜಿಕ ಸಮಸ್ಯೆಗಳ ನಡುವೆಯೇ ಅವೆಲ್ಲವನ್ನೂ ಎದುರಿಸಿ ನಿಂತು ಸಮುದಾಯದ ಉದ್ಧಾರಕ್ಕಾಗಿ ಹೋರಾಡಿದ 'ಸಾಧಕವೀರ'. ಬದುಕಿಗೆ ಸದಾ ಬೆಳಕಾಗಿ ನಿಂತ 'ದೀಪದ ಕಂಬ' ಆ ದೀಪದ ಕಂಬಕ್ಕೆ ಎಲ್ಲರನ್ನೂ ತನ್ನತ್ತ ಸೆಳೆದುಕೊಳ್ಳುವ ಆಯಸ್ಕಾಂತೀಯ ಶಕ್ತಿಯಿದೆ. ಎಲ್ಲಾ ಕತ್ತಲೆಯನ್ನೂ ತೊಡೆಯುವ, ಎಲ್ಲರ ಬದುಕನ್ನೂ ಹಸನಾಗಿಸುವ ವಿಶ್ವಾಸವಿದೆ. ಹಾಗಾಗಿಯೇ ಆ ಬೆಳಕಿಗೆ ಆಕರ್ಷಿತವಾದ ಶ್ರಮಿಕ ಸಮುದಾಯ ಹೊಸ ಸಮಾಜವಾಗಿ ಒಂದೆಡೆಗೆ ಸೇರಲು ಸಾಧ್ಯವಾಯಿತು ಎಂಬುದನ್ನು ಜಿ.ಎಸ್.ಎಸ್. ಕವನ ಸಮರ್ಥವಾಗಿ ಹಿಡಿದಿಡುತ್ತದೆ.

ಬಸವಣ್ಣನ ವ್ಯಕ್ತಿತ್ವವನ್ನು ಶ್ರೇಷ್ಠ ಬದುಕಿನ ಮೌಲ್ಯವಾಗಿ ಗುರುತಿಸುವ ಪ್ರಯತ್ನವನ್ನೂ ಕೂಡ ಕಾವ್ಯದಲ್ಲಿ ಗುರುತಿಸಬಹುದು. ಏಕೆಂದರೆ ಬಸವಣ್ಣ ಬದುಕಿನ ಶ್ರೇಷ್ಠತೆಗೆ ಹೊಸ ಮಾನದಂಡಗಳನ್ನು ಪ್ರತಿಪಾದಿಸಿದ. ಹಾಗಾಗಿ ಕನ್ನಡ ಕಾವ್ಯ ಬಸವಣ್ಣ ಪ್ರತಿಪಾದಿಸಿದ ಕಾಯಕ, ದಾಸೋಹ, ಭಕ್ತ, ಮಹಾಮನೆಯ ಪರಿಕಲ್ಪನೆಗಳನ್ನು ಶ್ರೇಷ್ಠ ಸಮಾಜ ನಿರ್ಮಾಣದ ಕನಸಾಗಿಯೂ, ಬದುಕಿನ ಶ್ರೇಷ್ಠ ಮೌಲ್ಯವಾಗಿಯೂ ಪರಿಗಣಿಸುತ್ತದೆ. ಈ ನಿಟ್ಟಿನಲ್ಲಿ ಬಸವಣ್ಣ ಸಾರಿದ ಕಾಯಕತತ್ವವನ್ನು ಧರ್ಮವಾಗಿ ಸ್ವೀಕರಿಸಿದ ಶರಣರೇ ಶ್ರೇಷ್ಠರು. ಅವರು ಶಿವನಿಗಿಂತಲೂ ಮಿಗಿಲು ಎನ್ನುವ ಸಿದ್ಧಾಂತಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡುತ್ತಾರೆ. ಅಲ್ಲದೆ ಆಧ್ಯಾತ್ಮವನ್ನು ಬದುಕಿನೊಟ್ಟಿಗೆ ಕಂಡುಕೊಳ್ಳಬೇಕು ಎನ್ನುವ ಬಸವಣ್ಣನ ಸಿದ್ಧಾಂತವನ್ನು ಮತ್ತೆ ಮತ್ತೆ ಚರ್ಚೆಗೆ ಒಳಪಡಿಸುತ್ತಾರೆ. ಪರಿಶುದ್ಧ, ಪ್ರಾಮಾಣಿಕ ಬದುಕಿನಿಂದ ಪ್ರತಿಯೊಬ್ಬ ವ್ಯಕ್ತಿಯೂ ಶರಣನಾಗಲು, ದೈವತ್ವಕ್ಕೇರಲು ಸಾಧ್ಯ. ಅಂತಹ ಹೊಸ ಸಮಾಜ ನಿರ್ಮಾಣದಿಂದ ಬದಲಾವಣೆ ಸಾಧ್ಯ ಎನ್ನುತ್ತಾರೆ ಪು.ತಿ.ನ.

ಜಡಜಂಗಮಕ್ಕೆಲ್ಲ ಶಿವನೆ ಪತಿಯೆನ್ನುತ್ತ
ಜೀವಕರುಣೆಯ ಜನದ ಶ್ರದ್ಧೆಗರೆದಾತ
ನಿರ್ಭಯದೊಳೆಲ್ಲೆಲ್ಲ ಶಿವನ ಹೊತ್ತಲೆದಾತ
ಶಿವಗು ಶಿವನಾಳ್ಗಳೇ ಮಿಗಿಲು ಎಂದಾತ[೧೨]

ಎಂದು ದೇವರು ಮತ್ತು ಭಕ್ತನ ನಡುವಿನ ಅಂತರವನ್ನು ಇಲ್ಲವಾಗಿಸಿದವನು ಬಸವಣ್ಣ ಎನ್ನುತ್ತಾರೆ. ಇದೂ ಕೂಡ ವರ್ಣಾಶ್ರಮ ವ್ಯವಸ್ಥೆಯ ತತ್ವಕ್ಕೆ ಪರ್ಯಾಯವಾದ ತತ್ವ ಪ್ರತಿಪಾದನೆ. ಬಸವಣ್ಣನ ಹೊಸ ಸಮಾಜದ ಕಲ್ಪನೆ ವಿಶಿಷ್ಟವಾದುದು ಮತ್ತು ವೈದಿಕ ಧರ್ಮಕ್ಕೆ ತೀರಾ ಭಿನ್ನವಾದುದು. ಸ್ಥಗಿತಗೊಂಡ ಮತ್ತು ಸಿದ್ಧಮಾದರಿಯ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಬದುಕಿನಲ್ಲಿ ಬಹುದೊಡ್ಡ ಪಲ್ಲಟವನ್ನು ತರಬಯಸಿದ್ದು ಬಸವಣ್ಣನ ಬಹುಮುಖ್ಯ ಸಾಧನೆ. ಈ ಪರಿವರ್ತನೆ ಜೀವಕರುಣೆಯಿಂದ ಕೂಡಿದುದಾಗಿದೆ. ಒಟ್ಟು ಸಮಾಜ, ವ್ಯಕ್ತಿತ್ವಗಳನ್ನು ಜಡತ್ವದಿಂದ ಜಂಗಮತ್ವದೆಡೆಗೆ ಚಲಿಸುವಂತೆ ಮಾಡಿದ್ದು ಬಸವಣ್ಣನ ವ್ಯಕ್ತಿತ್ವದ ಹಿರಿಮೆ ಎಂದು ಕವಿತೆ ಗುರುತಿಸುತ್ತದೆ.

ಕನ್ನಡ ಕಾವ್ಯ ಕಟ್ಟಿಕೊಡುವ ಬಸವಣ್ಣನ ವ್ಯಕ್ತಿತ್ವದ ಮತ್ತೊಂದು ಪ್ರಮುಖ ಅಂಶ ಅವನ ಗುಣ, ನಡತೆಗೆ ಸಂಬಂಧಿಸಿದ್ದು. ಬಸವಣ್ಣನ ವ್ಯಕ್ತಿತ್ವದ ಹಿರಿಮೆಗೆ ಅವನ ಗುಣ ನಡತೆಗಳು ಹೇಗೆ ಕಾರಣವಾದವು ಎಂಬುದನ್ನು ಕನ್ನಡ ಕವಿಗಳು ಮತ್ತೆ ಮತ್ತೆ ಚರ್ಚೆಗೆ ಒಳಪಡಿಸುತ್ತಾರೆ. ಬಸವಣ್ಣನ ವ್ಯಕ್ತಿತ್ವದಲ್ಲಿ ಬಿರುಗಾಳಿಯ ಗುಣವಿರುವುದನ್ನು, ಈ ನೆಲದ ಸಾಂಸ್ಕೃತಿಕ ಸ್ಥಿತಿಗತಿಗಳು ಬಸವಣ್ಣನ ಅವತಾರಕ್ಕೆ ಹಂಬಲಿಸುತ್ತಿದ್ದವು ಎಂಬುದನ್ನು ರಂ. ಶ್ರೀ. ಮುಗಳಿ ಗುರುತಿಸುತ್ತಾರೆ. ಅವರ 'ಬಸವನೆಂಬ ಹೆಸರಿನ ಈ ಬಿರುಗಾಳಿ' ಕವನ ೧೨ನೇ ಶತಮಾನದ ಸಾಮಾಜಿಕ, ಧಾರ್ಮಿಕ ಜಡತ್ವವನ್ನು ತೊಡೆದು ಹಾಕಲು ಪ್ರಯತ್ನಿಸಿದ ಬಸವಣ್ಣನ ಸುಧಾರಕ ವ್ಯಕ್ತಿತ್ವವನ್ನು ಹಿಡಿದಿಡಲು ಪ್ರಯತ್ನಿಸುತ್ತದೆ.

> ಬೇಸಗೆಯ ನಟ್ಟನಡುಗಾಲದಲ್ಲಿ ಬಿಸಿಲೇರುತಿತ್ತು
> ನಸು ಕೂಡ ಮಿಸುಕಾಡದಲೆ ಗಾಳಿಯೂ ಮಲಗಿತ್ತು
> . . . . . . . . . . . . . . . .
> ತುಳಿ ತುಳಿದ ಹಾದಿಯನೆ ಹಿಡಿದು
> ತನ್ನಾತ್ಮಸಾಕ್ಷಿಯನೆ ತುಳಿದು
> . . . . . . . . . . . . . . . . . . .
> ಪ್ರಳಯಸಮ ಘೋರ ನೀರವತೆ ಸಾರಿತ್ತು
> ಅನಾಯಕತೆ ದೊರೆಯಾಗಿ ಆಳುತಿತ್ತು
> ಅಸಹಾಯಕತೆ ಅಡಿಯಾಳಾಗಿ ಬಾಳುತಿತ್ತು [೧೩]

ಇಲ್ಲಿ 'ನಡುಗಾಲದ ಬಿಸಿಲು' 'ಮಿಡುಕಾಡದ ಗಾಳಿ' 'ತನ್ನಾತ್ಮಸಾಕ್ಷಿಯನೆ ತುಳಿದು ಬದುಕುವ' ವಿಧಾನ ಆ ಸಮಾಜದ ಪ್ರಕ್ಷುಬ್ಧತೆಯನ್ನೂ, ವಿಚಾರ ಹೀನ ಆಚರಣೆಗಳನ್ನು ಏಕಕಾಲಕ್ಕೆ ಧ್ವನಿಸುತ್ತದೆ. ಹಾಗಾಗಿ ಇಡೀ ವ್ಯವಸ್ಥೆಯೇ ಪ್ರಕ್ಷುಬ್ದಗೊಂಡು ತನ್ನ ಉದ್ಧಾರಕ್ಕಾಗಿ ಬಸವಣ್ಣನ ಬರವಿಗಾಗಿ ಹಾತೊರೆಯುತ್ತಿತ್ತು. ಇಂತಹ ಸಂದರ್ಭದಲ್ಲಿ ಅವತಾರವೆತ್ತಿದ ಬಸವಣ್ಣ ಕೊಳೆತುನಾರುತ್ತಿರುವ, ಜಡಗೊಂಡ, ಪ್ರಕ್ಷುಬ್ದಗೊಂಡ ವಾತಾವರಣದ ಎಲ್ಲ ಕೊಳೆಗಳನ್ನು ಕೊಚ್ಚುವಂತೆ ಮಾಡಲು ಹೊಸ ಸಂಚಲನವನ್ನು ಮೂಡಿಸಲು ಬಿರುಗಾಳಿಯ ಹಾಗೆ ಅವತರಿಸಿದ ಎನ್ನುತ್ತಾರೆ. ಇಂತಹ ಅವತಾರ ಸಾಮಾನ್ಯವಾದುದಲ್ಲ. ತನ್ನ ಸುತ್ತಲಿನದೆಲ್ಲಕ್ಕೂ ಚೈತನ್ಯವನ್ನು ತುಂಬುವ, ಹೊಸ ಬಾಳಿನ ಏಳಿಗೆಗೆ ದುಡಿಯುವ ಸ್ವರೂಪದ್ದು. ಈ ಬಗೆಯ ಆಶಾವಾದವೆ ಕವಿಗೆ ಬಸವಣ್ಣನ ಆಗಮನ ಬಿರುಗಾಳಿಯಂತೆ ಕಂಡಿದೆ. ಹಾಗಾಗಿಯೇ ಸಕಾರಣವಾದ ಆಶಾವಾದವೊಂದು ಇವರ ಕವನದ ಆರಂಭದಲ್ಲಿ ಕಂಡರೂ ಕಡೆಗೆ ಅಂತಹ ಬಿರುಗಾಳಿ ಕೂಡ ಸಮಾಜಿಕ ಸವಾಲುಗಳಿಗೆ ಶಾಶ್ವತವಾದ ಪರಿಹಾರವನ್ನು ಕಂಡುಕೊಳ್ಳುವಲ್ಲಿ ವಿಫಲವಾಯಿತು ಎಂಬುದನ್ನು ಗುರುತಿಸುತ್ತಾರೆ. ಆದರೆ ಅಂದಿನ ಮಟ್ಟಿಗೆ ಬಸವಣ್ಣ ನಡೆದ ಹಾದಿ ಪ್ರಗತಿಪರವಾದದ್ದು ಎಂಬುದನ್ನು ಸ್ಪಷ್ಟವಾಗಿ ಗುರುತಿಸುತ್ತಾರೆ ಮುಗಳಿಯವರು.

ಇಂಥ ಸಮಯದಿ ಬಂತು ಪಂಥವನು ತೊಟ್ಟ ಬಿರುಗಾಳಿ
ಅಶಿವ ನಾಶಕವಾಗಿ ಶಿವನ ವಾಹಕವಾಗಿ
ಮೇಲಿಂದ ಕೆಳಗಿಳಿದು ಕೆಳಗಿಂದ ಮೇಲೇರಿ
ತಾನೆ ತಾನಾಗಿ ಮೆರೆಯುವ ಮರಗಾಳಿ
ಗಿಡ ಮರದ ರೆಂಬೆ ಕೊಂಬೆಗಳ ತೂಗಿಸಿ ತೊನೆದಾಡಿಸಿ
ಕಸದ ಕುಟ್ಟರೆಗಳನ್ನು ಬಾನಿನಾಚೆಗೆ ಓಡಿಸಿ
ಕೊಳೆತುದೆಲ್ಲವನು ಬೇರ್ವೆರಸು ಕಿತ್ತಿ
ಒಳಿತಾದುದೆಲ್ಲವನು ಮೇಲು ಮೇಲಕೆ ಎತ್ತಿ
ಜಡಕೆಲ್ಲ ಚೈತನ್ಯ ಚಿಮ್ಮಿಸುತ
ಹೊಸ ಬಾಳ ನಂಬಿಕೆಯ ಹೊಮ್ಮಿಸುತ "[೧೪]

ಇದು ಕಾವ್ಯಾತ್ಮಕ ನೆಲೆಯಿಂದಲೂ ಕೂಡ ಮುಖ್ಯವಾದ ಕವನಗಳಲ್ಲೊಂದಾಗಿದೆ. ಇಲ್ಲಿ ಬರುವ ಉಪಮೆ, ರೂಪಕಗಳು ವಸ್ತುಸ್ಥಿತಿಯನ್ನು ಹಿಡಿದಿಡುವಲ್ಲಿ ಯಶಸ್ವಿಯಾಗಿವೆ. 'ಮೇಲಿಂದ ಕೆಳಗಿಳಿದು ಕೆಳಗಿಂದ ಮೇಲೇರಿ ತಾನೆ ತಾನಾಗಿ ಮೆರೆಯುವ ಮರಗಾಳಿ' ಎನ್ನುವ ವಾಕ್ಯ ಬಸವಣ್ಣನ ವ್ಯಕ್ತಿತ್ವದ ಜೊತೆಯಲ್ಲಿಯೇ ಅಂದಿನ ಸಾಮಾಜಿಕ ಸ್ಥಿತಿಗತಿಗಳನ್ನು ಕೂಡ ಧ್ವನಿಸುತ್ತದೆ. ಇಲ್ಲಿ 'ಮೇಲಿಂದ ಕೆಳಗಿಳಿಯುವ', 'ಕೆಳಗಿಂದ ಮೇಲೇರುವ', ತಾನೇ ತಾನಾಗಿ ಮೆರೆಯುವ' ಮೂರೂ ಕ್ರಿಯೆಗಳೂ ಕೂಡ ಪರಸ್ಪರ ವಿರುದ್ಧ ಚಲನೆಯನ್ನು ಒಳಗೊಂಡಿರುವಂತಹವುಗಳು. ಆದರೆ ಬಸವಣ್ಣನ ವ್ಯಕ್ತಿತ್ವ ಈ ಮೂರೂ ಗುಣಗಳನ್ನೂ ಏಕಕಾಲಕ್ಕೆ ಸಮೀಕರಿಸಿಕೊಂಡು ಮುನ್ನಡೆಯುವಂತದ್ದು. ಅವನು ಒಂದು ಸಮುದಾಯದ ದೃಷ್ಟಿಯಲ್ಲಿ ಮೇಲೇರುತ್ತಿದ್ದರೆ, ಮತ್ತೊಂದು ಸಮುದಾಯದ ದೃಷ್ಟಿಯಲ್ಲಿ ಕೆಳಗಿಳಿಯುತ್ತಿದ್ದಂತೆ ಭಾಸವಾಗುತ್ತದೆ. ಇದರ ನಡುವೆ ಬಸವಣ್ಣ ತಾನೇ ತಾನಾಗಿ ಸ್ವಯಂಭುವಾಗಿ ವಿಕಾಸ ಹೊಂದುತ್ತಿದ್ದಾನೆ ಎನ್ನುತ್ತಾರೆ ಕವಿ. ಹಾಗಾಗಿಯೇ ಬಸವಣ್ಣನ ವ್ಯಕ್ತಿತ್ವಕ್ಕೊಂದು ಅಗೋಚರ ಹೊರಳು ದೊರೆತಿರುವುದನ್ನು ಕವಿ ಇಲ್ಲಿ ಗುರುತಿಸುತ್ತಾರೆ. ಅದೆಂದರೆ 'ಕಸದ ಕುಟ್ಟರೆಗಳನ್ನು ಬಾನಿನಾಚೆಗೆ ಓಡಿಸುವ', 'ಕೊಳೆತದೆಲ್ಲವನು ಬೇರ್ಪಡಿಸುವ' ಮತ್ತು 'ಒಳಿತಾದುದೆಲ್ಲವನ್ನು ಮೇಲಕ್ಕೆತ್ತುತ್ತಲೇ ಜಡಕೆಲ್ಲ ಚೈತನ್ಯವನ್ನು ತುಂಬಿಸುವ' ಗುಣ ಬಸವಣ್ಣನಲ್ಲಿದೆ ಎಂಬುದು. ಇದು ಬಸವಣ್ಣನ ವ್ಯಕ್ತಿತ್ವದ ಬಹುಮುಖ್ಯ ಗುಣಗಳಲ್ಲೊಂದು. ಮುಗಳಿಯವರು ಇದನ್ನು ಗುರುತಿಸಿರುವ ಬಗೆ ಕೂಡ ವಿಶಿಷ್ಟವಾದದ್ದು. ಇದೇ ಅಂಶಗಳನ್ನು ಸಮರ್ಥಿಸುವಂತೆ ಕಣವಿಯವರು ಬಸವಣ್ಣನನ್ನು 'ನವಮಾನವ' ಎನ್ನುತ್ತಾರೆ. ಹೊಸ ಮನುಷ್ಯತ್ವದ, ಹೊಸ ಸಮಾಜದ ನಿರ್ಮಾತೃ ಬಸವಣ್ಣ. ಆತ ಭಕ್ತಿ- ಜ್ಞಾನ ಕ್ರಿಯೆಯ ರಂಗ. ಭಕ್ತಿ- ಜ್ಞಾನಗಳ ಮೂಲಕ ಬದುಕನ್ನು ಹಸನುಗೊಳಿಸಲು ಶ್ರಮಿಸಿದವರು. ದೇಹ ಮತ್ತು ದೇಗುಲಗಳ ನಡುವಿನ ಅಂತರವನ್ನು ನೀಗಿದವನು. ಅರಿವೇ ಲಿಂಗವೆಂದು ಪ್ರತಿಪಾದಿಸಿದವನು. ಬಸವಣ್ಣ ಈ ನೆಲದ ಗುರು. ಆತನ ಬದುಕು, ಚಿಂತನೆಗಳೇ ದೈವ ಪೂಜೆಯ ಪಾವಿತ್ರ್ಯದಿಂದ ಕೂಡಿದವುಗಳಾಗಿವೆ ಎನ್ನುತ್ತಾರೆ.

ಬಸವಣ್ಣ ಭಕ್ತಿಗೆ ಹೊಸ ಅರ್ಥವನ್ನೂ, ಪರಿಭಾಷೆಯನ್ನೂ ನೀಡಿದಾತ. ಭಕ್ತಿ ಮತ್ತು ದುಡಿಮೆ ಇವೆರಡೂ ಬೇರೆ ಬೇರೆ ಎಂಬ ವೈದಿಕ ಸಿದ್ಧಾಂತವನ್ನು ವಿರೋಧಿಸಿ ದುಡಿಮೆಯೇ ಭಕ್ತಿ, ಬದುಕೇ ಧರ್ಮವೆಂದು ಪ್ರತಿಪಾದಿಸಿ, ಬದುಕುವ ಕ್ರಮದಲ್ಲೇ ಆಧ್ಯಾತ್ಮವನ್ನು ಸಾಧಿಸುವ ದಾರಿಯನ್ನು ತೋರಿಸಿಕೊಟ್ಟವನು. ದುಡಿಮೆ ಮತ್ತು ಬದುಕಿನೊಂದಿಗೆ ಅಂತರವನ್ನು ಕಾಯ್ದುಕೊಂಡ ಭಕ್ತಿ ನಿಷ್ಪ್ರಯೋಜಕ ಎಂಬ ತಿಳಿವನ್ನು ನೀಡಿದವನು. ಹಾಗಾಗಿ ಬಸವಣ್ಣನ ವ್ಯಕ್ತಿತ್ವವನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಅವನ ಭಕ್ತಿ, ದಯೆ, ಧರ್ಮ, ಕಾಯಕ ಮುಂತಾದ ಪರಿಕಲ್ಪನೆಗಳ ಮೂಲಕ ಹಿಡಿದಿಡುವ ವಿಧಾನ ಹೆಚ್ಚು ಮಹತ್ವವನ್ನು ಪಡೆದಿದೆ.

ಭಕ್ತಿಯೆಂದರೆ ದುಡಿಮೆ ದುಡಿಮೆಯೇ ಕೈಲಾಸ
ಎಂದುಸುರಿ ಸರ್ವರಿಗೆ ಇತ್ತೆ ಕಾಯಕ ದೀಕ್ಷೆ
ದಯವೇ ಧರ್ಮದ ಮೂಲ ವಿನಯವೇ ಶಿವನೊಲುಮೆ
ಎಂದುಸುರಿ ಮನೆಮನೆಗೆ ತಂದೆ ಮೋಕ್ಷದ ರಕ್ಷೆ [೧೫]

ಇಹದ ಬದುಕನ್ನು ಮುಖ್ಯ ಎಂದು ಬಗೆದ ಬಸವಣ್ಣ ಇಹದ ಬದುಕಿನ ಸುತ್ತ ಹೆಣೆಯಲಾಗಿದ್ದ ವೈದಿಕ ನಿಯಮಗಳಿಗೆ ಪರ್ಯಾಯವಾಗಿ ಹೊಸ ಪರಿಭಾಷೆಗಳನ್ನು ರೂಪಿಸಿಕೊಟ್ಟನು. "ಭಕ್ತನಾಗಿ ತನ್ನ ಅಸ್ತಿತ್ವವನ್ನು ಅತ್ಯಂತ ವಿಮರ್ಶಾತ್ಮಕ ದೃಷ್ಟಿಯಿಂದ ನೋಡಿಕೊಳ್ಳುವ ಬಸವಣ್ಣನು ಹೇಳುವ 'ಅಷ್ಟವಿಧಾರ್ಚನೆ ಷೋಡಷೋಪಚಾರವ ಮಾಡುವ ಹಮ್ಮಿನಲ್ಲಿ ಬೆಂದೆನಯ್ಯ' ಎಂಬ ಮಾತುಗಳೂ ಸಹ ಅವನು ಸ್ಪಷ್ಟವಾಗಿ ನಿರಾಕರಿಸುವ ಪೊಳ್ಳುತನದ ವ್ಯಕ್ತಿತ್ವದ ನೆಲೆಗಳೇ ಆಗಿವೆ. ತನ್ನ ವ್ಯಕ್ತಿತ್ವದ ಬೆಳವಣಿಗೆಯ ಪ್ರತಿಯೊಂದು ಹಂತದಲ್ಲಿಯೂ ಬಸವಣ್ಣನು ನಡೆಸಿದ ಹೋರಾಟಗಳು, ತನ್ನ ಕಾಲದ ಮನುಷ್ಯನ ಅಸ್ತಿತ್ವವೂ ಹೊಸ ಜೀವನ ಚೈತನ್ಯಗಳೊಡನೆ ಹೊಮ್ಮಬೇಕೆಂಬ ಅವನ ಆಶಯ, ಆತಂಕಗಳು ಅವನನ್ನು ಒಬ್ಬ ಧಾರ್ಮಿಕ ವ್ಯಕ್ತಿಯನ್ನಷ್ಟೇ ಅಲ್ಲ, ತನ್ನ ಕಾಲದ ಬಗ್ಗೆ ಅತ್ಯಂತ ಎಚ್ಚರಿಕೆಯಿಂದಿದ್ದ ಒಬ್ಬ ಪ್ರಜ್ಞಾವಂತ ವ್ಯಕ್ತಿಯನ್ನಾಗಿಯೂ ರೂಪಿಸಿದೆ"[೧೬] ಎನ್ನುವ ಮಾತುಗಳು ಬಸವಣ್ಣನ ವ್ಯಕ್ತಿತ್ವದ ಬಹುಮುಖತೆಯನ್ನು, ಅದರ ವ್ಯಾಪಕತೆಯನ್ನೂ ಧ್ವನಿಸುತ್ತವೆ. ಹಾಗಾಗಿ ಕನ್ನಡ ಕವಿಗಳು ಬಸವಣ್ಣನ ವ್ಯಕ್ತಿತ್ವ, ಅಂತಹ ವ್ಯಕ್ತಿತ್ವದ ಸಾರ್ವಕಾಲಿಕತೆಯನ್ನು, ಪ್ರಸ್ತುತತೆಯನ್ನು ಮತ್ತೆ ಮತ್ತೆ ಚರ್ಚಿಸುವ ಮೂಲಕ ಬಸವಣ್ಣ, ಅವನ ತತ್ವಗಳು ಸಮಕಾಲೀನ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ದ್ವಂದ್ವ- ಗೊಂದಲಗಳಿಗೆ ಉತ್ತರವಾಗಬಲ್ಲವು ಎಂಬ ಅಂಶದ ಕಡೆಗೆ ಗಮನ ಸೆಳೆಯುತ್ತಾರೆ. ಇವು ವಾಸ್ತವದ ತಳಮಳಗಳನ್ನು ನಿವಾರಿಸಬಲ್ಲವು ಎಂಬ ಆಶಾವಾದ ಇಲ್ಲಿ ವ್ಯಕ್ತವಾಗಿದೆ. ಲಂಕೇಶ್ ತಮ್ಮ 'ಅಣ್ಣನಿಗೆ ಶರಣು' ಎಂಬ ಕವನದಲ್ಲಿ ಬಸವಣ್ಣನ ವ್ಯಕ್ತಿತ್ವವನ್ನು ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ಅದರ ಅನನ್ಯತೆಯ ಹಿನ್ನೆಲೆಯಲ್ಲಿ ಗುರುತಿಸುತ್ತಾರೆ.

ಇದಕ್ಕಿಂತ ಬೇರೆ ಗತ್ತು ನನಗೆ ಗೊತ್ತಾದದ್ದು
ಕನ್ನಡದ ನುಡಿಕಟ್ಟಲ್ಲಿ ನನ್ನನ್ನೇ ಇಣುಕಿದಾಗ;
ಸುಳ್ಳು, ಸಂಕಟ, ಬಡಿವಾರಗಳ ಮಧ್ಯೆ
ಅನುಭವ ಅನುಭಾವಕ್ಕೆ ಕುಳಿತಾಗ, ಕಳಿಯದಾಗ
ಉರಿವ ಕುಡಿಯನ್ನು ಕಂಡೆ;
ದಳಾಳಿಗಳ ಮಾರು ಮಾರುದ್ದ ಮಾತುಗಳ ಹೆಕ್ಕಿ
ನಿನ್ನ ಎತ್ತನು ದಕ್ಕಿಸಿಕೊಂಡು
ಆ ಬಗ್ಗೆ ಅನುಮಾನಗೊಂಡು
ನನ್ನಲ್ಲೆ ನಾನು ಸಾಕ್ಷಿಯಾದಾಗ;
ಆಗಲಾರದೆ, ಸುತ್ತ ಹುಡುಕಾಡಿದಾಗ
ಅಣ್ಣ, ನಿನ್ನಂತೆ ಮಿಡುಕಾಡಿದಾಗ[೧೭]

ಇಲ್ಲಿ ಲಂಕೇಶ್ ಬಸವಣ್ಣನ ಮಾತಿನ ಮಹತ್ವ, ಅದು ಕೃತಿಗಿಳಿದಾಗ ನೀಡುವ ಅರಿವು, ಅದು ವ್ಯಕ್ತಿತ್ವದ ಹಿರಿಮೆಗೆ ಕಾರಣವಾಗುವ ಬಗೆಯನ್ನು ಗುರುತಿಸುತ್ತಾರೆ. ಹೀಗೆ ಬಸವಣ್ಣನ ವ್ಯಕ್ತಿತ್ವದ ಹಲವು ಮುಖಗಳನ್ನು, ಅನನ್ಯ ಗುಣಗಳನ್ನು ಗುರುತಿಸುವುದರೊಂದಿಗೆ ವರ್ತಮಾನದಲ್ಲಿ ಅವುಗಳ ಮಹತ್ವವನ್ನು ಕುರಿತು ಚರ್ಚಿಸಿದ್ದಾರೆ. ಇಲ್ಲಿ ಕವಿಗೆ ಬಸವಣ್ಣನಂತಾಗುವ ಬಯಕೆ ಹಾಗೂ ಅದನ್ನು ಸಾಧಿಸಲಾಗದ ಸ್ಥಿತಿಯ ಬಗೆಗಿನ ಅರಿವು ಎರಡೂ ಕೂಡ ಇದೆ. ಹಾಗಾಗಿ ಕವಿ ತನ್ನನ್ನೇ ಸಾಕ್ಷಿಯಾಗಿಸಿಕೊಂಡು ವ್ಯವಸ್ಥೆಯೊಂದಿಗೆ ಮುಖಾಮುಖಿಯಾಗುತ್ತಾರೆ. ಆಗ ಇದರೊಳಗಿನ ಗೋಜಲು, ಗೊಂದಲ, ಸಂದಿಗ್ಧ ವಾತಾವರಣದ ಅರಿವಾಗುತ್ತದೆ. ವ್ಯವಸ್ಥೆಯನ್ನು

ಎದುರಿಸಲಾಗದ ಈ ಸ್ಥಿತಿಯ ಬಗೆಗಿನ ಅರಿವು ಏಕಕಾಲಕ್ಕೆ ಕವಿಗೆ ಬಸವಣ್ಣನನ್ನೂ ತನ್ನನ್ನೂ ಅರಿಯಲು ಸಾಧನವಾಗುತ್ತದೆ. ಅದನ್ನೇ ಲಂಕೇಶ್ 'ನಿನ್ನಂತೆ ಮಿಡುಕಾಡಿದಾಗ' ಎನ್ನುತ್ತಾರೆ. ಇಲ್ಲಿನ ಕಡೆಯ ಸಾಲುಗಳು ಬಸವಣ್ಣನ ವ್ಯಕ್ತಿತ್ವದ ಅನನ್ಯತೆಯನ್ನು ಹಿಡಿದಿಡುವುದರೊಂದಿಗೆ ಕವಿಯ ಮಿತಿ ಹಾಗೂ ಸಾಧ್ಯತೆಗಳನ್ನು ಹಿಡಿದಿಡಲು ಪ್ರಯತ್ನಿಸುತ್ತವೆ. ಕವಿ ಎದುರಿಸುತ್ತಿರುವ ಸವಾಲುಗಳು ಕೇವಲ ಅವರೊಬ್ಬರಿಗೆ ಮಾತ್ರ ಸೀಮಿತವಾದುದಲ್ಲ. ಅದು ಸಮಾಜದಲ್ಲಿ ಬದಲಾವಣೆಯನ್ನು ತರಬಯಸುವ ಶ್ರೇಷ್ಠ ವ್ಯಕ್ತಿಗಳ ಪ್ರಾಮುಖ್ಯತೆಯನ್ನು ಧ್ವನಿಸುತ್ತದೆ. ಬಸವಣ್ಣನ ವ್ಯಕ್ತಿತ್ವದ ಎಲ್ಲಾ ಹೊಯ್ದಾಟಗಳನ್ನು ತಾನೂ ತನ್ನ ಸಮಾಜದ ಎಲ್ಲಾ ಸಂದಿಗ್ಧತೆಗಳ ನಡುವೆ ತನ್ನದೇ ನುಡಿಕಟ್ಟಲ್ಲಿ ಅನುಭವಿಸಿದಾಗ ಮಾತ್ರ ಬಸವಣ್ಣನ ವ್ಯಕ್ತಿತ್ವ ಅರ್ಥವಾಗಲು ಸಾಧ್ಯ ಎನ್ನತ್ತಾರೆ.

ಸಿದ್ಧಲಿಂಗಯ್ಯನವರು ಬಸವಣ್ಣನ ವ್ಯಕ್ತಿತ್ವದ ಹಿರಿಮೆಯನ್ನು ಅಪಾರವಾದ ಭಕ್ತಿ, ಗೌರವಗಳೊಂದಿಗೆ ಗುರುತಿಸುತ್ತಾರೆ. ಬಸವಣ್ಣನನ್ನು ಅಲಕ್ಷಿತ ಸಮುದಾಯವನ್ನು ಮುನ್ನೆಲೆಗೆ ತರುವ ದಾರಿ ದೀಪವಾಗಿ, ಮಾತು ಕಳೆದುಕೊಂಡವರ ದನಿಯಾಗಿ, ದಮನಿತರ– ತುಳಿತಕ್ಕೊಳಗಾದವರ ಬದುಕಿನ ಆಶಾಕಿರಣವಾಗಿ ಗುರುತಿಸುತ್ತಾರೆ.

ಮಾತು ಮರೆತವರೆದೆಯ ತಂತಿಯನು ಮೀಟಿ
ಗುರುತು ಕಳಕೊಂಡವರ ಗುರುವೆಂದು ಕರೆದು
ಜಾತಿ ಕಗ್ಗತ್ತಲೆಯ ಕಳೆದಿರಣ್ಣ
ಪ್ರೀತಿ ಬೆಳಕಿನ ಬೆಳೆಯ ಬೆಳೆದಿರಣ್ಣ

ಅಪಮಾನಗೊಂಡವರ ಮೇಲೆತ್ತಿಮೆರೆಸಿ
ಸೋತು ಸೊರಗಿದ ತಾಯ ಕಣ್ಣೀರನೊರೆಸಿ
ಕುಲವೊಂದೆ ಜಲವೊಂದೆ ಎಂದಿರಣ್ಣ
ಕನಸುಗಳ ಕುಸುಮಗಳ ತಂದಿರಣ್ಣ[೧೮]

ಈ ಕವನ ಬಸವಣ್ಣನ ವ್ಯಕ್ತಿತ್ವದ ಹಿರಿಮೆಯನ್ನು ತಳಸಮುದಾಯದ ನೆಲೆಯಲ್ಲಿ ಹಿಡಿದಿಡಲು ಪ್ರಯತ್ನಿಸಿದೆ. ಮಾತು ಮರೆತವರ, ಗುರುತು ಕಳೆದುಕೊಂಡವರ, ಅಪಮಾನಗೊಂಡವರ, ಸೋತು ಸೊರಗಿದವರ ಬದುಕಿಗೆ ಬಸವಣ್ಣ ಕನಸುಗಳ ಕುಸುಮವಾಗಿ ಬಂದ ಎನ್ನುತ್ತಾರೆ. ಇದು ತುಳಿತಕ್ಕೊಳಕ್ಕಾದ ಸಮುದಾಯಗಳ ಪರವಾಗಿ ದುಡಿದ ಬಸವಣ್ಣನ ವ್ಯಕ್ತಿತ್ವದ ದಲಿತಪರ ಕಾಳಜಿಯನ್ನು ಹಿಡಿದಿಡುವುದರ ಜೊತೆಗೆ ಬಸವಣ್ಣನ ವ್ಯಕ್ತಿತ್ವದಲ್ಲಿ ಅಡಕವಾಗಿರುವ ದಲಿತಪರ ಚಿಂತನೆಯನ್ನು ಮುನ್ನೆಲೆಗೆ ತರುವ ಪ್ರಯತ್ನ ಕೂಡ ಆಗಿದೆ.

ಬಸವಣ್ಣ ಎಲ್ಲ ಬಗೆಯ ಸ್ಥಾಪಿತ ನೆಲೆಗಳನ್ನು, ತೀರ್ಮಾನಗಳನ್ನು ಪಲ್ಲಟಗೊಳಿಸಲು ಅವಿರತವಾಗಿ ಶ್ರಮಿಸಿದವನು. ಆಧ್ಯಾತ್ಮ ಸಾಧನೆ, ಭಕ್ತಿ, ಮಾಯೆ, ದೇವರು, ಧರ್ಮ ಇವುಗಳಿಗೆ ಸಂಬಂಧಿಸಿದ ಎಲ್ಲಾ ಸ್ಥಾಪಿತ ನಿರ್ವಚನಗಳನ್ನು ಮೀರುವ ಮೂಲಕ ಸಾಧನೆಗೈದ ಕ್ರಾಂತಿಕಾರಿ ವ್ಯಕ್ತಿತ್ವ ಅವರದ್ದು. ಇದನ್ನು ಬೇಂದ್ರೆಯವರ 'ವೃಷಭೋ ರೋರವೀತಿ' ಕವಿತೆ ಹೀಗೆ ಗುರುತಿಸಿದೆ.

ಅಣ್ಣಾ ಮಲೆಯನ್ನೇರುವ ಶರಣಗೆ
ಹೊನ್ನೂ ಮಣ್ಣೂ ಇವು ಹಣ್ಣು
ಹೆಣ್ಣೂ ಗಂಡೂ ಇವು ಕಣ್ಣು
ಸಕಾಯವಹುದು ಅಕಾಯವಹುದು
ಪ್ರಸಾದವೆಂದಿಹ ಪರವಸ್ತು
ಶರಣನ ಸುಳುಹಿನ ಸೊಗಸಿನ ಉಪಮೆ [೧೯]

'ಶರಣ' ಎಂಬ ಪರಿಕಲ್ಪನೆಯೆ ವಿಶಿಷ್ಟವಾದುದು. ಅದು ಬಸವಣ್ಣನ ಹೊಸ ಸಮಾಜ ಮತ್ತು ಹೊಸ ವ್ಯಕ್ತಿತ್ವ ನಿರ್ಮಾಣದ ಕನಸಿನ ರೂಪಕ. ಅದು ಎಲ್ಲ ಬಗೆಯ ಸ್ಥಾಪಿತ ನಿರ್ವಚನಗಳನ್ನು ಮೀರಿದ ವ್ಯಕ್ತಿತ್ವದ ಸಂಕೇತ ರೂಪ. ಈ ಸಾಧನೆಯ ದಾರಿ ತೋರಿದವನು ಸ್ವತಹ ಆ ದಾರಿಯನ್ನು ಸಾಗಿ ಸಾಧಕನಾದವನು ಬಸವಣ್ಣ. ಸಾಧನೆಗೆ ಸಂಸಾರ, ಹೆಣ್ಣು ಅಡ್ಡಿ ಎಂಬ ನಿಲುವನ್ನು ತನ್ನ ಬದುಕಿನ ಮೂಲಕವೇ ಅಲ್ಲಗಳೆದವನು. ಮುಂದುವರೆದು ಈ ಕವಿತೆ ಬಸವಣ್ಣ ಮಾತಿಗಿರುವ ಮಹತ್ವವನ್ನು ಮನವರಿಕೆ ಮಾಡಿಕೊಟ್ಟವನು, ಕನ್ನಡ ನುಡಿಯ ಸೊಗಸನ್ನು ತೋರಿಸಿಕೊಟ್ಟವನು ಎಂದು ಆತನ ಭಾಷಿಕ ಸೂಕ್ಷ್ಮಪ್ರಜ್ಞೆಯನ್ನು ಗುರುತಿಸುತ್ತದೆ.

ಮಾತಿಗೆ ಮುಗಿದರೆ ಏನುಂಟು?
ಮಾತು ಜ್ಯೋತಿಯಿರೆ ಸ್ವಸ್ತ್ಯಸ್ತು!
ಸ್ವಯಂಭುವಿಳಿವನು ಸ್ವಯಂಭಾವದಲಿ
ಕನ್ನಡ ನಡೆನುಡಿ ಇದು ಶಿಸ್ತು
'ಉತ್ತಿಷ್ಠತ ಜಾಗೃತ' ಗಸ್ತು
ಓ ಬಸವಣ್ಣಾ ! ಓ ಬಸವಣ್ಣಾ ![೨೦]

ಮಾತು ವ್ಯಕ್ತಿತ್ವದ ಕನ್ನಡಿ ಅಷ್ಟೇ ಅಲ್ಲ, ಮನುಷ್ಯ ಸಂಬಂಧಗಳನ್ನು, ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವಂತದ್ದೂ ಕೂಡ. ನಾವಾಡುವ ಮಾತು ಬರಿ ಮಾತಾಗದೆ ಅದು ಜ್ಯೋತಿಯಾಗಿ ಬೆಳಗುವಂತಾಗಬೇಕು ಎಂಬುದನ್ನು ಬಸವಣ್ಣ ತೋರಿಸಿಕೊಟ್ಟನು.

ಕನ್ನಡ ಕವಿಗಳು ಬಸವಣ್ಣನ ವ್ಯಕ್ತಿತ್ವದ ಮತ್ತೊಂದು ಮುಖವನ್ನು ಭಾಷೆ ಮತ್ತು ಅಭಿವ್ಯಕ್ತಿಯ ಸಾಧ್ಯತೆಯ ಹಿನ್ನೆಲೆಯಲ್ಲಿ ಗುರುತಿಸಲು ಪ್ರಯತ್ನಿಸಿದ್ದಾರೆ. ಇಲ್ಲಿ ಬಸವಣ್ಣನ ತತ್ವ ಚಿಂತನೆಗಳ ಅನನ್ಯತೆಯನ್ನು ಸಾರುವುದರೊಂದಿಗೆ ಅವನು ಭಾಷೆ ಮತ್ತು ಅಭಿವ್ಯಕ್ತಿಗೆ ನೀಡಿದ ಮಹತ್ವವನ್ನು ಎತ್ತಿಹಿಡಿಯುವ ಪ್ರಯತ್ನ ಕೂಡ ಆಗಿದೆ. ಬಸವಣ್ಣ ವೈದಿಕ ಧರ್ಮ ಹಾಗೂ ಅದರ ಎಲ್ಲಾ ಬಗೆಯ ಹಿಡಿತದಿಂದ ತನ್ನನ್ನು ಮತ್ತು ಅದರ ಶೋಷಣೆಗೆ ಒಳಗಾಗುತ್ತಿರುವ ಶ್ರಮಿಕ ಸಮುದಾಯವನ್ನು ಬಿಡುಗಡೆಗೊಳಿಸಲು ಹೋರಾಟವನ್ನು ರೂಪಿಸಿದ. ಈ ಹೋರಾಟ ಯಶಸ್ಸನ್ನು ಕಾಣಲು ಬಸವಣ್ಣ ಜನರ ಭಾಷೆ ಮತ್ತು ಅನುಭವಗಳನ್ನು ಬಹಳ ಸಮರ್ಥವಾಗಿ ಬಳಸಿಕೊಂಡನು. ಅದುವರೆಗೂ ಇದ್ದ ಪಂಡಿತರ ಭಾಷೆಯಾದ ಸಂಸ್ಕೃತ ಮತ್ತು ಶ್ರಮಿಕರದಲ್ಲದವರ ಜೀವನಾನುಭವದ ಅಭಿವ್ಯಕ್ತಿ ಈ ಎರಡನ್ನೂ ವಿರೋಧಿಸಿದ ಬಸವಣ್ಣ ಅದರ ಸ್ಥಾನದಲ್ಲಿ ಶ್ರಮಿಕ ವರ್ಗದ ಭಾಷೆಯನ್ನೂ, ಅವರ ಅನುಭವ ಜನ್ಯ ಜ್ಞಾನವನ್ನು ಗೌರವಿಸುವ ಹಾಗೂ ಮುನ್ನೆಲೆಗೆ ತರುವ ಕೆಲಸ ಮಾಡುತ್ತಾನೆ. ಇದು ಆತನ ಹೋರಾಟದ ಬಹುಮುಖ್ಯ ಲಕ್ಷಣ ಮತ್ತು ತಂತ್ರವೂ ಹೌದು. ತಮ್ಮ ಭಾಷೆ ಮತ್ತು ಬದುಕಿನ ಅನುಭವಗಳ ಬಗೆಗೆ ಒಂದು ಬಗೆಯ ಕೀಳರಿಮೆಯನ್ನು ಬೆಳೆಸಿಕೊಂಡಿದ್ದ ವಾತಾವರಣದಲ್ಲಿ ಅವರ ಜೀವನಾನುಭವಗಳ ಮಹತ್ವವನ್ನು ಎತ್ತಿಹಿಡಿದದ್ದು, ಅವರ ಭಾಷೆಯಲ್ಲಿ, ಅವರಿಗೆ ಅರ್ಥವಾಗುವ ರೀತಿಯಲ್ಲಿ, ಅವರ ಬದುಕನ್ನೇ ಚಿತ್ರಿಸುವ ಮುಖಾಂತರ ಅದುವರೆಗೂ ದೈವಭಾಷೆ ಎನಿಸಿಕೊಂಡಿದ್ದ ಸಂಸ್ಕೃತದ ಹಿಡಿತದಲ್ಲಿ, ರಾಜಾಶ್ರಯ ಮತ್ತು ಪಂಡಿತರ ಆಶ್ರಯದಲ್ಲಿ ಇದ್ದ ಸಾಹಿತ್ಯವನ್ನು ಜನರ ಭಾಷೆ ಹಾಗೂ ಜನಸಾಮಾನ್ಯರ ಗುಡಿಸಲುಗಳಿಗೆ ಬರುವಂತೆ ಮಾಡಿದ್ದು ಬಸವಣ್ಣನ ಹೆಗ್ಗಳಿಕೆ. ಅದುವರೆಗೂ ಸಂಸ್ಕೃತ ಬಲ್ಲ ಮೇಲ್ವರ್ಗದ ಕವಿಗಳ ಹೆಸರು ಗೋಚರವಾದರೆ ಹನ್ನೆರಡನೆ ಶತಮಾನದ ವಚನ ಚಳುವಳಿಯ ಸಂದರ್ಭದಲ್ಲಿ ಸುಮಾರು ಮುನ್ನೂರಕ್ಕೂ ಹೆಚ್ಚು ವಚನಕಾರರು ಕಾಣಸಿಗುತ್ತಾರೆ. ವೈದಿಕ ಸಂಸ್ಕೃತಿ ಈ ನಾಡಿನ ನೆಲಮೂಲ ಜಾನಪದ

ಪ್ರತಿಭೆಗಳನ್ನು ತಾತ್ಸಾರದಿಂದ ಹಾಗೂ ಕೀಳುತನದಿಂದ ಕಾಣುತ್ತಿದ್ದ ಸಂದರ್ಭದಲ್ಲಿ ಅದರ ಸಾಂಸ್ಕೃತಿಕ ಅನನ್ಯತೆ ಹಾಗೂ ಜೀವಂತಿಕೆಯನ್ನು ಗುರುತಿಸಿದ ಬಸವಣ್ಣ ಅದನ್ನು ಮುನ್ನೆಲೆಗೆ ತರುವ ಕೆಲಸ ಮಾಡುತ್ತಾನೆ. ಸಮಾಜದ ಬೇರೆ ಬೇರೆ ಕಸುಬು ಮತ್ತು ಸಾಮಾಜಿಕ ಹಿನ್ನೆಲೆಯಿಂದ ಬಂದ ಶರಣ ಪ್ರತಿಭೆಗಳ ಸಾಹಿತ್ಯಾಭಿವ್ಯಕ್ತಿಯನ್ನು ನೋಡಿದರೆ ಶಿಷ್ಟ ಹಾಗೂ ವೈದಿಕ ಪರಂಪರೆ ಅದುವರೆಗೂ ಕಮರಿಸಿದ್ದ ಈ ನೆಲದ ಸಹಜ ಪ್ರತಿಭೆಗಳ ಅಗಾಧತೆ ನಮ್ಮ ಅರಿವಿಗೆ ಬರುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ಭಾಷೆ ಮತ್ತು ನಿಜವಾದ ನೆಲಮೂಲ ಚಿಂತನೆಯ ಅಭಿವ್ಯಕ್ತಿ ಬಸವಣ್ಣನ ನೇತೃತ್ವದಲ್ಲಿ ನಡೆದ ವಚನ ಚಳುವಳಿಯ ಸಂದರ್ಭದಲ್ಲಿ ಆಯಿತು ಎಂದರೆ ಅತಿಶಯೋಕ್ತಿ ಎನಿಸಲಾರದು. ಲೌಕಿಕ ಮತ್ತು ಆಧ್ಯಾತ್ಮಿಕ ಅನುಭವಗಳನ್ನು ಪ್ರತಿಯೊಬ್ಬ ವಚನಕಾರರು ಅತ್ಯಂತ ಸರಳ ಕನ್ನಡದಲ್ಲಿ ಪ್ರತಿಮೆ, ರೂಪಕಗಳ ಮುಖಾಂತರ ಅಭಿವ್ಯಕ್ತಿಸಿರುವುದನ್ನು ನೋಡಿದರೆ ನಿಜವಾದ ಕನ್ನಡದ ಅರಿವು ಮತ್ತು ಕನ್ನಡದ ಬದುಕಿನ ಚರಿತ್ರೆ ಪ್ರಖರವಾಗಿ ಅನಾವರಣಗೊಳ್ಳುವುದು ವಚನ ಚಳುವಳಿಯ ಸಂದರ್ಭದಲ್ಲಿಯೇ ಎಂದೆನಿಸುತ್ತದೆ. ಧರ್ಮ ಮತ್ತು ಧಾರ್ಮಿಕ ನಿಯಮಗಳು ತಮ್ಮದಲ್ಲದ ಭಾಷೆಯಲ್ಲಿ ಅಮೂರ್ತವಾಗಿ ಸಾಂಸ್ಕೃತಿಕ ಬದುಕನ್ನು ಆಳುತ್ತಿದ್ದ ಸಂದರ್ಭದಲ್ಲಿ ಅವುಗಳಿಂದ ಬಿಡಿಸಿಕೊಳ್ಳುವ ಒಂದು ದೊಡ್ಡ ಸಾಮೂಹಿಕ ಹೋರಾಟ ಬಸವಣ್ಣನ ನೇತೃತ್ವದಲ್ಲಿ ನಡೆಯುತ್ತದೆ. ಹಾಗಾಗಿ ಬಸವಣ್ಣನ ವ್ಯಕ್ತಿತ್ವದ ಅನನ್ಯತೆಯನ್ನು ಭಾಷೆ ಮತ್ತು ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಗುರುತಿಸಬಹುದು.

೧. ಹೊಸ ಸಾಹಿತ್ಯ ಪ್ರಕಾರ, ಹೊಸ ಭಾಷೆ, ಹೊಸ ಅಭಿವ್ಯಕ್ತಿ ಕ್ರಮದ ಹರಿಕಾರನನ್ನಾಗಿ ನೋಡಿರುವುದು.

೨. ಬಸವಣ್ಣನ ವಚನಗಳ ಅಭಿವ್ಯಕ್ತಿಯ ಅನನ್ಯತೆಯನ್ನು ಎತ್ತಿ ಹಿಡಿಯುವುದು ಮತ್ತು ವಚನ ಸಾಹಿತ್ಯ, ಸಿದ್ಧಾಂತಗಳ ಮಹತ್ವವನ್ನು ಗುರುತಿಸುತ್ತಲೇ ಅದನ್ನು ಸಾಂಸ್ಕೃತಿಕ ಹೋರಾಟದ ಪ್ರಬಲ ಅಸ್ತ್ರವಾಗಿ ಮುನ್ನೆಲೆಗೆ ತರಲು ಪ್ರಯತ್ನಿಸುವುದು.

೩. ತಳ ಸಮುದಾಯಗಳ ಅನುಭವಗಳ ಅಭಿವ್ಯಕ್ತಿಗೆ ನೀಡಿದ ಪ್ರೋತ್ಸಾಹವನ್ನು ಗುರುತಿಸುವುದು. ಈ ಅಂಶಗಳ ಹಿನ್ನೆಲೆಯಲ್ಲಿ ಬಸವಣ್ಣನ ವಚನ ಚಳುವಳಿಯ ಮಹತ್ವವನ್ನು ಕನ್ನಡ ಕವಿಗಳು ಮತ್ತೆ ಮತ್ತೆ ಚರ್ಚೆಗೆ ಒಳಪಡಿಸಿದ್ದಾರೆ.

ಕನ್ನಡ ನುಡಿಗೆ ಸತ್ವವನ್ನು, ವಿಶ್ವಮಾನ್ಯತೆಯನ್ನು, ಅರಿವಿನ ಅಭಿವ್ಯಕ್ತಿ ಸಾಮರ್ಥ್ಯವನ್ನು ತಂದುಕೊಟ್ಟಿದ್ದು ವಚನಕಾರರ ಹಿರಿಮೆ. ಇದರಲ್ಲಿ ಬಸವಣ್ಣನ ಪಾತ್ರವೇ ಪ್ರಧಾನವಲ್ಲದಿದ್ದರೂ ಒಟ್ಟು ಸಾಮೂಹಿಕ ಅಭಿವ್ಯಕ್ತಿಗೆ ಉತ್ತೇಜನವನ್ನು ನೀಡಿರುವ ಹಿನ್ನೆಲೆಯಲ್ಲಿ ಬಸವಣ್ಣನ ಕೊಡುಗೆ ಅಪಾರ. ಬಸವರಾಜ ಕಲ್ಗುಡಿ ಗುರುತಿಸುವಂತೆ "ವಚನ ಚಳುವಳಿಯ ಬೆಳವಣಿಗೆಗೆ ತಾತ್ವಿಕ ನೆಲೆಗಳನ್ನು ಹಾಕಿಕೊಟ್ಟವರಲ್ಲಿ ಬಸವಣ್ಣ ಪ್ರಧಾನ ಪಾತ್ರ ವಹಿಸಿದ್ದನೆನ್ನುವುದರಲ್ಲಿ ಅನುಮಾನಗಳಿಲ್ಲ. ಹನ್ನೆರಡನೆ ಶತಮಾನದ ವಚನಕಾರರ ಚಳುವಳಿಯ ಬಗ್ಗೆ ಪ್ರಸ್ತಾಪ ಮಾಡುವ, ವಿವರಿಸಲು ಪ್ರಯತ್ನ ಮಾಡುವ ಎಲ್ಲ ಬರವಣಿಗೆಗಳು ಮತ್ತು ಬಸವಣ್ಣನನ್ನು ನಾಯಕನನ್ನಾಗಿ ಮಾಡಿಕೊಂಡ ಕಾವ್ಯ, ಪುರಾಣಗಳು, ಅವನನ್ನು ವಚನ ಚಳುವಳಿಯ ವಕ್ತಾರನೆಂದು ವಿವರಿಸುವುದು ಕೇವಲ ಆ ವ್ಯಕ್ತಿಯನ್ನು ಮೇಲೇರಿಸಬೇಕೆಂಬ ಆಶಯಗಳನ್ನು ಮಾತ್ರ ಒಳಗೊಂಡಿವೆ ಎಂದು ಭಾವಿಸಬೇಕಾಗಿಲ್ಲ. ಅನೇಕ ಕಡೆಗಳಲ್ಲಿ ಇವು ಬಸವಣ್ಣನ ವ್ಯಕ್ತಿತ್ವವನ್ನೂ ವೈಭವೀಕರಿಸುತ್ತವೆ ಎನ್ನುವ ಮಾತನ್ನೇನೂ ನಿರಾಕರಿಸಲಾಗುವುದಿಲ್ಲವಾದರೂ ಸಮಾಜದ ಹೊಸ ಸ್ವರೂಪಗಳಿಗೆ ಅತ್ಯಂತ ಪ್ರಮುಖ ಆಲೋಚನಾ ಸ್ವರೂಪದ

ಹಾಗೂ ಕ್ರಿಯಾತ್ಮಕ ನೆಲೆಯ ಧಾತುಗಳನ್ನು ಇವನು ಒದಗಿಸಿದ ಎನ್ನುವ ಮಾತುಗಳನ್ನು ಒಪ್ಪಬೇಕಾಗುತ್ತದೆ”[೨೧]. ಎನ್ನುವ ಮಾತುಗಳು ವಚನ ಚಳುವಳಿಯ ಎಲ್ಲಾ ಸಾಧನೆಗಳ ಹಿಂದೆ ಬಸವಣ್ಣನ ಪ್ರಭಾವವಿದ್ದುದನ್ನು ಗುರುತಿಸುತ್ತವೆ. ಇದನ್ನು ಕನ್ನಡ ಕವಿಗಳು ಈ ನೆಲದ ನುಡಿಯಲ್ಲಿ ಆಳವಾದ ಜ್ಞಾನದ ಮಂಥನವನ್ನು ನಡೆಸಿ ಕನ್ನಡ ಮಾತಿನ ಸತ್ವ, ಸಾಮರ್ಥ್ಯವನ್ನು ಹೆಚ್ಚಿಸಿದ ಹೆಗ್ಗಳಿಕೆ ಬಸವಣ್ಣನದ್ದು ಎನ್ನುತ್ತಾರೆ. ಅದುವರೆಗೂ ಧರ್ಮ, ತತ್ವ, ಸಿದ್ಧಾಂತಗಳ ಬೋಧನೆಯ ಭಾಷೆಯಾಗಿ ಬಳಕೆಗೊಳ್ಳುತ್ತಿದ್ದ, ದೇವಭಾಷೆಯೆಂದು ಸರ್ವಮಾನ್ಯವಾಗಿದ್ದ ಸಂಸ್ಕೃತ ಭಾಷೆಯ ಎದುರು ಕನ್ನಡ ಭಾಷೆ ತನ್ನ ಚೆಲುವನ್ನೂ, ಅದರ ಗಟ್ಟಿತನವನ್ನೂ ಸಾಬೀತುಪಡಿಸಲು ಸಾಧ್ಯವಾದದ್ದು ೧೨ನೇ ಶತಮಾನದಲ್ಲಿ. ಇದಕ್ಕೆ ಕಾರಣ ವಚನಗಳ ಮೂಲಕ ತಮ್ಮ ಅನುಭವದ ಅಭಿವ್ಯಕ್ತಿಗೆ ಅವಕಾಶ ದೊರೆತದ್ದು. ಇಲ್ಲಿ ಎಲ್ಲಾ ವರ್ಗಗಳ ಜನರು ಬರೆಯಲು ಸಾಧ್ಯವಾದುದ್ದರಿಂದ ಕನ್ನಡ ಭಾಷೆಗೆ ಹೊಸ ಆಯಾಮವೊಂದು ಒದಗಿಬಂದಿತು. ಅಲ್ಲದೆ ಪ್ರತಿಯೊಬ್ಬರೂ ಕೂಡ ತಮ್ಮ ಅನುಭವಗಳನ್ನು ಅಭಿವ್ಯಕ್ತಿಸುವ ಸಂದರ್ಭದಲ್ಲಿ ತಮ್ಮದೇ ಆದ ಪ್ರತಿಮೆ ರೂಪಕಗಳನ್ನು ಸೃಷ್ಟಿಸಿಕೊಳ್ಳಲು ಪ್ರಯತ್ನಿಸಿದರು. ಪು.ತಿ.ನ ‘ಶ್ರೀ ಬಸವೇಶ್ವರ’ ಎನ್ನುವ ಕವಿತೆಯಲ್ಲಿ ಕನ್ನಡ ಭಾಷೆಗೆ ಹಿರಿಮೆಯನ್ನು ತಂದುಕೊಟ್ಟ ಮಹಾನುಭಾವ ಬಸವಣ್ಣ ಎನ್ನುತ್ತಾರೆ.

ಎನಿತು ಚೆಲುವನು ತಳೆದು ಈಪದವಿಗೇರಿತ್ತೈ
ಕನ್ನಡದ ನುಡಿಯೀತನೊಸಗೆ ಮನದೊಳಗೆ
ದೈವಕೃಪೆಯನು ಹರಿಸಿ ಮನಮನವ ಕೊನರಿಸುತ
ಎನಿತು ಬೆಳೆ ಬೆಳೆಯಿಸಿತು ಬಂಜೆನೆಲದೊಳಗೆ!
ಹೃದಯ ಮಥನೋದ್ಭೂತ ಪೀಯೂಷ ಕಲಶವದು
ಘನ ಗಹನ ತತ್ತ್ವಾರೋಹಿಯುಚ್ಚೈಶ್ರವ
ನಡೆಬೆಡಗೋ ವೇಗವೋ ಅಮಿತಾರ್ಥಗಳನೀವ
ಮಿತವೊ ಪರಿಪೂರ್ಣತೆಯೊ – ಬಣ್ಣಿಪನೆ ಹದವ
ಜನರಾಡುಮಾತೊಂದು ಘನಭಾಷೆಯೆನಿಸಿತ್ತೈ
ಸದ್ಭಾವ ಸುವಿಚಾರದಾಗರವದಾಯ್ತು
ಕಲೆಯ ಸೀಮೆಯ ಮುಟ್ಟಿ ಕಲೆಯಾಚೆಯಿರುವುದಕೆ
ಉದ್ಬಾಹು ತಾನಾಯ್ತು ಕನ್ನಡದ ಮಾತು
ನೆಲಕು ನುಡಿಗೂ ಹೊಸತು ಚಂದಗಳನೇ ತಂದ ಧರ್ಮವೀರ
ಒಳಮಿಡಿತದಂತಿರವ ನಡೆಗೊಳಿಸಿದಪ್ರತಿಮ ಬಸವೇಶ್ವರ. [೨೨]

ಕನ್ನಡ ಭಾಷೆ ತನ್ನೆಲ್ಲ ಸಾಧ್ಯತೆಗಳನ್ನು ಪ್ರಕಟಪಡಿಸಿದ ಕಾಲ ಅದು. ಎಲ್ಲ ಕಲೆ, ಭಾವಗಳನ್ನೂ, ‘ಕಲೆಯಾಚೆಯಿರುವುದನ್ನೂ’ ಅಭಿವ್ಯಕ್ತಿಸುವ ಶಕ್ತಿಯನ್ನು ಕನ್ನಡ ಭಾಷೆ ಪಡೆದುಕೊಂಡಿತ್ತು. ಒಳಭಾವಕ್ಕೂ, ಅಭಿವ್ಯಕ್ತಿಗೂ ಇದ್ದ ಅಂತರವನ್ನು ನೀಗಿಕೊಳ್ಳಲಾಯಿತು. ಈ ಭಾಷೆ, ಈ ನೆಲ ಹೊಸ ಸೊಗಸಿನಿಂದ ಮೆರೆಯುವಂತಾಯ್ತು. ಇದೆಲ್ಲದರ ಹಿಂದೆ ಬಸವಣ್ಣನ ವ್ಯಕ್ತಿತ್ವದ ಪ್ರಭಾವವಿದೆ. ಕನ್ನಡದ ತಿಳುವಳಿಕೆಯೊಂದನ್ನು ಹುಟ್ಟುಹಾಕಿದ ವಿಶಿಷ್ಟ ಸಾಧನೆ ಬಸವಣ್ಣನ ನೇತೃತ್ವದಲ್ಲಾಯ್ತು. ಪು.ತಿ.ನ ಇಲ್ಲಿ ಜನಭಾಷೆಯಾಗಿದ್ದ ಕನ್ನಡ ‘ದೈವವನ್ನು ಕಾಣುವ’ ಭಾಷೆಯಾಗಿ ಮಾರ್ಪಟ್ಟ ಬಗೆಯನ್ನು ತಿಳಿಸುತ್ತಲೇ, ಅದು ವಿಶ್ವಮಾನ್ಯ ಭಾಷೆಯ ಮಟ್ಟಕ್ಕೇರಿದ ವಿಧಾನವನ್ನು ಗುರುತಿಸುತ್ತಾರೆ. ಸಂಸ್ಕೃತವೇ ಪ್ರಧಾನವಾಗಿದ್ದ, ಸಂಸ್ಕೃತವೇ ಶ್ರೇಷ್ಠ ಎಂದು ಪರಿಗಣಿತವಾಗುತ್ತಿದ್ದ ಸಂದರ್ಭದಲ್ಲಿ ‘ಮನ ಮನವ ಕೊನರಿಸುವ’ ಭಾಷೆಯಾಗಿ ಕನ್ನಡ ಬಳಕೆಯಾದದ್ದನ್ನು ಗುರುತಿಸುತ್ತಾರೆ. ಇಲ್ಲಿ ಮನ ಮನವ ಕೊನರಿಸುವ ಎನ್ನುವ ಪದ ಹೊಸ ಭರವಸೆಯನ್ನು ಹುಟ್ಟುಹಾಕಿದ, ಹೊಸ ಸೃಷ್ಟಿಗೆ ಕಾರಣವಾದ ಭಾಷೆಯ ಸೊಗಸನ್ನು ಧ್ವನಿಸುತ್ತಿದೆ. ಜೊತೆಗೆ ಅದುವರೆವಿಗೂ ಅಂಚಿಗೆ

ಸರಿಸಲಾಗಿದ್ದ, ಅಭಿವ್ಯಕ್ತಿಗೆ ಅವಕಾಶಗಳೇ ಇಲ್ಲದಿದ್ದ ಸಮುದಾಯಗಳು ಕೂಡ ಹೊಸ ಭರವಸೆಯೊಂದಿಗೆ ಬರೆಯಲು ಆರಂಭಿಸಿದ್ದನ್ನು ತಿಳಿಸುತ್ತದೆ. ಇದರಿಂದಾಗಿ ಶ್ರೇಷ್ಠ ಬೆಲೆಯ ಬೆಳೆ ಬೆಳೆಯಲು ಸಾಧ್ಯವಾಯಿತು ಎನ್ನುವುದು ಕನ್ನಡ ಸಾಹಿತ್ಯಕ್ಕೆ ಲಭಿಸಿದ ಹೊಸ ಅಭಿವ್ಯಕ್ತಿಯ ಅವಕಾಶಗಳನ್ನು ಎತ್ತಿಹಿಡಿಯುತ್ತದೆ.

೧೨ನೇ ಶತಮಾನದ ವಚನಗಳ ಭಾಷೆಯ ವಿಶೇಷತೆ ಇಷ್ಟಕ್ಕೇ ಸೀಮಿತವಾದುದಲ್ಲ. ಅದು ಜನರಾಡುವ ಭಾಷೆಗೆ ಘನತೆಯನ್ನು ತಂದುಕೊಟ್ಟದ್ದು, ಜನರ ಅರಿವಿನ ವಿಸ್ತರಣೆಗೆ ಅವಕಾಶಗಳನ್ನು ಕಲ್ಪಿಸಿದ್ದು, ದೇವರು, ಧರ್ಮ, ಧಾರ್ಮಿಕತೆಯನ್ನು ತಮ್ಮ ಭಾಷೆಯ ಮೂಲಕವೇ ಅರಿಯಲು, ಅಭಿವ್ಯಕ್ತಿಸಲು ಸಾಧ್ಯವಾದದ್ದು ಮತ್ತೊಂದು ವಿಶೇಷ. ಇದನ್ನು ಚೆನ್ನವೀರ ಕಣವಿಯವರು 'ದಿಟಭಕುತಿ ಪುಟಗೊಂಡು ಗೆಲುವ ಭಾಷೆ' ಎನ್ನುತ್ತಾರೆ. ಇಲ್ಲಿ ದಿಟಭಕುತಿ ಎನ್ನುವುದು ಆಡಂಬರವನ್ನು ತೊಡೆದ ಸಹಜ, ಸರಳ ಭಾಷಾ ಅಭಿವ್ಯಕ್ತಿಯನ್ನು ಧ್ವನಿಸುತ್ತದೆ. ಒಳ್ಳೆಯ ವಿಷಯ ವಿಚಾರಗಳನ್ನು ತಮ್ಮ ಆಡುಭಾಷೆಯ ಮೂಲಕವೇ ತಿಳಿಸಬಹುದು ಎಂಬುದನ್ನು ತೋರಿಸಿಕೊಟ್ಟದ್ದು ಈ ಕಾಲಘಟ್ಟದ ಭಾಷೆಯ ವಿಶೇಷ. ಇದರಿಂದಾಗಿ ಅದುವರೆಗೂ ಕನ್ನಡ ಭಾಷೆ ಸಂಸ್ಕೃತ ಭಾಷೆಯ ಎದುರು ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ನಡೆಸುತ್ತಿದ್ದ ಸವಾಲು ನಿವಾರಣೆಯಾಗಲು ಸಾಧ್ಯವಾಯಿತು ಎಂದೆನಿಸುತ್ತದೆ. ಸಿ.ಪಿ.ಕೆ ತಮ್ಮ 'ಬಸವ ಸ್ಮೃತಿ' ಕವನದಲ್ಲಿ ಈ ಅಂಶಗಳನ್ನು ಗುರುತಿಸುತ್ತಾರೆ.

ವಜ್ರಲೇಪದಲಿ ಒಳಗು – ಹೊರಗುಗಳ ಬೆಸೆದೆ ನೀನು ಬಸವ
ನೀನು ನೀಗಿದೆಯೋ ಕನ್ನಡಕ್ಕಿದ್ದ ಅರಿವಿನೊಂದು ಹಸಿವ !
ಧರ್ಮಗಂಗೆಯನು ಕನ್ನಡದ ನೆಲಕೆ ಭಗೀರಥನ ತೆರದಿ
ಶಿವ ಮುಡಿಯ ಮಾರ್ಗದಲಿ ಹರಿಸಿ ತಂದವನು ನೀನು ಭರದಿ [೨೩]

ಇಲ್ಲಿ ಕವಿ ಕನ್ನಡ ಭಾಷೆಗೆ ಅದುವರೆಗೂ ಇದ್ದ ತೊಡಕನ್ನು ನಿವಾರಿಸಿದವನು ಬಸವಣ್ಣ ಎನ್ನುತ್ತಾರೆ. ಏಕೆಂದರೆ ದೈವಭಾಷೆ ಎನಿಸಿಕೊಂಡಿದ್ದ ಸಂಸ್ಕೃತದ ಎದುರು ಇತರೆ ಭಾಷೆಗಳು ಅಲ್ಪವೆನಿಸಿಕೊಂಡಿದ್ದ ಕಾಲ ಅದು. ಅಂತಹ ಸಂದರ್ಭದಲ್ಲಿ ಕನ್ನಡ ಭಾಷೆಗೆ ದೊರೆತ ಮಾನ್ಯತೆ ಕೇವಲ ಭಾಷಿಕ ನೆಲೆಯಿಂದಷ್ಟೇ ಮುಖ್ಯವಾದುದಲ್ಲ. ಆ ಕಾಲದಲ್ಲಿ ಚಾಲ್ತಿಯಲ್ಲಿದ್ದ ವರ್ಗ, ವರ್ಣಗಳಿಂದ ನಿರ್ಮಿತವಾದ ಎಲ್ಲಾ ಬಗೆಯ ತರತಮಗಳನ್ನು ಮೀರುವ ಹಾಗೂ ಅದುವರೆವಿಗೂ ಅಂಚಿಗೆ ಸರಿಸಲ್ಪಟ್ಟವರನ್ನು ಮುನ್ನೆಲೆಗೆ ಬರುವ ಸಾಂಸ್ಕೃತಿಕ ಚಲನೆಯ ಭಾಗ ಕೂಡ ಆಗಿದೆ. ಇದನ್ನು 'ಭಗೀರಥನ' ರೂಪಕ ಹಿಡಿದಿಡುತ್ತದೆ. ಈ ಕವನಗಳಲ್ಲಿ ಒಟ್ಟು ವಚನ ಸಾಹಿತ್ಯ ಚಳುವಳಿಯ ಸಾಧನೆಗಳಿಗೆ ಬಸವಣ್ಣನೇ ಕಾರಣ ಎಂದು ಗುರುತಿಸುವುದು ಅತಿಶಯೋಕ್ತಿ ಎಂದೆನಿಸಿದರೂ ಎಲ್ಲಾ ವರ್ಗದವರೂ ತಮ್ಮ ಅನುಭವಗಳನ್ನು ಹೇಳಿಕೊಳ್ಳುವ ಅವಕಾಶವನ್ನು ಕಲ್ಪಿಸಿಕೊಡುವಲ್ಲಿ, ಅವರಲ್ಲಿ ಆತ್ಮವಿಶ್ವಾಸವನ್ನು ತುಂಬುವುದರಲ್ಲಿ ಬಸವಣ್ಣನ ಕೊಡುಗೆ ಅಪಾರವಾದದ್ದು. ಹಾಗಾಗಿ ಬಸವಣ್ಣನ ವ್ಯಕ್ತಿತ್ವದ ಅನನ್ಯತೆಯನ್ನು ಕನ್ನಡ ಕವಿಗಳು ಭಿನ್ನ ಭಿನ್ನ ರೀತಿಯಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಬಸವಣ್ಣ ಪ್ರತಿಯೊಂದು ಆತ್ಮದಲ್ಲೂ ಅಡಗಿರುವ ದಿವ್ಯಶಕ್ತಿಯನ್ನು ಗುರುತಿಸಿದವನು. ಅದು ಪ್ರಕಟಗೊಳ್ಳಲು ಪ್ರೇರೇಪಿಸಿದವನು. ಎಲ್ಲರಲ್ಲೂ ಅಡಗಿರುವ ಅರಿವಿನ ಕಿಚ್ಚನ್ನು ತೆರೆದು ಅಂತಸತ್ವದ ಆತ್ಮಜ್ಯೋತಿ ಬೆಳಗುವಂತೆ ಮಾಡಿದವನು. ಎಲ್ಲರ ದನಿಗೂ ಎಲ್ಲರ ಅಭಿವ್ಯಕ್ತಿಗೂ ಇರುವ ಸತ್ವ, ಶಕ್ತಿಯ ಅರಿವನ್ನು ಮೂಡಿಸಿ ಸ್ವಾಭಿಮಾನವನ್ನು ಬಿತ್ತಿದವನು ಎಂದು ಕನ್ನಡ ಕವಿಗಳು ಮತ್ತೆ ಮತ್ತೆ ಬಸವಣ್ಣನ ವ್ಯಕ್ತಿತ್ವದ ಹಿರಿಮೆಯನ್ನು ತಮ್ಮ ಕವನಗಳ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

ಬಸವ ನೀ ಬರುವ ಮುನ್ನ ತಿಳಿದಿರಲಿಲ್ಲ ನಮಗೆ
ನಮ್ಮ ದೇಹ ನಮ್ಮದೆಂದು

ಭಾಷೆಯೆಂಬೊಡವೆ ತೊಡವೆಗಳು ನನ್ನವೂ ಇವೆಯೆಂದು
ಆನೂ ಒಲಿದಂತೆ ವಚನಿಸಬಹುದೆಂದು.
ಪದದ 'ಶಾಬ್ದಿಕ' ಚೆಲುವು ನಿಶಬ್ದದಲ್ಲೆಂದು
ಶೀರ್ಷಿಕೆ ಅಂಕಿತಗಳೇಕೆ
ಕವಿತೆಗೆ, ಕವಿ ನೀನದನೆಲ್ಲ ತೆಗೆ ಎಂಬ ಸೊಲ್ಲುಡಿ ಧ್ವಾನಿಸುತ್ತಿದೆ
ಬಸವಾ. [೨೪]

ಪ್ರತಿ ವ್ಯಕ್ತಿಗೂ ಇರುವ ಆತ್ಮ ಘನತೆಯನ್ನು ಎತ್ತಿಹಿಡಿದದ್ದು ಬಸವಣ್ಣನ ಹಿರಿಮೆಯಾಗಿದೆ. ಪ್ರತಿಯೊಬ್ಬರಲ್ಲೂ ಇರಬಹುದಾದ ಅನುಭವಲೋಕ, ಲೋಕದೃಷ್ಟಿ, ಅವುಗಳನ್ನು ಅಭಿವ್ಯಕ್ತಿಸುವ ಭಾಷೆ, ರೂಪಕ, ಪ್ರತಿಮೆಗಳ ವಿಶಿಷ್ಟತೆಯನ್ನು ಅರಿವಿಗೆ ತಂದುಕೊಟ್ಟು ಆತ್ಮವಿಶ್ವಾಸವನ್ನು ತುಂಬಿದ ಗುರು ಬಸವಣ್ಣ. ಬಸವಣ್ಣನೊಳಗಿದ್ದ ಅದ್ಭುತ ಕವಿ ಮತ್ತು ವಿಮರ್ಶಕನ ವ್ಯಕ್ತಿತ್ವವನ್ನು ಈ ಕವಿತೆ ಗುರುತಿಸಿದೆ.

ಬಸವಣ್ಣನ ಬರುವಿಕೆಯನ್ನು ಕನ್ನಡ ಕವಿಗಳು ಹೊಸ ಮನ್ವಂತರದ ಆಗಮನವನ್ನಾಗಿ ಗುರುತಿಸುತ್ತಾರೆ. ಇದುವರೆವಿಗೂ ಕೂಡ ಪಂಚಭೂತಗಳನ್ನೂ ಒಳಗೊಂಡಂತೆ ಇಡೀ ವ್ಯವಸ್ಥೆಯೆ ತಳ ಸಮುದಾಯಗಳ ವಿರೋಧಿಯಾಗಿದ್ದುದ್ದನ್ನು ಗುರುತಿಸುತ್ತಲೇ ಅವೆಲ್ಲವುಗಳಿಂದ ಮುಕ್ತಿ ಕೊಡಿಸಲಿಕ್ಕಾಗಿಯೇ ಬಸವಣ್ಣನ ಆಗಮನವಾಯಿತು ಎನ್ನುತ್ತದೆ ಎನ್.ಎಂ. ಗಿರಿಜಾಪತಿ ಅವರ 'ನೀ ಬರುವ ಮುನ್ನ' ಕವಿತೆ.

ನೀಬರುವ ಮುನ್ನ ಪಂಚಭೂತಗಳಿಗೂ ಕರುಣೆ ಇರಲ್ಲಿಲ್ಲ ಬಸವ!
ನಿಂತ ನೆಲ, ಬಾನ ಬಾಗು,
ಹರಿವ ತೊರೆ, ಹಳ್ಳ – ಕೊಳ್ಳ
ನದಿನದಿಗಳ ಸಾಲು
ಸುಳಿವ ಗಾಳಿ, ಉರಿವ ಬೆಂಕಿಗಳಿಗೆಲ್ಲ ಬಗೆಬಗೆಯ ಮುಖವಾಡ
ಪ್ರಶ್ನೆಗಳ ಸಾಲು,
ಸಂಭೂತರಹವಾಲು ಬೆಳಕ ನೋಡಲು ಅಪ್ಪಣೆ!
ಉಚ್ಛ್ವಾಸ –ನಿಶ್ವಾಸವೂ ಬವಣೆ! [೨೫]

ಯಾವುದಕ್ಕೂ ಸ್ವಾತಂತ್ರವಿರದ ವಾತಾವರಣದಲ್ಲಿ ಸ್ವಾತಂತ್ರ್ಯ, ಸಮಾನತೆಯನ್ನು ತಂದುಕೊಡಲು ಹೋರಾಡಿದ್ದು ಬಸವಣ್ಣನ ಹಿರಿಮೆ. ಬಸವಣ್ಣ ಮಾನವೀಯತೆಯ ಕಣ್ಣು ತೆರೆಸಿದವನು. ಮನುಷ್ಯರನ್ನು ಪ್ರಾಣಿಗಳಿಗಿಂತಲೂ ಹೀನಾಯವಾಗಿ ಕಾಣುತ್ತಿದ್ದ ಸಂದರ್ಭದಲ್ಲಿ ಮನುಷ್ಯರಂತೆ ಕಾಣಬೇಕಾದ ಪ್ರಜ್ಞೆಯನ್ನು ಬಿತ್ತಿದವನು. ಶೋಷಿತ ಸಮೂದಾಯಗಳಿಗೆ ಘನತೆಯನ್ನು ತಂದುಕೊಡಲು ಹೋರಾಟವನ್ನೇ ರೂಪಿಸಿ ಅದಕ್ಕಾಗಿ ಪ್ರಭುತ್ವವನ್ನೂ, ವೈದಿಕ ಧರ್ಮವನ್ನೂ ಎದುರು ಹಾಕಿಕೊಂಡವನು. ಬಸವಣ್ಣನ ವ್ಯಕ್ತಿತ್ವದಲ್ಲಿ ಅಡಕವಾಗಿರುವ ಈ ಅಂಶಗಳನ್ನು 'ನೀ ಬರುವ ಮುನ್ನ' ಕವಿತೆ ಗುರುತಿಸಿದೆ.

ಕನ್ನಡ ಕವಿಗಳು ಬಸವಣ್ಣನ ವ್ಯಕ್ತಿತ್ವದ ಅನನ್ಯತೆಯನ್ನು ಬದುಕು, ಬರಹದ ಕೊಡುಗೆಯಿಂದ ಹಿಡಿದು ಒಟ್ಟಾರೆ ಸಮಾಜಮುಖಿ ಚಿಂತನೆ, ಹೋರಾಟ, ಅರಿವಿನ ವಿಸ್ತಾರದ, ಕಾಯಕ ತತ್ವ, ದಾಸೋಹ, ಸಾಮಾಜಿಕ ಸಮಾನತೆಯನ್ನು ಸ್ಥಾಪಿಸಲು ನಡೆಸಿದ ವಿಭಿನ್ನ ಪ್ರಯತ್ನಗಳ ಹಿನ್ನೆಲೆಯಲ್ಲಿ ಗುರುತಿಸಿದ್ದಾರೆ.

ಈ ಎಲ್ಲಾ ಅಂಶಗಳು ಬಸವಣ್ಣನ ವ್ಯಕ್ತಿತ್ವದ ಬಹುಮುಖತೆಯನ್ನು, ಅನನ್ಯತೆಯನ್ನು ಸಮರ್ಥವಾಗಿ ಹಿಡಿದಿಡಲು ಪ್ರಯತ್ನಿಸಿವೆಯಾದರೂ ಏಕಮುಖವಾಗಿವೆ. ಕವಿತೆಗಳು ಬಸವಣ್ಣನ ವ್ಯಕ್ತಿತ್ವವನ್ನು ಆತನ ಕಾಲದ ಹಲವು ಬಿಕ್ಕಟ್ಟು – ಸವಾಲುಗಳ ನಡುವೆ ಇಟ್ಟು ನೋಡುವ ಪ್ರಯತ್ನವನ್ನು ಮಾಡಿಲ್ಲ. ವೈಯಕ್ತಿಕವಾಗಿ ಆತ ಎದುರಿಸಿದ ಸಮಸ್ಯೆಗಳು, ಗೊಂದಲ, ದ್ವಂದ್ವತೆಗಳು ಹಾಗೂ ಆತನ ಹೋರಾಟ, ನಿಲುವುಗಳಲ್ಲಿನ ಮಿತಿಗಳನ್ನು, ಅವುಗಳ ಪರಿಣಾಮಗಳನ್ನು ಪ್ರಶ್ನಿಸುವ, ಪರಿಶೀಲಿಸುವ ಪ್ರಯತ್ನವನ್ನು ಮಾಡಿಲ್ಲ. ಬಸವಣ್ಣನನ್ನು ಪರಿಪೂರ್ಣ

ಸಾಧಕನೆಂಬಂತೆ ಭಕ್ತಿ, ಗೌರವದ ನೆಲೆಯಲ್ಲಿಯೇ ಕಾಣಲಾಗಿದೆ. ಬಸವಣ್ಣನದು ಬಹುದೊಡ್ಡ ಸಾಧಕ ವ್ಯಕ್ತಿತ್ವ ಎನ್ನುವುದರ ಬಗೆಗೆ ಯಾವ ಅನುಮಾನವಿಲ್ಲದಿದ್ದರೂ ಆ ವ್ಯಕ್ತಿತ್ವವನ್ನು ಕೇವಲ ಆರಾಧನೆಯ ನೆಲೆಯಲ್ಲಿಯೇ ವೈಭವೀಕರಿಸಿ ಚಿತ್ರಿಸುವುದರಿಂದ ಯಾವ ದೊಡ್ಡ ಕೊಡುಗೆಯನ್ನೂ ನೀಡಿದಂತಾಗುವುದಿಲ್ಲ. ತನ್ನ ಕಾಲದಲ್ಲಿ ವೈಯಕ್ತಿಕ ಮತ್ತು ಸಾಂಸ್ಕೃತಿಕವಾದ ಹಲವು ಸಂಘರ್ಷ-ಸವಾಲುಗಳನ್ನು ಎದುರಿಸಿದ, ವಿರೋಧವನ್ನು ಕಟ್ಟಿಕೊಂಡ, ದೊಡ್ಡ ಸಾಮಾಜಿಕ, ಧಾರ್ಮಿಕ ಪಲ್ಲಟಗಳಿಗೆ ಕಾರಣವಾದ ವ್ಯಕ್ತಿತ್ವವೊಂದನ್ನು ಅದರ ಎಲ್ಲಾ ಆಯಾಮಗಳಿಂದ ಪರಿಶೀಲಿಸಿದಾಗಲೇ ಆ ವ್ಯಕ್ತಿತ್ವದ ಸಮಗ್ರತೆ ಲಭ್ಯವಾಗುವುದು. ಆದರೆ ಬಸವಣ್ಣನನ್ನು ಹೀಗೆ ಸರಳ ವೈಭವೀಕರಣಗಳಲ್ಲಿಯೇ ಗ್ರಹಿಸುವಂತೆ ಒತ್ತಾಯಿಸುತ್ತಿರುವ ನಿಯಂತ್ರಕ ಶಕ್ತಿಗಳಾವುವು? ಅಥವಾ ದೊಡ್ಡ ಸಾಧಕ ವ್ಯಕ್ತಿತ್ವವನ್ನು ಪ್ರಶ್ನಿಸುವುದು, ಅನುಮಾನಿಸುವುದನ್ನು ಮಹಾಪಾಪವೆಂದೇ ಭಾವಿಸಲಾಗಿದೆಯೇ? ಅಥವಾ ವ್ಯಕ್ತಿತ್ವವನ್ನು ಕೀರ್ತಿಸುವುದರಲ್ಲಿಯೇ ತೃಪ್ತಿಯನ್ನು ಕಂಡುಕೊಳ್ಳುವ ಧನ್ಯತಾಭಾವವೇ ? ಬಸವಣ್ಣನನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳನ್ನು ಓದಿದವರಿಗೆ ಈ ಬಗೆಯ ಪ್ರಶ್ನೆಗಳು ಎದುರಾಗುತ್ತವೆ. ಬಸವಣ್ಣ ಮತ್ತು ವಚನ ಚಳುವಳಿಯನ್ನು ವಸ್ತುವಾಗುಳ್ಳ ಸಂಕ್ರಾಂತಿ, ತಲೆದಂಡ, ಶಿವರಾತ್ರಿ, ಮಹಾಚೈತ್ರ ನಾಟಕಗಳು ಬಸವಣ್ಣನ್ನು ಎದುರುಗೊಂಡಂತೆ ಕವಿತೆಗಳು ಎದುರಾಗುವುದಿಲ್ಲ. ಹಾಗಾಗಿ ಕವಿತೆಗಳು ಬಸವಣ್ಣನನ್ನು ಭಾವುಕ ನೆಲೆಯಲ್ಲಿಯೇ ಗ್ರಹಿಸಿರುವುದರಿಂದ ಅವನ ವ್ಯಕ್ತಿತ್ವದ ಪಾರ್ಶ್ವಿಕನೋಟಗಳು ಮಾತ್ರ ಸಿಗುತ್ತವೆಯೇ ಹೊರತು ಸಮಗ್ರತೆ ಸಿಗಲಾರದು.

### ೫.೨.೨ ಬಸವಣ್ಣನ ವ್ಯಕ್ತಿತ್ವ : ಸಾಂಸ್ಕೃತಿಕ ಮುಖಾಮುಖಿ

ಬಸವಣ್ಣನ ವ್ಯಕ್ತಿತ್ವವನ್ನು ಶೋಧನೆಗೆ ಒಳಪಡಿಸುತ್ತಿರುವ ಕವಿತೆಗಳ ಬಹುಮುಖ್ಯವಾದ ಲಕ್ಷಣ ಬಸವಣ್ಣನ ವ್ಯಕ್ತಿತ್ವದ ಜೊತೆಗೆ ಸಮಕಾಲೀನ ಸಾಂಸ್ಕೃತಿಕ ಸಮಸ್ಯೆಗಳು ಅಭಿವ್ಯಕ್ತಿ ಪಡೆದಿರುವುದು. ಹಾಗೆಯೇ ಆ ವ್ಯಕ್ತಿತ್ವದ ಬೆಳಕಿನಲ್ಲಿ ತಮ್ಮನ್ನೂ, ತಮ್ಮ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ ನಡೆಗಳನ್ನು ವಿಮರ್ಶಿಸಿಕೊಳ್ಳುವ, ವಿಡಂಬಿಸಿಕೊಳ್ಳುವ ಹೊಣೆಗಾರಿಕೆಯನ್ನು ಮೆರೆದಿವೆ. ಕವಿತೆಗಳು ಬಸವಣ್ಣನ ವ್ಯಕ್ತಿತ್ವವನ್ನಷ್ಟೇ ಚಿತ್ರಿಸದೆ ಸಮಕಾಲೀನ ಸಮಸ್ಯೆಗಳ ಬಗೆಗೆ ಮಾತನಾಡುತ್ತಿರುವುದು ಅವುಗಳ ಸಾಂಸ್ಕೃತಿಕ ಮಹತ್ವವನ್ನು ಹೆಚ್ಚಿಸಿದೆ. ಕನ್ನಡ ಕವಿಗಳು ಬಸವಣ್ಣನ ವ್ಯಕ್ತಿತ್ವವನ್ನು ಚಿತ್ರಿಸುವ ಸಂದರ್ಭದಲ್ಲಿ ಬಸವಣ್ಣನನ್ನು ಕೇವಲ ಒಬ್ಬ ವ್ಯಕ್ತಿಯನ್ನಾಗಿ ನೋಡುವ ಅಥವಾ ಅವನನ್ನು ಕೇವಲ ಒಂದು ಕವನವನ್ನಾಗಿಸಿಬಿಡುವ ಸೀಮಿತ ಉದ್ದೇಶವನ್ನಷ್ಟೇ ಪಾಲಿಸದೆ ಆ ಮೂಲಕ ಇಡೀ ವ್ಯವಸ್ಥೆಯ ಸಮಕಾಲೀನ ಸನ್ನಿವೇಶಗಳ ಆಗು ಹೋಗುಗಳೊಂದಿಗೆ ಒಂದು ಎಚ್ಚರದ ಸಂವಾದವನ್ನು ನಡೆಸಲು ಪ್ರಯತ್ನಿಸಿದ್ದಾರೆ. ಇಂತಹ ಪ್ರಯತ್ನಗಳಿಗೆ ಸಾಹಿತ್ಯಿಕ ಮಾತ್ರವಲ್ಲದೆ ಸಾಂಸ್ಕೃತಿಕ ಮಹತ್ವ ಕೂಡ ಇದೆ. ಏಕೆಂದರೆ ಇಲ್ಲಿ ಚಾರಿತ್ರಿಕ ವ್ಯಕ್ತಿಗಳನ್ನು ಸಮಕಾಲೀನ ಸನ್ನಿವೇಶಗಳಲ್ಲಿ ಚಿತ್ರಿಸುವಾಗ ಅವರ ಬಗೆಗಿನ ಭಕ್ತಿ, ಗೌರವ, ಆರಾಧನಾ ಮನೋಭಾವನೆಗಳ ಜೊತೆಗೆ ಸಮಕಾಲೀನ ಸನ್ನಿವೇಶಗಳೊಂದಿಗೆ ಆ ವ್ಯಕ್ತಿಗಳ ವ್ಯಕ್ತಿತ್ವಗಳನ್ನು ಹೋಲಿಸುವ, ವಿಡಂಬಿಸುವ, ಮುರಿದು ಕಟ್ಟುವ ಪ್ರಯತ್ನಗಳು ನಡೆಯುತ್ತಿರುತ್ತವೆ. ಒಂದು ವ್ಯಕ್ತಿತ್ವವನ್ನು ಯಾವ ಯಾವ ನೆಲೆಗಳಿಂದ ಎದುರುಗೊಳ್ಳಲಾಗುತ್ತಿದೆ ಮತ್ತು ಹೀಗೆ ಎದುರುಗೊಳ್ಳುವಂತೆ ಒತ್ತಾಯಿಸುತ್ತಿರುವ ಪರಂಪರೆಯ ಹಾಗೂ ಸಮಕಾಲೀನ ಒತ್ತಡಗಳಾವುವು ಎಂಬುದನ್ನು ಕಂಡುಕೊಳ್ಳುವುದು ವ್ಯಕ್ತಿತ್ವವನ್ನೂ, ಸಮಕಾಲೀನ ಚರಿತ್ರೆಯನ್ನೂ ಅರಿಯುವ ದೃಷ್ಟಿಯಿಂದ ಮುಖ್ಯವೆನಿಸುತ್ತದೆ. ಇಲ್ಲಿ ಬಸವಣ್ಣನ ವ್ಯಕ್ತಿತ್ವವನ್ನು ಯಾಕಾಗಿ ಮತ್ತು ಯಾವ ಸಮಸ್ಯೆಗಳ ವಿಡಂಬನೆಗಾಗಿ,

ಯಾವ ಮೌಲ್ಯಗಳ ಅಭಿವ್ಯಕ್ತಿಗಾಗಿ ಬಳಸಿಕೊಳ್ಳಲಾಗುತ್ತಿದೆ ಎಂಬುದನ್ನು ಗುರುತಿಸಿಕೊಳ್ಳುವ ಅಗತ್ಯವಿದೆ. ಬಸವಣ್ಣ ಅತಿ ಹೆಚ್ಚು ಆರಾಧನೆಗೆ, ವೈಭವೀಕರಣಕ್ಕೆ ಒಳಗಾಗಿದ್ದಾನೆ. ಹೀಗಾಗಲು ಆತನ ವ್ಯಕ್ತಿತ್ವದ ಹಿರಿಮೆಯೊಂದೇ ಕಾರಣವಲ್ಲ. ಬದಲಾಗಿ ಪರಂಪರೆ ಆತನನ್ನು ಅವತಾರ ಪುರುಷನನ್ನಾಗಿ ಚಿತ್ರಿಸಿಕೊಂಡು ಬಂದಿರುವುದು ಒಂದು ಕಾರಣವಾದರೆ, ಅವನನ್ನು ಒಂದು ಜಾತಿಯ, ಧರ್ಮದ ನಾಯಕನನ್ನಾಗಿ ನೋಡುತ್ತಿರುವುದು ಇನ್ನೊಂದು ಕಾರಣ. ಇನ್ನು ತನ್ನ ಅಂತರಂಗ ಬಹಿರಂಗವನ್ನು ಪ್ರಾಮಾಣಿಕವಾಗಿ ಶುದ್ಧೀಕರಿಸಿಕೊಳ್ಳಲು ಪ್ರಯತ್ನಿಸಿದ, ಸಾಮಾಜಿಕ, ಧಾರ್ಮಿಕ ಕ್ರಾಂತಿಗೆ ಕಾರಣನಾದ ಆ ಮಾನವೀಯ ವ್ಯಕ್ತಿತ್ವ ಇವರಿಗೆ ತಮ್ಮನ್ನೂ, ಸಮಾಜವನ್ನೂ ವಿಮರ್ಶೆಗೊಳಪಡಿಸುವ ನೈತಿಕ ಶಕ್ತಿಯಾಗಿ ಕಂಡಿದೆ. ಹಾಗಾಗಿ ಕವಿತೆಗಳು ಬಸವಣ್ಣನ ವ್ಯಕ್ತಿತ್ವದೊಂದಿಗೆ ವೈಯಕ್ತಿಕ ಹಾಗೂ ಸಾಂಸ್ಕೃತಿಕ ತುರ್ತಿನೊಂದಿಗೆ ಮುಖಾಮುಖಿಯಾಗಿವೆ. ಈ ತುರ್ತುಗಳನ್ನು ತಮ್ಮ ಪರಂಪರೆಯ ಸಾಂಸ್ಕೃತಿಕ ನಾಯಕರ ಮೂಲಕ ಎದುರಿಸುವ ಪ್ರಯತ್ನ ಮಾಡಿವೆ. ಇದು ಅತ್ಯಂತ ಮುಖ್ಯವಾದ ಸಂಗತಿ. ಏಕೆಂದರೆ "ಚರಿತ್ರೆಯನ್ನು ಸಂಸ್ಕೃತಿ ಕಥನವೆಂದು ತಿಳಿಯಬೇಕಾದ ಅಗತ್ಯ ಈಗ ಬಹಳ ಮುಖ್ಯವಾದುದಾಗಿದೆ"[೨೬]. ಎನ್ನುವ ಕಲ್ಗುಡಿಯವರ ಮಾತು ಚಾರಿತ್ರಿಕ ವ್ಯಕ್ತಿಗಳನ್ನು ಸಮಕಾಲೀನ ಸನ್ನಿವೇಶಗಳೊಂದಿಗೆ ಸಮೀಕರಿಸಿ ಅಧ್ಯಯನ ನಡೆಸಬೇಕಾದ ಅಗತ್ಯತೆಯನ್ನು ಒತ್ತಿಹೇಳುತ್ತದೆ.

ಬಸವಣ್ಣನನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳು ಆ ವ್ಯಕ್ತಿತ್ವದೊಂದಿಗೆ ನಡೆಸಿರುವ ಸಾಂಸ್ಕೃತಿಕ ಮುಖಾಮುಖಿ ನೈತಿಕ ಸಾಮಾಜಿಕ ವ್ಯಕ್ತಿತ್ವಗಳನ್ನು ರೂಪಿಸುವ ಕಾಳಜಿಯಿಂದ ನಡೆದಿದೆ. ಸಮಕಾಲೀನ ಮನುಷ್ಯನಲ್ಲಿನ ನೈತಿಕ ಅಧಃಪತನವನ್ನು, ವ್ಯವಸ್ಥೆಯ ಅಪ್ರಾಮಾಣಿಕತೆಯನ್ನು ತೀವ್ರವಾಗಿ ವಿಡಂಬಿಸುವ ಮೂಲಕ ಬಸವಣ್ಣನ ಕನಸುಗಳನ್ನು ಸಾಕಾರಗೊಳಿಸುವ ಪ್ರಯತ್ನದಲ್ಲಿ ತೊಡಗಿವೆ. ಈ ಹಿನ್ನೆಲೆಯಲ್ಲಿ ಬಸವಣ್ಣನೊಂದಿಗೆ ಕವಿತೆಗಳು ನಡೆಸಿರುವ ಮುಖಾಮುಖಿಯನ್ನು ಮೂರು ನೆಲೆಗಳಲ್ಲಿ ಗುರುತಿಸಬಹುದು.

೧. ಪ್ರಶಂಸೆ ಮತ್ತು ಆರಾಧನಾ ನೆಲೆ.

೨. ಸ್ವ ವಿಮರ್ಶೆ, ತೀವ್ರ ವಿಷಾಧ ಮತ್ತು ಸಾಂಸ್ಕೃತಿಕ ವಿಡಂಬನೆಯ ನೈತಿಕ ಶಕ್ತಿಯಾಗಿ.

೩. ಸಮಕಾಲೀನ ವ್ಯಕ್ತಿತ್ವಗಳನ್ನು ರೂಪಿಸುವ ಶ್ರದ್ಧೆಯ ಆದರ್ಶವಾಗಿ.

ಪ್ರಶಂಸೆ ಮತ್ತು ಆರಾಧನಾ ನೆಲೆ ಪಾರಂಪರಿಕ ಆಲೋಚನಾ ಭಿತ್ತಿಯಲ್ಲಿ ರೂಪುಗೊಂಡಿದ್ದರೆ, ಎರಡು ಮತ್ತು ಮೂರನೆಯ ನೆಲೆಗಳಿಗೆ ಸಂಬಂಧಿಸಿದ ಕವಿತೆಗಳು ಆ ವ್ಯಕ್ತಿತ್ವದ ವೈಚಾರಿಕ ಆಕೃತಿಗಳಿಂದ ಮತ್ತು ತನ್ನ ಹಾಗೂ ಸಮಕಾಲೀನ ಸಾಂಸ್ಕೃತಿಕ ಬದುಕಿನ ಬಗೆಗಿನ ಅರಿವು ಹಾಗೂ ಸೂಕ್ಷ್ಮ ಒಳನೋಟಗಳಿಂದ ರೂಪುಗೊಂಡಿರುವಂತದ್ದು. ಈ ಎರಡೂ ಬಗೆಯ ಕವನಗಳು ಬಸವಣ್ಣನ ವ್ಯಕ್ತಿತ್ವವನ್ನು ಹಾಗೂ ಸಮಕಾಲೀನ ಚರಿತ್ರೆಯನ್ನು ಕುರಿತಂತೆ ಮಹತ್ವದ ಒಳನೋಟಗಳನ್ನು ನೀಡಿವೆ.

### ೧. ಪ್ರಸಂಶೆ ಮತ್ತು ಆರಾಧನಾ ನೆಲೆ.

ಬಸವಣ್ಣನ ವ್ಯಕ್ತಿತ್ವವನ್ನು ಕುರಿತಾದ ಪ್ರಶಂಸೆ ಮತ್ತು ಆರಾಧನಾ ನೆಲೆಯ ರಚನೆಗಳು ಬಸವಣ್ಣನ ಜೀವನ ಚರಿತ್ರೆಯನ್ನಾಧರಿಸಿದ ಮಾಹಿತಿ ಹಾಗೂ ವಿವರಗಳನ್ನು ಪ್ರಶಂಸೆಯ ನೆಲೆಯಲ್ಲಿ ನೀಡುವುದರೊಂದಿಗೆ ತನ್ನ ಸಮಕಾಲೀನ ಸಮಾಜ, ಧರ್ಮ, ರಾಜಕೀಯ ಸವಾಲುಗಳೊಂದಿಗೂ ಮುಖಾಮುಖಿಯಾಗುತ್ತವೆ. ಆದರೆ ಇವು ಸಾಂಸ್ಕೃತಿಕ ಹೊಣೆಗಾರಿಕೆಗಿಂತ ಬಸವಣ್ಣನ ವ್ಯಕ್ತಿತ್ವವನ್ನು ವೈಭವೀಕರಿಸಿ ವರ್ಣಿಸುವ ಕಡೆಗೆ ಹೆಚ್ಚು ಆಸಕ್ತವಾಗಿವೆ. ಇವು ಬಸವಣ್ಣನ ಸಾಧನೆ, ಸಿದ್ಧಿಗಳನ್ನು ಹೊಗಳುವ, ಉತ್ಪ್ರೇಕ್ಷಿಸಿ ಕಾವ್ಯಮಯವಾಗಿ ಚಿತ್ರಿಸುವ,

ಭಕ್ತಿಯ ಕಾಣಿಕೆಯನ್ನು ಅರ್ಪಿಸುವ, ಗೌರವದ ನಮನಗಳನ್ನು ಸಲ್ಲಿಸುವ ಸೀಮಿತ ಉದ್ದೇಶಗಳನ್ನಷ್ಟೇ ಹೊಂದಿವೆ. ಹೆಚ್ಚಿನ ಸಂದರ್ಭದಲ್ಲಿ ಈ ಬಗೆಯ ಕವನಗಳು ಆ ವ್ಯಕ್ತಿತ್ವವನ್ನು ಸ್ವತಂತ್ರವಾಗಿ ಗ್ರಹಿಸುವುದಕ್ಕಿಂತ ಮತ್ತೊಬ್ಬರು ಕಟ್ಟಿಕೊಟ್ಟಿರುವ ವ್ಯಕ್ತಿತ್ವವನ್ನು ಎತ್ತಿಹಿಡಿಯುವ ದಾಟಿಯಲ್ಲಿವೆ. ಏಕೆಂದರೆ ಇವುಗಳು ಅಭಿನಂದನೆಯನ್ನು ಸಲ್ಲಿಸುವ ಸಲುವಾಗಿಯೋ, ಜಯಂತಿ, ಮಹೋತ್ಸವಗಳ ಸಂದರ್ಭದಲ್ಲಿಯೋ, ಆ ವ್ಯಕ್ತಿಯ ಬಗೆಗಿನ ತಮ್ಮ ಗೌರವ ಸಮರ್ಪಣೆಯ ಸಲುವಾಗಿಯೋ ಹಾಗೂ ಸಾಂಸ್ಥಿಕ ಚಟುವಟಿಕೆಗಳ ಭಾಗವಾಗಿಯೋ ರಚನೆಗೊಂಡವುಗಳಾಗಿರುತ್ತವೆ. ಇಂಥ ರಚನೆಗಳು ಎಷ್ಟೋ ಬಾರಿ ಕ್ಲೀಷೆಯ ಮಟ್ಟಕ್ಕೂ ಇಳಿಯುವುದುಂಟು. ವ್ಯಕ್ತಿಯ ಬದುಕು, ಸಾಧನೆ – ನೋವುಗಳನ್ನು ಸಾಮಾಜಿಕ ಸುಧಾರಣೆಗಳನ್ನು ಹೊಗಳಿ ಬರೆಯುವುದು ಇಂತಹ ಕವಿತೆಗಳ ಆಶಯ. ಇನ್ನು ಕೆಲವು ಕವನಗಳು ಸಂಕ್ಷಿಪ್ತ ಜೀವನ ಚರಿತ್ರೆಗಳಾಗಿರುವುದೂ ಉಂಟು. ಬಹುತೇಕ ಕವಿತೆಗಳು ಈ ಗುಂಪಿಗೆ ಸೇರುತ್ತಾವಾದರೂ ಕೆಲವು ಕವಿತೆಗಳನ್ನು ಇಲ್ಲಿ ಪ್ರಾತಿನಿಧಿಕವಾಗಿ ಪ್ರಸ್ತಾಪಿಸಲಾಗಿದೆ. ಕೆಲವು ಕವಿತೆಗಳು ಪ್ರಶಂಸೆ, ಆರಾಧನೆಯ ಜೊತೆಗೇ ಸ್ವವಿಮರ್ಶೆ, ಸಾಮಾಜಿಕ ವಿಮರ್ಶೆಯಲ್ಲೂ ತೊಡಗುತ್ತವೆ. ಇಲ್ಲಿ ನಮ್ಮ ಪರಂಪರೆಯ ಮಾನವೀಯ ವ್ಯಕ್ತಿತ್ವಗಳನ್ನು ಅಲೌಕಿಕ ನೆಲೆಯಲ್ಲಿಯೇ ಗ್ರಹಿಸುವಂತೆ ನಿರ್ದೇಶಿಸುತ್ತಿರುವ ಅಗೋಚರ ಸಾಮಾಜಿಕ ಶಕ್ತಿಗಳ ಬಗೆಗೆ ಹಾಗೂ ಅವುಗಳಿಂದ ಬಿಡಿಸಿಕೊಳ್ಳಲಾಗದ ಮನಸ್ಥಿತಿಗಳ ಬಗೆಗೆ ಇಲ್ಲಿ ಚರ್ಚಿಸಲಾಗಿದೆ. ಬಸವಣ್ಣನ ವ್ಯಕ್ತಿತ್ವದ ಹಿರಿಮೆಯನ್ನು ಗುರುತಿಸುವ ಈ ಬಗೆಯ ರಚನೆಗಳ ಪ್ರಯತ್ನವನ್ನು, ಅವುಗಳ ಕಾವ್ಯ ಶಕ್ತಿಯನ್ನು ಅಲ್ಲಗಳೆಯಲಾಗದಿದ್ದರು ಆ ಪ್ರಯತ್ನಗಳ ಹಿಂದಿನ ಸಾಂಪ್ರದಾಯಿಕ ಮನೋಧೋರಣೆಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು ಇಲ್ಲಿನ ಚರ್ಚೆಯ ಮುಖ್ಯ ಉದ್ದೇಶವಾಗಿದೆ.

ಬಾಗೆವಾಡಿಯ ಭಾಗ್ಯ ರೂಢಿ ಜಡತೆಯನೊಡೆದು
ತೋಡಿ ಮೂಡಣಕಂತರಂಗ ಮೊರೆಯೆ,
ಹರನ ಕರುಣೋದಯದ ಹೊಂಗಿರಣದಾರತಿಯು
ಸಂಗಮೇಶ್ವರ ಲಿಂಗ ಗರ್ಭಗುಡಿಗೆ
ಉದಕದಲಿ ಬಚ್ಚಿಟ್ಟ ಬಯಕೆ ಕಿಚ್ಚಿನ ಕಿಡಿಯೊಲುರಿದೆದ್ದು ಬಂದ ಬಸವ
ಏಳು ಜನುಮದ ತಂದೆ ಏಳನೆ ಭವಾಂತರದಿ ಬಂದಿಹನು ನವ
ಮಾನವ. [೨೭]

ಚೆನ್ನವೀರ ಕಣವಿಯವರ ಈ ಕವನ ಬಸವಣ್ಣನ ಹುಟ್ಟನ್ನು ದೈವಕೃಪೆಯ ನೆಲೆಗೆ ಕೊಂಡೊಯ್ಯುತ್ತದೆ. ಬಸವಣ್ಣನ ಹುಟ್ಟನ್ನು ನೆನೆದು ಸಂಭ್ರಮಿಸುವ ನೆಲೆಯಲ್ಲಿ ಆರಂಭವಾಗುವ ಕವನ 'ಹರನ ಕರುಣೋದಯದಿಂದ' ಬಸವಣ್ಣನ ಜನನವಾಯಿತೆಂದು ಚಿತ್ರಿಸುತ್ತದೆ' ಇದು ಸಾಮಾನ್ಯ ಮನುಷ್ಯನೊಬ್ಬನ ಅಸಮಾನ್ಯ ವ್ಯಕ್ತಿತ್ವವನ್ನು, ಅವನ ಸಾಧನೆ, ಸಿದ್ಧಿಗಳನ್ನು ಮನುಷ್ಯ ಸಹಜ ಗುಣಗಳಿಂದ ಬೇರ್ಪಡಿಸಿ ನೋಡುವ ಕ್ರಮವಾಗಿದೆ. ಮುಂದುವರಿದು 'ಉದಕದಲಿ ಬಚ್ಚಿಟ್ಟ ಬಯಕೆ ಕಿಚ್ಚಿನ ಕಿಡಿಯೊಲುರಿದೆದ್ದು ಬಂದ ಬಸವ' ಎಂದು ಬಸವಣ್ಣನ ಹುಟ್ಟನ್ನು 'ಪವಾಡ'ದ, 'ಅಗೋಚರ'ದ ನೆಲೆಗೆ ಕೊಂಡೊಯ್ಯುತ್ತಾರೆ. ಆದರೆ ಮುಂದಿನ ಸಾಲುಗಳಲ್ಲಿ ಬಸವಣ್ಣನ ಸಾಧನೆಯನ್ನು ಸ್ಮರಿಸುತ್ತಾರಾದರೂ ಅವೆಲ್ಲವೂ ವಾಸ್ತವಿಕತೆಯನ್ನು ಆಧ್ಯಾತ್ಮಿಕತೆಯ ಹಿನ್ನೆಲೆಯಲ್ಲಿ ಮರೆಮಾಚಿದಂತೆ ಕಾಣುತ್ತದೆ. ಏಕೆಂದರೆ ಬಸವಣ್ಣನನ್ನು ನಮ್ಮಂತೆ ಸಾಮಾನ್ಯ ಮನುಷ್ಯನೆಂದು ಬಗೆದಾಗ ಮಾತ್ರ ಅವನ ತುಡಿತ ಮಿಡಿತಗಳನ್ನು ಸಮರ್ಥವಾಗಿ ಅರ್ಥೈಸಲು ಸಾಧ್ಯ. ಅವನನ್ನು ದೈವಾಂಶ ಸಂಭೂತ, ಕಾರಣಿಕ ಪುರುಷ ಎಂದಾಕ್ಷಣ ಅವನ ಕ್ರಿಯೆಗಳ ಹಿಂದಿನ ಮಾನವ ಪ್ರೇಮವನ್ನು ಅವಾಸ್ತವ ನೆಲೆಯಲ್ಲಿ ಗ್ರಹಿಸಿದಂತಾಗಿಬಿಡುತ್ತದೆ. ಇಡೀ ಕವನ ಈ ನೆಲೆಯಲ್ಲಿಯೆ ಮುಂದುವರಿದಿದೆ. ಬಸವಣ್ಣನ ಸಿದ್ಧಾಂತ, ಸಾಧನೆ,

ಚಿಂತನೆ, ಸಾವು ಎಲ್ಲವೂ ಕೂಡ ದೈವನಿಯಮಕವೆಂದು ಭಾವಿಸುವ ವಿಧಾನವೇ ಬಸವಣ್ಣನ ವ್ಯಕ್ತಿತ್ವವನ್ನು ಮಿತಿಗೊಳಿಸುವಿಕೆಯಾಗಿದೆ. ಇನ್ನಷ್ಟು ವಿಸ್ತೃತಗೊಳ್ಳಬಹುದಾಗಿದ್ದ, ಅರ್ಥವಂತಿಕೆಯನ್ನು ಪಡೆಯಬಹುದಾಗಿದ್ದ ಬಸವಣ್ಣನ ವ್ಯಕ್ತಿತ್ವ ಕಣವಿಯವರ 'ಬಸವಣ್ಣನ ಬೆಳಕು' ಕವನದಲ್ಲಿ ಪದಗಳ ಆಡಂಬರದೊಳಗೆ ಸಿಲುಕಿ ಮಸಕು ಮಸಕಾಗಿ ರೂಪುಗೊಂಡಿದೆ.

ಬಸವಣ್ಣನನ್ನು ಕುರಿತ ಬಹುತೇಕ ರಚನೆಗಳು ಅವನನ್ನು ಬಹುದೊಡ್ಡ ಸಾಧಕ, ಪವಾಡಗಳನ್ನು ಮೆರೆದವನು ಎಂಬ ಸರಳೀಕೃತ ಗ್ರಹಿಕೆಯಲ್ಲಿಯೇ ನಿಲ್ಲಿಸಿ ಆತನೊಳಗಿದ್ದ ಸಾಮಾನ್ಯ ಮನುಷ್ಯನ ಗೊಂದಲ, ಮಿತಿ, ಸಾಧಕನೊಬ್ಬನ ತಲ್ಲಣಗಳು, ಎದುರಿಸಿದ ವಿರೋಧಗಳು, ಅನುಭವಿಸಿದ ಖಿನ್ನತೆಗಳು ಇವೆಲ್ಲವನ್ನು 'ಜಾಣ ಮರೆವಿನ' ರೀತಿಯಲ್ಲಿ ಕಟ್ಟಿಕೊಡಹೊರಡುವುದು ವ್ಯಕ್ತಿತ್ವವನ್ನು ನೈಜರೀತಿಯಲ್ಲಿ ಗ್ರಹಿಸುವಲ್ಲಿನ ವಿಫಲತೆಯೇ ಆಗಿದೆ. ಸ್ವತಃ ಬಸವಣ್ಣ ತಾನು ಸಾಮಾನ್ಯ ಮನುಷ್ಯನಾಗಿ ಅನುಭವಿಸಿದ ಎಲ್ಲ ಬಗೆಯ ಸಂಕಟಗಳನ್ನು ತನ್ನ ವಚನಗಳಲ್ಲಿ ಹೇಳಿಕೊಂಡಿದ್ದಾಗ್ಯೂ ಕವಿಗಳು ಮಾತ್ರ ಆತನ ವ್ಯಕ್ತಿತ್ವವನ್ನು, ಸಾಧನೆಯ ಹಾದಿಯನ್ನು, ಅತ್ಯಂತ ಸರಳ ಮತ್ತು ಸುಗಮ ಎಂಬ ನೆಲೆಯಲ್ಲಿಯೇ ಚಿತ್ರಿಸಿಬಿಟ್ಟಿರುವುದು ಆ ವ್ಯಕ್ತಿತ್ವಕ್ಕೆ ಮಾಡಿದ ದ್ರೋಹವೂ ಹೌದು ಎಂದೆನಿಸುತ್ತದೆ.

ದೇಹ ದೇಗುಲದೊಳಗೆ ಭಾವ ಶುದ್ಧಿಯ ಸೊಡರು
ಅರಿವು ಲಿಂಗಕನಂತ ಕಾಲ ಪೂಜೆ;
ಕಾಯಕದಿ ಬಂದ ಎಡೆ, ನುಡಿ- ನಡೆಯ ಮೋಡ-ಮಳೆ
ಹೊಡಕರಿಸೆ ಕುಡಿಮಿಂಚು ವಚನದೋಜೆ,
ಅನುಭಾವದನುವಿಡಿದು, ಅಂತರಾಳವ ಕಡೆದು
ಹೊಮ್ಮಿರುವ ಚಿಜ್ಯೋತಿಯೆ
ಧರೆಯ ಮೇಲಣ ಶೂನ್ಯ ಸಿಂಹಾಸನವನೇರು
ಮುಗಿಲ ಗುರು – ಗುಂಭ ದೊರೆಯೆ [³⁸]

ಈ ಕವಿತೆ ಬಸವಣ್ಣ ಹಾಗೂ ವಚನ ಚಳುವಳಿಯ ಫಲಿತಗಳನ್ನು 'ಬೆಳಕು', 'ಜ್ಯೋತಿ' ಎಂದು ಗುರುತಿಸುವ ಮೂಲಕ ಇಡೀ ವ್ಯವಸ್ಥೆಗೆ ಬಸವಣ್ಣನ ಚಿಂತನೆಗಳು ದಾರಿದೀಪವಾದ ಬಗೆಯನ್ನು ಗುರುತಿಸುತ್ತದೆ. ಇಲ್ಲಿ ಬಸವಣ್ಣನೆಂದರೆ ಅರಿವು, ಅರಿವಿನ ಬೆಳಕು, ಅದು ಎಲ್ಲರ ಬದುಕನ್ನೂ ಸಮಾನವಾಗಿ ಬೆಳಗಿದ ಬೆಳಕು ಎಂಬುದು ಬಸವಣ್ಣನ ವ್ಯಕ್ತಿತ್ವಕ್ಕೆ ಹೊಂದುತ್ತದಾದರೂ ಇಡೀ ಕವನ ಮೂಡಿಬಂದಿರುವುದು ಆ ವ್ಯಕ್ತಿತ್ವದ ಮೇಲಿನ ಅಪಾರವಾದ ಭಕ್ತಿಯಿಂದ. ಇಲ್ಲಿ ಪರಂಪರೆಯ ಸಾಂಪ್ರದಾಯಿಕ ಮನಸ್ಥಿತಿ ಇಡೀ ಕವಿತೆಯನ್ನು ಆರಾಧನೆಯ ಮಟ್ಟದಲ್ಲಿಯೇ ನಿಲ್ಲಿಸಿಬಿಡುತ್ತದೆ.

ಬಸವಣ್ಣನನ್ನು ತಮ್ಮ ಮುಂದಿನ ಬದುಕಿನ ಮಾರ್ಗದರ್ಶಕನನ್ನಾಗಿ, ತಮ್ಮನ್ನು ಮುನ್ನೆಡೆಸುವ ಬೆಳಕಾಗಿ ಗುರುತಿಸುವ ಕ್ರಮ ಬಹುತೇಕ ಕವಿತೆಗಳಲ್ಲಿ ಕಂಡುಬರುತ್ತದೆ. ಕಾವ್ಯಾನಂದರ 'ಬಸವನ ಬೆಳಕೆ' ಕವನ ಕೂಡ ಬಸವಣ್ಣನನ್ನು ಬೆಳಕಾಗಿ ಗುರುತಿಸುತ್ತದೆ. ಈ ಬೆಳಕು ಇಡೀ ಜೀವರಾಶಿಯನ್ನು ತನ್ನ ಕರುಣೆಯ ಕಿರಣದಿಂದ ಕಾಪಾಡಲೆತ್ನಿಸಿತು ಎಂಬುದು ನಿಜವಾದರೂ ಅದನ್ನು ಅಭಿವ್ಯಕ್ತಿಸಿರುವ ರೀತಿ ಕೇವಲ ಪ್ರಶಂಸೆಯ ನೆಲೆಯದ್ದೇ ಆಗಿದೆ.

ಬಸವನ ಬೆಳಕೆ
ಎಲ್ಲಾಡಿ ಬಂದೆ?

ಭಾರತವೆಲ್ಲಾ
ಸುತ್ತಾಡಿ ಬಂದೆ!
ನಿಟ್ಟುಸಿರೆದೆಯನು
ಬೆಳಗಿಸಿ ಬಂದೆ
ನಿರಾಶೆಯದೆಯನು
ತೊಳಗಿಸಿ ಬಂದೆ
ಹೆಣ್ಣಿನ ಕಂಬನಿ
ಬತ್ತಿಸಿ ಬಂದೆ
ಆಶಾ ಜ್ಯೋತಿಯ
ಹೊತ್ತಿಸಿ ಬಂದೆ
ದೀನರ ಬಾಳನು ಮುಸುಕಿದ ಕಾಳವ
ಕಬಳಿಸಿ ಬಂದೆ
ಧವಳಿಸಿ ಬಂದೆ![೨೯]

ಈ ಕವಿತೆ ಬಸವಣ್ಣನನ್ನು ಪರಿಪೂರ್ಣ ಸಾಧಕನ ಹಾಗೆ ಚಿತ್ರಿಸಲು ಹೊರಟು ಸರಳತೆಯಲ್ಲಿ ನಿಂತುಬಿಟ್ಟಿದೆ. ಬಸವಣ್ಣನನ್ನು 'ಬೆಳಕು' ಎಂದು ಕರೆದಿರುವುದು ಸಮರ್ಥ ರೂಪಕವಾದರೂ ಆ ಬೆಳಕು ತೀರಾ ಸರಳವಾಗಿ ಎಲ್ಲವನ್ನೂ ಬೆಳಗಿತೆನ್ನುವುದು, ಎಲ್ಲ ಕತ್ತಲೆಯನ್ನೂ ಇನ್ನಿಲ್ಲದಂತೆ ಓಡಿಸಿತು ಎನ್ನುವುದು ಬಸವಣ್ಣನ ವ್ಯಕ್ತಿತ್ವಕ್ಕೆ ಪವಾಡದ ಲೇಪವನ್ನು ಆರೋಪಿಸುವ ಪ್ರಯತ್ನವಾಗಿದೆ. ಬಸವಣ್ಣನ ವ್ಯಕ್ತಿತ್ವ ಬೆಳಕಾಗಿ ಬೆಳಗುವ ಹಿಂದೆ ಅನುಭವಿಸಿದ ಹೊಯ್ದಾಟಗಳನ್ನು ಮನುಷ್ಯನೊಬ್ಬನ ಪ್ರಯತ್ನಗಳಾಗಿ ಇದು ನೋಡುವುದಿಲ್ಲ. ಬಸವಣ್ಣನನ್ನು ಒಬ್ಬ ಪ್ರಯತ್ನಶೀಲ ಸುಧಾರಕನನ್ನಾಗಿ ನೋಡಬೇಕಾಗಿದ್ದ ಪ್ರಜ್ಞೆ ಹೋಗಿ ಒಬ್ಬ ಪರಿಪೂರ್ಣ ಸಾಧಕನನ್ನಾಗಿ ನೋಡಲಾಗಿದೆ.

ಇನ್ನೂ ಕೆಲವು ಕವನಗಳು ಕಥನ ಕವನಗಳ ದಾಟಿಯನ್ನು ಅನುಸರಿಸಿ ಬಸವಣ್ಣನ ಬದುಕಿನ ಸಂಕ್ಷಿಪ್ತ ಚರಿತ್ರೆಯನ್ನು ಕಟ್ಟಿಕೊಡುತ್ತವೆ. ಇವುಗಳು ವ್ಯಕ್ತಿ ಪರಿಚಯವನ್ನು ಹೊಗಳಿಕೆ, ಧನ್ಯತೆಯ ಸೀಮಿತ ನೆಲೆಯಲ್ಲಿಯೇ ನೀಡುವಂತವು. ಇಂತಹ ಕವನಗಳಿಂದ ಸಾಹಿತ್ಯಿಕ, ವೈಚಾರಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ಯಾವ ಮಹತ್ವದ ವಿವರಗಳನ್ನು ನಿರೀಕ್ಷಿಸಲೂ ಸಾಧ್ಯವಿಲ್ಲ. ಈ ಕವನಗಳು ಯಾವ ಮಹತ್ವದ ಒಳನೋಟಗಳನ್ನು ನೀಡಲೂ ಮುಂದಾಗುವುದಿಲ್ಲ. ಏಕೆಂದರೆ ಈ ಬಗೆಯ ಕವನಗಳು ಸಾಹಿತ್ಯದ ಒತ್ತಾಸೆಯಿಂದ ಅಭಿವ್ಯಕ್ತಿ ಪಡೆದ ರಚನೆಗಳೆನ್ನುವುದಕ್ಕಿಂತ ಕವನ ರಚನೆಯ ಮೂಲಕ ಆ ವ್ಯಕ್ತಿಗೆ ತನ್ನ ಗೌರವವನ್ನು ಸಮರ್ಪಿಸುವ, ತಾನೂ ಬರೆಯಬೇಕೆಂಬ ಹಂಬಲದಿಂದ ರಚನೆಗೊಂಡ ಕವನಗಳಾಗಿವೆ. ಹಾಗಾಗಿ ಇಲ್ಲಿ ವಿಮರ್ಶೆ, ವಿಶ್ಲೇಷಣೆಯನ್ನು ಅಪೇಕ್ಷಿಸುವುದೂ ಕೂಡ ಸಾಧ್ಯವಿಲ್ಲ. ಉದಾಹರಣೆಗೆ;

ಬಸವ ನಾಮಸ್ಮರಣೆಯೆ ಪುಣ್ಯ
ಬಸವನ ನೆನೆಯುವ ಜನಮವೆ ಧನ್ಯ
ಬಸವೇಶ್ವರ ಬಸವಣ್ಣನೆ ಮಾನ್ಯ
ಗುರುಬಸವೇಶನೆ ಶರಣವರೇಣ್ಯ[೩೦]

ಶರಣು ಶರಣಾರ್ಥಿ
ನಿಮಗೆ ಶ್ರೀ ಜಗಜ್ಯೋತಿ,
ಮನುಜ ಮೌಢ್ಯದತಿ
ಕತ್ತಲನು ಬೆಳಗಿದ್ದ ವಚನ ಪ್ರದೀಪ್ತಿ,
ಕಲ್ಯಾಣ ರಾಜ್ಯಕ್ಕೆ ಸ್ಫೂರ್ತಿ
ನಿಮ್ಮ 'ಕಲ್ಯಾಣ ಕ್ರಾಂತಿ[೩೧]

ಇಲ್ಲಿ ಬಸವಣ್ಣನನ್ನು ದೈವವಾಗಿ ಆರಾಧಿಸುವ, ಅವನ ಸಾಮಾಜಿಕ ಬದಲಾವಣೆಯ ಹಂಬಲವನ್ನು ಪ್ರಶಂಸಿಸುವ ವಿಧಾನ ಮಾತ್ರ ಕಂಡುಬರುತ್ತದೆ. ಜೊತೆಗೆ ಬಸವಣ್ಣನ ಬಗೆಗೆ ಇರುವ ವೈಯಕ್ತಿಕ ಹಾಗೂ ಸಾಂಸ್ಥಿಕ ನೆಲೆಯ ಗೌರವ, ಅಭಿಮಾನಗಳೂ ಕೂಡ ಬಸವಣ್ಣನ ಎಲ್ಲಾ ಚಿಂತನೆಗಳನ್ನೂ ಮರುಮಾತಾಡದೆ ಒಪ್ಪಿಕೊಳ್ಳುವಂತೆ ಒತ್ತಾಯಿಸಿವೆ ಎಂದೆನಿಸುತ್ತದೆ. ಹಾಗಾಗಿ ಇಂತಹ ಕವನಗಳು ಬಸವಣ್ಣ ಹಾಗೂ ಅವನ ಸಾಧನೆಯನ್ನು ತುಂಬು ಹೃದಯದಿಂದ ಹಾಡಿ ಹೊಗಳುತ್ತವೆ. ಅವನ ಕಾಯಕ, ದಾಸೋಹ, ಸಮಾನತೆ, ಇಷ್ಟ ಲಿಂಗದ ಪರಿಕಲ್ಪನೆಯನ್ನು ಬಸವಣ್ಣನ ಸಾಧನೆ ಎಂದೇ ಭಾವಿಸುತ್ತವೆ. ಆದರೆ ಕಾಯಕ, ದಾಸೋಹ, ಲಿಂಗ, ಜಂಗಮದ ಮಹತ್ವವನ್ನು ಈ ಕವಿಗಳು ಸಮರ್ಪಕವಾಗಿ ಅರ್ಥೈಸಿಕೊಂಡಂತೆ ಕಂಡುಬರುವುದಿಲ್ಲ. ಕಾಯಕದ ಹಿಂದಿನ ದೈಹಿಕ ಶ್ರಮವನ್ನಾಗಲೀ, ದಾಸೋಹದ ಹಿಂದಿನ ಸಮಾನ ಹಂಚಿಕೆಯ ಸಿದ್ಧಾಂತವನ್ನಾಗಲೀ, ಲಿಂಗ ಪರಿಕಲ್ಪನೆಯ ವಿಸ್ತೃತತೆ, ಸೃಷ್ಟಿ ಶಕ್ತಿಯನ್ನಾಗಲೀ, ಜಂಗಮತ್ವದ ಹಿಂದಿನ ಚಲನಶೀಲತೆಯನ್ನಾಗಲೀ ಅರಿಯಲು ಪ್ರಯತ್ನಿಸದೆ ಕೇವಲ ಈ ಪರಿಕಲ್ಪನೆಯ ಅರ್ಥ ಸಾಧ್ಯತೆಗೆ ಮಾತ್ರ ಪ್ರಾಮುಖ್ಯತೆಯನ್ನು ನೀಡುತ್ತವೆ. ಅವುಗಳ ಗುಣಗಾನಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತವೆ. ಅರ್ಚಕ ವೆಂಕಟೇಶ ಅವರ 'ನಿನ್ನ ಶ್ರೀಪಾದಕ್ಕೆ ಕೋಟಿ ನಮನ' ಎನ್ನುವ ಕವನ ಬಸವಣ್ಣನ ಗುಣಗಾನ ಮಾಡುವ ಭರದಲ್ಲಿ ಅವನ ತತ್ವ ಸಿದ್ಧಾಂತಗಳ ಪ್ರಾಮುಖ್ಯತೆಯನ್ನು ಸಂಪೂರ್ಣ ನಿರ್ಲಕ್ಷಿಸಿರುವುದನ್ನು ಗುರುತಿಸಬಹುದು.

> ನಿನ್ನ ನಡೆ ನುಡಿ ಪರುಷ, ನಿನ್ನ ಹಸ್ತವು ಪರುಷ
> ನಿನ್ನ ದಿವ್ಯ ದೃಷ್ಟಿ ತಾನು ಪರುಷ
> ನಿನ್ನ ತನು ಮನ ಪರುಷ, ನಿನ್ನ ಭಾವವು ಪರುಷ
> ನಿನ್ನಂತರಂಗ ತಾ ನಿತ್ಯ ಪರುಷ
>
> ನಿನ್ನ ಎತ್ತರ ಗೌರಿ ಶಂಕರ
> ನಿನ್ನ ಹೃದಯವು ಸಪ್ತಸಾಗರ
> ನಿನ್ನ ಮನವೋ ವ್ಯೋಮಮಂಡಲಕ್ಕಿಂತ ವಿಸ್ತಾರ!
> ನಿನ್ನ ಚಿತ್ತವು ಪರಮ ಮಧುರ
> ನಿನ್ನ ಭಾವವು ಶುಭ್ರಸುಂದರ
> ನಿನ್ನ ಕಲ್ಪನೆ ಕಾವ್ಯಲೋಕದ ದಿವ್ಯಮಂದಾರ! [೩೨]

ಈ ಕವನ ಬಸವಣ್ಣನ ವ್ಯಕ್ತಿತ್ವದ ಬಹುಮುಖತೆಯನ್ನು ಹಿಡಿದಿಡಲು ಪ್ರಯತ್ನಿಸುತ್ತದೆಯಾದರೂ ಅದರಲ್ಲಿ ಸಂಪೂರ್ಣ ಯಶಸ್ವಿಯಾಗಿಲ್ಲ ಎಂದೆನಿಸುತ್ತದೆ. ಏಕೆಂದರೆ ಇಲ್ಲಿ ಬಸವಣ್ಣನ 'ದಿವ್ಯ ದೃಷ್ಟಿ', 'ಆತ್ಮ ಸತ್ವ', 'ದೇವತತ್ವ'ಗಳನ್ನು ಮಾನವ ಪ್ರೇಮ, ಸರ್ವ ಸಮಾನತೆಯ ಆಶಯದ ಹಿನ್ನೆಲೆಯಲ್ಲಿ ಗ್ರಹಿಸದೆ ಕೇವಲ ಹೊಗಳಿಕೆಯ ಮಟ್ಟಕ್ಕಷ್ಟೇ ಸೀಮಿತಗೊಳಿಸಲಾಗಿದೆ. ಹಾಗಾಗಿ ಬಸವಣ್ಣನ ನಿಜವಾದ ಆಶಯದ ಹಿನ್ನೆಲೆಯಲ್ಲಿ ಈ ಪರಿಕಲ್ಪನೆಗಳನ್ನು ಚರ್ಚಿಸಲಾಗಿಲ್ಲ. ಅವುಗಳನ್ನು ಉತ್ಪ್ರೇಕ್ಷಿಸಿ ಹೇಳುವ ಮೂಲಕ ಬಸವಣ್ಣನ ವ್ಯಕ್ತಿತ್ವವನ್ನು ಅಲೌಕಿಕ ನೆಲೆಯಲ್ಲಿ ಚಿತ್ರಿಸಲಾಗಿದೆ. 'ನಿನ್ನ ಕಲ್ಪನೆ ಕಾವ್ಯ ಲೋಕದ ದಿವ್ಯಮಂದಾರ' ಎನ್ನುವ ಸಾಲುಗಳು ಬಸವಣ್ಣನನ್ನು, ಅವನ ಚಿಂತನೆಗಳನ್ನು ವಾಸ್ತವದಲ್ಲಿ ಗ್ರಹಿಸದೆ ಕಲ್ಪನಾತ್ಮಕವಾಗಿ ಚಿತ್ರಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಹಾಗಾಗಿ ಇಲ್ಲಿ ಬಸವಣ್ಣನ ವ್ಯಕ್ತಿತ್ವ ವಾಸ್ತವ ನೆಲೆಯನ್ನು ಮೀರಿ 'ಪರಿಪೂರ್ಣ' 'ಅಮೂರ್ತ' ನೆಲೆಯಲ್ಲಿ ನಿಂತುಬಿಡುತ್ತದೆ. ಮುಂದುವರೆದು;

> ಸರ್ವಗುಣ ಸಂಪನ್ನ
> ನಿತ್ಯವೂ ಪರಿಪೂರ್ಣ
> ಶ್ರೀ ಮನ್ನಿರಂಜನ

ನಿಸ್ಸಂಗಿ ಸಜ್ಜನ
ಆರೂಢ ದಾಸೋಹಿ
ನಿತ್ಯವೂ ನಿರ್ಮೋಹಿ
ಓ, ಅಣ್ಣ ಜಗದಣ್ಣ
ಕಾರುಣಿಕ ಬಸವಣ್ಣ
ನಿನ್ನ ಶ್ರೀ ಪಾದಕ್ಕೆ ಕೋಟಿ ನಮನ! [೩೩]

ಎನ್ನುವ ಸಾಲುಗಳು ಬಸವಣ್ಣನ ವ್ಯಕ್ತಿತ್ವ ಗ್ರಹಿಕೆಗಿಂತ ಪದಾಡಂಬರ, ಪ್ರಾಸ ಬದ್ಧತೆಯ ಕಡೆಗೆ ಗಮನ ಹರಿಸಿದೆ. ಈ ಬಗೆಯ ಕವನಗಳು ಬಸವಣ್ಣನಿಗೆ ಗೌರವವನ್ನು ಸಲ್ಲಿಸುವುದು ಅವನ ಮಹಿಮೆಯನ್ನು ವಿವರಿಸುವುದನ್ನಷ್ಟೇ ಮುಖ್ಯವಾಗಿಟ್ಟುಕೊಂಡು ಅವನ ಜೀವನ ವಿವರಗಳನ್ನು ಕಟ್ಟಿಕೊಡುತ್ತವೆ. ಆದರೆ ಕೆಲವು ಸನ್ನಿವೇಶಗಳಲ್ಲಿ ಬಸವಣ್ಣನ 'ಪವಾಡ ಸದೃಶ' ಶಕ್ತಿಯನ್ನು ಹಿಡಿದಿಡುವ ಜೊತೆಯಲ್ಲಿಯೇ ಅದರ ಸಮಾಜಮುಖಿ ಉಪಯೋಗಗಳನ್ನು ಹಿಡಿದಿಡಲು ಕೆಲವು ಕವನಗಳು ಪ್ರಯತ್ನಿಸುತ್ತವೆ. ಗುರುಲಿಂಗ ಕಾಪಸೆಯವರ 'ಬಾಳಿನೊಳಗಣ ಬೆಳಕು' ಕವನ ಆರಾಧನಾ ನೆಲೆಯದ್ದಾದರೂ ಬಸವಣ್ಣನ ಕಾರ್ಯಗಳ ವ್ಯಾಪಕತೆಯನ್ನು ಕುರಿತು ಮಾತನಾಡುತ್ತದೆ.

ನೀ ಹೀಗೆ ನಿಂತಂತೆಯೇ ಭಕುತಿ ಪೃಥ್ವಿಯ ಮೇಲೆ
ಬೆಳೆದು ಬಿಟ್ಟಿತು ಶರಣ – ಕಾರಣ ವೃಕ್ಷ
ಇಹ –ಪರಗಳನು ಒಂದು ಗೂಡಿಸುವ ನವೀನ ಕಲ್ಪವೃಕ್ಷ
ಈ ನೆಲದ ತುಂಬೆಲ್ಲ ಪಸರಿಸಿ ಬಹುದೂರ
. . . . . . . . . . . . . . . . .
ವಂಚಕನೆ ಬರಲಿ, ಬಲುಗಳ್ಳ ಬರಲಿ
ಬರಲಿ ಅಪ್ರಬುದ್ಧ:
ಎಲ್ಲರಿಗು ಒಂದೆ ಮುದ, ಒಂದೆ ಹದ,
ಇವನಮ್ಮವ, ಇವನಮ್ಮವ, ಇವನಮ್ಮವನು
ದ್ವಿಜನು, ಅಂತ್ಯಜನು, ಅವನು–ಇವನು [೩೪]

ಈ ಕವನದ ಆರಂಭದ ಸಾಲುಗಳು ಬಸವಣ್ಣನ ಬರುವಿಕೆ, ಇರುವಿಕೆಯನ್ನು ಆಕಸ್ಮಿಕವೆಂಬಂತೆ ಭಾವಿಸುತ್ತದೆ. 'ಬೆಳೆದು ಬಿಟ್ಟಿತು ಶರಣ ಕಾರಣ ವೃಕ್ಷ' ಎನ್ನುವಲ್ಲಿ ಆಕಸ್ಮಿಕವಾಗಿ ಆದ ಬದಲಾವಣೆಯ ಧ್ವನಿ ಇದೆ. ಆದರೆ ಮುಂದುವರೆದು 'ಇಹ ಪರಗಳನು ಒಂದು ಗೂಡಿಸುವ ನವೀನ ಕಲ್ಪವೃಕ್ಷ' ಎನ್ನುವುದು ಬಸವಣ್ಣನ ಶರಣತತ್ವದ ಹಿಂದಿನ ಸುಧಾರಣೆಗಳನ್ನು ಹಿಡಿದಿಡುತ್ತಲೇ ಅದರ ವಿಸ್ತೃತತೆಯನ್ನು ಹೇಳುತ್ತದೆ. 'ನವೀನ ಕಲ್ಪವೃಕ್ಷ' ಎನ್ನುವುದು 'ಹೊಸತು' ಮತ್ತು 'ಅವಶ್ಯಕವಾದದ್ದನ್ನು' ಬಸವಣ್ಣನಿಂದ ಪಡೆಯಲಾಯಿತು ಎಂಬುದನ್ನೂ, ಅದು ಬಹುದೂರದವರೆಗೂ ಪಸರಿಸಿತು ಎನ್ನುವುದನ್ನೂ ಹೇಳುತ್ತದೆ. ಇಲ್ಲಿ 'ಬಹುದೂರ' ಎನ್ನುವ ಪದ ಬಸವಣ್ಣನ ತತ್ವ ಸಿದ್ಧಾಂತಗಳ ವ್ಯಾಪಕತೆ ಹಾಗೂ ಕಾಲಾತೀತ ಗುಣವನ್ನು ಹಿಡಿದಿಡುತ್ತದೆ. ಮುಂದುವರೆದು ಬಸವಣ್ಣನ ಗುಣ–ಸ್ವಭಾವಗಳ ವಿಶೇಷತೆಯನ್ನು ಹಿಡಿದಿಡಲು ಪ್ರಯತ್ನಿಸಲಾಗಿದೆ. ಎಲ್ಲರನ್ನೂ ನಂಬುವ, ಇವ ನಮ್ಮವನೆಂದು ಬಾಚಿ ತಬ್ಬಿಕೊಳ್ಳುವ ಬಸವಣ್ಣನ ವಿಧಾನವನ್ನು ಕವಿ ಹಾಡಿ ಹೊಗಳಿದ್ದಾರೆ. ಬಸವಣ್ಣ ತನ್ನ ಯಾವ ಗುಣಗಳಿಂದ ತನ್ನ ಸಮಕಾಲೀನರಿಂದ ವಿರೋಧಕ್ಕೆ ಒಳಗಾಗಿದ್ದನೋ, ಮತ್ತು ಯಾವ ಅಂಶಗಳು ಇಡೀ ಶರಣ ಚಳುವಳಿಯ ಸೋಲಿಗೆ ಕಾರಣವಾಯಿತೆಂದು ಭಾವಿಸಲಾಗಿದೆಯೋ, ಅದನ್ನು ಕವಿ ಬಸವಣ್ಣನ ಶಕ್ತಿ ಎಂದೇ ಗುರುತಿಸುತ್ತಾರೆ. ಆದರೆ ಆ ಶಕ್ತಿಯ ಹಿಂದಿನ ಪ್ರೇರಣೆ 'ಭಕ್ತ', 'ಶರಣ'ನೆಂಬ ಹಣೆಪಟ್ಟಿಯ ಹೊರಗೂ ಕೂಡ ಇರಬಹುದಾದ ಮಾನವ ಸಹಜ ಪ್ರೇಮ ಎಂಬುದನ್ನು ಗುರುತಿಸುವಲ್ಲಿ ಸೋಲುತ್ತಾರೆ.

ಬಸವಣ್ಣ ಎಲ್ಲರನ್ನೂ ಶರಣರೆಂದು ನಂಬುವ ಮನಸ್ಥಿತಿಯ ಹಿಂದೆ 'ಶರಣತ್ವ'ಕ್ಕಿಂತ ಮಾನವ ಪ್ರೇಮ ಮುಖ್ಯವೆನಿಸಿರಬಹುದು. ಆದರೆ ಕನ್ನಡ ಕವಿಗಳು ಬಸವಣ್ಣನಂತಹ ವ್ಯಕ್ತಿತ್ವವನ್ನು ಜಾತಿಯ ಹಿನ್ನೆಲೆಯಲ್ಲಿ, ತಮ್ಮವನೆಂದು ಅಪ್ಪಿಕೊಳ್ಳುವ ಭರದಲ್ಲಿ ಸಂಕುಚಿತಗೊಳಿಸಿದ್ದಾರೆ ಎಂದೆನಿಸುತ್ತದೆ. ಅಂಬೇಡ್ಕರ್ ಇದನ್ನು ಸಮರ್ಥವಾಗಿ ಗುರುತಿಸುತ್ತಾರೆ. ಒಮ್ಮೆ ನಿಜಲಿಂಗಪ್ಪನವರ ಜೊತೆ ಮಾತನಾಡುವಾಗ "ಬಸವಣ್ಣನಂಥ ಮಹಾನುಭಾವರನ್ನು ನೀವು ನಿಮ್ಮ ಜೇಬಿನಲ್ಲಿ ಇಟ್ಟುಕೊಂಡಿದ್ದೀರಿ". ಎನ್ನುತ್ತಾರೆ. ಮತ್ತೊಮ್ಮೆ ಧಾರವಾಡದ ವಿದ್ಯಾವರ್ಧಕ ಸಂಘದಲ್ಲಿ ಮಾತನಾಡುವಾಗ ಲಿಂಗಾಯಿತರನ್ನುದ್ದೇಶಿಸಿ "ನೀವು ಬಸವಣ್ಣನಂಥ ಮಹಾನ್ ಕ್ರಾಂತಿಕಾರಿಯನ್ನು ಇಟ್ಟುಕೊಂಡು ಇಷ್ಟೇಕೆ ದಡ್ಡರಿದ್ದೀರಿ"?[೩೫] ಎಂದು ಪ್ರಶ್ನಿಸುತ್ತಾರೆ. ಬಸವಣ್ಣನನ್ನು ಕುರಿತಂತೆ ಅಂಬೇಡ್ಕರ್‌ರ ಈ ಅಭಿಪ್ರಾಯ ಬಸವಣ್ಣನನ್ನು ಲಿಂಗಾಯಿತ ಧರ್ಮದ ಚೌಕಟ್ಟಿನ ನೆಲೆಯಲ್ಲಿ ಹಿಡಿದಿಟ್ಟಿರುವ, ಆ ಕಾರಣದಿಂದಾಗಿಯೇ ತಮ್ಮವನೆಂದು ಭಾವಿಸುವ, ವಿಶ್ವಮಾನ್ಯವಾಗಬೇಕಿದ್ದ ಬಸವಣ್ಣನ ವ್ಯಕ್ತಿತ್ವವನ್ನು ನಿರ್ದಿಷ್ಟ ಧರ್ಮವೊಂದರ ನಾಯಕನನ್ನಾಗಿಸುವುದರ ಮೂಲಕ ಅವನ ವ್ಯಕ್ತಿತ್ವವನ್ನು ಸಂಕುಚಿತಗೊಳಿಸಿರುವ ಪ್ರಯತ್ನಗಳನ್ನು ಸರಿಯಾಗಿಯೇ ಗುರುತಿಸಿದೆ.

ಜಾತಿಪ್ರಜ್ಞೆ, ಆರಾಧನಾ ಮನೋಭಾವ, ಅತಿಯಾದ ಭಾವುಕತೆ, ಉತ್ಪ್ರೇಕ್ಷೆ, ಸಾಂಪ್ರದಾಯಿಕ ಮನಸ್ಥಿತಿ, ಭಕ್ತಿ ಹಾಗೂ ಸಮಕಾಲೀನ ಜಾತಿ ಮತ್ತು ಧಾರ್ಮಿಕ ಸಂಘಟನೆಗಳ ಒತ್ತಾಸೆಗಳು ಬಸವಣ್ಣನ ವ್ಯಕ್ತಿತ್ವವನ್ನು ವಿಮರ್ಶಾತ್ಮಕ ದೃಷ್ಟಿಕೋನದಿಂದ ನೋಡುವುದನ್ನು ನಿಯಂತ್ರಿಸಿವೆ.

### ೨. ಸ್ವವಿಮರ್ಶೆ, ತೀವ್ರ ವಿಷಾದ ಮತ್ತು ಸಾಂಸ್ಕೃತಿಕ ವಿಡಂಬನೆಯ ನೈತಿಕ ಶಕ್ತಿಯಾಗಿ

ಬಸವಣ್ಣನ ವ್ಯಕ್ತಿತ್ವದೊಂದಿಗೆ ಮುಖಾಮುಖಿಯಾಗುವ ಕವಿತೆಗಳ ಅಭಿವ್ಯಕ್ತಿಯ ಇನ್ನೊಂದು ಬಹುಮುಖ್ಯವಾದ ನೆಲೆ ಸುಧಾರಣವಾದೀ ಆಶಯಗಳಿಗೆ ಸಂಬಂಧಿಸಿದ್ದು. 'ನಿರಾಕರಣೆ' ಮತ್ತು 'ಆಶಿಸುವ' ಆದರ್ಶಗಳೆರಡನ್ನೂ ಒಟ್ಟು ಸಾಂಸ್ಕೃತಿಕ ಬದುಕಿನ ಸಂದರ್ಭದಲ್ಲಿ ಈ ಕವಿತೆಗಳು ಅಭಿವ್ಯಕ್ತಿಸುತ್ತವೆ. ಬಸವಣ್ಣನ ವ್ಯಕ್ತಿತ್ವ ಶೋಧದ ಜೊತೆಗೆ ಈ ಕವಿತೆಗಳು ಕವಿಯ ವೈಯಕ್ತಿಕ ನೆಲೆಯ ಆತ್ಮವಿಮರ್ಶೆಯಾಗಿಯೂ, ಸಾಮಾಜಿಕ ವ್ಯಕ್ತಿತ್ವಗಳ ವಿಮರ್ಶೆಯಾಗಿಯೂ, ಸಾಮಾನ್ಯ ಮನುಷ್ಯರ ಬದುಕು, ಬವಣೆಗಳ ವಿಮರ್ಶೆಯಾಗಿಯೂ ಮೂಡಿಬಂದಿವೆ. ಈ ಕವಿತೆಗಳ ಒಳಮಿಡಿತ ಸಾಮಾಜಿಕ ವ್ಯಕ್ತಿತ್ವವನ್ನು ಸುಧಾರಿಸುವ, ರೂಪಿಸುವ ನೆಲೆಯದ್ದಾಗಿದೆ. ಸಮಕಾಲೀನ ಹಾಗೂ ಭವಿಷ್ಯದ ಬದುಕಿನ ಸುಧಾರಣೆಗಾಗಿ ಮನುಷ್ಯ ವ್ಯಕ್ತಿತ್ವಗಳ ವಿಮರ್ಶೆ ಹಾಗೂ ರೂಪಿಸುವಿಕೆ ಅಗತ್ಯವಾಗಿ ಕಂಡಿದೆ. ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ನೆಪವಾಗಿರಿಸಿಕೊಂಡು ಹೀಗೆ ವೈಯಕ್ತಿಕವಾಗಿಯೂ, ಸಾಮಾಜಿಕವಾಗಿಯೂ ಸುಧಾರಣೆಯಲ್ಲಿ ತೊಡಗುವ ಈ ರಚನೆಗಳು ಸಾಹಿತ್ಯದ ಸಾಮಾಜಿಕ ಆಯಾಮವನ್ನು ಸೂಚಿಸುತ್ತವೆ. ಈ ಬಗೆಯ ರಚನೆಗಳಲ್ಲಿ ಬಸವಣ್ಣನ ವ್ಯಕ್ತಿತ್ವದ ಘನತೆಯನ್ನು, ಅವರ ಕಾಲದ ಸಾಮಾಜಿಕ ಬದುಕನ್ನು ಹೊಗಳುತ್ತಾ ಅವರಿದ್ದ ಈ ನೆಲ, ಸಮಾಜ, ರಾಜಕಾರಣ, ಧರ್ಮ, ಬದುಕು ಇಂದು ಏನಾಗಿವೆ ಎಂದು ಪ್ರಶ್ನಿಸಿಕೊಳ್ಳುತ್ತಾ, ಇಂದಿನ ಈ ದುರಂತ ಸ್ಥಿತಿಗಳ ಬಗೆಗೆ ತ್ರೀವ್ರವಾದ ವಿಷಾದ, ನೋವು, ಹತಾಶೆಗಳು ವ್ಯಕ್ತವಾಗಿವೆ. ಬಸವಣ್ಣ ಯಾವ ಆದರ್ಶಗಳಿಗಾಗಿ ಹೋರಾಡಿದ್ದನೋ ಅವು ಇಂದು ನಮ್ಮ ಜೀವನದಲ್ಲಿ ಯಾವ ರೀತಿಯಲ್ಲೂ ಅನುಷ್ಠಾನಗೊಳ್ಳದೆ ಹೋಗಿವೆಯಲ್ಲ ಎಂಬ ವಿಷಾದದಿಂದ ವ್ಯಗ್ರವಾಗಿ ತಮ್ಮನ್ನೂ, ಸಮಾಜವನ್ನೂ ಟೀಕಿಸಿಕೊಳ್ಳುವ ವಿಡಂಬನ ಮನೋಭಾವ ವ್ಯಕ್ತವಾಗಿರುವುದನ್ನು ಕವನಗಳಲ್ಲಿ ಗುರುತಿಸಬಹುದು. ಹಾಗೆಯೇ ಬದುಕನ್ನು, ಸಮಾಜವನ್ನು, ಮನುಷ್ಯ ಸ್ವಭಾವಗಳನ್ನು ಸರಿಪಡಿಸಲು

ಮತ್ತೊಮ್ಮೆ ಬಸವಣ್ಣ ಹುಟ್ಟಿಬರಬಾರದೇ ಎಂಬ ಹಂಬಲವೂ ಈ ಕವಿತೆಗಳಲ್ಲಿ ಮತ್ತೆ ಮತ್ತೆ ಮೂಡಿಬಂದಿದೆ. ಹಾಗಾಗಿ ಬಸವಣ್ಣನನ್ನು ಕುರಿತ ಕವಿತೆಗಳಲ್ಲಿ ಸಮಕಾಲೀನ ಸಮಾಜ ಮತ್ತು ಸಾಮಾಜಿಕ ವ್ಯಕ್ತಿತ್ವಗಳ ಆತ್ಮವಿಮರ್ಶೆ, ಸ್ವವಿಮರ್ಶೆ, ವಿಷಾಧ, ವಿಡಂಬನೆಗಳನ್ನು ಕಾಣಬಹುದು.

ಕವಿತೆಗಳಲ್ಲಿ ಕಂಡು ಬರುವ ಇನ್ನೊಂದು ಗುಣವೆಂದರೆ ತನ್ನ ಕಾಲದ ದುಸ್ಥಿತಿಯ ಬಗೆಗಿನ ಕೊರಗು. ಆದರೆ ಈ ಕವಿತೆಗಳಲ್ಲಿ ಈ ಕೊರಗಿಗೆ ಸುಧಾರಕನ ನೆಲೆಯಿದೆ. ಜೊತೆಗೆ ವೈಯಕ್ತಿಕ ದೌರ್ಬಲ್ಯಗಳನ್ನು ದೂಷಿಸಿಕೊಳ್ಳುವಿಕೆ ಮತ್ತು ಸಮುದಾಯದ ಕೆಡುಕುಗಳನ್ನು ಟೀಕಿಸುವಿಕೆ ಎಂಬ ಎರಡು ಆಯಾಮಗಳಿವೆ. ಹಾಗಾಗಿ ವೈಯಕ್ತಿಕ ಉದ್ಧಾರದ ತುಡಿತ ಮತ್ತು ಸಮುದಾಯದ ಒಳಿತಿಗಾಗಿ ಹಂಬಲಿಸುವಿಕೆ ಈ ಎರಡೂ ಗುಣಗಳನ್ನು ಕವಿತೆಗಳಲ್ಲಿ ಕಾಣಬಹುದು. ಬಸವಣ್ಣನ ವ್ಯಕ್ತಿತ್ವದ ಎದುರಿಗೆ ತನ್ನ ಮತ್ತು ಸಮಾಜದ ದೌರ್ಬಲ್ಯಗಳನ್ನು ತೋಡಿಕೊಳ್ಳುವ ಮೂಲಕ ಸ್ವವಿಮರ್ಶೆ, ಸಾಮಾಜಿಕ ವಿಮರ್ಶೆಯಲ್ಲಿ ತೊಡಗುವ ಮೂಲಕ ಉದ್ಧಾರದ, ಬದಲಾವಣೆಯ ಬಯಕೆಯನ್ನು ಕವಿಗಳು ವ್ಯಕ್ತಪಡಿಸುತ್ತಾರೆ. ಕುವೆಂಪುರವರ 'ಶ್ರೀ ಬಸವೇಶ್ವರರಿಗೆ' ಕವನ ವರ್ಣಾಶ್ರಮದ ಕೆಸರಲ್ಲಿ ಬಿದ್ದಿರುವ ತಮ್ಮನ್ನು ಮೇಲೆತ್ತುವಂತೆ ಬಸವಣ್ಣನಲ್ಲಿ ಪ್ರಾರ್ಥಿಸುತ್ತದೆ.

ಇಂದಿಗೂ ನಾವು ನಿನ್ನೆತ್ತರಕೆ ಏರಲಾರದೆ ಅಯ್ಯೋ
ಮತದ ಉಸುಬಿಗೆ ಸಿಲುಕಿ ತತ್ತರಿಸುತಿಹೆವಯ್ಯ!
ಬಾರಯ್ಯ ಕೈ ಹಿಡಿದೆತ್ತಿ ಬದುಕಿಸು ನಮ್ಮನೆಳೆದು
ವರ್ಣಾಶ್ರಮದ ಹೆಸರ ಹೊಲೆಗೆಸರ ವಂಚನೆಯ ಕುಂಡದಿಂದೆ! [೨೬]

ಇಲ್ಲಿ ಸಮಕಾಲೀನ ಸಮಾಜದಲ್ಲಿ ಜಾತಿ ಮತ್ತು ಧರ್ಮಗಳೇ ನಿಯಂತ್ರಕ ಶಕ್ತಿಗಳಾಗಿ ಮನುಷ್ಯನನ್ನು ಆಳುತ್ತಿರುವ ಸನ್ನಿವೇಶವನ್ನು, ಅದರಿಂದ ಬಿಡಿಸಿಕೊಂಡು ಮೇಲೇಳಲಾಗದ ತಮ್ಮ ಅಜ್ಞಾನವನ್ನು ವಿಡಂಬಿಸುತ್ತಲೆ ಅದರಿಂದ ಮೇಲೆತ್ತುವಂತೆ ಬಸವಣ್ಣನಲ್ಲಿ ಮೊರೆಯಿಡುವುದನ್ನು ಕಾಣಬಹುದು. ಬಸವಣ್ಣ ಸಮಾನತೆಯನ್ನೂ, ಜಾತ್ಯಾತೀತತೆಯನ್ನೂ, ಮಾನವ ಧರ್ಮವನ್ನು ಪ್ರತಿಪಾದಿಸಿ ಹೊಸ ಬದುಕಿನ ಮಾರ್ಗವನ್ನೇ ತೋರಿಸಿದ್ದರೂ ನಾವಿನ್ನೂ ಅದೇ ಕೆಸರಿನಲ್ಲಿ ಒದ್ದಾಡುತ್ತಿದ್ದೇವೆ. ಬಸವಣ್ಣನೆತ್ತರಕ್ಕೆ ಏರಲು ನಮಗಿನ್ನೂ ಸಾಧ್ಯವಾಗಿಲ್ಲವೆಂಬ ನೋವು, ವಿಷಾಧ, ಹತಾಶಾ ಮನೋಭಾವ ಇದೆಯಾದರೂ ಅದರಿಂದ ಹೊರಬರುವ ಹಂಬಲ ಕೂಡ ಇಲ್ಲಿ ಎದ್ದು ಕಾಣುತ್ತದೆ. ಜೊತೆಗೆ ಈ ಎಲ್ಲಾ ಸಂಕೀರ್ಣತೆಗಳಿಂದ ಬಿಡುಗಡೆ ಪಡೆಯಲು 'ಬಸವಣ್ಣನೇ ಕೈಹಿಡಿದೆತ್ತಿ ಬದುಕಿಸಬೇಕು' ಎಂಬುದು ಬಸವಣ್ಣನ ವ್ಯಕ್ತಿತ್ವದೊಂದಿಗೆ ಅವನ ಹೋರಾಟದ ಹಿಂದಿನ ಮಾನವೀಯ ಕಾಳಜಿಗಳನ್ನು ಧ್ವನಿಸುತ್ತದೆ. ಮತದ ಉಸುಬಿಗೆ ಸಿಲುಕಿ ತತ್ತರಿಸುತ್ತಿರುವುದು ಅಂದಿನಷ್ಟೇ ಇಂದಿಗೂ ವಾಸ್ತವವಾದರೂ, ಬಸವಣ್ಣನಿಂದ ಕೂಡ ಜಾತಿ ವ್ಯವಸ್ಥೆಯನ್ನು ನಿವಾರಿಸಲು ಸಾಧ್ಯವಾಗಿಲ್ಲ ಎಂಬ ಅರಿವಿದ್ದರೂ, 'ಜಾತಿ ಮುಕ್ತ' ಸಮಾಜ ನಿರ್ಮಾಣದ ಕನಸನ್ನು ಬಸವಣ್ಣನ ಮೂಲಕ ಸಾಕಾರಗೊಳಿಸಿಕೊಳ್ಳುವ ಇಂಗಿತ ವ್ಯಕ್ತವಾಗಿದೆ. ಆ ಮೂಲಕ ಸ್ವಪ್ರಜ್ಞೆಯನ್ನು ಜಾಗೃತಗೊಳಿಸಿಕೊಳ್ಳುವ, ತಮ್ಮ ವ್ಯಕ್ತಿತ್ವವನ್ನು ವೈಚಾರಿಕ ನೆಲೆಯಲ್ಲಿ ರೂಪಿಸಿಕೊಳ್ಳುವ ಹಂಬಲ ವ್ಯಕ್ತವಾಗುವುದನ್ನು ಗುರುತಿಸಬಹುದು.

ಬಸವಣ್ಣನ ಚಿಂತನೆ-ವಿಚಾರಗಳನ್ನು ಗ್ರಹಿಸುವ ಕ್ರಮದಲ್ಲಿಯೇ ಇಂದು ಅನೇಕ ಗೊಂದಲಗಳಿರುವುದನ್ನು ಕವಿಗಳು ಗುರುತಿಸುತ್ತಾರೆ. ಬಸವಣ್ಣನನ್ನು ಕೇವಲ ಪ್ರಚಾರದ ನೆಲೆಯಲ್ಲಿ ಅನುಸರಿಸುವ ಡಾಂಭಿಕತನ, ಅಂಧಶ್ರದ್ಧೆ, ತಮ್ಮ ಅನುಕೂಲಕ್ಕೆ ತಕ್ಕಂತೆ ಬಸವಣ್ಣನ ತತ್ವ ಸಿದ್ಧಾಂತಗಳನ್ನು ತಿರುಚುವಿಕೆ ಮತ್ತು ಒಂದು ಗುಂಪಿನ ಸ್ವತ್ತಾಗಿ ಬಿಂಬಿಸುವ ಮೂಢತನ ಇವೆಲ್ಲವುಗಳನ್ನು ಕವಿತೆಗಳು ವಿಡಂಬಿಸಿವೆ. ಚಂಪಾ ಅವರ

'ಬಸವಣ್ಣನಿಗೆ ಶರಣು' ಕವನ ಬಸವಣ್ಣನವರ ತತ್ವಗಳಿಗೆ ವಿರುದ್ಧವಾಗಿ ಬದುಕುತ್ತಿರುವ ಸಮಕಾಲೀನ ಜನರ ವರ್ತನೆಗಳನ್ನು ಟೀಕಿಸುತ್ತಲೇ, ಬಸವಣ್ಣನ ಸುತ್ತಾ ನಡೆಯುತ್ತಿರುವ ವಿಕೃತ ಸಾಂಸ್ಕೃತಿಕ ರಾಜಕಾರಣದ ಹುನ್ನಾರಗಳನ್ನು ಲೇವಡಿ ಮಾಡುತ್ತದೆ. ಆ ಮೂಲಕ ಬಸವಣ್ಣನ ತತ್ವಗಳನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಿರುವವರನ್ನು ತೀವ್ರ ತರಾಟೆಗೆ ತೆಗೆದುಕೊಳ್ಳುತ್ತದೆ.

ಪರಚಿಂತೆ ಎಮಗೆ ಏಕೆ ಬಸವಣ್ಣ?
ನಮಗೆ ನಿನ್ನದೆ ಚಿಂತೆ; ರೂಹೆ ಇಲ್ಲದ ನಿನ್ನ
ಅಸಮ ವ್ಯಕ್ತಿತ್ವಕ್ಕೆ ತಕ್ಕ ರೂಪವನೀವ
ಕಲೆಗಾರನೇ ಇಲ್ಲವಲ್ಲ ಎಂಬುದು ಚಿಂತೆ
ನಿನ್ನ ವಾಣಿಯ ಅರ್ಥ ನಮಗೆ ಆಗಲಿ ಬಿಡಲಿ
ಉಳಿದವರಿಗಾಗಿಲ್ಲವಲ್ಲ ಎಂಬುದೆ ಚಿಂತೆ.
ವೆಂಕ ನೊಣ ಶೀನರಿಗೆ ಅಂಚೆ ಚೀಟಿಯನಿತ್ತ
ಸರಕಾರ ನಿನಗೇಕೆ ಕೊಡದು ಎಂಬುದೆ ಚಿಂತೆ [೩೭]

ಬಸವಣ್ಣ ರೂಪಿಸಿದ ಶರಣ ಸಮಾಜ ಅವನ ನಂತರ ಅವನಿಗೇ ವಿರುದ್ಧವಾಗಿ ಚಲಿಸಿದ ಬಗೆಯನ್ನು, ಆತನೇ ನಾಚಿ ತಲೆತಗ್ಗಿಸುವ ಮಟ್ಟಿಗೆ ಅವನನ್ನು ಜಾತಿ ರಾಜಕಾರಣದ ದಾಳವಾಗಿಸಿಕೊಂಡದ್ದನ್ನು ಕವಿತೆ ವ್ಯಂಗ್ಯವಾಡುತ್ತದೆ. ಬಸವಣ್ಣನನ್ನು ಇಂದು ನಾವು ಕೇವಲ ಜಾತಿ ಪ್ರತಿಷ್ಠೆಗಾಗಿ, ತೋರಿಕೆಗಾಗಿ ಕೇವಲ ಆಚರಣೆಯ ನೆಲೆಯಲ್ಲಿಯೇ ಅನುಸರಿಸಿ ಬದುಕಿನಿಂದ ದೂರವಿಡುತ್ತಿದ್ದೇವೆ. ಇವೆಲ್ಲವನ್ನು ಕವನ ತೀವ್ರವಾಗಿ ವಿಡಂಬಿಸಿದೆ.

ಉನ್ನತ ವ್ಯಕ್ತಿತ್ವಗಳನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಸಮಕಾಲೀನ ಸಮಾಜದ ತಲ್ಲಣಗಳು, ವರ್ತಮಾನದ ಹಿಂಸೆ, ಕ್ರೌರ್ಯಗಳನ್ನು ಆ ವ್ಯಕ್ತಿತ್ವಗಳ ಎದುರು ನಿವೇದಿಸಿಕೊಳ್ಳುತ್ತಲೇ ಅದೆಲ್ಲವನ್ನೂ ಸರಿಪಡಿಸಲು ವ್ಯಕ್ತಿಗಳ ಮರುಹುಟ್ಟಿಗಾಗಿ ಹಂಬಲಿಸುವುದು ಕಂಡುಬರುತ್ತದೆ. ತಮ್ಮ ಸಾಮಾಜಿಕ ವಾಸ್ತವತೆಯ ಬಗೆಗಿನ ಆಕ್ರೋಶ, ಸಿಟ್ಟು, ನೋವು, ಅಸಹನೆಗಳನ್ನು ಹೊರಹಾಕುವ ಮಾಧ್ಯಮವಾಗಿ ಆ ವ್ಯಕ್ತಿತ್ವಗಳು ಬಳಕೆಯಾಗಿವೆ. ವ್ಯವಸ್ಥೆಯನ್ನು ಸುಧಾರಿಸುವ ತುಡಿತ, ಸರಿಪಡಿಸಲಾಗದ ನೋವು, ಅಸಹಾಯಕತೆಗಳು ಇಂತಹ ವ್ಯಕ್ತಿತ್ವಗಳ ಮೊರೆ ಹೋಗುವಿಕೆಗೆ ಕಾರಣ ಎಂಬುದು ಕವನಗಳ ಅಭಿವ್ಯಕ್ತಿ ಕ್ರಮಗಳಿಂದ ಗೋಚರವಾಗುತ್ತದೆ. ಜೊತೆಗೆ ತಾವು ಆಯ್ಕೆ ಮಾಡಿಕೊಂಡ ವ್ಯಕ್ತಿತ್ವದ ಮಾನವೀಯ ಕಳಕಳಿಯನ್ನು, ಅದರ ಪ್ರಸ್ತುತತೆಯನ್ನು ಮುನ್ನೆಲೆಗೆ ತರುವ ಇರಾದೆಯೇ ಕವನಗಳ ಮೂಲ ಉದ್ದೇಶ. ಪರಂಪರೆಯ ಶ್ರೇಷ್ಠ ವ್ಯಕ್ತಿತ್ವಗಳು ನೈತಿಕ ಶಕ್ತಿಯಾಗಿ ಕಂಡಿರುವುದರಿಂದಲೇ ಕವಿತೆಗಳು ಸಮಾಜ ವಿಮರ್ಶೆಯನ್ನು ನಿರ್ಭಿಡತೆಯಿಂದ ಕೈಗೆತ್ತಿಕೊಳ್ಳುತ್ತವೆ.

ಎಲ್ಲೆಲ್ಲು ಕಿಚ್ಚಿಡುವ ಬುದ್ಧಿ ಹೆಚ್ಚಿದೆ ಬಸವ
ನೊಂದ ನೆಲ ನರಳುತಿದೆ ಹೊಟ್ಟೆಬಿಕ್ಕಿ
ಅಂಕೆ ಶಂಕೆಯ ಮೆದುಳು ವಂಕಿಯನು ತುರುಕುತಿದೆ
ಕಾಯ ಗುರುತೂ ಸಿಗದೆ ಮಣ್ಣು ಮುಕ್ಕಿ.
. . . . . . . . . .
ಬದುಕುವ ಪ್ರಯತ್ನಗಳು
ತರುತಿಹವು ಸಾವು
ಬುದ್ದಿ ಹೊಲದಲಿ ಯಮನ
ಕೋಣಕ್ಕೆ ಮೇವು. [೩೮]

ಇಂದು ಕ್ರೌರ್ಯದ ಅತಿರೇಕದ ವಾತಾವರಣದಲ್ಲಿ ನಾವಿದ್ದೇವೆ. ಬದುಕು ನರಕವಾಗಿದೆ. ಬೌದ್ಧಿಕತೆಯನ್ನೇ ಅಣಕವಾಡಿ ಹೊಸಕಿ ಹಾಕುವ ಪ್ರಯತ್ನಗಳು ನಡೆಯುತ್ತಿವೆ. ಇವೆಲ್ಲವನ್ನೂ ಸರಿಪಡಿಸಲು ಬಸವನ

ಅವತಾರವಾಗಬೇಕಿದೆ ಎಂಬ ಹಂಬಲ ಇಲ್ಲಿದೆಯಾದರೂ 'ಬದುಕುವ ಪ್ರಯತ್ನಗಳು ತರುತಿಹವು ಸಾವು' 'ಬುದ್ಧಿ ಹೊಲದಲಿ ಯಮನ ಕೋಣಕ್ಕೆ ಮೇವು' ಎನ್ನುವ ಸಾಲುಗಳು ವಾಸ್ತವದ ದುಸ್ಥಿತಿಯನ್ನು, ಅದನ್ನು ಸರಿಪಡಿಸಲಾಗದ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತವೆ.

ಇನ್ನು ಕೆಲವು ಕವಿತೆಗಳಲ್ಲಿ ವೈಯಕ್ತಿಕ ತಪ್ಪು, ದೌರ್ಬಲ್ಯಗಳನ್ನು ಒಪ್ಪಿಕೊಂಡು ಆತ್ಮಾವಲೋಕನದಲ್ಲಿ ತೊಡಗುವ, ತಮ್ಮ ಆತ್ಮೋದ್ಧಾರದ ಹಂಬಲವನ್ನು ವ್ಯಕ್ತಪಡಿಸುವಿಕೆ ಕಂಡುಬರುತ್ತದೆ. ಇವುಗಳಲ್ಲಿ ಸಮುದಾಯದ ಪ್ರತಿನಿಧಿಯಾಗಿ ತಮ್ಮ ತಪ್ಪುಗಳನ್ನು ಒಪ್ಪಿಕೊಳ್ಳುವ ಪ್ರಾಮಾಣಿಕತೆ, ಅಪರಾಧಿ ಪ್ರಜ್ಞೆಯಿಂದ ಎಲ್ಲವನ್ನೂ ನಿವೇದಿಸಿಕೊಳ್ಳುವಿಕೆ, ತಿದ್ದಿಕೊಳ್ಳುವ ಪ್ರಾಮಾಣಿಕತೆ, ಒಳಿತಿನ ಕಡೆಗೆ ಚಲಿಸುವ ಒಲವು ವ್ಯಕ್ತವಾಗುತ್ತವೆ.

ನೆಲದ ನೇಹಕೆ ಸುರಿಸಲಿಲ್ಲ ಹನಿಬೆವರು
ಮೈ ಮಣಿಸಿ ದುಡಿಯುವುದೋ
ತಮ್ಮ ಮಹಿಮೆಗೆ ಮಹಾ ಅವಮಾನವೆಂಬುವರು [೩೯]

ಕೊಂಬೆಯಿಂದ ಕೊಂಬೆಗಿನ್ನೂ ನೆಗೆದಾಡುತ್ತಿದ್ದೇವೆ
ತರತರದ ಗರಹೊಡೆದು ನುಡಿಯಿಲ್ಲದಿದ್ದೇವೆ
ಉರದುದ್ದ ಕೊರಳುದ್ದ ಇನ್ನೂ ಮುಳುಗಿದ್ದೇವೆ
ಐವರೇ ಏನು; ನೂರಾರು ಜನ ಸುಡುತ್ತಿದ್ದಾರೆ
ನಮ್ಮನ್ನೂ ಜೀವನವಿಡಿ ಜೀವಚಿತೆಯಲ್ಲಿ [೪೦]

ಬಸವಣ್ಣನಿಂದ ಅಂದಿನಿಂದ ಇಂದಿನವರೆಗೂ ನಾವು ಏನನ್ನೂ ಕಲಿತಿಲ್ಲ. ಅದೇ ನಮ್ಮ ಮೂಲ ಪ್ರವೃತ್ತಿಯಲ್ಲಿಯೇ ತೊಡಗಿಕೊಂಡಿದ್ದೇವೆ, ಸುಧಾರಿಸಲೇ ಇಲ್ಲ ಎಂಬ ನೋವು ಇಲ್ಲಿ ವ್ಯಕ್ತವಾಗಿದೆ. ಬಸವಣ್ಣನ ಬದುಕು, ಈ ಸಾಮಾಜಿಕ ವ್ಯವಸ್ಥೆಯಲ್ಲಿ ಆತ ತರಬಯಸಿದ ಬದಲಾವಣೆಗಳು, ಆತನ ಕನಸುಗಳು ನಮ್ಮ ಹೃದಯಕ್ಕೆ ಇನ್ನೂ ಇಳಿದೇ ಇಲ್ಲ. ನಮ್ಮ ಪ್ರಜ್ಞೆ ಅವುಗಳನ್ನು ಗ್ರಹಿಸಿಕೊಳ್ಳಲೇ ಇಲ್ಲ. ಹಾಗಾಗಿಯೇ ನಮ್ಮಲ್ಲಿ ಪ್ರಜ್ಞೆಯ ವಿಕಾಸವೆಂಬುದು ಕಂಡುಬರುತ್ತಿಲ್ಲ ಎಂಬ ಕೊರಗು ಕವಿತೆಗಳಲ್ಲಿ ವ್ಯಕ್ತವಾಗಿದೆ. ಹೀಗೆ ಕನ್ನಡ ಕವಿಗಳು ವ್ಯಕ್ತಿ ಮತ್ತು ಸಮಾಜವನ್ನು ಕಟು ವಿಮರ್ಶೆಗೆ ಒಳಪಡಿಸುತ್ತಾ ಸಮಾಜವನ್ನು ಬದಲಾಯಿಸುವ ಹಂಬಲವನ್ನು ವ್ಯಕ್ತಪಡಿಸುತ್ತಲೆ ಬಸವಣ್ಣನ ವ್ಯಕ್ತಿತ್ವದ ಪ್ರಸ್ತುತತೆಯನ್ನು ಸಾಬೀತುಪಡಿಸಿದ್ದಾರೆ.

ವಿ.ಕೃ.ಗೋಕಾಕರ 'ಕಲ್ಯಾಣದ ನಗರಲಕ್ಷ್ಮಿ' ಕವನ ಬಸವಣ್ಣನ ವ್ಯಕ್ತಿತ್ವದ ಬಹುಮುಖತೆಯನ್ನು ಆತನ ಕಾಲದ ಮಹಿಮೆಯನ್ನು, ಇಂದಿನ ದುರಂತವನ್ನು ಚಿತ್ರಿಸುತ್ತದೆ. ಪ್ರೇತರೂಪವನ್ನು ತಾಳಿರುವ ನಗರಲಕ್ಷ್ಮಿಯೊಂದಿಗೆ ಸಂವಾದ ನಡೆಸುವ ಕವಿತೆ ನಗರಲಕ್ಷ್ಮಿಯ ಮನದಿಂಗಿತವನ್ನು ಈ ರೀತಿಯಾಗಿ ಹಿಡಿದಿಡುತ್ತದೆ.

ಧರ್ಮವೀರರು ತಮ್ಮ ಮತದ ಹೆಚ್ಚಳಕೆಂದು
ಧರ್ಮಾಂಧರಾಗದಿಹ ಕಾಲ ಬರಬಹುದೆ?
ಅಲ್ಲಮನು ಮತ್ತೆ ಶೂನ್ಯ ಸಿಂಹಾಸನದಿ
ಕುಳಿತು ಸಂತತ ಮೆರೆವ ಸ್ವರ್ಣಯುಗ ಬರಬಹುದೆ? [೪೧]

ವರ್ತಮಾನದ ದುಸ್ಥಿತಿಯನ್ನು ಧ್ವನಿಸುವ ಈ ಕವಿತೆ ಮುಂದೊಂದು ದಿನ ಬಸವಣ್ಣನ ಕಾಲದ ಮೌಲ್ಯಯುತ ಬದುಕು ತಮ್ಮದಾಗಬಹುದೆಂಬ ನಿರೀಕ್ಷೆಯನ್ನು ವ್ಯಕ್ತಪಡಿಸುತ್ತದೆ. ಈ ಸಂದರ್ಭದಲ್ಲಿ ಕೆಲವು ಕವನಗಳು ತೀರ ಸರಳ, ಸಾಮಾನ್ಯ ಎನಿಸುವ ಸಂದರ್ಭದಲ್ಲಿಯೂ ಬಸವಣ್ಣನ ವ್ಯಕ್ತಿತ್ವದ ಸಂಕೀರ್ಣ ಆಯಾಮಗಳ ಕಡೆಗೆ ಗಮನ ಸೆಳೆಯುತ್ತವೆ. ಇಂದು ಬಸವಣ್ಣ ಮತ್ತು ಆತನ ಸಿದ್ಧಾಂತಗಳು ತೋರಿಕೆಯ, ಬಾಹ್ಯಾಡಂಬರದ

ಸಾಮಗ್ರಿಗಳಾಗಿ ಬಳಕೆಯಾಗುತ್ತಿವೆ. ಬಸವಣ್ಣನ ಚಿಂತನೆಗಳಿಗೆ ಸಾರ್ವಕಾಲಿಕ ಮೌಲ್ಯವಿದೆಯಾದರೂ ಅವನ ಅನುಯಾಯಿಗಳೆನಿಸಿಕೊಂಡವರೇ ಅದನ್ನು ಗಾಳಿಗೆ ತೂರಿ ತಮ್ಮ ಅನುಕೂಲಕ್ಕೆ ತಕ್ಕಂತೆ ಬಸವಣ್ಣನ ಸಿದ್ಧಾಂತಗಳನ್ನು ಬಳಸಿಕೊಳ್ಳುತ್ತಿರುವುದನ್ನು ಕಾವ್ಯ ವಿಡಂಬಿಸಿದೆ. ಚಂದ್ರಶೇಖರ ಪಾಟೀಲರ 'ಬಸವಣ್ಣನಿಗೆ ಶರಣು' ಎಂಬ ಕವನ ಇದನ್ನು ವಿಡಂಬನಾತ್ಮಕವಾಗಿ ವಿಮರ್ಶೆಗೆ ಒಳಪಡಿಸುತ್ತದೆ. ಕೆಮ್ಮಿದಾಗ, ಸೀನಿದಾಗ, ಎಡವಿದಾಗ 'ಬಸವ ಬಸವ' ಎಂದು ಬಸವಣ್ಣನ ನಾಮ ಸ್ಮರಣೆ ಮಾಡುತ್ತಾ, ನಮ್ಮ ಪಾಪ ತೊಡೆದುಕೊಳ್ಳಲು ಪ್ರಯತ್ನಿಸುವ ನಾವು ಕೊರಳಿನ ಸುತ್ತ ಬಸವಣ್ಣನ ವದನದ ಮುದ್ರೆಯಿರುವ ಮುತ್ತಿನ ಹಾರವನ್ನು ಹಾಕಿಕೊಂಡು, ಬಸವಣ್ಣನ ತತ್ವಗಳ ನಿಜಾರ್ಥವನ್ನು ಮರೆಮಾಚಿ ನಮ್ಮ ಅನುಕೂಲಕ್ಕೆ ತಕ್ಕಂತೆ ಅವುಗಳನ್ನು ಅರ್ಥೈಸುತ್ತಾ, ಬಸವಣ್ಣನ ಸಿದ್ಧಂತಗಳನ್ನೇ ಅಪಹಾಸ್ಯಕ್ಕೊಳಪಡಿಸಿರುವ ಬಗೆಯನ್ನು ವ್ಯಂಗ್ಯವಾಡುತ್ತದೆ. ಮುಂದುವರೆದು ಬಸವಣ್ಣನ ಹೆಸರು ಮುಖ್ಯವಾಗಿ ಅವನ ತತ್ವಾದರ್ಶಗಳೆಲ್ಲವನ್ನೂ ಕಡೆಗಣಿಸಿರುವ, ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿರುವ ಬಗೆಯನ್ನು ಮಾರ್ಮಿಕವಾಗಿ ವಿಮರ್ಶೆಗೆ ಒಳಪಡಿಸಿದೆ.

ನಿನಗಿಂತ ಹಿರಿಯರಿಲ್ಲ, ಬಸವಣ್ಣ
ಅದಕೆಂದೆ ಈ ಹೊಲಸು ಮಣ್ಣ ಮಡಿಲೊಳಗಿಂದ
ಚಿಮ್ಮಿ, ಅರಳಿದ ನಿನ್ನ ಕಿತ್ತು, ಕೊಸರಿ, ಮೇಲೆ
ಮುಗಿಲಿಗೇ ತೂರಿದೆವು, ನಕ್ಷತ್ರ ಮಾಲೆಯಲಿ
ಹೆಣೆದು ಕೈಮುಗಿದೆವು. ಇಲ್ಲಿ ಸಲ್ಲದ ನೀನು
ಅಲ್ಲಿ ಸಲ್ಲುತ್ತಿರುವಿ. ಬೆಳಕ ಚೆಲ್ಲುತ್ತಿರುವಿ.
ಅದರಲ್ಲಿ ಮಿಂದಿರುವ ಪುಣ್ಯಾತ್ಮರೈ ನಾವು
ನಮಗಿಂತ ಹಿರಿಯರಿಲ್ಲ.
– – – – – – – – –
ಎಲ್ಲ ನಮಗೇ ಬಿಟ್ಟು ನಗುನಗುತ್ತಿದ್ದು ಬಿಡು.
ನಮ್ಮ ಮನೆ – ಮಕ್ಕಳಿಗೆ, ನಮ್ಮ ಬಂಗಲೆಗಳಿಗೆ
ಚುಟ್ಟ, ಬೀಡಾ, ಸೋಡಾ, ಚಹದ ಅಂಗಡಿಗಳಿಗೆ
ನಿನ್ನ ಹೆಸರನಿಟ್ಟು ಅಮರ ಮಾಡುತ್ತೇವೆ. [೬೨]

ವರ್ತಮಾನದಲ್ಲಿ ಬಸವಣ್ಣನನ್ನು ನಡೆಸಿಕೊಳ್ಳುತ್ತಿರುವ ರೀತಿಯನ್ನು ವಿಡಂಬಿಸುತ್ತಲೇ ಸಮಕಾಲೀನ ಸಾಮಾಜಿಕ ವ್ಯವಸ್ಥೆಯ ಬಗೆಗಿನ ಸಿಟ್ಟು, ಅಸಹನೆ, ಆಕ್ರೋಶಗಳು ವ್ಯಕ್ತಗೊಂಡಿವೆ.

ಬಸವಣ್ಣನನ್ನು ನೈತಿಕ ಆದರ್ಶವಾಗಿ ಕಂಡು ಆ ವ್ಯಕ್ತಿತ್ವದ ಎದುರಿಗೆ ತಮ್ಮ ಮತ್ತು ಸಮಕಾಲೀನ ಸಾಂಸ್ಕೃತಿಕ ಬದುಕಿನ ಎಲ್ಲಾ ದೌರ್ಬಲ್ಯ ಮತ್ತು ಕ್ರೌರ್ಯಗಳನ್ನು ತೆರೆದಿಡುವ ಮೂಲಕ ವಿಮರ್ಶೆ, ವಿಡಂಬನೆಯಲ್ಲಿ ತೊಡಗುವ ಈ ಪ್ರಕ್ರಿಯೆ ಸಾಂಸ್ಕೃತಿಕವಾಗಿ ಮಹತ್ವವಾದುದು. ಏಕೆಂದರೆ ಇವು ವರ್ತಮಾನದ ಬದುಕನ್ನು ಸಹ್ಯವಾಗಿಸುವ, ವ್ಯಕ್ತಿತ್ವಗಳನ್ನು ರೂಪಿಸುವ ಮಹತ್ವಾಕಾಂಕ್ಷೆ ಮತ್ತು ಹೊಣೆಗಾರಿಕೆಯಿಂದ ಹುಟ್ಟಿಕೊಂಡ ರಚನೆಗಳಾಗಿವೆ. ಸಮಕಾಲೀನ ಸಾಂಸ್ಕೃತಿಕ ಚರಿತ್ರೆಯೊಂದಿಗೆ ಸಂವಾದಿಸುತ್ತಲೇ ಅದರ ನೈತಿಕ ನಡೆಯ ಮೂಲಧಾತುಗಳನ್ನು ನಮ್ಮ ಪರಂಪರೆಯಿಂದ ಶೋಧಿಸಿಕೊಡುವ ಜವಾಬ್ದಾರಿಯನ್ನು ನಿರ್ವಹಿಸುತ್ತವೆ. ಯಾವ ವ್ಯಕ್ತಿ ಮತ್ತು ಸಮಾಜ ತನ್ನನ್ನು ತಾನು ಆತ್ಮವಿಮರ್ಶೆಗೆ ಒಳಪಡಿಸಿಕೊಳ್ಳುವುದಿಲ್ಲವೋ ಅದು ನೈತಿಕವಾಗಿ ಬೆಳೆಯಲಾರದು. ಹಾಗಾಗಿ ವ್ಯಕ್ತಿ ಮತ್ತು ಸಮಾಜವನ್ನು ನೈತಿಕವಾಗಿ ರೂಪಿಸಿಕೊಳ್ಳುವ ಪ್ರಾಮಾಣಿಕ ತುಡಿತಗಳಾಗಿ ಈ ಕವಿತೆಗಳು ಮಹತ್ವದವುಗಳೆನಿಸುತ್ತವೆ.

## ೫.೨.೩ ಸಮಕಾಲೀನ ವ್ಯಕ್ತಿತ್ವಗಳನ್ನು ರೂಪಿಸುವ ಶ್ರದ್ಧೆಯ ಆದರ್ಶವಾಗಿ

ಬಸವಣ್ಣನನ್ನು ಕುರಿತ ಕವಿತೆಗಳು ಸಮಕಾಲೀನ ಮನುಷ್ಯ, ಸಮಾಜ, ಹಾಗೂ ಅವರ ನಡತೆಯನ್ನು ಕುರಿತು ವಿಮರ್ಶೆ-ವಿಡಂಬನೆಗೊಳಪಡಿಸಿವೆ. ಇದರ ಬಹುಮುಖ್ಯವಾದ ಉದ್ದೇಶ ಸಮಕಾಲೀನ ವ್ಯಕ್ತಿತ್ವಗಳನ್ನು ಸುಧಾರಿಸುವುದು, ರೂಪಿಸುವುದೇ ಆಗಿದೆ. ಜೊತೆಗೆ ಬಸವಣ್ಣ ತನ್ನ ಕಾಲದಲ್ಲಿ ಯಾವ ಸಮಾನತೆಯ, ಸಚ್ಚಾರಿತ್ರ್ಯದ ಸಮಾಜವನ್ನು ಕಟ್ಟಲು ಪ್ರಯತ್ನಿಸಿದನೋ ಆ ಸಮಾಜಕ್ಕೆ ಬೇಕಾದ 'ಹೊಸ ಮನುಷ್ಯ'ರನ್ನು ರೂಪಿಸುವ ಕಾಳಜಿಗಳನ್ನು ವರ್ತಮಾನದಲ್ಲಿ ಮುಂದುವರಿಸುವ ಶ್ರದ್ಧೆಯನ್ನು ಪ್ರಕಟಿಸುತ್ತವೆ. "ಬಸವಣ್ಣ ವ್ಯಕ್ತಿಯ ಪರಿಶುದ್ಧತೆಗೆ ಕೊಟ್ಟ ಪ್ರಾಮುಖ್ಯತೆ ಆಳದಲ್ಲಿ ಅವನ ವಚನಗಳೆಲ್ಲವುಗಳ ಒಳಮಿಡಿತವೂ ಹೌದು. ಆದರೆ ಗಮನಿಸಬೇಕಾದ ಮುಖ್ಯ ವಿಷಯವೆಂದರೆ, ಬಸವಣ್ಣನು ಎಲ್ಲಿ ಮನುಷ್ಯನ ಅಂತರಂಗ, ಬಹಿರಂಗ ಶುದ್ಧಿ, ಸ್ವವಿಮರ್ಶೆ ಮತ್ತು ಪ್ರಾಮಾಣಿಕತೆಗಳ ಬಗ್ಗೆ ಮಾತನಾಡುತ್ತಾನೋ ಅಲ್ಲೆಲ್ಲಾ ಅವನ ವಚನಗಳು ಅವುಗಳನ್ನು ಮನುಷ್ಯನಲ್ಲಿ ಇರಬೇಕಾದ ಮೂಲಭೂತ ಗುಣವೆಂಬಂತೆ ಪ್ರಸ್ತಾಪಿಸುತ್ತವೆ. ವಿಶಾಲವಾಗಿ ಈ ವಿಭಾಗಕ್ಕೆ ಅಳವಡುವ ವಚನಗಳು ಸತ್ಯ-ಶಿವ ಹಾಗೂ ಸುಂದರಗಳಲ್ಲಿ ಮೂರು ಗುಣಗಳೂ ಸಹ ಮನುಷ್ಯನ ವ್ಯಕ್ತಿತ್ವವನ್ನು ರೂಪಿಸುವ ಮುಖ್ಯತತ್ವಗಳೆಂದು ಭಾವಿಸುತ್ತವೆ" [೪೩] ಬಸವರಾಜ ಕಲ್ಗುಡಿಯವರ ಈ ಮಾತುಗಳು ಸಾಮಾಜಿಕ ವ್ಯಕ್ತಿತ್ವಗಳ ಬಗ್ಗೆ ಮತ್ತು ಅವುಗಳನ್ನು ರೂಪಿಸುವ ಬಸವಣ್ಣನ ಆಲೋಚನೆಗಳನ್ನು ಪ್ರಸ್ತಾಪಿಸುತ್ತವೆ. ವ್ಯಕ್ತಿತ್ವಗಳನ್ನು ಶುದ್ಧತೆಯ ನೆಲೆಯಲ್ಲಿ ರೂಪಿಸಿಕೊಳ್ಳಬೇಕಾದ ಅಗತ್ಯವನ್ನು ಬಸವಣ್ಣನ ಅನೇಕ ವಚನಗಳು ಪ್ರಸ್ತಾಪಿಸುತ್ತವೆ. ವ್ಯಕ್ತಿಯಲ್ಲಿನ ಕೇಡಿನ ಪ್ರವೃತ್ತಿ, ಅದು ಸಾಂಸ್ಕೃತಿಕ ಬದುಕಿನ ಮೇಲೆ ಬೀರಬಹುದಾದ ಕೆಟ್ಟ ಪರಿಣಾಮಗಳನ್ನು ಗುರುತಿಸಿದ ಬಸವಣ್ಣ ಅವುಗಳಿಗೆ ಪರಿಹಾರವಾಗಿ ವ್ಯಕ್ತಿತ್ವದ ಅಂತರಂಗ, ಬಹಿರಂಗ ಶುದ್ಧತೆಗೆ ಒತ್ತುಕೊಡುತ್ತಾನೆ. ಬಸವಣ್ಣನ ಈ ಆಶಯವನ್ನೇ ವರ್ತಮಾನದಲ್ಲಿ ಮುಂದುವರಿಸಲು ಪ್ರಯತ್ನಿಸುತ್ತಿರುವ ಕವಿತೆಗಳು ಅವನ ಹಾದಿಯನ್ನೇ ಅನುಸರಿಸಿವೆ. ಅವನ ಸಾಮಾಜಿಕ ಆಶಯಗಳನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ಪ್ರಯತ್ನಶೀಲವಾಗಿವೆ.

ಕವಿತೆಗಳು ವ್ಯಕಿತ್ವ ವಿಮರ್ಶೆ ಮತ್ತು ವಿಡಂಬನೆಯ ತಮ್ಮ ಧೋರಣೆಯ ಮೂಲ ಧಾತುವನ್ನು ಬಸವಣ್ಣನಿಂದಲೇ ಪಡೆದಿವೆ. ಏಕೆಂದರೆ ಬಸವಣ್ಣನ 'ವ್ಯಕ್ತಿತ್ವ ಶುದ್ಧತೆ'ಯ ಬಗ್ಗೆ ಮಾತನಾಡುವ ಎಲ್ಲಾ ವಚನಗಳ ಮೂಲ ಗುಣ ವಿಮರ್ಶೆ ಮತ್ತು ವಿಡಂಬನೆಯೇ ಆಗಿದೆ. "ಇವನ ವಚನಗಳ ವಿಡಂಬನೆಯು ಮುಖ್ಯವಾಗಿ ಮನುಷ್ಯನ ಅಂತರಂಗವನ್ನು ಕುರಿತದ್ದೇ ಆಗಿದೆ. ಇವನು ಕಂಡ ವಿಸಂಗತಿ ಮುಖ್ಯವಾಗಿ ಮನುಷ್ಯನ ವ್ಯಕ್ತಿತ್ವದ್ದೇ ಆಗಿದೆ. ಇಲ್ಲಿ ಮನುಷ್ಯ ತನ್ನ ಮಾತಿನಲ್ಲಿ, ನಡವಳಿಕೆಯಲ್ಲಿ ನೇರಮಾತಿನವನಲ್ಲ. ತಮ್ಮ ಗುಣವನ್ನು ಅರಿಯದಿದ್ದರೂ ಇದಿರ ಗುಣವನ್ನು ಬಲ್ಲೆವೆಂಬ ಡಾಂಭಿಕತೆ ಇಲ್ಲಿ ಪ್ರಧಾನ ಲಕ್ಷಣವನ್ನು ಪಡೆದಿದೆ. ಇಂಥ ಕಡೆಗಳಲ್ಲಿ ವಿಡಂಬನೆಯು ವಿಸಂಗತಿಯನ್ನು ಬಯಲು ಮಾಡಲು ಪ್ರಯತ್ನಿಸುತ್ತದೆ." [೪೪] ಕಲ್ಗುಡಿಯವರ ಈ ಮಾತುಗಳು ಬಸವಣ್ಣನ ವಚನಗಳ ಬಹುಮುಖ್ಯವಾದ ಧೋರಣೆಗಳಾದ ವಿಮರ್ಶೆ- ವಿಡಂಬನೆಗಳು ಮನುಷ್ಯನ ವ್ಯಕ್ತಿತ್ವದ ವಿಸಂಗತಿಗಳಿಂದಲೇ ಹುಟ್ಟಿಕೊಂಡಿರುವುದನ್ನು, ಅವುಗಳ ಮೂಲಕ ಸಾಮಾಜಿಕ ವ್ಯಕ್ತಿತ್ವಗಳನ್ನು ರೂಪಿಸುವ ಅವನ ಪ್ರಯತ್ನಗಳನ್ನು ಗುರುತಿಸುತ್ತದೆ. ಬಸವಣ್ಣನ ಈ ಧೋರಣೆಯನ್ನೇ ಬಸವಣ್ಣನನ್ನು ಕುರಿತ ಕವಿತೆಗಳು ತಮ್ಮ ಸಮಕಾಲೀನ ವ್ಯಕ್ತಿತ್ವಗಳನ್ನು ರೂಪಿಸಿಕೊಳ್ಳುವ ಪ್ರಯತ್ನದಲ್ಲಿ ಬಳಸಿಕೊಂಡಿವೆ. ಬಸವಣ್ಣನ

ಕನಸನ್ನು ನನಸಾಗಿಸುವುದಕ್ಕಾಗಿ, ಸಮಕಾಲೀನ ಮನುಷ್ಯರ ನಡವಳಿಕೆಗಳನ್ನು ತಿದ್ದಲು ಬಸವಣ್ಣನ ವ್ಯಕ್ತಿತ್ವವನ್ನೇ ಒಂದು ಆದರ್ಶ ಮಾದರಿಯನ್ನಾಗಿ, ಅಸ್ತ್ರವನ್ನಾಗಿ ಬಳಸಿಕೊಂಡಿವೆ. ಬಸವಣ್ಣ ಮನುಷ್ಯನ ಅಂತರಂಗ ಶುದ್ಧಿ, ಬಹಿರಂಗ ಶುದ್ಧಿ, ಮಾತಿನ ಮಹತ್ವ, ನಡೆನುಡಿಗಳಲ್ಲಿ ಒಂದಾಗಿ ಬದುಕುವುದು ಮುಂತಾದವುಗಳಿಗೆ ಸಂಬಂಧಿಸಿದಂತೆ ಯಾವ ಆದರ್ಶ ಮನುಷ್ಯನ ಗುಣ-ಸ್ವಭಾವಗಳನ್ನು ಪ್ರತಿಯೊಬ್ಬರಲ್ಲೂ ರೂಪಿಸಲು ಕನಸುಕಂಡಿದ್ದನೋ ಅವುಗಳ ಬಗೆಗೆ ಸಮಕಾಲೀನ ಮನುಷ್ಯರಲ್ಲಿ ಜಾಗೃತಿಯನ್ನು ಮೂಡಿಸುವ ನಿಟ್ಟಿನಲ್ಲಿ ಈ ಕವಿತೆಗಳು ಪ್ರಯತ್ನಿಸುತ್ತವೆ.

ಈ ಬಗೆಯ ಕವಿತೆಗಳ ರಚನೆಯ ಹಿಂದಿನ ಕವಿಗಳ ಮನೋಧರ್ಮ ಮತ್ತು ಒಳತುಡಿತಗಳನ್ನು ಗಮನಿಸಿದಾಗ ಅವುಗಳಲ್ಲಿ ಮಾನವೀಯ ಮಿಡಿತವನ್ನು, ಜೀವಪರ ಕಾಳಜಿಗಳನ್ನು ಗುರುತಿಸಬಹುದು. ತನ್ನ ಉದ್ಧಾರಕ್ಕಾಗಿ, ಸಮಾಜದ ಒಳಿತಿಗಾಗಿ, ಕೆಟ್ಟದ್ದು ನಾಶವಾಗಿ ಒಳಿತು ಸ್ಥಾಪನೆಯಾಗಲೆಂದು ನಿರಂತರವಾಗಿ ಚಿಂತಿಸುವ ಮನಸ್ಸುಗಳ ನಿಷ್ಠಾವಂತ ಪ್ರಯತ್ನಗಳನ್ನು ಬಸವಣ್ಣನನ್ನು ಕುರಿತಾದ ಕವನಗಳಲ್ಲಿ ಕಾಣಬಹುದು. ನಮ್ಮ ವರ್ತಮಾನದ ಸಮಾಜವನ್ನೂ, ಜಗತ್ತನ್ನೂ ನೋಡಿದಾಗ ಎಲ್ಲವೂ ವಿಚಿತ್ರವಾಗಿ, ಅಸ್ತವ್ಯಸ್ತವಾಗಿ, ಕೆಡುಕುಗಳಿಂದಲೇ ತುಂಬಿಹೋಗಿದೆ. ವರ್ತಮಾನದ ಸಾಂಸ್ಕೃತಿಕ ಬದುಕಿನ ಉಸಿರುಗಟ್ಟಿಸುವ ವಾತಾವರಣಗಳು, ಹಿಂಸೆ ಕ್ರೌರ್ಯಗಳು ದಟ್ಟ ನಿರಾಶೆಯನ್ನು ಕವಿಸುವ ಸ್ಥಿತಿಯಲ್ಲಿವೆ. ಇಂಥ ದುರಂತ, ಪ್ರಕ್ಷುಬ್ಧ ಸ್ಥಿತಿಯನ್ನು ಅತಿ ನೋವಿನಿಂದ ದೂರುತ್ತಲೇ ಅವುಗಳಿಂದ ಬಿಡುಗಡೆ ಪಡೆದು ಬದುಕನ್ನು ಸಹ್ಯವಾಗಿಸಿಕೊಳ್ಳಬಹುದಾದ ಕಾಲ ಹಾಗೂ ಮಾರ್ಗ ದೂರವಿಲ್ಲವೆಂಬ ಆಶಾಭಾವವನ್ನು ಈ ಕವಿತೆಗಳು ಅಭಿವ್ಯಕ್ತಿಸುತ್ತವೆ.

ವ್ಯಕ್ತಿಯ ಸಾಧನೆ – ಸಿದ್ಧಿಗಳು, ಬದುಕು– ಆದರ್ಶಗಳನ್ನು ಮೆಚ್ಚುವ, ವರ್ತಮಾನದಲ್ಲಿ ಆ ಮೌಲ್ಯಗಳನ್ನು ಪಸರಿಸುವ, ಅವುಗಳಿಗಾಗಿ ಹುಡುಕಾಡುವ, ಅವುಗಳ ಮರುಸ್ಥಾಪನೆಗಾಗಿ ಹಂಬಲಿಸುವ, ಎಲ್ಲನ್ನೂ ಸರಿಪಡಿಸಲು ವ್ಯಕ್ತಿಯನ್ನೇ ಆಹ್ವಾನಿಸುವ, ಮರುಹುಟ್ಟಿಗಾಗಿ ಹಂಬಲಿಸುವ ಮನಸ್ಸಿನ ತುಡಿತಗಳು ಬದುಕಿನ ಬಗೆಗೆ ಹೊಸ ಭರವಸೆಗಳನ್ನು ಮೂಡಿಸುತ್ತವೆ. ಮಾನವತೆ ಸಂಪೂರ್ಣವಾಗಿ ಸತ್ತಿಲ್ಲ, ಪೂರ್ಣ ನಿರಾಶರಾಗಬೇಕಾಗಿಲ್ಲ. ಒಳಿತಿನ ಕಡೆಗೆ ಚಲಿಸುವ, ಜೀವಪರವಾಗಿ ಮಿಡಿಯುವ ಮಾನವೀಯ ಹೃದಯಗಳು ಇನ್ನೂ ಇವೆ ಎಂಬ ಸಮಾಧಾನ ನೀಡುತ್ತವೆ. ಇಲ್ಲಿ ಭೂತಕಾಲವನ್ನು ಕುರಿತ ಹೊಗಳಿಕೆ, ವರ್ತಮಾನವನ್ನು ಕುರಿತ ತೆಗಳಿಕೆ ಕಂಡುಬಂದರೂ, ವರ್ತಮಾನವನ್ನು ಸರಿಪಡಿಸುವ ಹಂಬಲ, ಉತ್ಸುಕತೆ ಇಲ್ಲಿ ವ್ಯಕ್ತವಾಗುತ್ತಿರುವುದು ಮುಖ್ಯ. ಬಸವಣ್ಣನ ವ್ಯಕ್ತಿತ್ವದ ಸ್ಮರಣೆಯ ಒರೆಗಲ್ಲಿನ ಮೂಲಕ ತನ್ನನ್ನೂ ಹಾಗೂ ತನ್ನ ಸುತ್ತಣ ಸಾಮಾಜಿಕ ಬದುಕನ್ನೂ ಉಜ್ಜಿ ನೋಡುವ, ಆ ಮೂಲಕ ಹೊಸ ಸಮಾಜ ನಿರ್ಮಾಣದ ಕನಸು ಕಾಣುವ, ಆ ಕನಸನ್ನು ನನಸು ಮಾಡುವ ನಿರಂತರ ಪ್ರಯತ್ನದಲ್ಲಿ ತೊಡಗಿರುವ ವಿಶಿಷ್ಟ ಪ್ರಯತ್ನವನ್ನು ಈ ಕವಿತೆಗಳಲ್ಲಿ ಗುರುತಿಸಬಹುದು.

ಆಧುನಿಕ ಕನ್ನಡ ಕಾವ್ಯ ಬಸವಣ್ಣನ ವ್ಯಕ್ತಿತ್ವವನ್ನು ಚಿತ್ರಿಸುವ ಸಂದರ್ಭದಲ್ಲಿ ಅವನ ಸಾಮಾಜಿಕ ಕಳಕಳಿ, ಸುಧಾರಣೆಯ ಆಶಯ ಹಾಗೂ ಜೀವಪರ ಕಾಳಜಿಗಳನ್ನು ಬಹು ಮುಖ್ಯವಾಗಿ ಪರಿಗಣಿಸಿದೆ. ವೈದಿಕ ಧರ್ಮದ ವರ್ಣಾಶ್ರಮ ವ್ಯವಸ್ಥೆಯ ಆಧಾರದ ಮೇಲೆ ರೂಪುಗೊಂಡಿದ್ದ ಸಮಾಜದಲ್ಲಿ ಜಾತಿ ಶ್ರೇಣೀಕರಣದ ಕರಾಳತೆ ಹಾಗೂ ಹಿಂಸೆಯ ಸ್ವರೂಪವನ್ನು ಹಿಡಿದಿಡುವ ಮೂಲಕ ಅದಕ್ಕೆ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಯತ್ನ ಸೃಜನಶೀಲ ಮನಸ್ಸುಗಳ ನಿರಂತರವಾದ ಶ್ರದ್ಧೆ ಮತ್ತು ಕಾಳಜಿಗಳಲ್ಲೊಂದಾಗಿದೆ. ಹಾಗಾಗಿ ಬಹುತೇಕ

ಕನ್ನಡ ಕವಿಗಳು ಬಸವಣ್ಣ ಜಾತಿ ವಿನಾಶಕ್ಕಾಗಿ ಶ್ರಮಿಸಿದ ವಿಧಾನ, ಅದು ಆಧುನಿಕ ಸಂದರ್ಭದಲ್ಲಿ ಪಡೆದುಕೊಂಡಿರುವ ತಿರುವುಗಳನ್ನು ಮತ್ತೆ ಮತ್ತೆ ಚರ್ಚಿಸುವುದರ ಮೂಲಕ ಹೊಸ ಸಮಾಜ ನಿರ್ಮಾಣವೊಂದರ ಕನಸನ್ನು ಕಾಣುತ್ತಿದ್ದಾರೆ. ಈ ಸನ್ನಿವೇಶದಲ್ಲಿ ಅಸಮಾನತೆಯ ನೆಲೆಗಳೆಲ್ಲವನ್ನೂ ಬುಡಸಮೇತ ತೊಡೆದುಹಾಕಲು ಬಸವಣ್ಣನೇ ಮತ್ತೊಮ್ಮೆ ಜನ್ಮವೆತ್ತಿ ಬರಬೇಕು ಎಂಬ ಆಶಯ ವ್ಯಕ್ತವಾಗುತ್ತದೆ. ಕುವೆಂಪುರವರಂತಹ ಲೇಖಕರೂ ಕೂಡ 'ಮತದ ಉಸುಬಿಗೆ ಸಿಲುಕಿ ತತ್ತರಿಸುತ್ತಿರುವ ನಮ್ಮನ್ನು ಉದ್ಧರಿಸಲು, ಅದರಿಂದ ಮೇಲೆತ್ತಲು ಬಸವಣ್ಣ ನಿನ್ನಿಂದ ಮಾತ್ರ ಸಾಧ್ಯ' ಎನ್ನುತ್ತಾರೆ. ಬಸವಣ್ಣ ವರ್ಣಾಶ್ರಮ ವ್ಯವಸ್ಥೆಯ, ಜಾತಿ ಪದ್ಧತಿಯ ಶೋಷಣೆಗೆ ನಿರಂತರವಾಗಿ ಬಲಿಯಾಗುತ್ತಿದ್ದವರ ಪರವಾಗಿ ಹೋರಾಡಿದ್ದು ಹಾಗೂ ಅವರಿಗೆ ಅರಿವನ್ನು ನೀಡಿ ಕಾಯಕತತ್ವವೆಂಬ ಧರ್ಮವನ್ನು ಬೋಧಿಸಿದ್ದು ಮಹಾನ್‌ಕಾರ್ಯವಾಗಿ ಕಂಡಿದೆ. ಆದರೆ ನಾವು ಪ್ರತಿನಿತ್ಯ ಬಸವಣ್ಣನ ನಾಮಸ್ಮರಣೆ ಮಾಡುತ್ತಿದ್ದರೂ ಆ ಹಾದಿಯಲ್ಲಿ ಮುನ್ನಡೆಯಲಾರದೆ ತೊಳಲುತ್ತಿರುವುದನ್ನು ಕುವೆಂಪು ಗುರುತಿಸುತ್ತಾರೆ. ಇದೆಲ್ಲದರ ನಡುವೆ ಬಸವಣ್ಣ ಯಾವೆಲ್ಲ ಮೌಢ್ಯತೆಯ ವಿರುದ್ಧ ಹೋರಾಡಿದ್ದನೋ ಅವುಗಳೆ ಇಂದು 'ಬಸವತತ್ವ'ಗಳಾಗಿ ಮರುಹುಟ್ಟು ಪಡೆಯುತ್ತಿರುವುದು, ಅದನ್ನು ತೊಡೆದುಹಾಕಲು ಹೊಸ ಶಕ್ತಿ ಸಂಚಲನವಾಗಬೇಕಿರುವುದನ್ನು ಕವಿ ಗುರುತಿಸುತ್ತಾರೆ. ಹಾಗಾಗಿ ಬಸವಣ್ಣ ಇಂದು ಹೊಸ ಅವತಾರದಲ್ಲಿ, ಸಮಾಜದಲ್ಲಿರುವ ಕೊಳಕನ್ನು 'ವಿಜ್ಞಾನ ವೇದಾಂತ ತೀರ್ಥದಿಂದ' ಶುಚಿಗೊಳಿಸಬೇಕೆನ್ನುತ್ತಾರೆ ಕುವೆಂಪು.

> ಭಕ್ತಿಗಂಗೆಯನೆರೆದು
> ಭಾಗವತ ಶಕ್ತಿಯಂ ಕರೆದು
> ಮತಮೌಢ್ಯದಜ್ಞಾನ ಪಂಕವನು ತೊಳೆದು
> ಶುಚಿಗೊಳಿಸು ವಿಜ್ಞಾನ ವೇದಾಂತ ತೀರ್ಥದಿಂದೆ! [೪೫]

ಇಲ್ಲಿ ಭಕ್ತಿ – ಶಕ್ತಿ, ಜ್ಞಾನ – ವಿಜ್ಞಾನಗಳ ಸಮ್ಮಿಲನದ ಮೂಲಕ ಅಜ್ಞಾನ, ಅಂಧಕಾರದಲ್ಲಿ ಮುಳುಗಿರುವ ಸಮಾಜ ಮತ್ತು ಜನಸಮುದಾಯಗಳನ್ನು ಹೊರತರುವುದರ ಅಗತ್ಯತೆಯನ್ನು ಕವಿ ಎತ್ತಿಹಿಡಿದಿದ್ದಾರೆ.

ಜಿ.ಎಸ್.ಸಿದ್ಧಲಿಂಗಯ್ಯನವರು ತಮ್ಮ 'ಬಸವಣ್ಣನವರು' ಎನ್ನುವ ಕವನದಲ್ಲಿ ಮನುಷ್ಯನಲ್ಲಿರುವ ಚಂಚಲತೆ, ಸಂಪತ್ತಿನ ದಾಹ, ಭೋಗ ಪ್ರವೃತ್ತಿಗಳು ಹೆಚ್ಚಾಗುತ್ತಿರುವ ಸನ್ನಿವೇಶವನ್ನು ವಿಡಂಬಿಸುತ್ತಲೇ ಅವುಗಳನ್ನು ಗೆಲ್ಲಬೇಕಾದ ತುರ್ತನ್ನು ಕುರಿತು ಚರ್ಚಿಸುತ್ತಾರೆ. ಸಮಕಾಲೀನ ಬದುಕು ಹಲವು ಬಗೆಯ ಒತ್ತಡಗಳ ನಡುವೆ 'ಜೀವಚಿತೆ'ಯಾಗುತ್ತಿರುವ ಸಂದರ್ಭದಲ್ಲಿ ಬದುಕನ್ನು ಸಾರ್ಥಕಗೊಳಿಸಿಕೊಳ್ಳಲು ಮನುಷ್ಯರು ತಮ್ಮ ಸ್ವಭಾವ ನಡತೆಗಳಲ್ಲಿ ಸುಧಾರಣೆಗಳನ್ನು ತಂದುಕೊಳ್ಳುವ ಅವಶ್ಯಕತೆ ಇದೆ. ಆದರೆ ನಮ್ಮಲ್ಲಿ ಆ ಬಗೆಯ ಗಂಭೀರತೆಯಾಗಲೀ, ನಿಷ್ಠೆಯಾಗಲೀ ಇಲ್ಲದಿರುವುದನ್ನು ಕವಿ ಗುರುತಿಸುತ್ತಾರೆ.

> ಕೊಂಬೆಯಿಂದ ಕೊಂಬೆಗಳಿಗಿನ್ನು ನೆಗೆದಾಡುತ್ತಿದ್ದೇವೆ
> ತರತರದ ಗರಹೊಡೆದು ನುಡಿಯಿಲ್ಲದಿದ್ದೇವೆ
> ಉರದುದ್ದ ಕೊರಳುದ್ದ ಇನ್ನು ಮುಳುಗಿದ್ದೇವೆ
> ಐವರೇ ಏನು ನೂರಾರು ಜನ ಸುಡುತ್ತಿದ್ದಾರೆ
> ನಮ್ಮನ್ನು ಜೀವನವಿಡೀ ಜೀವಚಿತೆಯಲ್ಲಿ [೪೬]

ಇಲ್ಲಿ ಗಮನಿಸಬಹುದಾದ ಮತ್ತೊಂದು ಅಂಶವೆಂದರೆ ವೈಯಕ್ತಿಕವಾದ ದೌರ್ಬಲ್ಯಗಳ ಜೊತೆಗೆ ಸಾಮಾಜಿಕ ಅಂಶಗಳೂ ಕೂಡ ಸಮ್ಮಿಳಿತಗೊಂಡಿರುವುದು. 'ಐವರೇ ಏನು ನೂರಾರು ಜನ ಸುಡುತ್ತಿದ್ದಾರೆ' ಎನ್ನುವುದು ಆಧುನಿಕ ಮನುಷ್ಯ ಎದುರಿಸುತ್ತಿರುವ ಭಿನ್ನ ಭಿನ್ನ ಸವಾಲುಗಳನ್ನು ಹಿಡಿದಿಡುತ್ತದೆ. ಕೆ.ಎಸ್.ನಿಸಾರ್ ಅಹಮದ್‌ರ 'ಬಸವಣ್ಣನ್ನು ಕುರಿತು' ಕವನದಲ್ಲಿ ಆಧುನಿಕ ಮನುಷ್ಯನ ಸಿನಿಕತನವನ್ನೂ, ಅದರಿಂದ ಹೊರಬರಬಹುದಾದ

ವಿಧಾನಗಳನ್ನು ಕುರಿತು ಚರ್ಚಿಸುತ್ತಾ ಬಸವಣ್ಣ ಮತ್ತು ವಚನ ಸಾಹಿತ್ಯದ ಪ್ರಸ್ತುತತೆಯನ್ನು ಕುರಿತು ಈ ರೀತಿ ಹೇಳಿದ್ದಾರೆ.

ಸೋಗು ಡಂಭಾಚಾರ, ತೋರಿಕೆಗೆ ಧಿಕ್ಕಾರ
ತೆರೆದ ಪುಸ್ತಕದಂತೆ ಮುಗ್ಧ ಮನಸು.
ಮಾತು ಮುತ್ತಿನ ಹಾರ: ಕೊಂಕಿರದೆ ಗುರಿ ನೇರ,
ಚೆಂದ ಬಾಳಿಗೆ ವಚನ ಗಾಳಿ ಬೀಸು,
ಹೊರಗಿನಂತೆಯೆ ಇರಲಿ ಒಳಮನೆಯ ಪರಿಶುದ್ಧಿ
ಪ್ರತಿಚಣವು ಕಸಹೊಡೆವ ಬುದ್ಧಿಯಿರಲಿ;
ದೇಹ ದೇವರ ನೆಲಸು: ಅಂತರಂಗವೆ ಹಾಸು
ಸುತ್ತ ತಿಳಿವಿನ ಗಂಧ ಸೂಸುತಿರಲಿ, [೪೭]

ಬಸವಣ್ಣ ರೂಪಿಸಹೊರಟ ಸಾಮಾಜಿಕ ವ್ಯಕ್ತಿತ್ವಗಳ ಸ್ವರೂಪವನ್ನು ಚಿತ್ರಿಸುತ್ತಲೇ ವರ್ತಮಾನದಲ್ಲಿ ಅದರ ಅಗತ್ಯವನ್ನು ಒತ್ತಿ ಹೇಳುತ್ತದೆ. ಬಸವಣ್ಣ ತೋರಿದ ದಾರಿಯಲ್ಲಿ ಯಾರು ನಡೆಯಲಿ, ನಡೆಯದಿರಲಿ ಅವರ ಹೊಸ ಮಾನವತೆಯ ಸೃಷ್ಟಿ, ಹೊಸ ಸಮಾಜ ನಿರ್ಮಾಣದ ಕನಸು ನನಸಾಗದೆ ಹೋಗಿರಬಹುದು. ನನಸಾಗಿಸಲು ಯಾರೂ ಪ್ರಯತ್ನಿಸದೆ ಇರಬಹುದು. ಆದರೆ ಬಸವಣ್ಣ ಮಾತ್ರ ಆ ಎಲ್ಲ ಎತ್ತರಕ್ಕೆ ಏರಿದ. ಆ ರೀತಿ ಬದುಕಿ ಮಹಾತ್ಮನಾದ. ಆದರೆ ಬಸವಣ್ಣ ಬಿಟ್ಟು ಹೋದ ಆದರ್ಶದ ಬದುಕಿನ ಮಾದರಿ ನಮ್ಮ ಮುಂದೆ ಸದಾ ಜೀವಂತವಾಗಿದೆ. ಮಾನವತೆ ಬಸವಣ್ಣನನ್ನು ಸಂಪೂರ್ಣವಾಗಿ ಸಾಯಲು ಬಿಡಲಿಲ್ಲ. ಅವರ ಚಿಂತನೆ ಆದರ್ಶ ಬದುಕಿನ ತತ್ವಗಳನ್ನು ಉಳಿಸುವ ಪ್ರಯತ್ನಗಳು ಇಂದಿಗೂ ನಡೆಯುತ್ತಿವೆ. ತಮ್ಮ ಬದುಕನ್ನು ಮರಳಿ ಸೃಷ್ಟಿಸುವ ಹಂಬಲ, ಪ್ರತಿನಿತ್ಯ ಜನಮಾನಸದಲ್ಲಿ ವ್ಯಕ್ತವಾಗುತ್ತಿರುವುದನ್ನು ಕವಿತೆಗಳಲ್ಲಿ ಗಮನಿಸಬಹುದು. ಈ ಆಶಾಭಾವವೇ ಮಾನವ ಸಮಾಜವನ್ನು ಇನ್ನೂ ಮುನ್ನಡೆಸುತ್ತಿರುವುದು. ಈ ರೀತಿ ಮಾನವೀಯವಾಗಿ ಮಿಡಿಯುವ ಕೆಲವು ಮನಸ್ಸುಗಳಾದರೂ ನಮ್ಮ ನಡುವೆ ಇವೆಯಲ್ಲ ಎಂಬ ಭರವಸೆಯನ್ನು ಸುಮತೀಂದ್ರ ನಾಡಿಗ ಅವರ 'ಬಸವಣ್ಣ' ಕವನ ಹಿಡಿದಿಡುತ್ತದೆ.

ನೀನು ಹೇಳಿದೆಯಲ್ಲಾ ಬಸವಣ್ಣ
'ಅತ್ತುದಕೆ ತಕ್ಕುದ ಮಾಡುವ ಕೂಡಲ ಸಂಗಮದೇವ'
ಹೋತ ಅಳುತ್ತಲೇ ಇದೆ, ತಕ್ಕುದಾಯ್ತೆ ಹೇಳು:
ನಿನ್ನ ನಂಬಿಕೆ ಮೂಲ ಭಕ್ತಿ ಭಾವ.
ಯಾರೆ ಎತ್ತಲಿ ಗಾಡಿ, ಯಾರೆ ಎತ್ತದೆ ಇರಲಿ
ಸಂಗನೆದುರಿಗೆ ನಿನ್ನ ದೇಹ ಬಿತ್ತು.
ನೂರಾರು ವರ್ಷಗಳು ನಡೆದು ನೋಡಿದರೀಗ ಉಳಿದಿರುವೆ
ಹಲವಾರು ವಚನಗಳಲ್ಲಿ;
ನಿನ್ನ ದಯೆ,
ಪ್ರಾಮಾಣಿಕತೆ, ನಿಷ್ಠೆ
ಮರುಹುಟ್ಟುಪಡೆಯುತ್ತಿವೆ – ಮಾತಿನಲ್ಲಿ [೪೮]

ಬಸವಣ್ಣನ ನಂಬಿಕೆ ಪ್ರತಿಪಾದನೆಗಳು ವರ್ತಮಾನದ ಸಮಾಜದಲ್ಲಿ ಅರ್ಥವನ್ನು ಕಳೆದುಕೊಂಡು ಕೇವಲ ಮಾತುಗಳಲ್ಲಿ ಮಾತ್ರ ಉಳಿದು ಅಂತರಂಗಕ್ಕಿಳಿಯದ ಸ್ಥಿತಿಯನ್ನು ಈ ಕವಿತೆ ವಿಡಂಬಿಸುತ್ತಲೆ ಬಸವಣ್ಣನ ನಂಬಿಕೆ ಆದರ್ಶಗಳು ಪ್ರತಿ ಮನುಷ್ಯರಲ್ಲೂ ಕೃತಿಯಲ್ಲಿ ವ್ಯಕ್ತವಾಗಬೇಕಾದ ಅಗತ್ಯವನ್ನು ಒತ್ತಿಹೇಳುತ್ತದೆ. ಬಸವಣ್ಣನ ವ್ಯಕ್ತಿತ್ವದ ಗುಣಗಳಾದ ದಯೆ, ಪ್ರಾಮಾಣಿಕತೆ, ನಿಷ್ಠೆ, ಇವು ಕೇವಲ ಮಾತಿನಲ್ಲಿ ಮರುಹುಟ್ಟುಪಡೆಯದೆ ಮನುಷ್ಯರ ಸ್ವಭಾವಗಳಾಗಬೇಕಾದ ಆಶಯವನ್ನು ಈ ಕವಿತೆ ವ್ಯಕ್ತಪಡಿಸುತ್ತದೆ.

ಸಾಯದಿರುವೆನು ನಾನು ನಿರ್ಜರಾಂಗನೆಯು

ಬದುಕದಿರುವೆನು ಬರಿ ಭೂತ ಪ್ರೇತ
ಇರಬಹುದೆ?
ಅನ್ಯಾಯವಿನಿಸಿರದ ಆಳ್ಕೆ ಬರಬಹುದೆ?
ಧರ್ಮವೀರರು ತಮ್ಮ ಮತದ ಹೆಚ್ಚಳಕೆಂದು
ಧರ್ಮಾಂಧರಾಗದಿಹ ಕಾಲ ಬರಬಹುದೆ?
ಅಲ್ಲಮ ಪ್ರಭು ಮತ್ತೆ ಶೂನ್ಯ ಸಿಂಹಾಸನದಿ
ಕುಳಿತು ಸಂತತ ಮೆರೆವ ಸ್ವರ್ಣಯುಗ ಬರಬಹುದೆ?[೪೯]

ವಿನಾಯಕರ 'ಕಲ್ಯಾಣದ ನಗರಲಕ್ಷ್ಮೀ' ಕವನ ಧರ್ಮವನ್ನು ಅಮಾನವೀಯವಾಗಿ ಬಳಸಿಕೊಳ್ಳುತ್ತಿರುವ 'ಧರ್ಮವೀರರು' ಹೆಚ್ಚುತ್ತಿರುವ ಸಂದರ್ಭದಲ್ಲಿ ಬಸವಣ್ಣನ ಮನುಷ್ಯ ಧರ್ಮದ ಪ್ರತಿಪಾದನೆಯನ್ನು ಸಮಕಾಲೀನ ಮನುಷ್ಯರಲ್ಲಿ ಬಿತ್ತುವ ಪ್ರಯತ್ನವನ್ನು ಮಾಡುತ್ತದೆ. ಧರ್ಮಕ್ಕೂ ಮನುಷ್ಯನ ನಡೆತೆಗೂ ಅಂತರವನ್ನು ಕಲ್ಪಿಸಿ ಬದುಕುತ್ತಿರುವ ಈ ಹೊತ್ತಿನಲ್ಲಿ ಮನುಷ್ಯನ ನಡತೆ ಸ್ವಭಾವಗಳೇ ಧರ್ಮ ಎಂಬ ಬಸವಣ್ಣನ ಆಲೋಚನೆಗಳು ಪ್ರಸ್ತುತವೆನಿಸುತ್ತವೆ. ತನ್ನ ಸುತ್ತಲೂ ಬದುಕುತ್ತಿರುವ ಮನುಷ್ಯರನ್ನು ಘನತೆಯಿಂದ ಕಾಣಬೇಕಾದ ಬಸವಣ್ಣನ ಆಶಯಗಳನ್ನು ವರ್ತಮಾನದಲ್ಲಿ ತರುವ ಕಾಳಜಿ ಈ ಕವಿತೆಗಿದೆ. ಬಸವಣ್ಣನ ಸಮಾನತೆಯ ಆಶಯವನ್ನು ಹಾಡಿ ಹೊಗಳುವ ಕವಿಗಳು ಈ ಸಮಾನತೆಯ ತೀವ್ರತೆಯನ್ನು ಸಮರ್ಥವಾಗಿ ಗ್ರಹಿಸಿದಂತೆ ಕಂಡುಬರುವುದಿಲ್ಲ. ಅವನ ಅಂತರ್ಜಾತಿಯ ವಿವಾಹ, ಸಹಭೋಜನ, ಸಹಬಾಳ್ವೆಯ ಕಾರ್ಯಯೋಜನೆಗಳನ್ನು ಪದಾಡಂಬರದ ಮಟ್ಟಕ್ಕಷ್ಟೇ ಸೀಮಿತಗೊಳಿಸಿಬಿಡುತ್ತಾರೆ. ಬಸವಣ್ಣನ ಆಶಯದ ಸಮಾನತೆ ಕೇವಲ ಉಡುವ, ಉಣ್ಣುವ, ಜೊತೆಯಾಗಿ ಬಾಳುವ ಮಟ್ಟಕ್ಕಷ್ಟೇ ಸೀಮಿತವಾಗಿರಲಿಲ್ಲ. ಅದು ಆಂತರಿಕ ಬದಲಾವಣೆಗೂ, ಆ ಬದಲಾವಣೆ ಯಾವುದೇ ಬಗೆಯ ಮೇಲರಿಮೆ, ಕೀಳರಿಮೆಗೆ ಅವಕಾಶವಿಲ್ಲದಂತೆ ಬಾಳುವ ಅಪೇಕ್ಷೆಯದೂ ಆಗಿತ್ತು. ಇಲ್ಲಿ ಮೇಲು ಕೀಳಿನ 'ಅಹಂಭಾವ'ವಳಿದು ಮಾನವ ಪ್ರೇಮ ಅರಳಬೇಕಾದ ಹಕ್ಕೊತ್ತಾಯ ಕಂಡುಬರುತ್ತದೆ. ವ್ಯಕ್ತಿತ್ವಗಳು ತಮ್ಮ ಡಾಂಭಿಕತನವನ್ನು ಕಳೆದುಕೊಂಡಾಗ ಮಾತ್ರ ಸಮಾಜದಲ್ಲಿ ಬದಲಾವಣೆ ಸಾಧ್ಯ. ಅಂಥ ವ್ಯಕ್ತಿತ್ವಗಳು ರೂಪುಗೊಳ್ಳಬೇಕೆಂಬ ಹಂಬಲ ಬಹುತೇಕ ಕವಿತೆಗಳಲ್ಲಿದೆ.

ಬಸವಣ್ಣ ಮನುಷ್ಯನ ವ್ಯಕ್ತಿತ್ವ ಶುದ್ಧತೆಗೆ ಹೆಚ್ಚು ಒತ್ತು ನೀಡುತ್ತಾನೆ. ಅವನ ವಚನಗಳು ಅದನ್ನು ಸಾಬೀತುಪಡಿಸಿವೆ. ಬಸವಣ್ಣ ಹೀಗೆ ಮನುಷ್ಯನ ವ್ಯಕ್ತಿತ್ವ ಶುದ್ಧತೆಗೆ ಏಕೆ ಪ್ರಾಮುಖ್ಯತೆ ಕೊಡುತ್ತಾನೆ? ಹಿಂದೆಂದೂ ಕಾಣದ ರೀತಿಯಲ್ಲಿ ಇವನಿಗೆ ವ್ಯಕ್ತಿತ್ವಗಳನ್ನು ರೂಪಿಸಿಕೊಳ್ಳುವುದು ಯಾಕೆ ಇಷ್ಟು ಮುಖ್ಯವಾಯಿತು? ಎಂಬ ಪ್ರಶ್ನೆಗಳಿಗೆ ಹೀಗೆ ಉತ್ತರಿಸಿಕೊಳ್ಳಬಹುದೇನೊ. ಬಹುಶಃ ಎಲ್ಲಬಗೆಯ ಸಮಸ್ಯೆಗಳ ಮೂಲ ವ್ಯಕ್ತಿಯೇ ಆಗಿರುವುದರಿಂದ ವ್ಯಕ್ತಿಯ ಸುಧಾರಣೆಯಾದರೆ ಸಹಜವಾಗಿಯೇ ವ್ಯಕ್ತಿಯಿಂದ ರೂಪುಗೊಂಡಿರುವ ಎಲ್ಲಾ ವ್ಯವಸ್ಥೆಗಳೂ ತಾನಾಗಿಯೇ ಸರಿಹೋಗುತ್ತವೆ ಎಂಬ ಸೂಕ್ಷ್ಮ ಪ್ರಜ್ಞೆ ಇಲ್ಲಿ ಕೆಲಸಮಾಡಿದೆ. " ವಾಸ್ತವವಾಗಿ ಬಸವಣ್ಣನ ವಚನಗಳು ಮನುಷ್ಯನ ಅಸ್ತಿತ್ವ ಹಾಗೂ ಅವನ ಕ್ರಿಯೆಗಳ ಮಧ್ಯದ ಕಂದರವನ್ನು ಹೆಚ್ಚು ಪ್ರಖರವಾಗಿ ಬಿಚ್ಚಿತೋರಿಸುತ್ತವೆ. ಮನುಷ್ಯನ ವ್ಯಕ್ತಿತ್ವಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಲಾಗಿದೆ–ಅವನು ಅದನ್ನು ಕಳೆದುಕೊಂಡವನಾಗಿದ್ದಾನೆ ಎನ್ನುವ ಕಾರಣಕ್ಕಾಗಿ. ಕ್ರಿಯೆ ಮತ್ತು ಮನಸ್ಸಿನ ಸಾಮರಸ್ಯಕ್ಕಾಗಿ ಒತ್ತಾಯ ಮಾಡಲಾಗಿದೆ – ಅವನು ಅದನ್ನು ರೂಢಿಸಿಕೊಳ್ಳುವುದು ಅಗತ್ಯವೆನ್ನುವ ಕಾರಣಕ್ಕಾಗಿ."[೫೦] ಬಸವರಾಜ ಕಲ್ಗುಡಿಯವರ ಈ ಅಭಿಪ್ರಾಯ ಬಸವಣ್ಣನಿಗೆ ಮನುಷ್ಯನ ವ್ಯಕ್ತಿತ್ವಗಳನ್ನು ರೂಪಿಸುವುದರ ಹಿಂದೆ ಇದ್ದ ತುರ್ತನ್ನು ಸ್ಪಷ್ಟಪಡಿಸುತ್ತವೆ. ಬಸವಣ್ಣನ ಈ ಕಾಳಜಿಯನ್ನು ಅಷ್ಟೊಂದು ತೀವ್ರ ಮಟ್ಟದಲ್ಲಿ ಅಲ್ಲದಿದ್ದರೂ ಒಂದು

ಆಶಯವಾಗಿ ಅಭಿವ್ಯಕ್ತಿಸುವ, ಸಮಕಾಲೀನ ಸಾಮಾಜಿಕ ವ್ಯಕ್ತಿತ್ವಗಳನ್ನು ವಿಮರ್ಶಿಸುತ್ತಲೇ ಅವುಗಳ ಸುಧಾರಣೆಗಾಗಿ ಹಂಬಲಿಸುವ ಪ್ರಯತ್ನವನ್ನು ಬಸವಣ್ಣನನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳು ಮಾಡಿವೆ.

ಒಟ್ಟಾರೆಯಾಗಿ ಹೇಳುವುದಾದರೆ ವ್ಯಕ್ತಿತ್ವವನ್ನು ಉತ್ಪ್ರೇಕ್ಷೆ ಮತ್ತು ಭಾವುಕ ನೆಲೆಯಲ್ಲಿ ಗ್ರಹಿಸುವ ಪ್ರಕ್ರಿಯೆಯ ಅಪಾಯ ಮತ್ತು ಮಿತಿಗಳನ್ನು ಬಸವಣ್ಣನನ್ನು ಕುರಿತ ಕವಿತೆಗಳು ಹಿಡಿದಿಡುತ್ತವೆ. ವ್ಯಕ್ತಿಯ ಗೊಂದಲ, ದ್ವಂದ್ವ ಮತ್ತು ದೌರ್ಬಲ್ಯಗಳ ನಡುವೆಯೇ ಅವರ ಅನನ್ಯತೆಯನ್ನು ಹುಡುಕುವ ಪ್ರಕ್ರಿಯೆ ನಿಜವಾಗಿಯೂ ಒಂದು ವ್ಯಕ್ತಿತ್ವವನ್ನು ಶೋಧಿಸುವ ನೈಜ ಮಾರ್ಗ. ಆದರೆ ಬಸವಣ್ಣನನ್ನು ಕುರಿತ ಕವಿತೆಗಳನ್ನು ಗಮನಿಸಿದರೆ ಆ ಬಗೆಯ ಗ್ರಹಿಕೆಯ ಕ್ರಮ ಕಾಣಸಿಗುವುದಿಲ್ಲ. ಆತನ ವ್ಯಕ್ತಿತ್ವವನ್ನು ಆದಷ್ಟು ವಸ್ತುನಿಷ್ಠವಾಗಿ ಮತ್ತು ಮನುಷ್ಯ ಸಹಜವಾಗಿ ಗ್ರಹಿಸುವಲ್ಲಿ ಬೆರಳೆಣಿಕೆಯಷ್ಟು ಕವಿತೆಗಳನ್ನು ಬಿಟ್ಟರೆ ಉಳಿದವು ವಿಫಲವಾಗಿವೆ. ಏಕೆಂದರೆ ಸಾಮಾಜಿಕ ಸಮಾನತೆಗಾಗಿ ಹೋರಾಡಿದ ಬಸವಣ್ಣನನ್ನು ಒಬ್ಬ ಸಾಮಾನ್ಯ ಮನುಷ್ಯನನ್ನಾಗಿ, ಹೋರಾಟಗಾರನನ್ನಾಗಿ ಎಲ್ಲ ಬಗೆಯ ದ್ವಂದ್ವ- ದೌರ್ಬಲ್ಯಗಳನ್ನುಳ್ಳ ವ್ಯಕ್ತಿಯನ್ನಾಗಿ ನೋಡುವ ಬದಲಾಗಿ; ಅವತಾರ ಪುರುಷ, ಪವಾಡ ಪುರುಷನೆಂದು ಭಾವಿಸಿಕೊಂಡು ಚಿತ್ರಿಸಲಾಗಿದೆ. ಅಲ್ಲದೆ ಬಸವಣ್ಣ ಒಬ್ಬ ಹೋರಾಟಗಾರನಾಗಿ, ಆಧ್ಯಾತ್ಮಿಕ ಸಾಧಕನಾಗಿ ತನ್ನ ಕಾಲದ ಎಲ್ಲ ಬಗೆಯ ಒತ್ತಡಗಳ ನಡುವೆ ಎದುರಿಸಿದ ಎಲ್ಲ ಬಗೆಯ ಸಂಘರ್ಷ, ತಲ್ಲಣಗಳನ್ನು ತಮ್ಮ ಅನುಭವವನ್ನಾಗಿಯೂ ಕಂಡು ನೋಡುವ ಕ್ರಮವನ್ನು ಅನುಸರಿಸದಿರುವುದು ಈ ಕವಿತೆಗಳ ವಿಫಲತೆಗೆ ಕಾರಣವಾಗಿವೆ. ವ್ಯಕ್ತಿತ್ವವನ್ನು ಆಳವಾಗಿ ಗ್ರಹಿಸದೆ, ಪರಿಭಾವಿಸದೆ, ತಮ್ಮೊಳಗೆ ತಂದುಕೊಳ್ಳದೆ ಮಾಡುವ ಅಭಿವ್ಯಕ್ತಿ ಮತ್ತು ಸಮಕಾಲೀನ ತುರ್ತುಗಳಿಗೆ ಸಂವೇದಿಸುವ ಮನಸ್ಥಿತಿಯ ಕೊರತೆಗಳೂ ಕೂಡ ಕವಿತೆಗಳ ವಿಫಲತೆಗೆ ಕಾರಣವಾಗುತ್ತವೆ. ವ್ಯಕ್ತಿಯನ್ನು ಮನುಷ್ಯತನವನ್ನು ಮೀರಿದ ಒಂದು ಶಕ್ತಿ ಹಾಗೂ ದೇವರು, ಅವತಾರ ಪುರುಷನೆಂಬ ನೆಲೆಯಲ್ಲಿ ಗ್ರಹಿಸುವಿಕೆಯೇ ಅವನನ್ನು ಒಂದು ಅಂತರದಲ್ಲಿಟ್ಟು ನೋಡುವ ವಾತಾವರಣವನ್ನು ಸೃಷ್ಟಿಸಿಬಿಡುತ್ತದೆ. ನಮ್ಮ ಎಲ್ಲಾ ಧಾರ್ಮಿಕ ಸಾಮಾಜಿಕ ಹೋರಾಟಗಾರರ ಸ್ಥಿತಿ ಈ ನೆಲೆಯದ್ದೇ ಆಗಿದೆ. ಆ ವ್ಯಕ್ತಿಗಳನ್ನು ತಮ್ಮ ಹಾಗೆಯೇ ಬದುಕಿದ, ತನ್ನ ಕಾಲದ ಎಲ್ಲ ಅನುಭವಗಳಿಗೆ ಸಹಜವಾಗಿಯೇ ತನ್ನನ್ನು ತಾನು ತೆತ್ತುಕೊಂಡ ಮನುಷ್ಯ ಜೀವಿಯಾಗಿ ಗ್ರಹಿಸುವ ನೆಲೆ ರೂಪುಗೊಂಡಾಗ ಮಾತ್ರ ವ್ಯಕ್ತಿತ್ವಗಳು ತಮ್ಮ ಬದುಕಿನ ಎಲ್ಲ ಬಗೆಯ ಸಂಘರ್ಷಮಯ ಸ್ಥಿತಿಯನ್ನು ಮೀರಿ ಎತ್ತರಕ್ಕೆ ಬೆಳೆದ ವಿಶಿಷ್ಟತೆಯನ್ನು ಗ್ರಹಿಸಲು ಸಾಧ್ಯ. ಇಲ್ಲವಾದಲ್ಲಿ ತನ್ನ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ ಮುಂತಾದ ಎಲ್ಲ ಬಗೆಯ ಸಮಸ್ಯೆ, ಸವಾಲುಗಳನ್ನು ಎದುರಿಸಲು ಬೇಕಾದ ಪೂರ್ವ ತಯಾರಿಯನ್ನು ಪಡೆದುಕೊಂಡೇ ಹುಟ್ಟಿ ಬಂದವರೆಂದು ತಿಳಿದು ಬಿಡುವ ಸಾಮಾನ್ಯ ಗ್ರಹಿಕೆ ಉನ್ನತ ವ್ಯಕ್ತಿಗಳನ್ನು ಮನುಷ್ಯ ಸ್ಥಿತಿಯಿಂದ ಭಿನ್ನವಾಗಿ ಹಾಗೂ ಎತ್ತರದಲ್ಲಿಟ್ಟು ನೋಡಲು ಪ್ರಯತ್ನಿಸುತ್ತಿರುತ್ತದೆ.

## ಕೊನೆ ಟಿಪ್ಪಣಿ :

೧. ಬಸವತತ್ವ; ಸಾಮಾಜಿಕ ಬದಲಾವಣೆ, (ಸಂ.) ಮಹೇಶ ತಿಪ್ಪಶೆಟ್ಟಿ, ಬಸವತತ್ವ : ಇತ್ತೀಚಿನ ಒಲವುಗಳು, ರಹಮತ್ ತರೀಕೆರೆ, ಪು. ಸಂ. ೧೦೬

೨. ಅದೇ, ಪು. ಸಂ. ೧೦೬

೩. ಅದೇ, ಪು. ಸಂ. ೧೦೭

೪. ಉಧೃತ: ಬಸವತತ್ವ : ಇತ್ತೀಚಿನ ಒಲವುಗಳು, ಪು. ಸಂ. ೧೧೧

೫. ಈ ಹೇಳಿಕೆಗಳಿಗೆ ವಿರುದ್ಧವಾದ ಅಭಿಪ್ರಾಯಗಳೂ ಇವೆ. ಎಂ.ಎಸ್.ಆಶಾದೇವಿಯವರು ತಮ್ಮ 'ಮಹಿಳೆ : ಬಸವಣ್ಣನ ನಿಲುವುಗಳು' ಎಂಬ ಲೇಖನದಲ್ಲಿ ಹೆಣ್ಣನ್ನು ಕುರಿತ ಬಸವಣ್ಣನ ಸಾಂಪ್ರದಾಯಿಕ ದೃಷ್ಟಿಕೋನಗಳನ್ನು ಹಲವು ವಚನಗಳ ಮೂಲಕ ಸ್ಪಷ್ಟಪಡಿಸುತ್ತಾರೆ. ಹೆಣ್ಣಿನ ಸ್ವಾತಂತ್ರ್ಯದ ಪ್ರಶ್ನೆ ಬಸವಣ್ಣನ ಪ್ರಧಾನ ಕಾಳಜಿಯಾಗಿರಲಿಲ್ಲ ಎಂಬ ಅಂಶವನ್ನು ಬಸವಣ್ಣನ ವಚನಗಳ ಮೂಲಕವೇ ಚರ್ಚಿಸುತ್ತಾರೆ. ಸ್ತ್ರೀಮತವನುತ್ತರಿಸಲಾಗದೇ, ಎಂ.ಎಸ್.ಆಶಾದೇವಿ, ಪು.ಸಂ.೨೮.

೬. ಬಸವತತ್ವ; ಸಾಮಾಜಿಕ ಬದಲಾವಣೆ, (ಸಂ.) ಮಹೇಶ ತಿಪ್ಪಶೆಟ್ಟಿ, ಲೇಖನ; ಬಸವತತ್ವ ; ಇತ್ತೀಚಿನ ಒಲವುಗಳು. ಡಾ. ರಹಮತ್ ತರೀಕೆರೆ, ಪು. ಸಂ.೧೦೯

೭. ಬಸವೇಶ್ವರ ಅಂಡ್ ಹಿಸ್ ಟೈಮ್ಸ್, ಜಿ. ಬಿ. ದೇಸಾಯಿ, ಪು. ಸಂ. ೩೫, ೧೯೮೬

೮. ಅನುಭಾವ ಸಾಂಸ್ಕೃತಿಕ ಸಮಸ್ಯೆ–ಹುಡುಕಾಟ, ಬಸವರಾಜ ಕಲ್ಗುಡಿ, ಪು. ಸಂ. ೧೧೩

೯. ಸಂಗಮ, (ಸಂ.) ಟಿ.ಆರ್.ಮಹದೇವಯ್ಯ, ಸಿ.ಎಂ. ಕುಂದಗೋಳ, ಶ್ರೀ ಬಸವೇಶ್ವರರಿಗೆ, ಕುವೆಂಪು ಪು. ಸಂ.೧

೧೦. ಸಮಗ್ರ ಕಾವ್ಯ, ಜಿ.ಎಸ್.ಎಸ್., ಪು. ಸಂ. ೩೮೭

೧೧. ಅದೇ, ಪು. ಸಂ. ೩೮೮

೧೨. ಸಂಗಮ, (ಸಂ.) ಟಿ.ಆರ್.ಮಹದೇವಯ್ಯ, ಸಿ.ಎಂ. ಕುಂದಗೋಳ, ಶ್ರೀ ಬಸವೇಶ್ವರ, ಪು.ತಿ.ನ ಪು. ಸಂ. ೯

೧೩. ಅದೇ, ಬಸವನೆಂಬ ಹೆಸರಿನ ಈ ಬಿರುಗಾಳಿ, ರಂ. ಶ್ರೀ. ಮುಗಳಿ ಪು. ಸಂ. ೧೧

೧೪. ಅದೇ, ಪು. ಸಂ.೧೧

೧೫. ಅದೇ, ಬಸವಾ ಮಂತ್ರವಾದೆ, ಶಾಂತರಸ, ಪು. ಸಂ. ೫೪

೧೬. ಅನುಭಾವ ಸಾಂಸ್ಕೃತಿಕ ಸಮಸ್ಯೆ–ಹುಡುಕಾಟ, ಬಸವರಾಜ ಕಲ್ಗುಡಿ, ಪು. ಸಂ. ೧೧೫

೧೭. ಸಂಗಮ, (ಸಂ.) ಟಿ. ಆರ್. ಮಹದೇವಯ್ಯ, ಸಿ. ಎಂ. ಕುಂದಗೋಳ, ಅಣ್ಣನಿಗೆ ಶರಣು, ಪಿ.ಲಂಕೇಶ್, ಪು. ಸಂ.೪೯

೧೮. ಕುದಿವ ನೀಲಿಯ ಕಡಲು, ಸಿದ್ಧಲಿಂಗಯ್ಯ, ಪು. ಸಂ. ೧೪

೧೯. ಅಂಬಿಕಾತನಯದತ್ತರ ಸಮಗ್ರ ಕಾವ್ಯ, ಸಂಪುಟ ೧ (ಸಂ) ವಾಮನ ಬೇಂದ್ರೆ, ಪು.ಸಂ. ೬೩೩

೨೦. ಅದೇ, ೬೩೪

೨೧. ಅನುಭಾವ ಸಾಂಸ್ಕೃತಿಕ ಸಮಸ್ಯೆ– ಹುಡುಕಾಟ, ಬಸವರಾಜ ಕಲ್ಗುಡಿ, ಪು. ಸಂ. ೨೦೬

೨೨. ಸಂಗಮ, (ಸಂ.) ಟಿ. ಆರ್.ಮಹದೇವಯ್ಯ, ಸಿ.ಎಂ. ಕುಂದಗೋಳ, ಶ್ರೀಬಸವೇಶ್ವರ, ಪು.ತಿ.ನ. ಪು.ಸಂ. ೯

೨೩. ಅದೇ, ಬಸವಸ್ಮೃತಿ, ಸಿ.ಪಿ.ಕೆ, ಪು. ಸಂ. ೨೫

೨೪. ಅದೇ, ನೀ ಬರುವ ಮುನ್ನ, ಎನ್. ಎಂ. ಗಿರಿಜಾಪತಿ, ಪು. ಸಂ. ೭೨

೨೫. ಅದೇ, ಪು. ಸಂ. ೭೩

೨೬. ಅನುಭಾವ ಸಾಂಸ್ಕೃತಿಕ ಸಮಸ್ಯೆ– ಹುಡುಕಾಟ, ಬಸವರಾಜ ಕಲ್ಗುಡಿ, ಪು. ಸಂ. ೨೦೬

೨೭. ಸಮಗ್ರ ಕಾವ್ಯ, ಚೆನ್ನವೀರಕಣವಿ, ಪು. ಸಂ. ೩೧೮

೨೮. ಅದೇ, ಪು. ಸಂ.೩೧೯

೨೯. ಸಂಗಮ, (ಸಂ.) ಟಿ.ಆರ್.ಮಹದೇವಯ್ಯ, ಸಿ. ಎಂ. ಕುಂದಗೋಳ, ಬಸವನ ಬೆಳಕೆ, ಕಾವ್ಯಾನಂದ, ಪು. ಸಂ. ೨೯

೩೦. ಅದೇ, ನೆನೆವುದೆ ಪುಣ್ಯ, ಎ. ವೃಷಭೇಂದ್ರಾಚಾರ್, ಪು. ಸಂ. ೧೭೬

೩೧. ಅದೇ, ಶರಣು ಶರಣಾಗತಿ ನಿಮಗೆ, ಆರ್. ರಾಜಪ್ಪಾಜಿ, ಪು. ಸಂ. ೯೧

೩೨. ಅದೇ, ನಿನ್ನ ಶ್ರೀ ಪಾದಕ್ಕೆ ಕೋಟಿ ನಮನ, ಅರ್ಚಕ ವೆಂಕಟೇಶ್, ಪು. ಸಂ. ೬೩

೩೩. ಅದೇ, ಪು. ಸಂ. ೬೨

೩೪. ಅದೇ, ಬಾಳಿನೊಳಗಣ ಬೆಳಗು, ಗುರುಲಿಂಗ ಕಾಪಸೆ, ಪು .ಸಂ. ೩೭

೩೫. ಉಧೃತ : ಬಸವಣ್ಣ ಮತ್ತು ಅಂಬೇಡ್ಕರ್ ಹಾಗೂ ಇತರ ಲೇಖನಗಳು, ರಂಜಾನ್ ದರ್ಗಾ, ಪು. ಸಂ. ೩೮

೩೬. ಸಂಗಮ, (ಸಂ.) ಟಿ. ಆರ್. ಮಹದೇವಯ್ಯ, ಸಿ.ಎಂ. ಕುಂದಗೋಳ, ಶ್ರೀಬಸವೇಶ್ವರರಿಗೆ, ಕುವೆಂಪು. ಪು. ಸಂ. ೧

೩೭. ಅದೇ, ಬಸವಣ್ಣನಿಗೆ ಶರಣು, ಚಂದ್ರಶೇಖರ ಪಾಟೀಲ, ಪು. ಸಂ. ೨೩

೩೮. ಅದೇ, ಬಸವೇಶ್ವರನ ನೆನೆದು, ವಿ.ಜಿ. ಭಟ್ಟ, ಪು. ಸಂ.೨೮

೩೯. ಅದೇ, ಎನ್ನ ತಪ್ಪು ನಿನ್ನ ಸ್ಥೈರಣೆ, ಬಿ. ಎ. ಸನದಿ ಪು. ಸಂ. ೩೯

೪೦. ಅದೇ, ಬಸವಣ್ಣನವರು, ಜಿ. ಎಸ್. ಸಿದ್ಧಲಿಂಗಯ್ಯ, ಪು. ಸಂ. ೪೧

೪೧. ಅದೇ, ವಿನಾಯಕ, ಕಲ್ಯಾಣ ನಗರಲಕ್ಷ್ಮಿ, ಪು. ಸಂ. ೭

೪೨. ಅದೇ, ಬಸವಣ್ಣನಿಗೆ ಶರಣು, ಚಂದ್ರಶೇಖರ ಪಾಟೀಲ, ಪು. ಸಂ. ೨೩

೪೩. ಅನುಭಾವ: ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ– ಬಸವರಾಜ ಕಲ್ಗುಡಿ, ಪು. ಸಂ. ೯೬

೪೪. ಅದೇ, ಪು. ಸಂ. ೯೮

೪೫. ಸಂಗಮ, (ಸಂ.) ಟಿ. ಆರ್. ಮಹದೇವಯ್ಯ, ಸಿ.ಎಂ. ಕುಂದಗೋಳ, ಶ್ರೀಬಸವೇಶ್ವರರಿಗೆ, ಕುವೆಂಪು, ಪು. ಸಂ. ೧

೪೬. ಅದೇ, ಬಸವಣ್ಣನವರು, ಜಿ. ಎಸ್. ಸಿದ್ಧಲಿಂಗಯ್ಯ, ಪು. ಸಂ. ೪೧

೪೭. ಅದೇ, ಅಣ್ಣನನ್ನು ಕುರಿತು, ಕೆ. ಎಸ್. ನಿಸಾರ್ ಅಹಮದ್ ಪು. ಸಂ. ೧೯

೪೮. ಅದೇ, ಬಸವಣ್ಣ, ಸುಮತೀಂದ್ರ ನಾಡಿಗ, ಪು. ಸಂ. ೧೬

೪೯. ಅದೇ, ಕಲ್ಯಾಣದ ನಗರಲಕ್ಷ್ಮೀ, ವಿನಾಯಕ, ಪು. ಸಂ.೭

೫೦ ಅನುಭಾವ: ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ, ಬಸವರಾಜ ಕಲ್ಗುಡಿ ಪು. ಸಂ. ೧೦೧

# ಅಧ್ಯಾಯ ೬ :

## ಗಾಂಧಿ ವ್ಯಕ್ತಿತ್ವ ಶೋಧ : ಮೌಲ್ಯಗಳ ಸಂಕೇತ ರೂಪ

೬.೧ ಗಾಂಧಿ ವ್ಯಕ್ತಿತ್ವ : ತಾತ್ವಿಕ ಗ್ರಹಿಕೆ

೬.೨ ಕನ್ನಡ ಕಾವ್ಯ ಕಂಡ ಗಾಂಧಿ : ನೈತಿಕ ಮೌಲ್ಯಗಳ ಸಂಕೇತ ರೂಪ

೬.೨.೧. ಗಾಂಧಿ ವ್ಯಕ್ತಿತ್ವದ ಅನನ್ಯತೆಯ ಶೋಧ : ಅದ್ವಿತೀಯ ಆದರ್ಶವಾಗಿ

೬.೨.೨. ಗಾಂಧಿ ವ್ಯಕ್ತಿತ್ವ : ಸಾಂಸ್ಕೃತಿಕ ಮುಖಾಮುಖಿ

೧. ಗಾಂಧಿ ಹತ್ಯೆ : ಗಾಢ ನಿರಾಶೆಯ ಅನುಭವ, ಮತೀಯವಾದಕ್ಕೆ ತೀವ್ರ ಪ್ರತಿಕ್ರಿಯೆಯಾಗಿ

೨. ಸ್ವ ಮತ್ತು ಸಮಷ್ಟಿಯ ಆತ್ಮ ವಿಮರ್ಶೆಯ ನೈತಿಕ ಶಕ್ತಿಯಾಗಿ

೩. ರಾಜಕೀಯ ವಿಡಂಬನೆಯ ಪ್ರಜ್ಞೆಯಾಗಿ

# ಅಧ್ಯಾಯ ೬

## ಗಾಂಧಿ ವ್ಯಕ್ತಿತ್ವ ಶೋಧ : ಮೌಲ್ಯಗಳ ಸಂಕೇತ ರೂಪ

### ೬.೧ ಗಾಂಧಿ ವ್ಯಕ್ತಿತ್ವ : ತಾತ್ವಿಕ ಗ್ರಹಿಕೆ

ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಬದುಕಿದ್ದ ತನ್ನ ವಿಶಿಷ್ಟ ವ್ಯಕ್ತಿತ್ವ ಹಾಗೂ ಪ್ರಯೋಗಶೀಲ ಬದುಕಿನಿಂದಾಗಿಯೇ ಇಡೀ ಜಗತ್ತನ್ನು ಪ್ರಭಾವಿಸಿದ, ಪ್ರಭಾವಿಸುತ್ತಲೇ ಇರುವ ಆಕರ್ಷಕ ವ್ಯಕ್ತಿತ್ವ ಗಾಂಧಿಯದು. ತನ್ನ ಜೀವಿತದ ಅವಧಿಯಲ್ಲಿಯೇ ಜನರ ದೃಷ್ಟಿಯಲ್ಲಿ ಮಹಾತ್ಮನಾಗಿ, ದೇವಮಾನವನಾಗಿ, ಅಲೌಕಿಕ ಮತ್ತು ಪವಾಡ ಸದೃಶ ವ್ಯಕ್ತಿಯಾಗಿ, ಜೊತೆ ಜೊತೆಯಲ್ಲಿಯೇ ಹತ್ತು ಹಲವು ವಿರೋಧಾಭಾಸ, ದ್ವಂದ್ವ, ಗೊಂದಲಗಳಿಂದ ಕೂಡಿದ ವ್ಯಕ್ತಿಯಾಗಿ, ಅರಿತಷ್ಟೂ ವಿಸ್ತಾರವಾಗುತ್ತಾ, ಹಿಡಿದಷ್ಟೂ ಅಗೋಚರವಾಗುತ್ತ ನಮ್ಮನ್ನು ನಿರಂತರವಾಗಿ ಕಾಡುತ್ತಿರುವ ವ್ಯಕ್ತಿತ್ವ ಗಾಂಧಿಯದ್ದು. ಮಾನವ ಚರಿತ್ರೆ ಕಂಡ ಒಬ್ಬ ಅಸಮಾನ್ಯ ವ್ಯಕ್ತಿತ್ವದ ತೀರಾ ಸಾಮಾನ್ಯ ಮನುಷ್ಯ ಗಾಂಧಿ. ಗಾಂಧಿ ತಾನು ಬದುಕಿದ್ದಾಗಲೂ, ಗತಿಸಿದ ನಂತರವೂ ಒಂದಲ್ಲಾ ಒಂದು ರೀತಿಯಲ್ಲಿ ಮನುಷ್ಯನ ಬದುಕಿನ ಪ್ರತಿ ನಡೆಯನ್ನೂ ಕಾಡುವ ನೈತಿಕ ಮೌಲ್ಯವಾಗಿ, ದಾರಿತೋರುವ ಬೆಳಕಾಗಿ, ಅರ್ಥವಾಗದ ಕಗ್ಗಂಟಾಗಿ, ಅನುಸರಿಸಲಾಗದ ಸಂಕಟವಾಗಿ, ನಿಗೂಢ ವ್ಯಕ್ತಿಯಾಗಿ ಕಂಡುಬಂದಿದ್ದಾರೆ. ಇಡೀ ಜಗತ್ತೇ ಗಾಂಧಿ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಲು ಹೆಣಗುತ್ತಿದೆ. ಮನುಷ್ಯನ ಬದುಕು ಹೆಚ್ಚೆಚ್ಚು ಸಂಕೀರ್ಣವೂ, ಸಂಕಟಮಯವೂ ಆದಷ್ಟು ಗಾಂಧಿ ಇನ್ನೂ ಹತ್ತಿರ, ಪ್ರಸ್ತುತ ಮತ್ತು ಸತ್ಯವಾಗಿ ಗೋಚರಿಸುತ್ತಾ, ಕೆಲವೊಮ್ಮೆ ಅಪ್ರಸ್ತುತವೂ, ಅಮೂರ್ತವೂ ಆಗಿ ವಾಸ್ತವ ಗ್ರಹಿಕೆಗೆ ನಿಲುಕದಂತೆ ನಗೆಪಾಟಲಿಗೂ ಕಾರಣನಾಗುತ್ತಿದ್ದಾನೆ. ಕಳೆದ ಒಂದೂ ಕಾಲು ಶತಮಾನದಲ್ಲಿ ಜಾಗತಿಕ ಮಟ್ಟದಲ್ಲಿ ದೊಡ್ಡಮಟ್ಟದ ಚಿಂತನೆ, ವಿಮರ್ಶೆ, ಜಿಜ್ಞಾಸೆಗಳಿಗೆ ತೆರೆದುಕೊಂಡಿರುವ ವ್ಯಕ್ತಿತ್ವ ಗಾಂಧಿಯದ್ದು.

ಇಂದು ಅಭಿವೃದ್ಧಿ ಮತ್ತು ಭೋಗ ಜೀವನದ ಉನ್ನತ ಸ್ಥರದಲ್ಲಿ ಮೆರೆಯುತ್ತಿರುವ ಪಶ್ಚಿಮದ ರಾಷ್ಟ್ರಗಳು ಹಾಗೂ ಪಶ್ಚಿಮವನ್ನೇ ಅನುಸರಿಸಿ ಅಭಿವೃದ್ಧಿಯ ಕನಸು ಕಾಣುತ್ತಿರುವ ಪೂರ್ವದ ರಾಷ್ಟ್ರಗಳು ಹಲವು ಜ್ವಲಂತ ಸಮಸ್ಯೆಗಳನ್ನು ಎದುರಿಸುತ್ತಿವೆ. ಆಧುನಿಕ ಸಾಂಸ್ಕೃತಿಕ ಬದುಕಿನ ಮತ್ತು ಆಧುನಿಕ ರಾಷ್ಟ್ರಗಳ ಸಮಸ್ಯೆಗಳು ಹೆಚ್ಚಿದಷ್ಟೂ, ಭಿನ್ನ ಸ್ವರೂಪಗಳನ್ನು ಪಡೆದಷ್ಟೂ, ಗಾಂಧಿಯನ್ನು ನೋಡುವ, ಅರ್ಥೈಸುವ ಕ್ರಮಗಳು ಭಿನ್ನವಾಗುತ್ತಿವೆ. ತಮ್ಮೆಲ್ಲಾ ಸಮಸ್ಯೆಗಳ ಪರಿಹಾರಕ್ಕೆ ಪೂರ್ವ ಪಶ್ಚಿಮಗಳೆರಡೂ ಗಾಂಧಿಯ ಕಡೆ

ಮುಖಮಾಡುತ್ತಿವೆ. ಇದಕ್ಕೆ ಗಾಂಧಿಯ ಪ್ರಯೋಗಶೀಲ ಮತ್ತು ಮನುಷ್ಯ ನಾಗರೀಕತೆಯ ಬಗೆಗಿನ ಕಾಲಜ್ಞಾನ ಪ್ರಜ್ಞೆ ಕಾರಣ. ಗಾಂಧಿಯದ್ದು ಅಂಥ ಅಪೂರ್ವ, ಸಾರ್ಥಕ ಬದುಕಿನ ಪ್ರಯೋಗ. ಇಂದು ನಾವು ಯಾವೆಲ್ಲಾ ಕ್ಷೇತ್ರಗಳಿಗೆ, ಸಮಸ್ಯೆಗಳಿಗೆ ಗಾಂಧಿಯನ್ನು, ಅವರ ವಿಚಾರಗಳನ್ನು ಅನ್ವಯಿಸಿ ನೋಡುತ್ತಿದ್ದೇವೆ ಎಂಬುದನ್ನು ಗಮನಿಸಿದರೆ ಅವರ ವ್ಯಕ್ತಿತ್ವದ ಸಮಗ್ರತೆ ಮತ್ತು ನಿಗೂಢತೆ ಅರ್ಥವಾದೀತು. ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ವಿಜ್ಞಾನ, ಕೃಷಿ, ಆರೋಗ್ಯ, ಧರ್ಮ, ಆಧ್ಯಾತ್ಮ, ಪರಿಸರ, ವಿಶ್ವಶಾಂತಿ, ದೇಸೀತನ, ಯುದ್ಧ, ಕೋಮುಹಿಂಸೆ ಹೀಗೆ ಹತ್ತು ಹಲವು ಕ್ಷೇತ್ರಗಳಿಗೆ ಸಂಬಂಧಿಸಿದ ಸವಾಲುಗಳಿಗೆ ಗಾಂಧಿ ಚಿಂತನೆಗಳಲ್ಲಿ ಉತ್ತರಗಳುಂಟು. ಈ ಉತ್ತರಗಳು ಪಶ್ಚಿಮದ ಚಿಂತನೆಗಳಿಗಿಂತ ಭಿನ್ನವೂ, ದೂರದೃಷ್ಟಿಯುಳ್ಳವೂ ಮತ್ತು ಮಾನವೀಯವೂ ಆದವುಗಳು ಎಂಬುದು ವಿಶೇಷ. ಈ ಹಿನ್ನೆಲೆಯಲ್ಲಿ ಗಾಂಧಿ ವ್ಯಕ್ತಿತ್ವದ ವಿಶಿಷ್ಟ ಗುಣಗಳನ್ನು ಪರಿಶೀಲಿಸಬಹುದು.

ಗಾಂಧಿಯದ್ದು ಎಲ್ಲರಿಗೂ ತಿಳಿದಿರುವ ಹಾಗೆಯೆ ಪ್ರಯೋಗಶೀಲ ಬದುಕು. ತಮ್ಮ ಇಡೀ ಬದುಕನ್ನು ಹಲವು ಪ್ರಯೋಗಗಳಿಗೆ ಒಡ್ಡಿಕೊಂಡಿದ್ದರು. ಅವರ ಬದುಕಿನ ಪ್ರಯೋಗಗಳು ರಹಸ್ಯವಾಗಿ ನಡೆದವುಗಳಲ್ಲ. ಏಕೆಂದರೆ ಇಂಥ ಪ್ರಯೋಗಗಳ ಉದ್ದೇಶಗಳು ತೀರಾ ವೈಯಕ್ತಿಕವಾದವುಗಳಾಗಿರಲಿಲ್ಲ. ಗಾಂಧಿ ತಮ್ಮ ಪ್ರಯೋಗಗಳನ್ನು ಬಹಿರಂಗವಾಗಿಯೇ ನಡೆಸಿದರು. ಇವರ ಪ್ರಯೋಗಗಳ ಹಿಂದೆ ಸಾಮುದಾಯಿಕ ಬದುಕಿನ ಸಾರ್ಥಕತೆಯ ಉದ್ದೇಶವಿತ್ತು. ಸತ್ಯ, ಅಹಿಂಸೆ ಬ್ರಹ್ಮಚರ್ಯ, ಉಪವಾಸ, ಸರಳತೆ, ಸತ್ಯಾಗ್ರಹ, ಶಿಸ್ತು, ವಚನಪಾಲನೆ, ಸಸ್ಯಾಹಾರ, ಗ್ರಾಮಜೀವನ, ಚರಕ, ಆರೋಗ್ಯ (ಕಟಿಸ್ನಾನ, ಮಣ್ಣಿನಪಟ್ಟಿ ಚಿಕಿತ್ಸೆ) ಪ್ರಾರ್ಥನೆ, ಮೂಲಶಿಕ್ಷಣ, ಪರಿಶ್ರಮ, ಹೀಗೆ ತಮ್ಮ ಬದುಕಿನುದ್ದಕ್ಕೂ ಇಂಥ ವಿಷಯಗಳಿಗೆ ಸಂಬಂಧಿಸಿದಂತೆ ಹಲವು ಪ್ರಯೋಗಗಳನ್ನು ನಡೆಸಿದ್ದರು. ಇಂಥ ಪ್ರಯೋಗಗಳು ಪಶ್ಚಿಮದ ಭೋಗ ಮತ್ತು ವಿಲಾಸೀ ಬದುಕಿಗೆ ಪರ್ಯಾಯವಾಗಿ ನಿಸರ್ಗ ಸಾಹಚರ್ಯದ, ಆಧ್ಯಾತ್ಮಿಕ ತಳಹದಿಯ ಮೇಲೆ ಸ್ವತಂತ್ರ ಬದುಕನ್ನು ಕಟ್ಟಿಕೊಡುವ ಸ್ವರೂಪದವುಗಳಾಗಿದ್ದವು. ಇವುಗಳೊಂದಿಗೆ ಆಧುನಿಕ ಯಂತ್ರ ನಾಗರೀಕತೆಯು ತಂದೊಡ್ಡಿರುವ ಸಮಸ್ಯೆಗಳನ್ನು, ಬೆಳೆಸಿರುವ ವಿಕೃತಿಗಳನ್ನು ಇಟ್ಟು ನೋಡಿದಾಗ ಅವರ ಪ್ರಯೋಗಗಳ ಮಹತ್ವ ಅರ್ಥವಾಗುತ್ತದೆ. ಗಾಂಧಿ ಶಿಕ್ಷಣಕ್ಕೆ ಸಂಬಂಧಿಸಿದ ತಮ್ಮ ಪ್ರಯೋಗಗಳ ಪರಿಣಾಮಗಳನ್ನು ಕುರಿತು ಹೀಗೆ ಹೇಳುತ್ತಾರೆ. "ನಾನಾಗಿಯೇ ಮತ್ತು ಇತರರ ಮೂಲಕವೂ ಮಕ್ಕಳ ಮೇಲೆ ನನ್ನ ಈ ಶಿಕ್ಷಣದ ಪ್ರಯೋಗಗಳನ್ನು ಮಾಡಲು ಪ್ರಯತ್ನಿಸಿದ್ದೇನೆ. ಅವುಗಳ ಫಲವನ್ನೂ ನೋಡಿದ್ದೇನೆ. ನನ್ನ ಮಕ್ಕಳ ವಯಸ್ಸಿನ ಅನೇಕರು ನನಗೆ ಗೊತ್ತು. ಆದರೆ ಮನುಷ್ಯತ್ವದಲ್ಲಿ ಅವರು ನನ್ನ ಮಕ್ಕಳಿಗಿಂತ ಉತ್ತಮರಾಗಿಲ್ಲ. ನನ್ನ ಮಕ್ಕಳು ಅವರಿಂದ ಕಲಿಯಬೇಕಾದದ್ದು ಇದೆಯೆಂದು ನಾನು ಭಾವಿಸುವುದಿಲ್ಲ. ಆದರೆ ನನ್ನ ಪ್ರಯೋಗಗಳ ಅಂತ್ಯ ಪರಿಣಾಮ ಭವಿಷ್ಯದ ಗರ್ಭದಲ್ಲಿದೆ.....ಶಿಸ್ತಿನ ಗೃಹ ಶಿಕ್ಷಣಕ್ಕೂ, ಶಿಸ್ತಿನ ಶಾಲಾ ಶಿಕ್ಷಣಕ್ಕೂ ಇರುವ ವ್ಯತ್ಯಾಸ ತಂದೆ ತಾಯಿಗಳ ಮೂಲಕ ಮಕ್ಕಳ ಮೇಲೆ ಉಂಟಾಗುವ ಪರಿಣಾಮವನ್ನು ಮನುಷ್ಯ ಜಾತಿಯಲ್ಲಿ ಉಂಟಾಗುವ ಕ್ರಾಂತಿಯನ್ನು ಅಧ್ಯಯನ ಮಾಡುವವರು ಗಣನೆಗೆ ತೆಗೆದುಕೊಳ್ಳಲಿ ಎನ್ನುವುದು."[7] ಗಾಂಧಿಯ ಒಟ್ಟು ಪ್ರಯೋಗಗಳ ಹಿಂದಿನ ಉದ್ದೇಶಗಳನ್ನು ಈ ಮಾತುಗಳು ಸ್ಪಷ್ಟಪಡಿಸುತ್ತವೆ.

ಗಾಂಧಿ ವ್ಯಕ್ತಿತ್ವದ ಬಹುಮುಖ್ಯ ಗುಣ ಸತ್ಯ. ಇದು ಅವರ ಬದುಕಿನ ಗುರಿಯೂ ಹೌದು. ಗಾಂಧಿ ಬದುಕೇ ಸತ್ಯಾನ್ವೇಷಣೆಯ ಕಥನ. ಅವರ ಆತ್ಮಕಥನಕ್ಕಿರುವ 'ನನ್ನ ಸತ್ಯಾನ್ವೇಷಣೆ' ಎಂಬ ಹೆಸರು ಇದನ್ನೇ ಸಂಕೇತಿಸುತ್ತದೆ. ಬದುಕಿನ ಮೂಲ ಸತ್ಯವನ್ನು ಕಂಡುಕೊಳ್ಳುವ ಸಲುವಾಗಿ ಸತ್ಯದ ದಾರಿಯಲ್ಲಿ ಬದುಕಿದವರು ಗಾಂಧಿ. ಸತ್ಯವನ್ನು ಕಂಡುಕೊಳ್ಳುವಲ್ಲಿ ಸಾಧನವಾದುದು ಅಹಿಂಸೆ. ಅದರ ಸಲುವಾಗಿಯೇ ಬದುಕು. ಬದುಕಿನಲ್ಲಿ ರಹಸ್ಯವೆನ್ನುವುದಿರಲಿಲ್ಲ. ಅವರದು ತೆರೆದ ಹೃದಯ, ತೆರೆದ ಬದುಕು. ತಮ್ಮ ಬದುಕಿನಲ್ಲಿ ಖಾಸಗಿತನವೆಂಬುದನ್ನು ನಿರಾಕರಿಸಿ ಸಾರ್ವಜನಿಕ ಬದುಕಿಗೆ ಅರ್ಪಿಸಿಕೊಂಡು ಬದುಕಿದವರು. ಸತ್ಯದ ಬದುಕಿನ ಮೂಲಕ ನಿರಂತರ ಆತ್ಮಶೋಧ ಮತ್ತು ಆತ್ಮ ಶುದ್ಧೀಕರಣದಲ್ಲಿ ತೊಡಗುತ್ತಾರೆ. ಇದು ಗಾಂಧಿಯಲ್ಲಿ ಆಧ್ಯಾತ್ಮಿಕ ಮತ್ತು ಎಲ್ಲವನ್ನು ಪ್ರಭಾವಿಸುವ, ಪರಿವರ್ತಿಸುವ, ಅಲೌಕಿಕ ಶಕ್ತಿಯನ್ನು ಸಂಚಯಗೊಳಿಸಿತು.

ಗಾಂಧಿಯದ್ದು ಮಾನವೀಯ ಮಿಡಿತವುಳ್ಳ ವ್ಯಕ್ತಿತ್ವ. ಅನ್ಯಾಯವನ್ನು ಪ್ರತಿಭಟಿಸುವ, ನ್ಯಾಯಕ್ಕಾಗಿ ಆಗ್ರಹಿಸುವ ದಿಟ್ಟತನ ಅವರಲ್ಲಿತ್ತು. ಈ ಸ್ವಭಾವದ ಹಿಂದೆ ಇದ್ದದ್ದು ಮಾನವತೆಯ ಬಗೆಗೆ ಇದ್ದ ಅಪಾರವಾದ ಕರುಣೆ. ಹಾಗಾಗಿಯೇ ದಕ್ಷಿಣ ಆಫ್ರಿಕಾದಲ್ಲಿ ಒಬ್ಬ ಉದ್ಯಮಿಯ ಪರವಾಗಿ ವಕಾಲತ್ತು ವಹಿಸಲು ಹೋದ ಗಾಂಧಿ ಅಲ್ಲಿಯ ವರ್ಣಭೇದ ನೀತಿಯ ವಿರುದ್ಧ, ಕಪ್ಪು ವರ್ಣೀಯರ ಮೇಲಿನ ಅಮಾನವೀಯ ಶೋಷಣೆಯ ವಿರುದ್ಧ ಹೋರಾಡಲು ಸಾಧ್ಯವಾದದ್ದು. ಆಫ್ರಿಕಾದ ನೆಲದಲ್ಲಿ ಕರಿಯರಾದ ಗಾಂಧಿ ಸ್ವತಹ ಬಿಳಿಯರಿಂದ ಶೋಷಿತರಾಗಿ, ರೈಲಿನಿಂದ ಹೊರದೂಡಲ್ಪಟ್ಟಾಗ ಆದ ಅವಮಾನ ಗಾಂಧಿ ಬದುಕಿನಲ್ಲಿ ದೊಡ್ಡ ತಿರುವನ್ನು ತಂದುಕೊಟ್ಟಿತು. ಅಲ್ಲಿಂದ ಮುಂದೆ ಗಾಂಧಿ ತಮ್ಮ ಇಡೀ ಬದುಕನ್ನು ಸಾರ್ವಜನಿಕ ಸೇವೆಗೆ ಸಮರ್ಪಿಸಿದರು. ಗಾಂಧಿ ಬದುಕಿಗೆ ತಿರುವುಕೊಟ್ಟ ಈ ಘಟನೆಯನ್ನು ಕುರಿತು; ಭಾರತೀಯ ಸಮಾಜದಲ್ಲಿ ಬದುಕಿನುದ್ದಕ್ಕೂ ಶೋಷಣೆ ಅವಮಾನಗಳನ್ನು ಅನುಭವಿಸುತ್ತಾ ಬಂದಿರುವ ದಲಿತ ಸಮುದಾಯಗಳೊಂದಿಗೆ ಹೋಲಿಸಿ ದೇವನೂರು ಮಹಾದೇವ ಹೀಗೆ ಹೇಳುತ್ತಾರೆ. "ಮೋಹನದಾಸನು ಮೊದಲು ಕೆಂಪು ಮನುಷ್ಯನ್ನು ಅನುಕರಿಸಲು ಹೋಗಿ ಆ ಪ್ರಯಾಣದಲ್ಲಿ ಕ್ರೂರವಾಗಿ ಆಚೆಗೆ ತಳ್ಳಿಸಿಕೊಂಡು ಅವಮಾನಿತನಾಗಿ ಬಿದ್ದಾಗ, ಆತನ ಆತ್ಮಕ್ಕೆ ಆಚೆ ಬಿದ್ದಿರುವ ಅಸ್ಪೃಶ್ಯ ಆತ್ಮಗಳು ಸೇರಿಕೊಂಡು ಅಸ್ಪೃಶ್ಯತನದ ಬೀಜ ಅವನ ಎದೆಗೆ ಬಿದ್ದಂತಾಗಿ ಮಹಾತ್ಮ ಆಗಲು ಆರಂಭಿಸುತ್ತಾನೆ. ಕೇವಲ ಈ ಒಂದು ಅವಮಾನಕ್ಕೇ ಆ ಮೋಹನದಾಸನು ಮಹಾತ್ಮ ಗಾಂಧಿಯಾಗಿ ಪರಿವರ್ತನೆಗೊಳ್ಳುವುದಾದರೆ ದೇಹವಿಡೀ, ಜೀವನವಿಡೀ ಅವಮಾನದಿಂದಲೇ ಮಾಡಲ್ಪಟ್ಟ ಅಸ್ಪೃಶ್ಯ ಬೆಳೆದರೆ ಅದೆಷ್ಟು ಎತ್ತರಕ್ಕೆ ಬೆಳೆಯಬಹುದೆಂಬುದು ನನ್ನ ಊಹೆ, ಅಳತೆಗಳಿಗೆ ನಿಲುಕದಷ್ಟು ಎತ್ತರವಾಗಿಬಿಟ್ಟಿತು. ಆಫ್ರಿಕಾದಲ್ಲಿ ಕರಿಯನಾದ ಮೋಹನದಾಸ್‌ಗೆ ಆ ಕರಿಯತನವೇ ಅವನಿಗೆ ದಿಕ್ಕು ತೋರುತ್ತದೆ. ಸಹನೆ, ದೃಢತೆ, ಅಹಿಂಸೆ ಇವುಗಳೊಡನೆ ಎದುರಾಳಿಯನ್ನು ಮನುಷ್ಯನನ್ನಾಗಿಸುವ ಅಪೂರ್ವತೆ, ಇದರೊಟ್ಟಿಗೇ ಹೊಸತಾಗಿ ಸಹಜೀವನ ಕಟ್ಟುವ ಒಳಗಣ್ಣು ಗಾಂಧಿಗೆ ಅಲ್ಲುಂಟಾಗುತ್ತದೆ. ಆ ಕಾಗದ ಸುಡುವ ಸಂದರ್ಭದಲ್ಲಿ ಮೋಹನದಾಸ್ ಗಾಂಧಿಗೆ ಬಿಳಿ ಪೋಲೀಸ್ ಹೊಡೆದು ಸುಸ್ತಾಗಿ ಗಾಂಧಿಯ ನಿರ್ಲಿಪ್ತ ಕಾಯಕಕ್ಕೆ ಆ ಕ್ರೂರ ಪೋಲೀಸ್‌ನಲ್ಲಿ 'ಮಾನವ ಇಣುಕುವುದರ' ಎಳೆಯೇ ಗಾಂಧಿಯನ್ನು ಮುಂದೆ ನಡೆಸಿಕೊಂಡು ಹೋಗುತ್ತದೆ"[2]. ಹೀಗೆ ಮಹಾತ್ಮನಾಗುವ ಕಡೆಗೆ ಅವರ ವ್ಯಕ್ತಿತ್ವ ಚಲಿಸುತ್ತದೆ. ಅನ್ಯಾಯ ಮತ್ತು ಅವಮಾನಗಳು ಗಾಂಧಿಯಲ್ಲಿದ್ದ ಒಬ್ಬ ಹೋರಾಟಗಾರ, ಸುಧಾರಕನನ್ನು ಜಾಗೃತಗೊಳಿಸಿದರೆ, ಅವರೊಳಗಿದ್ದ

ನೈತಿಕ, ಆಧ್ಯಾತ್ಮಿಕ, ಕರುಣಾ ಶಕ್ತಿಗಳು ಎದುರಿಗಿರುವ ಕ್ರೂರಿಯನ್ನೂ ಪರಿವರ್ತಿಸುವ ಅಸ್ತ್ರಗಳಾಗಿ ಬಳಕೆಯಾದವು.

ಸರಳತೆ ಗಾಂಧೀಜಿ ವ್ಯಕ್ತಿತ್ವದ ಪ್ರಮುಖ ಅಂಶ. ಇಂಗ್ಲೆಂಡಿನಲ್ಲಿ ವಿದ್ಯಾಭ್ಯಾಸದ ಸಂದರ್ಭದಲ್ಲಿ ಬಿಳಿಯರ ವಿಲಾಸಿ ಉಡುಪು, ಜೀವನ ಶೈಲಿಯ ಅನುಕರಣೆಗೆ ಒಳಗಾಗಿದ್ದ ಗಾಂಧಿ ಮುಂದೆ ಕೇವಲ ಎರಡು ತುಂಡು ಬಟ್ಟೆಯ ಮಟ್ಟಿಗೆ ತಮ್ಮ ಜೀವನವನ್ನು ಸರಳವಾಗಿಸಿಕೊಂಡು ಬಿಡುತ್ತಾರೆ. ಇದು ಗಾಂಧಿ ಬದುಕಿನ ದೊಡ್ಡ ಪರಿವರ್ತನೆ. ಆಹಾರ, ಉಡುಪು, ಜೀವನ ಶೈಲಿ, ಪ್ರಯಾಣ ಇವೆಲ್ಲವುಗಳಲ್ಲೂ ಅವರು ಸರಳತೆಯನ್ನು ಪಾಲಿಸುತ್ತಿದ್ದರು. ಗಾಂಧಿ ದುಂದುವೆಚ್ಚವನ್ನು ಸಹಿಸುತ್ತಿರಲಿಲ್ಲ. ತಮ್ಮ ಹುಟ್ಟು ಹಬ್ಬದಂದು ತುಪ್ಪದ ದೀಪ ಹಚ್ಚಿದುದನ್ನು ವಿರೋಧಿಸುತ್ತಾರೆ. ಈ ದೇಶದಲ್ಲಿ ತಿನ್ನಲು ಅನ್ನವೇ ಇಲ್ಲದ ಜನರು ಲಕ್ಷಾಂತರ ಮಂದಿ ಇರುವಾಗ ತುಪ್ಪದ ದೀಪ ಹಚ್ಚುವುದು ಎಷ್ಟು ಸರಿ ಎಂದು ಕಸ್ತುರಬಾ ಅವರನ್ನು ಪ್ರಶ್ನಿಸುತ್ತಾರೆ. ಗಾಂಧಿ ತಮ್ಮ ಜೀವಿತದುದ್ದಕ್ಕೂ ಮೂರನೇ ದರ್ಜೆಯ ರೈಲು ಭೋಗಿಗಳಲ್ಲೇ ಪ್ರಯಾಣಿಸುತ್ತಿದ್ದರು. ಕಾಂಗ್ರೇಸ್ ಅಧಿವೇಶನದ ಸಂದರ್ಭಗಳಲ್ಲಿ ವಿಮಾನದ ಪ್ರಯಾಣ ಹಾಗೂ ಹವಾನಿಯಂತ್ರಿತ ರೈಲು ಭೋಗಿಗಳ ಅವಕಾಶಗಳನ್ನು ಕಲ್ಪಿಸಿದರೂ ಕೂಡ ಗಾಂಧಿ ಅವುಗಳನ್ನು ತಿರಸ್ಕರಿಸುತ್ತಿದ್ದರು. ಇನ್ನು ಆಹಾರದ ವಿಷಯದಲ್ಲಂತೂ ಗಾಂಧಿ ತೀರಾ ಸರಳತೆಯನ್ನು ಅನುಸರಿಸುತ್ತಿದ್ದರು. ತಮ್ಮನ್ನು ಬಡವರ ಪ್ರತಿನಿಧಿ, ಭಗವಂತನ ಸೇವಕ ಎಂದು ಕರೆದುಕೊಳ್ಳುತ್ತಿದ್ದ ಗಾಂಧಿ ಭೋಗ ಜೀವನವನ್ನು ತ್ಯಜಿಸಿ ಸಂತನ ಹಾಗೆ ಬದುಕಿದವರು. ತಮ್ಮ ವಾಸಕ್ಕಾಗಿ ಕಡಿಮೆ ವೆಚ್ಚದ, ಸ್ಥಳೀಯ ಸಾಮಗ್ರಿಗಳನ್ನು ಬಳಸಿಕೊಂಡು ಸರಳ ಕುಟೀರಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದರು. ಹೀಗೆ ಗಾಂಧಿ ತಮ್ಮ ಬದುಕನ್ನೇ ಸರಳಗೊಳಿಸಿಕೊಂಡು ಕೊನೆಯವರೆಗೂ ಹಾಗೇ ಬದುಕಿದರು.

ಗಾಂಧಿ ತಮ್ಮ ಬದುಕಿನುದ್ದಕ್ಕೂ ಸಾಮಾಜಿಕವಾಗಿ ಕೆಳಸ್ಥರದ ಕಡೆಗೆ ಚಲಿಸಿರುವುದನ್ನು ಕಾಣಬಹುದು. ಅಸ್ಪೃಶ್ಯತೆಯ ನಿವಾರಣಾ ಪ್ರಯತ್ನಗಳು, ಅಸ್ಪೃಶ್ಯ ನಿಧಿ ಸಂಗ್ರಹ, ಅಸ್ಪೃಶ್ಯರ ಕೇರಿಗಳಲ್ಲಿ ವಾಸಿಸುತಿದ್ದದ್ದು, ತನ್ನ ದಾರಿಯಲ್ಲಿನ ಮಲವನ್ನು ತಾನೇ ಗುಡಿಸಿದ ಘಟನೆಗಳು, ಅಸ್ಪೃಶ್ಯರಿಗೆ ಪ್ರವೇಶವಿಲ್ಲದ ದೇವಾಲಯಗಳಿಗೆ ತಾವು ಹೋಗಲು ನಿರಾಕರಿಸಿದುದು, ಅಸ್ಪೃಶ್ಯನಿಗೆ ಕೂದಲು ಕತ್ತರಿಸಲು ನಿರಾಕರಿಸಿದ ಕ್ಷೌರಿಕನ ಬಳಿ ತಾವು ಇನ್ನು ಮುಂದೆ ಕೂದಲು ಕತ್ತರಿಸಿಕೊಳ್ಳಲು ನಿರಾಕರಿಸಿದುದು ಇವೆಲ್ಲವೂ ಗಾಂಧಿ ತಮ್ಮನ್ನು ಸಾಮಾಜಿಕವಾಗಿ ಕೆಳಸ್ಥರಕ್ಕೆ ಇಳಿಸಿಕೊಳ್ಳಲು ಮಾಡಿದ ಪ್ರಯತ್ನ. ಗಾಂಧಿ ವ್ಯಕ್ತಿತ್ವದಲ್ಲಾದ ಈ ಪರಿವರ್ತನೆಯ ಹಿಂದೆ ಅಂಬೇಡ್ಕರ್‌ರ ಪ್ರಭಾವವೂ ಇದೆ. ಇದನ್ನು "ಸಾಮಾಜಿಕವಾಗಿ ಕೆಳಸ್ಥರದತ್ತ ಗಾಂಧಿ ಚಲಿಸುವಂತಾಗಿ ಗಾಂಧಿ ಮಹಾತ್ಮನಾಗುವಲ್ಲಿ ಅಂಬೇಡ್ಕರರ ಅದಮ್ಯ ಚೇತನವೂ ಕಾರಣ ಎಂಬುದರಲ್ಲೇನೂ ನನಗೆ ಈಗಲೂ ಅನುಮಾನವಿಲ್ಲ"[5] ದೇವನೂರು ಮಹಾದೇವರ ಈ ಮಾತುಗಳು ಸಮರ್ಥಿಸುತ್ತವೆ. ಪೂನಾ ಒಪ್ಪಂದದ ನಂತರದಲ್ಲಿ ಗಾಂಧಿಯ ವ್ಯಕ್ತಿತ್ವದಲ್ಲಿ ಅಗಾಧ ಬದಲಾವಣೆಯಾದದ್ದನ್ನು ಗಮನಿಸಬೇಕು. ಗಾಂಧಿ ವ್ಯಕ್ತಿತ್ವದ ಈ ಸರಳತೆಯ ಘಟ್ಟಗಳು ಗಾಂಧಿಯನ್ನು ಆಕಾಶದೆತ್ತರಕ್ಕೆ ಒಯ್ಯುತ್ತವೆ. ಹೀಗಿದ್ದು ಗಾಂಧಿಯವರ ಸರಳತೆಯ ಬಗ್ಗೆ ಪತ್ರಕರ್ತೆ ಬರ್ಕ್‌ವೈಟ್ ಅನುಮಾನ ವ್ಯಕ್ತಪಡಿಸುತ್ತಾರೆ. "ಗಾಂಧಿ ತಮ್ಮ ಬದುಕನ್ನು ಅಷ್ಟೆಲ್ಲಾ ಸರಳತೆಗೆ ಒಡ್ಡಿಕೊಂಡರೂ ಅವರು ದೆಹಲಿಗೆ ಬಂದಾಗಲೆಲ್ಲಾ ಬಿರ್ಲಾರವರ ಬಂಗಲೆಯಲ್ಲೇ ಏಕೆ ಉಳಿಯುತ್ತಿದ್ದರು?

ಹಾಗೂ ಗಾಂಧಿ ಮೂರನೇ ದರ್ಜೆ ರೈಲು ಭೋಗಿಗಳಲ್ಲಿ ಪ್ರಯಾಣಿಸುತ್ತಿದ್ದರೂ ಅವರ ಪ್ರಯಾಣಕ್ಕಾಗಿ ಇಡೀ ಮೂರನೇ ದರ್ಜೆಯ ಭೋಗಿಗಳನ್ನೆಲ್ಲಾ ಕಾಯ್ದಿರಿಸಲಾಗುತ್ತಿತ್ತು. ಇದರಿಂದ ಇತರ ಸಾಮಾನ್ಯ ಪ್ರಯಾಣಿಕರುಗಳಿಗೆ ತುಂಬಾ ತೊಂದರೆಯಾಗುತ್ತಿತ್ತು. ದೆಹಲಿಯ ಭಂಗಿ ಭಸ್ತಿಗಳಲ್ಲಿ ವಾಸಿಸುವ ಸಂದರ್ಭದಲ್ಲಿ ಅಲ್ಲಿನ ಜನರನ್ನು ಬೇರೆಡೆಗೆ ಸ್ಥಳಾಂತರಿಸಲಾಗುತ್ತಿತ್ತು"[9]. ಮುಂದುವರಿದು "ಗಾಂಧಿ ಮೂರನೇ ದರ್ಜೆಯಲ್ಲಿ ಪ್ರಯಾಣಿಸಿದಾಗ ಅವರಿಗಾಗಿ ಒಂದು ಅಥವಾ ಅನೇಕ ಭೋಗಿಗಳನ್ನು ಪಡೆದುಕೊಳ್ಳಲಾಗುತ್ತಿತ್ತು. ಮಹಾತ್ಮರು, ಅವರ ಆಶ್ರಮವಾಸಿಗಳು, ಅವರ ಮೇಕೆಗಳು ಎಲ್ಲಕ್ಕೂ ಸ್ಥಳ ಕಲ್ಪಿಸುವುದಕ್ಕಾಗಿ. ಅವರು ಹಸುವಿನ ಹಾಲನ್ನು ಕುಡಿಯುತ್ತಿರಲಿಲ್ಲ. ಹಾಗಾಗಿ ಅವರೊಂದಿಗೆ ಮೇಕೆಗಳೂ ಕೂಡ ಮೂರನೇ ದರ್ಜೆಯಲ್ಲಿ ಪ್ರಯಾಣಿಸುತ್ತಿದ್ದವು. ಸಿಮ್ಲಾ ಪ್ರಯಾಣಕ್ಕಾಗಿ ಇಡೀ ಮೂರನೇ ದರ್ಜೆಯ ಎಲ್ಲಾ ಭೋಗಿಗಳನ್ನು ಗಾಂಧಿಯವರಿಗಾಗಿ ಪಡೆದುಕೊಳ್ಳಲಾಯಿತು"[8] ಹೀಗೆ ಗಾಂಧಿ ಸರಳತೆಯ ಬಗೆಗೆ ಆರೋಪಗಳಿವೆ. ಅದರೆ ಇವೆಲ್ಲಾ ಗಾಂಧೀಜಿಯ ಅಪೇಕ್ಷೆಯ ಮೇರೆಗೆ ಆಗುತ್ತಿದ್ದ ಏರ್ಪಾಡುಗಳಲ್ಲ. ಪ್ರಭಾವಿ ವ್ಯಕ್ತಿಯಾಗಿದ್ದ ಗಾಂಧಿಗೆ ಅನಿವಾರ್ಯವಾಗಿ ಒದಗಿಸಬೇಕಾಗಿದ್ದ ಸವಲತ್ತುಗಳಾಗಿದ್ದವು. ಎಷ್ಟೋ ಬಾರಿ ಅವು ಗಾಂಧೀಜಿಯ ಗಮನಕ್ಕೂ ಬರುತ್ತಿರಲಿಲ್ಲ. ಗಾಂಧಿ ತಮ್ಮ ಬದುಕನ್ನು ನಿರಂತರವಾಗಿ ಸರಳವಾಗಿಸಿಕೊಳ್ಳಲು ಒದ್ದಾಡಿದ ಕಾರಣಕ್ಕೆ ಅವರ ವ್ಯಕ್ತಿತ್ವ ಉನ್ನತಿಯವನ್ನು ಪಡೆದಿದೆ. ಸರಳತೆ, ನಿರಂತರ ವಿಕಾಸಶೀಲ ವ್ಯಕ್ತಿತ್ವದಿಂದಾಗಿ ಮಹಾತ್ಮನಾದ ಗಾಂಧಿ ವ್ಯಕ್ತಿತ್ವವನ್ನು ಕುರಿತು ದೇವನೂರು ಮಹಾದೇವ ವ್ಯಕ್ತಪಡಿಸುವ ಅಭಿಪ್ರಾಯ ಮೌಲಿಕವಾದುದು. "ಮೋಹನದಾಸ್ ಗಾಂಧಿ ಮೊದಲನೆ ದರ್ಜೆಯ ಗುಜರಾತಿಯಾಗಿ ಭಾರತಕ್ಕೆ ಬಂದು ಆತನ ಪಯಣದಲ್ಲಿ ರೈಲು ನಿಂತಾಗ ಉಟ್ಟ ಸೀರೆಯನ್ನೇ ಒಗೆದುಕೊಳ್ಳುತ್ತಿದ್ದ ಹೆಂಗಸಿಗೆ ತನ್ನ ಪೇಟ ಬಿಚ್ಚಿಕೊಟ್ಟು ಎರಡನೆಯ ದರ್ಜೆಯ ಭಾರತೀಯನಾಗುತ್ತಾನೆ. ಅಲ್ಲಿಂದ ಚಂಪಾರಣ್ಯವು ಆತನಿಗೆ ಲಂಗೋಟಿ ಮಾತ್ರದಷ್ಟು ಉಳಿಸಿಕೊಟ್ಟು ಮೂರನೆಯ ದರ್ಜೆಗೆ ಇಳಿಸಿ ಮಹಾತ್ಮನನ್ನಾಗಿಸುತ್ತದೆ. ಮೋಹನದಾಸ ಕರಮಚಂದ ಗಾಂಧಿಯು ಮಹಾತ್ಮಗಾಂಧಿಯಾಗುತ್ತಾರೆ. ಮಾನವ ಒಂದು ಜೀವಿತದಲ್ಲಿ ಇಷ್ಟೆಲ್ಲಾ ಆಗುವುದು ಒಂದು ಪವಾಡವೆ. ತನ್ನ ಒಂದು ದೇಹದಲ್ಲಿ ಇಷ್ಟೆಲ್ಲಾ ರೂಪಾಂತರವಾದ ಗಾಂಧಿ, ತನ್ನ ಜೀವಿತವನ್ನು ಪ್ರಯೋಗಕ್ಕಿಟ್ಟುಕೊಂಡ ಗಾಂಧಿ, ತಾನು ಅಸ್ಪೃಶ್ಯ ಸ್ಥಿತಿಯೇ ಆಗುವುದಿಲ್ಲ......ಅಸ್ಪೃಶ್ಯ ಆಗಲು ಮುಂಗಿನ ಜನ್ಮ ಬಯಸುತ್ತಾರೆ. ಭಾರತ ಎರಡಾಗುವುದಾದರೆ ತನ್ನ ಹೆಣದ ಮೇಲಾಗಬೇಕೆಂದು ನುಡಿದ ಗಾಂಧಿ ತಮ್ಮ ನುಡಿಯನ್ನು ಉಳಿಸಿಕೊಂಡಿದ್ದರೆ ಕ್ರಿಸ್ತನ ಮಟ್ಟಕ್ಕೆ ಮುಟ್ಟುತ್ತಿದ್ದರು. ಎನ್ನುವ ಡಾ. ಲೋಹಿಯರ ಮಾತಿನ ಸತ್ಯತೆ ಅಂದರೆ ಗಾಂಧಿಯ ಈ ಒಂದು ಕೊರತೆ ಮತ್ತು ಗಾಂಧಿ ಈ ನಾಡ ತಳದ ಮಾನವ ಅಸ್ಪೃಶ್ಯನಾಗಲು ಅದಕ್ಕಾಗಿ ಮುಂದಿನ ಜನ್ಮ ಆಶಿಸುವುದು ಈ ಎರಡೂ ಕೊರತೆಯಿಂದಾಗಿ ನಮ್ಮ ಯುಗದ ಎತ್ತರದ ಪುರುಷ ಗಾಂಧಿಯ ಎತ್ತರ ಆಕಾಶ ಮುಟ್ಟಲು ಎರಡು ಗೇಣು ಕಮ್ಮಿ ಎಂಬಂತೆ ಕಾಣಿಸುತ್ತದೆ."[6] ದೇವನೂರ ಮಹಾದೇವರ ಈ ಮಾತುಗಳು ಗಾಂಧಿ ವ್ಯಕ್ತಿತ್ವದ ವಿಕಾಸ ಪ್ರಕ್ರಿಯೆ ಹಾಗೂ ಮಿತಿಗಳನ್ನು ಗುರುತಿಸುತ್ತದೆ. ಸಂಯಮ, ಸಮಯ ಪಾಲನೆ, ಶಿಸ್ತು ಮತ್ತು ವಚನಪಾಲನೆ ಗಾಂಧಿ ವ್ಯಕ್ತಿತ್ವದಲ್ಲಿ ಹಾಸುಹೊಕ್ಕಾಗಿದ್ದವು. ತಮ್ಮ ಬದುಕಿನುದ್ದಕ್ಕೂ ಇವುಗಳಲ್ಲಿ ವ್ಯತ್ಯಾಸವಾಗದ ಹಾಗೆ ನೋಡಿಕೊಂಡರು. ತಮ್ಮ ದೈನಂದಿನ ದಿನಚರಿಗಳಲ್ಲಿ ಸ್ವಲ್ಪವೂ ಏರುಪೇರಾಗದ ಹಾಗೆ ಎಚ್ಚರವಹಿಸುತ್ತಿದ್ದ ಗಾಂಧಿ ಒಬ್ಬ ನಿಷ್ಠುರ ಶಿಸ್ತಿನ ಮನುಷ್ಯ. ಶಿಸ್ತನ್ನು ತಮ್ಮ ಆಶ್ರಮವಾಸಿಗಳೆಲ್ಲರೂ ಪಾಲಿಸುವಂತೆ ಆಗ್ರಹಿಸುತ್ತಿದ್ದರು. ಮಲಗುವುದು, ಏಳುವುದು, ಪ್ರಾರ್ಥನೆ, ಚರಕ ನೂಲುವುದು, ಆಹಾರ ಸೇವನೆ ಹಾಗೂ ಆಶ್ರಮ ಜೀವನದ

ಕಟ್ಟುಪಾಡುಗಳ ಪಾಲನೆ ಇವೆಲ್ಲವನ್ನೂ ತಮ್ಮ ಬದುಕಿನ ಕೊನೆಯ ದಿನದವರೆಗೂ ಶಿಸ್ತುಬದ್ಧವಾಗಿಯೇ ಪಾಲಿಸಿಕೊಂಡು ಬಂದಿದ್ದರು. ಆಕಸ್ಮಿಕವಾಗಿ ಇವುಗಳಲ್ಲಿ ಸ್ವಲ್ಪ ಏರುಪೇರಾದರೂ ಸಹಿಸುತ್ತಿರಲಿಲ್ಲ. ಸ್ವತಃ ತಮ್ಮಿಂದ ತಪ್ಪಾದರೂ ಕೂಡ ಸ್ವಯಂ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಿದ್ದರು. ಉಪವಾಸ ಮಾಡುತ್ತಿದ್ದರು ಇಲ್ಲವೇ ಆಹಾರ ಸೇವನೆಯಲ್ಲಿ ವ್ಯತ್ಯಾಸ ಮಾಡಿಬಿಡುತ್ತಿದ್ದರು. ಎಷ್ಟೋ ವೇಳೆ ನಿಗದಿತ ಕಾರ್ಯಕ್ರಮಗಳಿಗೆ ವಾಹನದ ವ್ಯವಸ್ಥೆಯಲ್ಲಿ ಏರುಪೇರಾದಾಗ ನಡೆದೇ ಹೊರಟುಬಿಡುತ್ತಿದ್ದರು. ಒಂದು ಬಾರಿ ವಾರ್ದಾದಿಂದ ಸೇವಾಶ್ರಮಕ್ಕೆ ನಡೆದು ಬಂದಿದ್ದರು. ಹಾಗೆಯೇ ಸೇವಾಶ್ರಮದಲ್ಲಿ ಊಟಕ್ಕೆ ತಡವಾಗಿ ಬಂದುದರಿಂದ ಹೊರಗೆನಿಂತು ಸ್ವಯಂಶಿಕ್ಷೆ ವಿಧಿಸಿಕೊಂಡಿದ್ದರು. ಹೀಗೆ ಗಾಂಧಿ ತಮ್ಮ ಬದುಕಿಗೆ ತಾವೇ ಹಾಕಿಕೊಂಡ ನಿಯಮಗಳನ್ನು ಅಷ್ಟೇ ಪ್ರೀತಿ ಶ್ರದ್ಧೆಯಿಂದ ಪಾಲಿಸುತ್ತಿದ್ದರು. ಶಿಸ್ತಿನ ಬದುಕು ಅಹಿಂಸೆಯ ಮೊದಲ ಮೆಟ್ಟಿಲು ಎಂದು ನಂಬಿದ್ದರು. ಹಾಗಾಗಿ ಶಿಸ್ತು ಮತ್ತು ಆಶ್ರಮದ ಸತ್ಯಾಗ್ರಹಿಯ ನಿಯಮವನ್ನು ಎಂದೂ ಮೀರಿದವರಲ್ಲ ಗಾಂಧಿ.

ಗಾಂಧಿಗೆ ಸತ್ಯವೇ ದೇವರು. ಆ ದೈವದ ಸಾಕ್ಷಾತ್ಕಾರಕ್ಕಾಗಿ ಅಹಿಂಸೆ, ಸತ್ಯಾಗ್ರಹ, ಉಪವಾಸಗಳಂತ ಸಾಧನಗಳನ್ನು ಗಾಂಧಿ ಬಳಸಿದರು. "ಗಾಂಧಿಯವರ ನಡಿಗೆಯ ಪ್ರತಿ ಹೆಜ್ಜೆಯೂ ದೇವರನ್ನು ಸಾಕ್ಷಾತ್ಕರಿಸಿಕೊಳ್ಳುವವನೊಬ್ಬ ಮಾಡುವ ಪ್ರಯತ್ನದಂತೆ ಕಾಣಿಸುತ್ತದೆ. ಅವರು ಮಾಡಿದ ಎಲ್ಲಾ ಕೆಲಸಗಳ ಆಳದ ತುಡಿತವು ತನ್ನ ಬಿಡುಗಡೆಗಾಗೇ, ತನ್ನ ಮೋಕ್ಷಕ್ಕಾಗೇ ಎಂಬಂತೆ ಇವೆ. ಗಾಂಧಿ ತಮ್ಮ ಆತ್ಮಕತೆಯ ಒಂದುಕಡೆ ಸಕಲ ಜೀವಿಗಳಲ್ಲೂ ದೇವರನ್ನು ಕಾಣುವ ನಮ್ರ ಪ್ರಯತ್ನ ತಮ್ಮ ಜೀವನ ಎಂಬರ್ಥದಲ್ಲಿ ಹೇಳಿಕೊಂಡಿದ್ದಾರೆ. ಈ ನುಡಿಗೆ ಪ್ರಜ್ಞಾಪೂರ್ವಕವಾಗಿ ನಡೆಯುತ್ತಾ, ಮುಂದಿಡುವ ಪ್ರತಿ ಹೆಜ್ಜೆಗಳನ್ನೂ ಪರೀಕ್ಷಿಸಿಕೊಳ್ಳುತ್ತ ನಡೆಯುವವನಂತೆ ಗಾಂಧಿ ಕಾಣಿಸುತ್ತಾರೆ. ಹೀಗೆ ನಡೆವವನಿಗೆ ಜಗತ್ತು ಹೇಗೆ ಕಾಣಿಸಬಹುದು? ಐಕ್ಯತೆ ದೈವದಂತೆ, ಜಗತ್ತು ಒಂದು ಕುಟುಂಬದಂತೆ. ಹೀಗೆ ಭಾವಿಸಿದಾಗ ಮಾತ್ರವೆ ಉಪವಾಸವನ್ನು ಸತ್ಯಾಗ್ರಹವನ್ನಾಗಿ ಮಾಡಲು ಆಗುತ್ತದೆ. ಯಾಕೆಂದರೆ ಉಪವಾಸವು ಸತ್ಯಾಗ್ರಹವಾಗಿ ಪರಿಣಮಿಸುವುದು ತನ್ನವನೊಡನೆ ಅಥವಾ ಎದುರಾಳಿ ತನ್ನವನೆಂಬ ಭಾವನೆ ಇದ್ದಲ್ಲಿ ಮಾತ್ರ."[2] ದೇವನೂರು ಮಹಾದೇವರ ಈ ಮಾತುಗಳು ಗಾಂಧಿಯೊಳಗಿನ ನಿಜವಾದ ತುಡಿತವನ್ನು ಆ ವ್ಯಕ್ತಿತ್ವ ವಿಕಾಸಗೊಂಡ ಪಥವನ್ನು ಸಮರ್ಥವಾಗಿ ಗುರುತಿಸುತ್ತವೆ.

ಗಾಂಧಿ ತಮ್ಮ ಒಳಗೂ ಹೊರಗೂ ದೈವವನ್ನು ಕಾಣಲು ಅಹಿಂಸಾ ಮಾರ್ಗವನ್ನು ಅನುಸರಿಸಿದರು. ಅಹಿಂಸೆಗೆ ಸರಳವಾದ ಅರ್ಥ ಹಿಂಸೆ ಮಾಡದಿರುವುದು. ಆದರೆ ಗಾಂಧಿ ಆಚರಿಸಿದ ಅಹಿಂಸೆ ಈ ಸೀಮಿತ ಅರ್ಥವ್ಯಾಪ್ತಿಯದ್ದಲ್ಲ. ಅದು ಸಕಲ ಜೀವಿಗಳ ಬಗೆಗೆ ಇರುವ ಪ್ರೀತಿ, ಕರುಣೆ, ಬಲಿದಾನ, ತನ್ನನ್ನು ಕೊಲ್ಲುವವನ ಬಗೆಗೂ ಸ್ವಲ್ಪವೂ ಕೋಪಿಸಿಕೊಳ್ಳದ, ದ್ವೇಷಿಸದ ಮನಸ್ಥಿತಿ ಹಾಗೂ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ಮಾಡುವ ತ್ಯಾಗ. ಇದು ಪ್ರೀತಿಯಿಂದ ಹಿಂಸೆಯನ್ನೇ ಸೋಲಿಸುವ, ಹಿಂಸಕನನ್ನು ಪರಿವರ್ತಿಸುವ ವಿಶಿಷ್ಟ ಸಾಧನ. ಜಗತ್ತಿನ ಇತಿಹಾಸದಲ್ಲಿ ಕ್ರೌರ್ಯವನ್ನು ಗೆಲ್ಲಲು 'ಅಹಿಂಸೆ' ಎಂಬ ಅಸ್ತ್ರವನ್ನು ಬಳಸಿದ ಏಕೈಕ ವ್ಯಕ್ತಿ ಗಾಂಧಿ. ಅಹಿಂಸೆಯ ಮೂಲಕವೇ ಭಾರತಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟರು. ಬಂದೂಕುಗಳಿಗೆ ಹೆದರದ ಬ್ರಿಟೀಷರು ಗಾಂಧಿಯವರ ಅಹಿಂಸೆಯ ಅಸ್ತ್ರಕ್ಕೆ ನಡುಗಿ ಹೋಗುತ್ತಿದ್ದರು. ಅವರ ಜೀವಿತದ ಕೊನೆಯ ಸಂದರ್ಶನದಲ್ಲಿ ಗಾಂಧಿ ಬಾಂಬ್ ದಾಳಿಯನ್ನು ಅಹಿಂಸೆಯ ಮೂಲಕವೆ ಎದುರಿಸುತ್ತೇನೆ ಎಂದು

ವಿಶ್ವಾಸಪೂರ್ಣವಾಗಿ ನುಡಿದಿದ್ದರು. ಆಟಂಬಾಂಬನ್ನು ನೀವು ಅಹಿಂಸೆಯಿಂದಲೇ ಎದುರಿಸುತ್ತಿರಾ ಎಂಬ ಪತ್ರಕರ್ತೆ ಬರ್ಕ್‌ವೈಟ್ ಪ್ರಶ್ನೆಗೆ ಗಾಂಧಿ ಹೀಗೆ ಪ್ರತಿಕ್ರಿಯಿಸುತ್ತಾರೆ. "ನಾನು ಅದನ್ನು ಪ್ರಾರ್ಥನಾ ಕ್ರಿಯೆಯಿಂದ ಎದುರಿಸುತ್ತೇನೆ. ನಾನು ಭೂಗತನಾಗುವುದಿಲ್ಲ, ಅಡಗುತಾಣಗಳಿಗೆ ಹೋಗುವುದಿಲ್ಲ. ನಾನು ಹೊರಗೆದ್ದು ಬಂದು ತಲೆ ಎತ್ತಿ ನಿಲ್ಲುತ್ತೇನೆ. ತನ್ನ ಬಗ್ಗೆ ಈ ವ್ಯಕ್ತಿಗೆ ಯಾವ ದುರುದ್ದೇಶವೂ ಇಲ್ಲ ಎಂದು ನನ್ನ ಮುಖದಲ್ಲಿ ಪೈಲೆಟ್‌ಗೆ ಕಾಣುವಂತೆ ನಿಲ್ಲುತ್ತೇನೆ. ಅಷ್ಟು ದೂರದಿಂದ ಪೈಲೆಟ್‌ಗೆ ನನ್ನ ಮುಖ ಕಾಣುವುದಿಲ್ಲ ಎಂದು ನನಗೆ ಗೊತ್ತು. ಆದರೆ ನಮ್ಮ ಹೃದಯದಲ್ಲಿ ಆತನ ವಿರುದ್ಧ ಯಾವುದೇ ಕೇಡಿನ ಭಾವನೆಯಿಲ್ಲ ಎಂಬುದು ಆತನಿಗೆ ಗೊತ್ತಾಗುತ್ತದೆ. ಆಗ ಆತನ ಕಣ್ಣು ತೆರೆಯುತ್ತದೆ. ಹಿರೋಶಿಮಾದಲ್ಲಿ ಸತ್ತ ಆ ಸಹಸ್ರಾರು ಮಂದಿ ಕೂಡ ಇಂಥದ್ದೇ ಪ್ರಾರ್ಥನಾಕ್ರಿಯೆಯಲ್ಲಿ ಸತ್ತಿದ್ದರೆ, ಹೃದಯದಲ್ಲಿ ಇಂಥ ಪ್ರಾರ್ಥನೆ ತುಂಬಿಕೊಂಡು ಬಯಲಿಗೆ ಬಂದಿದ್ದರೆ ಆ ಯುದ್ಧ ಇಷ್ಟು ಕಳಂಕಕರವಾದ ರೀತಿಯಲ್ಲಿ ಕೊನೆಯಾಗುತ್ತಿರಲಿಲ್ಲ."[೮] ಗಾಂಧಿಯ ಈ ಮಾತುಗಳು ಅಹಿಂಸೆಯ ಬಗೆಗಿನ ತಮ್ಮ ದೃಢವಾದ ನಿಲುವನ್ನು, ಪ್ರಾರ್ಥನೆಯ ಶಕ್ತಿಯನ್ನೂ, ಮಾನವೀಯತೆಯ ಬಗೆಗಿನ ಅಚಲ ವಿಶ್ವಾಸವನ್ನೂ ಧ್ವನಿಸುತ್ತದೆ.

ಗಾಂಧಿಯದ್ದು ಪವಾಡ ಸದೃಶ ವ್ಯಕ್ತಿತ್ವ. ಈ ರೀತಿಯ ಒಬ್ಬ ವ್ಯಕ್ತಿ ಭೂಮಿಯ ಮೇಲೆ ಬದುಕಿದ್ದನೇ! ಎಂದು ಆಶ್ಚರ್ಯ ವ್ಯಕ್ತಪಡಿಸುವಂತ ವ್ಯಕ್ತಿತ್ವ ಅವರದು. ಸತ್ಯ ಅಹಿಂಸೆ, ಉಪವಾಸಗಳನ್ನು ತಮ್ಮ ಬದುಕಿನ ಮತ್ತು ಹೋರಾಟದ ಅಸ್ತ್ರಗಳನ್ನಾಗಿ ಬಳಸಿದ್ದರು. ಭಾರತ ಸ್ವತಂತ್ರಗೊಂಡ ಸಂದರ್ಭದಲ್ಲಿ ಉಂಟಾದ ಧಾರ್ಮಿಕ ವಿದ್ವೇಷದಂತ ಕ್ರೌರ್ಯವನ್ನು ಕೇವಲ ಉಪವಾಸದಂತಹ ಅಸ್ತ್ರದಿಂದ ಅಡಗಿಸಿದುದು ಮಾನವ ಚರಿತ್ರೆಯಲ್ಲಿಯೇ ಪವಾಡ ಸದೃಶ ಘಟನೆ. "ನೌಖಾಲಿಯಲ್ಲಿ ಭೀಕರ ಹತ್ಯಾಕಾಂಡವಾಗಿತ್ತು. ಗಂಡಂದಿರನ್ನು ಮರಕ್ಕೆ, ಕಂಬಕ್ಕೆ ಕಟ್ಟಿಹಾಕಿ ಅವರ ಹೆಂಡಂದಿರನ್ನು ಅವರ ಕಣ್ಣೆದುರಿನಲ್ಲಿ ಮಾನಭಂಗ ಮಾಡಿದರು. ಆ ರಕ್ಕಸ ಕೃತ್ಯ ಮಾಡಿದ ಮೇಲೆ ಆ ಮಹಿಳೆಯರ ಕಣ್ಣೆದುರಿಗೇ ಗಂಡಂದಿರನ್ನು ಖಡ್ಗದಿಂದ ತುಂಡರಿಸಿದರು. ಗುಂಡಿಕ್ಕಿ ಕೊಂದರು. ಅಗ ಅಲ್ಲಿ ಯಾವ ಸರ್ಕಾರಿ ನೌಕರರೂ ಅವರಿಗೆ ರಕ್ಷಣೆ ಕೊಡಲಿಲ್ಲ. ಅಂಥ ಸಂದರ್ಭದಲ್ಲಿ ಗಾಂಧೀಜಿ ಒಬ್ಬಂಟಿಗರಾಗಿ, ಹಗಲು ರಾತ್ರಿ ಎನ್ನದೆ, ಕತ್ತಲಲ್ಲಿ ಲಾಟೀನು ಹಿಡಿದುಕೊಂಡು ಬರಿಗಾಲಲ್ಲಿ ಮನೆಮನೆಗೆ ಹೋಗಿ ಸಾಂತ್ವಾನ ಹೇಳಿ ಆ ಹತ್ಯಾಕಾಂಡವನ್ನು ನಿಲ್ಲಿಸಿದರು. ಕಲ್ಕತ್ತೆಯ ರಕ್ತದ ಕೆಸರಿನಲ್ಲಿ ಕೋಲೂರಿಕೊಂಡು ಜೊತೆಗೆ ಯಾವ ಅಂಗರಕ್ಷಕರೂ ಇಲ್ಲದೆ ಬೀದಿ ಬೀದಿಯಲ್ಲಿ ನಡೆದು ಜನರಿಗೆ ಹಿಂದೂ-ಮುಸ್ಲಿಂ ಮೈತ್ರಿ ಸಂದೇಶವನ್ನು ಸಾರಿದರು, ಸೌಹಾರ್ದತೆ ಉಂಟುಮಾಡಿದರು. ಖಡ್ಗಗಳನ್ನು ಕಳಚಿ ಬದಿಗಿಟ್ಟು ಹಿಂದೂ-ಮುಸ್ಲೀಮರು ಅನ್ಯೋನ್ಯ ಪ್ರೀತಿ ವಿಶ್ವಾಸದಿಂದ ಬಾಳಲು ಪಣತೊಟ್ಟರು. ಹಿಂದೆ ಯಾವ ಬುದ್ಧನೂ, ಕ್ರಿಸ್ತನೂ ಮಾಡದಿದ್ದ ಪವಾಡವನ್ನು ಗಾಂಧಿ ಬಂಗಾಳದಲ್ಲಿ ಮಾಡಿ ತೋರಿಸಿದ್ದರು. ಯಾವ ಸೈನ್ಯದಿಂದಲೂ ಆಗದಿದ್ದ ಕೆಲಸವನ್ನು ಈ 'ಅರೆಬೆತ್ತಲೆ ಪಕೀರ' ಏಕಾಂಗಿಯಾಗಿ ಸಾಧಿಸಿದ್ದ. ಇದನ್ನು ಕಂಡ ಬಂಗಾಳದ ಅಂದಿನ ಗವರ್ನರ್ ಮಿ.ಆರ್.ಜೆ,ಕೇಸಿ 'ಗಾಂಧಿ ಈಸ್ ಮೈ ಒನ್ ಮ್ಯಾನ್ ಆರ್ಮಿ ಆಫ್ ಪೀಸ್' ಎಂದಿದ್ದರು. ಅಂತದೇ ಪವಾಡವನ್ನು ಗಾಂಧೀಜಿ ಜನವರಿ ೧೯೪೮ರಲ್ಲಿ ದೆಹಲಿಯಲ್ಲೂ ಮಾಡಿದ್ದರು."[೯] ಈ ಘಟನೆಗಳು ಗಾಂಧಿ ಮೆರೆದ ನಂಬಲಸಾಧ್ಯವಾದ ಪವಾಡಗಳನ್ನು ಸಾಬೀತುಪಡಿಸುತ್ತವೆ. ಗಾಂಧೀಜಿ ವ್ಯಕ್ತಿತ್ವದ ಈ ಅದ್ಭುತವಾದ ಶಕ್ತಿಯನ್ನು ಕುರಿತು ಐನ್‌ಸ್ಟೀನ್ ಹೀಗೆ ಉದ್ಗರಿಸುತ್ತಾರೆ. "ಇಂಥ ಒಬ್ಬ ಮನುಷ್ಯ, ಜೀವಂತ ರಕ್ತಮಾಂಸಮಯ ಮನುಷ್ಯ,

ಭೂಮಿಯ ಮೇಲೆ ಜೀವಿಸಿದ್ದನೆಂಬುದನ್ನು ಮುಂದಿನ ಪೀಳಿಗೆಗಳು ನಂಬದೆ ಹೋಗಬಹುದೋ ಏನೋ"[೧೦] ಈ ಮಾತುಗಳು ಉತ್ಪ್ರೇಕ್ಷೆಯಂತೆ ಕಂಡರೂ ಸತ್ಯಾಂಶದಿಂದ ಕೂಡಿವೆ.

ಗಾಂಧಿಯದ್ದು ನಿರಂತರವಾಗಿ ರೂಪಾಂತರ ಹೊಂದುತ್ತಾ ಬೆಳೆದ ವ್ಯಕ್ತಿತ್ವ. ತಾವು ನಂಬಿಕೊಂಡಿದ್ದ ಮೌಲ್ಯಗಳಿಗೆ ಬದ್ಧರಾಗಿ ಬದುಕುತ್ತಿದ್ದರೂ ಅವುಗಳಲ್ಲಿ ದೋಷಗಳು ಕಂಡುಬಂದಾಗ ಅಗತ್ಯ ಮಾರ್ಪಾಡು ಮಾಡಿಕೊಳ್ಳುತ್ತಿದ್ದರು. ಹಾಗಾಗಿ ಗಾಂಧಿಯನ್ನು ಯಾವುದೋ ಕಾಲಘಟ್ಟದ ಹೋರಾಟ, ಅಭಿಪ್ರಾಯಗಳಿಗೆ ಬದ್ಧವಾಗಿ ವಿವೇಚಿಸುವುದು ತಪ್ಪಾಗಬಹುದು. ಗಾಂಧಿಯನ್ನು ಕುರಿತಂತೆ ಸನಾತನಿ ಹಿಂದೂ, ಮಾನವ ಜನಾಂಗವನ್ನು ಪ್ರಾಚೀನ ಸ್ಥಿತಿಗೆ ಕೊಂಡೊಯ್ಯುತ್ತಿದ್ದಾನೆ ಎಂದೆಲ್ಲಾ ಟೀಕೆಗಳಿವೆ. ಆದರೆ ಗಾಂಧಿಗೆ ತಮ್ಮ ನಿಲುವುಗಳ ಬಗೆಗೆ ಸ್ಪಷ್ಟತೆ, ಖಚಿತತೆ ಮತ್ತು ದೂರದರ್ಶಿತ್ವವಿತ್ತು. ಹಾಗಾಗಿ ಗಾಂಧಿ ನಂಬಿದ್ದ ಹಿಂದೂ ಧರ್ಮ ವಿಶ್ವದ ಎಲ್ಲ ಧರ್ಮಗಳ ಸಾರಭೂತವಾದ ಧರ್ಮವೇ ಹೊರತು ಸಂಕುಚಿತ ನೆಲೆಯದ್ದಲ್ಲ. ಇದರ ನಡುವೆ ಗಾಂಧಿ ಹಿಂದೂ ವರ್ಣಾಶ್ರಮ ವ್ಯವಸ್ಥೆಯ ಪರವಾಗಿದ್ದಾರೆ ಎಂಬ ಆರೋಪ ಕೂಡ ಇತ್ತು. ಆದರೆ ಗಾಂಧಿ ತನ್ನ ಬದುಕಿನಲ್ಲಿ ತೆಗೆದುಕೊಂಡ ನಿಲುವುಗಳು, ಆ ಹಾದಿಯಲ್ಲಿ ಅವರ ಪಯಣವನ್ನು ಗಮನಿಸಿದಾಗ ಗಾಂಧಿಯ ಸಮಾನತೆಯ ಆಶಯಗಳು ಅರಿವಾಗುತ್ತವೆ. ಗಾಂಧಿ ಪೂನಾ ಒಪ್ಪಂದದ ನಂತರ ತಮ್ಮ ಹೋರಾಟವನ್ನು ಅಸ್ಪೃಶ್ಯತೆಯ ನಿವಾರಣೆಯ ಕಡೆಗೆ ತಿರುಗಿಸಿದರು. ಗಾಂಧಿ ಅಸ್ಪೃಶ್ಯರ ಬಗೆಗೆ ತೋರಿದ ಕಾಳಜಿ, ಅವರ ನಡುವೆ ಬದುಕುವ ರೀತಿ ಗಾಂಧಿಯಲ್ಲಿ ಆದ ತೀವ್ರ ಬದಲಾವಣೆಗಳಿಗೆ ಸಾಕ್ಷಿಯಾಗಿವೆ. ಹಾಗೆಯೇ ಯಂತ್ರಗಳ ಬಗೆಗೆ ತೀವ್ರ ವಿರೋಧ ವ್ಯಕ್ತಪಡಿಸಿದ ಗಾಂಧಿ ಮುಂದೆ ತಮ್ಮ ನಿಲುವುಗಳಲ್ಲಿ ಬದಲಾವಣೆ ಮಾಡಿಕೊಳ್ಳುತ್ತಾರೆ. ಮನುಷ್ಯನನ್ನು ಸೋಮಾರಿಯಾಗಿಸದ, ಆತನ ಕೆಲಸವನ್ನು ಕಿತ್ತುಕೊಳ್ಳದ ಯಂತ್ರಗಳ ಬಳಕೆಯನ್ನು ಒಪ್ಪುತ್ತಾರೆ. ಹೀಗೆ ಗಾಂಧಿ ನಿರಂತರವಾಗಿ ತಮ್ಮ ಆಲೋಚನೆ, ನಂಬಿಕೆಗಳಲ್ಲಿ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಾ ಜೀವಪರ ಬದುಕಿನ ಕಡೆಗೆ ಆಸಕ್ತಿ ತೋರುತ್ತಾರೆ. ಹಾಗೂ ಆ ನಿಟ್ಟಿನಲ್ಲಿ ತಮ್ಮ ನಿಲುವುಗಳನ್ನು ಬದಲಾಯಿಸಿಕೊಳ್ಳುತ್ತಾರೆ. ಹಾಗಾಗಿ ಗಾಂಧಿಯ ಬಗೆಗೆ ಮಾತನಾಡುವಾಗ ತಂಬಾ ಸೂಕ್ಷ್ಮಪ್ರಜ್ಞೆ, ಎಚ್ಚರ ಬೇಕು. ನಿರಂತರ ಬೆಳವಣಿಗೆ, ರೂಪಾಂತರ, ಮಾಗುವಿಕೆಯ ನೆಲೆಯಲ್ಲಿ ಮಾತ್ರ ಗಾಂಧಿ ವ್ಯಕ್ತಿತ್ವವನ್ನು ಗ್ರಹಿಸಲು ಸಾಧ್ಯ. "ಹೀಗೆ ಮಾಡುವಾಗ ಒಂದು ಎಚ್ಚರ ಬೇಕು ನಿನ್ನೆಯ ಗಾಂಧಿ ನಾಳೆಗೆ ಬದಲಾಯಿಸಿರುತ್ತಾನೆ. ಈ ನಡಿಗೆಯ ಕ್ರಮದಲ್ಲೇ ಗಾಂಧಿಯ ಆಸೆ– ಚಿಂತನೆಗಳಿಗೂ ನಡಿಗೆ ಇದೆ. ಇಡೀ ಸಮೂದಾಯವನ್ನು ತನ್ನ ಜತೆಯಲ್ಲೇ ಕರೆದೊಯ್ಯುವವನ ಕಷ್ಟ ಇದಾಗಿರಬಹುದು. ಇದರಿಂದಾಗಿ ಬೇಕಾದವರು, ಬೇಕಾದ್ದನ್ನು ತೆಗೆದುಕೊಂಡು ಇದೇ ಗಾಂಧಿ ಎನ್ನುವ ಸಾಧ್ಯತೆಗಳು, ದುರುಪಯೋಗಗಳು ಹೆಚ್ಚಿವೆ. ಆದ್ದರಿಂದ ಗಾಂಧಿಯ ಗುರಿ ಹಾಗೂ ಗಾಂಧಿ ಇಟ್ಟ ಕೊನೆಯ ಹೆಜ್ಜೆಗಳ ಗುರುತು ಹಿಡಿದು ಗಾಂಧಿಯನ್ನು ಪುನರ್ ರೂಪಿಸಬೇಕು. ಇದಕ್ಕೆ ಲೋಹಿಯಾರ ವಿವೇಕ ಚಿಂತನೆ ಸಹಾಯಕವಾಗುತ್ತವೆ. ಹೀಗೆ ಗಾಂಧಿಗೆ ಲೋಹಿಯಾ ಕೂಡಿಸಿದ ಮೇಲೆ ಲೋಹಿಯಾಗೆ ಅಂಬೇಡ್ಕರ್ ಜೊತೆಗೂಡಿಸಿ ಒಂದು ಸಾಮರಸ್ಯ ಪಡೆಯಬಹುದು."[೧೧] ಈ ಮಾತುಗಳು ಗಾಂಧಿಯನ್ನು ಗ್ರಹಿಸಿಕೊಳ್ಳಬೇಕಾದ ಕಣ್ಣನ್ನು ಒದಗಿಸುತ್ತವೆ. ಗಾಂಧಿಯನ್ನು ಸಂದರ್ಭ ನಿಷ್ಠವಾಗಿ ಹಾಗೂ ಎಲ್ಲರಿಂದ ಪ್ರತ್ಯೇಕಿಸಿ ನೋಡುವುದಕ್ಕಿಂತ; ನಿರಂತರ ಪರಿವರ್ತನಾಶೀಲ ವ್ಯಕ್ತಿತ್ವವಾಗಿ ಮತ್ತು ಎಲ್ಲರೊಟ್ಟಿಗೆ ಅರಿತುಕೊಳ್ಳುವ ಕ್ರಮವೇ ಲಾಭದಾಯಕ ಎಂಬುದನ್ನು ಈ ಮಾತುಗಳು ಸಮರ್ಥಿಸುತ್ತವೆ.

ಗಾಂಧಿಯದ್ದು ಒಬ್ಬ ಸಂತನ ವ್ಯಕ್ತಿತ್ವ ಆದರೆ ಈ ಸಂತ ಜನರಿಂದ ದೂರವಾದ ಸರ್ವಸಂಗ ಪರಿತ್ಯಾಗಿ ಅಲ್ಲ. ಜನರ ನಡುವೆಯೇ, ಜನರಿಗಾಗಿ ಪ್ರಯೋಗಕ್ಕೊಡ್ಡಿಕೊಂಡು ಬದುಕಿದ ಒಬ್ಬ ರಾಜಕೀಯ ಸಂತ. ತಮ್ಮ ೩೫ನೇ ವಯಸ್ಸಿನಲ್ಲಿ ಬ್ರಹ್ಮಚರ್ಯವನ್ನು ಸ್ವೀಕರಿಸುವ ಗಾಂಧಿ ಸಾರ್ವಜನಿಕ ಬದುಕಿನ ಉದ್ಧಾರಕ್ಕಾಗಿ ತಮ್ಮನ್ನು ಅರ್ಪಿಸಿಕೊಳ್ಳುತ್ತಾರೆ. ಸಂತನ ಹಾಗೆ ಆಶ್ರಮ ಕಟ್ಟಿ ಬದುಕಲು ಪ್ರಯತ್ನಿಸುತ್ತಾರೆ. ಜಗತ್ತಿನ ಉದ್ಧಾರಕ್ಕಾಗಿ ಆಧ್ಯಾತ್ಮಿಕ ಮಾರ್ಗವನ್ನು ಆಯ್ಕೆ ಮಾಡಿಕೊಂಡು ಅದರ ಸಾಧಕ ಭಾದಕಗಳನ್ನು ಕುರಿತಂತೆ ನಿರಂತರವಾಗಿ ಕ್ರಿಯಾಶೀಲರಾಗುತ್ತಾರೆ. ತಮ್ಮನ್ನು ಸೇವಕ, ಬಡವರ ಪ್ರತಿನಿಧಿ ಎಂದು ಕರೆದುಕೊಳ್ಳುತ್ತಿದ್ದ ಗಾಂಧಿ ತಮ್ಮ ಬದುಕಿನುದ್ದಕ್ಕೂ ಬಡವರ, ದೀನದಲಿತರ ರೋಗಿಗಳ ಸೇವೆ ಮಾಡುತ್ತಾರೆ.

ಗಾಂಧಿಯ ಇಡೀ ಬದುಕನ್ನು ನೋಡಿದಾಗ ಅವರು ಒಬ್ಬ ವ್ಯಕ್ತಿಯಾಗಿ ಗೋಚರಿಸದೆ ಹಲವು ಉನ್ನತ ಮೌಲ್ಯಗಳ ಸಂಕೇತವಾಗಿ ಕಾಣುತ್ತಾರೆ. ನೈತಿಕ, ಆಧ್ಯಾತ್ಮಿಕ ಬದುಕನ್ನು ನಡೆಸಿದ ಗಾಂಧಿ ಜಗತ್ತಿನ ಹಿಂಸೆ, ಕ್ರೌರ್ಯಗಳಿಗೆ ತಮ್ಮದೇ ಆದ ಆಧ್ಯಾತ್ಮಿಕ ಪರಿಹಾರಗಳನ್ನು ಶೋಧಿಸಿಕೊಂಡಿದ್ದರು. ಜಗತ್ತು ಎದುರಿಸುತ್ತಿರುವ ಹಲವು ಸಮಸ್ಯೆಗಳಿಗೆ ಮನುಷ್ಯನ ಮನ ಪರಿವರ್ತನೆಯೊಂದೇ ಮದ್ದು, ಅದೇ ಶಾಶ್ವತ ಪರಿಹಾರವೆಂದು ನಂಬಿದ್ದರು. ಅಷ್ಟೇ ಅಲ್ಲ ತಮ್ಮ ಜೀವಿತದಲ್ಲೇ ಅದರ ಪ್ರಾಯೋಗಿಕ ಯಶಸ್ಸನ್ನು ಕಂಡರು. ಭಾರತ ಪಾಕಿಸ್ಥಾನ ಇಬ್ಭಾಗವಾದ ಸಂದರ್ಭದ ಹಿಂದೂ ಮುಸ್ಲಿಂ ಗಲಭೆಗಳನ್ನು ತಮ್ಮ ಉಪವಾಸ, ಅಹಿಂಸೆಗಳ ಮೂಲಕ ಅಡಗಿಸಿದುದು ಇದಕ್ಕೆ ಉದಾಹರಣೆ. ನೌಖಾಲಿ, ಕಲ್ಕತ್ತ, ದೆಹಲಿಗಳಲ್ಲಿ ಧಾರ್ಮಿಕ ಹಿಂಸೆಗಳಲ್ಲಿ ತೊಡಗಿದ್ದ ಕ್ರೂರಿಗಳು ತಮ್ಮ ಅಸ್ತ್ರಗಳನ್ನು ತಂದು ಉಪವಾಸ ನಿರತ ಗಾಂಧಿಯವರ ಬಳಿ ಹಾಕಿ ಶರಣಾದ ಪ್ರಸಂಗಗಳು; ಅಹಿಂಸೆ ಹಿಂಸೆಯನ್ನು ಸೋಲಿಸಿದ, ಪರಿವರ್ತಿಸಿದ ಪವಾಡದ ಘಟನೆಗಳೇ ಆಗಿವೆ. ಪ್ರಪಂಚದ ಹಲವು ವ್ಯಕ್ತಿಗಳಿಗೆ ಗಾಂಧಿ ಒಬ್ಬ ಅಲೌಕಿಕ ವ್ಯಕ್ತಿಯ ಹಾಗೆ ಕಂಡಿದ್ದಾರೆ. ಅವರ ಸನಿಹ ಬಂದವರನ್ನು ಅವರು ಆಕರ್ಷಿಸುತ್ತಿದ್ದರು, ಬದಲಾಯಿಸುತ್ತಿದ್ದರು. ಸರೋಜಿನಿ ನಾಯ್ಡು, ಮಣಿ ಬೆನ್, ಮೀರಾ ಬೆನ್, ಬರ್ಕ್‌ವೈಟ್, ಮಹಾದೇವ ದೇಸಾಯಿ ಮುಂತಾದವರು ಈ ಬಗ್ಗೆ ತಮ್ಮ ಅನುಭವಗಳನ್ನು ಹೇಳಿಕೊಂಡಿರುವುದನ್ನು ಕಾಣಬಹುದು.

ಗಾಂಧಿ ತುಂಬಾ ನಿಷ್ಠುರಿಯಾಗಿದ್ದರು. ತಮ್ಮ ಜೊತೆಯಲ್ಲಿರುವವರು ಆಶ್ರಮ ಧರ್ಮಗಳಿಗೆ ಬದ್ಧವಾಗಿ ಇರುವುದಾದರೆ ಮಾತ್ರ ಇರಿಸಿಕೊಳ್ಳುತ್ತಿದ್ದರು. ಇಲ್ಲವಾದರೆ ಅವರನ್ನು ಅಲ್ಲಿಂದ ಹೋಗಲು ಹೇಳುತ್ತಿದ್ದರು. ಕರ್ತವ್ಯ ಪಾಲನೆಯಲ್ಲಿ ಸ್ವಲ್ಪವೂ ಏರು ಪೇರು, ಉದಾಸೀನತೆಯನ್ನು ಅವರು ಸಹಿಸುತ್ತಿರಲಿಲ್ಲ. ಒಮ್ಮೆ ನೌಖಾಲಿಯ ಪಾದಯಾತ್ರೆಯ ಸಂದರ್ಭದಲ್ಲಿ ಅವರು ಕಾಲುಗಳನ್ನು ಉಜ್ಜುವ ಕಲ್ಲನ್ನು ಹಿಂದಿನ ಗ್ರಾಮದಲ್ಲಿ ತಮ್ಮ ಮೊಮ್ಮಗಳು ಮರೆತು ಬಂದಿದ್ದನ್ನು ಸಹಿಸದ ಗಾಂಧಿ ಮಧ್ಯಾಹ್ನದ ಉರಿಬಿಸಿಲಿನಲ್ಲಿ ಒಬ್ಬಳೇ ಹೆಣ್ಣು ಮಗಳನ್ನು, ಅದೂ ಹಿಂದೂ ಮುಸ್ಲಿಂ ಗಲಭೆಯ ವಾತಾವರಣದಲ್ಲಿ ಹಿಂದಿನ ಊರಿಗೆ ಹೋಗಿ ಕಲ್ಲು ತರುವಂತೆ ನಿಷ್ಠುರವಾಗಿಯೇ ಹೇಳಿಬಿಡುತ್ತಾರೆ. ಈ ವಿಷಯದಲ್ಲಿ ಸ್ವಲ್ಪವೂ ಅನುಕಂಪ ತೋರದ ಗಾಂಧಿ ಒಂದು ವೇಳೆ ಅತ್ಯಾಚಾರಕ್ಕೆ ಒಳಗಾದರೆ, ಕೊಲೆಯಾದರೆ ಆ ಬಲಿದಾನವನ್ನು ನಾನು ಮೆಚ್ಚುತ್ತೇನೆ ಎಂದು ಹೇಳುತ್ತಾರೆ. ಕೊನೆಗೆ ಮೊಮ್ಮಗಳು ಆ ಕಲ್ಲನ್ನು ತಂದ ಮೇಲೆ ತಮ್ಮ ಧೋರಣೆಯ ಹಿಂದಿನ ಕಾಳಜಿಯನ್ನು ಹೇಳುತ್ತಾರೆ. ಹಿಂಸೆಯನ್ನು ಹಿಮ್ಮೆಟ್ಟಿಸುವ ದಿಟ್ಟತನವನ್ನು ತಮ್ಮ ಮೊಮ್ಮಗಳಲ್ಲಿ ತರಬೇತುಗೊಳಿಸುತ್ತಿದ್ದರು. ಅದಕ್ಕಾಗಿ

ಬಲಿದಾನಕ್ಕೂ ಸಿದ್ಧವಾಗಿರಬೇಕು. ಹಾಗೆ ಬಲಿದಾನಕ್ಕೆ ಒಳಗಾದರೆ ತಮಗೆ ಸಂತೋಷವಾಗುತ್ತದೆಯೇ ಹೊರತು ಹೆದರಿ ಕೂರುವುದರಿಂದ ಅಲ್ಲ ಎನ್ನುತ್ತಿದ್ದರು.

ಗಾಂಧಿಯದ್ದು ವಿರೋಧಾಭಾಸಗಳ, ದ್ವಂದ್ವಗಳಿಂದ ಕೂಡಿದ ವ್ಯಕ್ತಿತ್ವ, ಅವರ ವಿಚಿತ್ರವೆನಿಸುವ ಬದುಕು, ಹಠ, ತಾವು ಅಂದುಕೊಂಡದ್ದನ್ನು ಗೆಲ್ಲಲು ಸಾಯಲೂ ಹೆದರದ ದಿಟ್ಟತನ, ತಮ್ಮ ನಿಲುವುಗಳನ್ನು ಎದುರಾಳಿಯಲ್ಲಿ ಪ್ರತಿಷ್ಠಾಪಿಸುವ ವಿಶ್ವಾಸ, ಅದಕ್ಕಾಗಿ ಅನುಸರಿಸಿದ ಮಾರ್ಗಗಳು ಹಲವರಿಗೆ ವಿಚಿತ್ರವಾಗಿ, ವಿರೋಧಾಭಾಸವಾಗಿ ಕಂಡಿವೆ. "ಸಂತರಾದವರು ಲೋಕದ ನಿಂದೆಯನ್ನು ಸಹಿಸಲೇಬೇಕು. ಉನ್ನತ ಸ್ಥಾನ ದೊರೆಯುವುದು ಮನಸ್ಸಿನ ಅಭಿಮಾನವನ್ನು ತೊರೆದಾಗ ಮಾತ್ರ, ಎಲ್ಲೆಲ್ಲೂ ಬ್ರಹ್ಮನೇ ವ್ಯಾಪಿಸಿರುವಾಗ ಯಾರ ಮೇಲೆ ಕ್ರೋಧ ಮಾಡುವುದು"[71] ಎನ್ನುತ್ತಾರೆ ಗಾಂಧಿ. ಬ್ರಿಟೀಷ್ ಚಕ್ರಾಧಿಪತಿ ಚರ್ಚಿಲ್ ಗಾಂಧಿಯನ್ನು 'ಅರೆಬೆತ್ತಲೆ ಫಕೀರ' ಎಂದು ಮೂದಲಿಸುತ್ತಾರೆ. ಗಾಂಧಿಯವರ ಸಮಕಾಲೀನರೂ, ಅವರ ಕಟುವಿಮರ್ಶಕರೂ ಆದ ಅಂಬೇಡ್ಕರ್ "ಈತ ಹುಚ್ಚನಿರಬೇಕು ಅಥವಾ ಕಾಡು ಮಾನವನಂತೂ ಆಗಿರಲೇಬೇಕು"[72] ಎಂದು ಟೀಕಿಸುತ್ತಾರೆ. ಇವೆಲ್ಲದರ ನಡುವೆಯೂ ಗಾಂಧಿ ವ್ಯಕ್ತಿತ್ವದ ಬಗೆಗೆ ಪ್ರಶಂಸೆ, ಅನುಮಾನ, ಅಚ್ಚರಿಗಳು ಗಾಂಧಿಯನ್ನು ನೋಡಿದ ಯಾರನ್ನಾದರೂ ಕಾಡಿದ್ದು ಸುಳ್ಳಲ್ಲ. ಖ್ಯಾತ ಪತ್ರಕರ್ತೆ ಬರ್ಕ್‌ವೈಟ್ ಹಲವು ವಿರೋಧಾಭಾಸಗಳ ನಡುವೆಯೂ ಗಾಂಧಿಯವರನ್ನು ಒಬ್ಬ 'ಮಹಾಪುರುಷ'ನೆಂದು ಒಪ್ಪಿಕೊಳ್ಳುತ್ತಾರೆ.

ಬರ್ಕ್‌ವೈಟ್ ಗಾಂಧಿ ವಿರುದ್ಧ ಎತ್ತುವ ಪ್ರಶ್ನೆಗಳು, ಅಂಬೇಡ್ಕರ್, ನೆಹರು, ಕೆಲ ಕಾಂಗ್ರೆಸ್ ನಾಯಕರುಗಳು ಹಾಗೂ ಹಿಂದುತ್ವವಾದಿ ಮತ್ತು ಮುಸ್ಲಿಂ ಮೂಲಭೂತವಾದಿಗಳು ತೋರುವ ವಿರೋಧ ಮತ್ತು ಪ್ರಿತಿಕ್ರಿಯೆಗಳು ಗಾಂಧಿ ವ್ಯಕ್ತಿತ್ವದಲ್ಲಿನ ದ್ವಂದ್ವ, ಗೊಂದಲ ಮತ್ತು ಬಿರುಕುಗಳನ್ನು ಎತ್ತಿ ಹಿಡಿಯುವ ಪ್ರಯತ್ನವನ್ನು ಮಾಡುತ್ತವೆ. ಇವು ಗಾಂಧಿ ವ್ಯಕ್ತಿತ್ವದ ವಿಕಾಸ ಪಥ ಮತ್ತು ಗುರಿಯನ್ನು ಮುಖ್ಯವಾಗಿರಿಸಿಕೊಂಡು ಮಾಡಿದ ಆರೋಪಗಳಾಗಿ ಕಾಣಿಸವು. ಬದಲಾಗಿ ಆಯಾ ಸಂದರ್ಭದ ನೆಲೆಯಲ್ಲಿಯೇ ಗಾಂಧಿಯ ನಿಲುವುಗಳನ್ನು ನೋಡಿ ಪ್ರತಿಕ್ರಿಯಿಸಿರುವುದರಿಂದ ಗಾಂಧಿಯ ನಿಲುವುಗಳಲ್ಲಿ ಗೊಂದಲ, ದ್ವಂದ್ವ ವಿರೋಧಾಭಾಸಗಳು ಕಂಡಿವೆ. ನಿರಂತರ ವಿಕಾಸದ ನೆಲೆಯಲ್ಲಿ ನೋಡಿದಾಗ ಮಾತ್ರ ಗಾಂಧಿ ನಮಗೆ ದಕ್ಕಲು ಸಾಧ್ಯ. ಗಾಂಧಿ ಹಲವು ಹತ್ತು ವಿರೋಧ ಮತ್ತು ಪ್ರಶ್ನೆಗಳ ನಡುವೆಯೂ ತಮ್ಮ ಬದುಕು ಮತ್ತು ಚಿಂತನೆಗಳನ್ನು ಮರು ರೂಪಿಸಿಕೊಳ್ಳುತ್ತಾ, ತನಗನ್ನಿಸಿದ್ದನ್ನು ಯಾವುದೇ ಮುಜುಗರ, ಅಂಜಿಕೆ ಆತಂಕಗಳಿಲ್ಲದೆ ಕೈಗೊಳ್ಳುವ ದೃಢ ಮನಸ್ಥಿತಿಯನ್ನು ಹೊಂದಿದ್ದರು. ತಪ್ಪನ್ನು ತಿದ್ದಿಕೊಳ್ಳುವ, ಅದರಂತೆಯೇ ನಡೆಯುವ ಇವರ ಜೀವನ ವಿಧಾನ ನೋಡುಗರಿಗೆ ವಿರೋಧಾಭಾಸ, ಗೊಂದಲಗಳ ಮೊತ್ತವಾಗಿ ಕಂಡುಬರುತ್ತದೆ. ಆದರೆ ಗಾಂಧಿಯ ರಚನಾತ್ಮಕ ವಿಚಾರಗಳನ್ನು, ಅವರ ಬದುಕಿನ ಕ್ರಮ ಮತ್ತು ಅವರ ಚಿಂತನೆಗಳನ್ನು ಒಟ್ಟಿಗೆ ಇಟ್ಟು ನೋಡಿದಾಗ ನಮಗೆ ನಿಜವಾದ ಗಾಂಧಿ ವ್ಯಕ್ತಿತ್ವ ದರ್ಶನವಾಗುತ್ತದೆ. ಪ್ರಯೋಗಶೀಲ ಮನುಷ್ಯನಾದ ಗಾಂಧಿ ತಮ್ಮ ಬದುಕನ್ನು ನಿರಂತರ ಪ್ರಯೋಗ ಹಾಗೂ ಪರಿವರ್ತನೆಗಳಿಗೆ ಒಡ್ಡಿಕೊಂಡಿದ್ದರು. ಯಾವುದೋ ಒಂದು ದ್ಯೇಯೋದ್ದೇಶವನ್ನು ಎಲ್ಲಾ ಕಾಲಕ್ಕೂ, ಎಲ್ಲಾ ಜನರಿಗೂ ಅನ್ವಯಿಸ ಹೊರಟವರಲ್ಲ. ಆಯಾ ಕಾಲ, ಸಂದರ್ಭ, ಸನ್ನಿವೇಶಕ್ಕೆ ತಕ್ಕಂತೆ ವಾಸ್ತವದ ಅರಿವಿನೊಂದಿಗೆ ತಮ್ಮ ಚಿಂತನೆಗಳನ್ನು ಬದಲಿಸಿಕೊಂಡವರು. ಜೊತೆಗೆ ಎಲ್ಲಾ ಬದಲಾವಣೆಗಳಿಗೆ ತಮ್ಮನ್ನು ತಾವು ಸಂಪೂರ್ಣ ಅರ್ಪಿಸಿಕೊಂಡವರು. ಯಾವುದೇ ಅಂಜಿಕೆ ಸಂಕೋಚಗಳಿಲ್ಲದೆ

ಆ ಎಲ್ಲಾ ಪ್ರಯೋಗಗಳಿಗೂ ತಮ್ಮನ್ನೇ ಬಳಸಿಕೊಂಡವರು. ಹೀಗಾಗಿ ಗಾಂಧಿ 'ಅರೆಬೆತ್ತಲೆ ಪಕೀರನಂತೆ', 'ಕಾಡು ಮನುಷ್ಯನಂತೆ' ಕಂಡುಬರುತ್ತಾರೆ. ಆದರೆ ಈ ಪ್ರಯೋಗಶೀಲತೆಯ ಹಿಂದಿನ ದೃಢತೆ ಮತ್ತು ಬೇರೆಯವರಿಗೆ ಹೇಳುವ ಮೊದಲು ತಾನೇ ಅದನ್ನು ಅನುಸರಿಸುವ ಗುಣ ಗಾಂಧಿಯಲಿಲ್ಲದಿದ್ದರೆ ಇಂದು ಗಾಂಧಿ ಮುಖ್ಯವಾಗುತ್ತಿರಲಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಗಾಂಧಿಯ ಮಾನವ ಪ್ರೇಮ ಹಾಗೂ ಜೀವಪರ ಕಾಳಜಿ ಅವರನ್ನು ವಿಚಿತ್ರವಾಗಿ ಬದುಕಲು ಪ್ರೇರೇಪಿಸಿತು. ಹಾಗಾಗಿ ಗಾಂಧಿ ಹತ್ತು ಹಲವು ರೀತಿಯ ಪ್ರಶ್ನೆ ಗೊಂದಲಗಳನ್ನು ಎದುರಿಸಬೇಕಾಗಿ ಬಂತು.

ಇವೆಲ್ಲಾ ಅಂಶಗಳ ನಡುವೆಯೂ ಬೇರೆ ಬೇರೆ ದೃಷ್ಟಿಕೋನಗಳಿಂದ ನೋಡಿದಾಗ ಗಾಂಧಿಯ ಬದುಕು, ಚಿಂತನೆಗಳಲ್ಲಿ ದ್ವಂದ್ವ, ವಿರೋಧಾಭಾಸಗಳು ಗೋಚರಿಸದೆ ಇರವು. ಆದರೆ ಗಾಂಧಿ ನಂಬಿದ್ದ, ಪ್ರತಿಪಾದಿಸುತ್ತಿದ್ದ ಬದುಕಿನ ಮೂಲ ಆಶಯಗಳ ಹಿನ್ನೆಲೆಯಲ್ಲಿ ನೋಡಿದಾಗ ಅವರ ವಿಚಾರಗಳು ಮತ್ತು ಅವರ ಕಾರ್ಯವಿಧಾನಗಳು ದ್ವಂದ್ವತೆಗೆ ಕಾರಣಗಳೆಂಬಂತೆ ಗೋಚರಿಸುತ್ತವೆ. ಎಲ್ಲಾ ವಿರೋಧಾಭಾಸಗಳ ನಡುವೆಯೂ ತಮ್ಮ ಜೀವಿತದಲ್ಲೇ ದೈವಪುರುಷ, ಅಲೌಕಿಕ ವ್ಯಕ್ತಿ, ಮಹಾತ್ಮ ಎಂದು ತಮ್ಮ ಕಡು ವಿರೋಧಿಗಳಿಂದಲೂ ಹೊಗಳಿಕೆಗೆ ಪಾತ್ರವಾಗಿರುವುದನ್ನು ನೋಡಿದರೆ ಗಾಂಧಿ ಜಗತ್ತು ಕಂಡ ಮಹಾನ್ ಪುರುಷ ಎಂಬುದರಲ್ಲಿ ಸಂದೇಹವಿಲ್ಲ.

ಇಡೀ ಮಾನವ ನಾಗರೀಕತೆಯಲ್ಲಿಯೇ ಗಾಂಧಿ ಬದುಕಿದಂತ ಬದುಕನ್ನು ಗಾಂಧಿಯಿಂದ ಮಾತ್ರ ಬದುಕಲು ಸಾಧ್ಯವೇನೋ? ಅವರಂತೆ ತೆರೆದ ಹೃದಯವಾಗಿ, ತೆರೆದ ಬದುಕಾಗಿ ಬದುಕಿದವರು ಚರಿತ್ರೆಯಲ್ಲಿ ಸಿಗಲಾರರು. ಗಾಂಧೀಜಿ ತಪ್ಪೇ ಮಾಡಿರಲಿಲ್ಲವೆಂದಲ್ಲ. ಆದರೆ ಅವರು ಮಾಡಿದ ತಪ್ಪನ್ನು ಎಂದೂ ಪುನರಾವರ್ತಿಸುತ್ತಿರಲಿಲ್ಲ. ಬಾಲ್ಯದಲ್ಲಿ ಮೂಲತಃ ಅಂಜಿಕೆ, ನಾಚಿಕೆಯ ಸ್ವಭಾವದವರಾದ ಗಾಂಧಿ ಮುಂದೆ ಸೂರ್ಯ ಮುಳುಗದ ನಾಡಿನ ಚಕ್ರಾಧಿಪತ್ಯವನ್ನೆ ನಡುಗಿಸುವಷ್ಟು ದಿಟ್ಟವಾಗಿ ಬೆಳೆದು ನಿಂತದ್ದು ಪವಾಡವೇ ಸರಿ. ಸಾವನ್ನೂ ಎದುರಿಸಿ ಓಡಿಸುವ ದಿಟ್ಟತನ ಗಾಂಧೀಜಿಗಿತ್ತು. ದೇವನೂರು ಹೇಳುವಂತೆ "ಸಾಯಲು ಮಾನಸಿಕವಾಗಿ ಸಿದ್ಧನಾಗಿರುವ ವ್ಯಕ್ತಿ ಮಾತ್ರ ಗಾಂಧಿಯಾಗಲು ಸಾಧ್ಯ"[೧೪]. ಎನ್ನುವುದು ಸಾವಿಗೆ ಎಂದೂ ಅಂಜದ ವ್ಯಕ್ತಿತ್ವ ಮತ್ತು ಜಗತ್ತನ್ನೇ ಪರಿವರ್ತಿಸಿಬಿಡುವ ಅದಮ್ಯ ಉತ್ಸಾಹ ಅವರದ್ದು ಎಂಬುದನ್ನು ತಿಳಿಸುತ್ತದೆ. ತಮ್ಮ ಬದುಕಿನುದ್ದಕ್ಕೂ ಹಲವು ಪ್ರಯೋಗ, ಹೋರಾಟಗಳಲ್ಲಿ ಜಯಗಳಿಸುತ್ತಲೇ ಬಂದ ಗಾಂಧಿಗೆ ಸ್ವಾತಂತ್ರ್ಯ ನಂತರದ ಕಾಲದಲ್ಲಿ ಉತ್ಸಾಹ, ಭರವಸೆ, ಕುಗ್ಗುಹೋಗಿದ್ದವು. ತಮ್ಮ ಆದರ್ಶಗಳು, ಕನಸುಗಳು, ಪ್ರಯತ್ನಗಳು ತಮ್ಮ ಕಣ್ಣೆದುರಿಗೇ ಮಣ್ಣಾಗುತ್ತಿದ್ದುದ್ದನ್ನು ಕಂಡು ಅವರು ಮರುಗಿಹೋಗಿದ್ದರು. ಅದುವರೆಗೂ ತಾವು ೧೨೫ ವರ್ಷ ಬದುಕುವ ಆಸೆಯನ್ನೂ ಪದೇ ಪದೇ ವ್ಯಕ್ತಪಡಿಸುತ್ತಿದ್ದವರು ಸಾವಿನ ಬಗೆಗೆ ಮಾತನಾಡಲು ಆರಂಭಿಸಿದ್ದರು. ತಾವು ಸೋತಿರುವುದಾಗಿಯೂ, ತಮಗೆ ಬದುಕು ಭಾರವಾಗಿರುವುದಾಗಿಯೂ ಹೇಳುತ್ತಿದ್ದರು. ಅವರು ಹಂತಕನೊಬ್ಬನ ಗುಂಡಿಗೆ ಬಲಿಯಾಗುವ ಕೆಲವು ಗಂಟೆಗಳ ಹಿಂದೆಯೂ ತಮ್ಮ ಮೊಮ್ಮಗಳು ಸೇವಾಗ್ರಾಮಕ್ಕೆ ಹೋಗುವ ವಿಷಯ ಪ್ರಸ್ತಾಪಿಸಿದಾಗ ಅಲ್ಲಿಯವರೆಗೆ ನಾನು ಬದುಕಿದ್ದರೆ ನೋಡೋಣ ಎಂದೇ ಹೇಳುತ್ತಾರೆ. ಕೊನೆಗೆ ಗಾಂಧಿ ಮತಾಂಧ ಹಿಂದೂವೊಬ್ಬನ ಗುಂಡಿಗೆ ಬಲಿಯಾಗುತ್ತಾರೆ. ತಾವು ಅತ್ಯಂತ

ಉತ್ಸಾಹ, ಭರವಸೆ ಕೆಚ್ಚಿನಿಂದ ಹೋರಾಡಿದ ನೆಲದಲ್ಲೇ ಹೀಗೆ ಉತ್ಸಾಹವನ್ನು ಕಳೆದುಕೊಂಡು ಗಾಂಧಿ ಧರ್ಮಾಂಧತೆಗೆ ಬಲಿಯಾಗಬೇಕಾಗಿ ಬಂದದ್ದು ಮಾನವ ನಾಗರೀಕತೆಯ ದುರಂತವೇ ಸರಿ.

ನಮ್ಮ ನಡುವೆ ಬದುಕಿದ್ದ ಮಹಾನ್ ಚೇತನವಾದ ಗಾಂಧಿ ತಮ್ಮ ಉಜ್ವಲ ವ್ಯಕ್ತಿತ್ವದಿಂದಾಗಿ ಇಂದಿಗೂ ಕಾಡುವ, ಪ್ರಭಾವಿಸುವ ವ್ಯಕ್ತಿಯಾಗಿದ್ದಾರೆ. ಅವರ ವ್ಯಕ್ತಿತ್ವವನ್ನು ಅರ್ಥ ಮಾಡಿಕೊಳ್ಳಲು ನಿರಂತರವಾದ ಪ್ರಯತ್ನಗಳು ನಡೆಯುತ್ತಿವೆ. ಗಾಂಧಿ ವ್ಯಕ್ತಿತ್ವವನ್ನು ತಮ್ಮ ಸಂದರ್ಭದ ಜಾಗತಿಕ ಸಾಂಸ್ಕೃತಿಕ ಬಿಕ್ಕಟ್ಟುಗಳ ನಡುವೆ ಇಟ್ಟು ನೋಡುವ ಪ್ರಯತ್ನಗಳು ವ್ಯಕ್ತಿತ್ವ ಶೋಧದ ವಿಶಿಷ್ಟ ಕ್ರಮಗಳಾಗಿ ಕಂಡುಬರುತ್ತಿವೆ. ಈ ನಿಟ್ಟಿನಲ್ಲಿ ಆಧುನಿಕ ಕನ್ನಡ ಕಾವ್ಯ ಗಾಂಧಿ ವ್ಯಕ್ತಿತ್ವವನ್ನು ಶೋಧಿಸಿಕೊಂಡಿರುವ ನೆಲೆಗಳನ್ನು, ಆಮೂಲಕ ಗಾಂಧಿಯ ವ್ಯಕ್ತಿತ್ವದೊಂದಿಗೆ ನಡೆಸಿರುವ ಅನುಸಂಧಾನದ ಪ್ರಕ್ರಿಯೆಗಳನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

### ೬.೨. ಕನ್ನಡ ಕಾವ್ಯ ಕಂಡ ಗಾಂಧಿ : ನೈತಿಕ ಮೌಲ್ಯಗಳ ಸಂಕೇತ ರೂಪ

ಗಾಂಧಿ ಇಂದು ಒಬ್ಬ ವ್ಯಕ್ತಿಯಾಗಿ ಉಳಿದಿಲ್ಲ. ಅದೊಂದು ಶಕ್ತಿ, ಬದುಕು, ವಿಚಾರ, ಚಿಂತನೆ, ಹೋರಾಟ, ವಾದ, ಹೀಗೆ ಹತ್ತು ಹಲವು ರೂಪಕಗಳ ಮೂಲಕ ನಮ್ಮ ನಡುವೆ ಚರ್ಚೆಗೊಳ್ಳುತ್ತಿದ್ದಾರೆ. ಇಂದು ಗಾಂಧಿ ಒಂದು ಸಂಕೀರ್ಣ ವ್ಯಕ್ತಿತ್ವವಾಗಿ, ಆ ವ್ಯಕ್ತಿತ್ವ ಬದುಕಿನ ನಾನಾ ಮುಖಗಳ ಪ್ರತಿಬಿಂಬವಾಗಿ, ನಮ್ಮನ್ನು ಎಚ್ಚರಿಸುವ ಕರೆಗಂಟೆಯಾಗಿ, ದಾರಿ ತೋರುವ ದೀವಟಿಕೆಯಾಗಿ ಮಾರ್ಪಟ್ಟಿದ್ದಾರೆ. ಜಾಗತಿಕ ನಡೆಯ ಪ್ರತಿಯೊಂದು ಹೆಜ್ಜೆಯನ್ನು 'ಗಾಂಧಿ' ಎಂಬ ರೂಪಕದ ಮೂಲಕ ಗ್ರಹಿಸಲು ಪ್ರಯತ್ನಿಸಲಾಗುತ್ತಿದೆ. ಆಧುನಿಕ ಬದುಕು ಹೆಚ್ಚೆಚ್ಚು ಧಾರುಣವಾದಷ್ಟೂ ಗಾಂಧಿ ನಮಗೆ ಇನ್ನಷ್ಟು ಪ್ರಸ್ತುತ, ಇನ್ನಷ್ಟು ಹತ್ತಿರ, ಇನ್ನಷ್ಟು ಅನುಮಾನಕ್ಕೆ ಕಾರಣರಾಗುತ್ತಿದ್ದಾರೆ. ಮನುಷ್ಯ ಜೀವನದ ಎಲ್ಲಾ ಕ್ಷೇತ್ರಗಳಿಗೂ ಸಂಬಂಧಿಸಿದಂತೆ ಚರ್ಚಿತವಾಗುವ, ಪರಿಹಾರವಾಗುವ ನೆಲೆಯ ವಿಚಾರವಾಗಿದ್ದಾರೆ. ಅಲ್ಲದೆ ಗಾಂಧಿ ಚಿಂತನೆ, ಆಲೋಚನೆಯನ್ನು ಕುರಿತಂತೆ ಪರ ವಿರೋಧ ವಾದಗಳು, ಅದರ ಪ್ರಸ್ತುತತೆ, ಅಪ್ರಸ್ತುತತೆ ಕುರಿತ ಚರ್ಚೆಗಳೂ, ಗಾಂಧಿಯಲ್ಲಿನ ದ್ವಂದ್ವತೆ-ಗೊಂದಲಗಳನ್ನು ಕುರಿತಂತೆ ನಿರಂತರವಾದ ವಾಗ್ವಾದಗಳೂ ನಡೆಯುತ್ತಲೇ ಇವೆ. ಇವೆಲ್ಲವೂ ಕೂಡ ಗಾಂಧಿ ವ್ಯಕ್ತಿತ್ವವನ್ನು ಭಿನ್ನ ನೆಲೆಯಲ್ಲಿ ಗ್ರಹಿಸಲು ಮಾಡುತ್ತಿರುವ ಪ್ರಯತ್ನಗಳೇ ಆಗಿವೆ.

ತಮ್ಮ ಬದುಕು, ಚಿಂತನೆ, ಹೋರಾಟಗಳ ಮೂಲಕ ಜಾಗತಿಕ ಮಟ್ಟದಲ್ಲಿ ಚರ್ಚೆಗೊಳ್ಳುತ್ತಿರುವ ಗಾಂಧಿ ಸುಮಾರು ಒಂದು ಶತಮಾನದ ಅವಧಿಯಲ್ಲಿ ಸಾವಿರಾರು ಕಣ್ಣುಗಳಲ್ಲಿ ಸಾವಿರಾರು ತೆರನಾಗಿ ಚಿತ್ರಿತಗೊಳ್ಳುತ್ತಾ, ಮರುಹುಟ್ಟು ಪಡೆಯುತ್ತಾ, ಸಮಕಾಲೀನ ಬದುಕಿನ ಆಗುಹೋಗುಗಳಲ್ಲಿ ಚರ್ಚೆಯಾಗುತ್ತಿರುವ ಬಹುಮುಖ್ಯ ತಾತ್ವಿಕಭಿತ್ತಿಯಾಗಿದ್ದಾರೆ. ಆದರೂ ಗಾಂಧಿ ನಮ್ಮ ಗ್ರಹಿಕೆಯ ತೆಕ್ಕೆಗೆ ಸಂಪೂರ್ಣವಾಗಿ ಸಿಗದೆ ನುಣುಚಿಕೊಂಡೇ ಓಡಾಡುವ 'ಸಂಕೀರ್ಣ ವ್ಯಕ್ತಿತ್ವ'ವೂ ಹೌದು. ಇಡೀ ಜಗತ್ತೆ ಗಾಂಧಿ ಎಂಬ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಲು, ಅವರ ಚಿಂತನೆಗಳಿಗೆ ಮೂರ್ತರೂಪ ಕೊಡಲು ಹೆಣಗುತ್ತಿದೆ. ಆದರೆ ಗಾಂಧಿ ಅರ್ಥಮಾಡಿಕೊಂಡಷ್ಟೂ ವಿಸ್ತರಣೆಗೊಳ್ಳುತ್ತಾ, ಗ್ರಹಿಸಿದಷ್ಟೂ ಸಂಕೀರ್ಣವಾಗುತ್ತಾ, ನಮ್ಮ ಚಿಂತನೆಗಳಿಗೆ ಸವಾಲೆಸಗುತ್ತಾ, ಅನುಮಾನ, ಪ್ರಶ್ನೆಗಳನ್ನು ಹುಟ್ಟುಹಾಕುತ್ತಾ, ಇನ್ನಷ್ಟೂ ನಿಗೂಢವಾಗುತ್ತಾ ಸಾಗಿದ್ದಾರೆ. ಹಾಗಾಗಿ ಗಾಂಧಿ ದೇಶ, ಭಾಷೆಯ ಮಿತಿಗಳಾಚೆ ಮತ್ತೆ ಮತ್ತೆ ಚರ್ಚೆಗೊಳ್ಳುತ್ತಿದ್ದಾರೆ. ಎಲ್ಲ ಜ್ಞಾನ ಶಾಖೆಗಳೂ ಗಾಂಧಿಯನ್ನು ಒಂದಲ್ಲಾ ಒಂದು ರೀತಿಯಲ್ಲಿ ಎದುರಾಗುತ್ತಾ

ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿವೆ. ಸಾಹಿತ್ಯವಲಯ ಕೂಡ ಕಥೆ, ಕಾದಂಬರಿ, ನಾಟಕ, ಕಾವ್ಯ, ಸಿನಿಮಾ ಹಾಗೂ ವಿಚಾರ, ವಿಮರ್ಶೆಗಳ ಮೂಲಕ ಗಾಂಧಿ ಮತ್ತು ಅವರ ಸಿದ್ಧಾಂತಗಳ ಪ್ರಸ್ತುತತೆಯನ್ನು ಹಿಡಿದಿಡಲು ಪ್ರಯತ್ನಿಸಿವೆ. ಈ ಪ್ರಯತ್ನ ಗಾಂಧಿ ಮತ್ತು ಅವರ ಚಿಂತನೆಗಳ ಸಾರ್ವಕಾಲಿಕ ಮೌಲ್ಯಗಳನ್ನು ಗುರುತಿಸುವ, ಅವರ ತತ್ವ, ಸಿದ್ಧಾಂತಗಳ ಪುನರ್‌ಪರಿಶೀಲನೆ ಮಾಡುವ, ಅವುಗಳ ಪ್ರಸ್ತುತತೆಗೆ ಸಂಬಂಧಿಸಿದಂತೆ ವಾಗ್ವಾದಗಳನ್ನು ಹುಟ್ಟುಹಾಕುವ ಕೆಲಸ ಮಾಡಿವೆ.

ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ಗಾಂಧಿ ಒಂದಿಲ್ಲೊಂದು ರೀತಿಯಲ್ಲಿ ಪ್ರಸ್ತಾಪವಾಗುತ್ತಾ ಬಂದಿದ್ದಾರೆ. ಕನ್ನಡ ಸಾಹಿತ್ಯವೂ ಇದಕ್ಕೆ ಹೊರತಲ್ಲ. ಆಧುನಿಕ ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಗಾಂಧಿ ಹಾಗೂ ಅವರ ವಿಚಾರಗಳು ಮೇಲಿಂದ ಮೇಲೆ ಪ್ರಸ್ತಾಪವಾಗುತ್ತಾ ಬಂದಿವೆ. ಅದರಲ್ಲೂ ಕಾವ್ಯ ಪ್ರಕಾರದಲ್ಲಿ ಗಾಂಧಿಯನ್ನು ಕುರಿತ ರಚನೆಗಳು ಹೇರಳವಾಗಿವೆ. 'ಗಾಂಧಿ'ಯನ್ನು ಕುರಿತು ಕವಿತೆ ಬರೆಯದ ಕವಿಯೇ ಇಲ್ಲವೇನೋ ಎಂಬಷ್ಟರ ಮಟ್ಟಿಗೆ ಕವಿತೆಗಳು ರಚನೆಗೊಂಡಿವೆ. ಆಧುನಿಕ ಕನ್ನಡ ಕಾವ್ಯ ಗಾಂಧಿಯನ್ನು ಒಬ್ಬ ವ್ಯಕ್ತಿ ಎಂಬುದಕ್ಕಿಂತ ಭಿನ್ನವಾಗಿ ಹಲವು ಮೌಲ್ಯಗಳನ್ನೊಳಗೊಂಡ ಸಂಕೇತರೂಪವಾಗಿ ಕಂಡಿದೆ. ಈ ಸಂಕೇತದೊಂದಿಗೆ ನಡೆಸಲಾದ ಸಂವಾದ-ಸಂಘರ್ಷಗಳ ಸಂಕಥನವನ್ನು ಗಾಂಧಿ ಕುರಿತ ಕವಿತೆಗಳಲ್ಲಿ ಕಾಣಬಹುದು. ನೈತಿಕ ಹಾಗೂ ಮಾನವೀಯ ಮೌಲ್ಯಗಳು ಕಾಣೆಯಾಗುತ್ತಿರುವ ಸನ್ನಿವೇಶದಲ್ಲಿ ಗಾಂಧಿ ಎಂಬ ಮೌಲ್ಯ ಸಂಕೇತದೊಂದಿಗೆ ತಮ್ಮನ್ನೂ, ಸಮಷ್ಟಿಯ ಬದುಕನ್ನೂ ಒರೆಗೆ ಹಚ್ಚಿ ನೋಡಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಈ ಸಾಕ್ಷಿಪ್ರಜ್ಞೆಯ ಮೂಲಕ ಸಮಷ್ಟಿಯ ಎಲ್ಲ ಬಗೆಯ ಅಸಹಾಯಕತೆ, ಅನಾಥತೆ, ಅಪಮಾನ, ನೋವು, ಹತಾಶೆ, ಆಕ್ರೋಶ, ಪಾಪಪ್ರಜ್ಞೆ, ವಿರೋಧ, ವಿಡಂಬನೆಗಳು ಅಭಿವ್ಯಕ್ತಗೊಂಡಿವೆ. ಗಾಂಧಿ ಎಂಬ ಮೌಲ್ಯ ಸಂಕೇತದ ಅನನ್ಯತೆಯನ್ನು ಗುರುತಿಸುವ, ಆ ವ್ಯಕ್ತಿತ್ವದ ಎತ್ತರಕ್ಕೆ ಏರಲಾಗದ ತಮ್ಮ ಮತ್ತು ವ್ಯವಸ್ಥೆಯ ಅಸಹಾಯಕತೆ, ದೌರ್ಬಲ್ಯಗಳನ್ನು ವಿಮರ್ಶಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನವನ್ನು ಕವಿತೆಗಳು ಮಾಡಿವೆ. ಸಮಕಾಲೀನ ಜಗತ್ತಿಗೆ ಬೇಕಾದ ವ್ಯಕ್ತಿತ್ವದ ಚಹರೆಗಳನ್ನು ಗಾಂಧಿಯ ಮೂಲಕ ಹುಡುಕಿಕೊಳ್ಳುವ, ಸಮಕಾಲೀನ ಸಾಂಸ್ಕೃತಿಕ ಸಮಸ್ಯೆಗಳಿಗೆ ಗಾಂಧಿಯಲ್ಲಿ ಉತ್ತರವನ್ನು ಕಂಡುಕೊಳ್ಳುವ ವಿಶಿಷ್ಟ ಪ್ರಯತ್ನಗಳನ್ನು ಕವಿತೆಗಳು ಮಾಡಿವೆ. "ಕನ್ನಡದ ಕವಿಗಳು ಗಾಂಧಿಯನ್ನು ವ್ಯಕ್ತಿಯಾಗಿ ಕಂಡದ್ದಕ್ಕಿಂತ ಹೆಚ್ಚಾಗಿ ಮೌಲ್ಯಗಳ ಸಂಕೇತವಾಗಿ ಕಂಡದ್ದೇ ವಿಶೇಷ. ಅಥವಾ ಸಮಷ್ಟಿಯ ಎಲ್ಲ ಹತಾಶೆ, ನೋವು, ರೊಚ್ಚು, ಪಾಪ-ಪ್ರಜ್ಞೆಗಳಿಗೆ ಗಾಂಧಿ ಒಂದು ಅಭಿವ್ಯಕ್ತಿಯ ಮಾರ್ಗವಾಗಿದ್ದರು ಎನ್ನಬಹುದೇ?"[೧೫] ಈ ಮಾತುಗಳು ಆಧುನಿಕ ಕನ್ನಡ ಕಾವ್ಯ ಗಾಂಧಿಯೊಂದಿಗೆ ನಡೆಸಿರುವ ಅನುಸಂಧಾನವನ್ನು ಗುರುತಿಸುತ್ತವೆ.

ಬದಲಾದ ಕಾಲ ಸನ್ನಿವೇಶಕ್ಕೆ ತಕ್ಕಂತೆ ಗಾಂಧಿಯನ್ನು ನೋಡುವ, ಅರ್ಥೈಸುವ ಕ್ರಮಗಳೂ ನಿರಂತರವಾಗಿ ಬದಲಾಗಿರುವುದನ್ನು ಕಾಣಬಹುದು. ಸ್ವಾತಂತ್ರ್ಯ ಪೂರ್ವದ ಬರಹಗಾರರು ಗಾಂಧಿಯ ಭೌತಿಕ ಹಾಗೂ ಬೌದ್ಧಿಕ ಪ್ರಭಾವಳಿಗೆ ಒಳಗಾದವರು. ಗಾಂಧಿಯ ಆದರ್ಶಗಳಿಗೆ ತಮ್ಮ ಸರ್ವಸ್ವವನ್ನೂ ತೆತ್ತುಕೊಂಡವರು. ಗಾಂಧಿಯ ನಾಯಕತ್ವದ ನೆರಳಿನಲ್ಲಿ ತಮ್ಮ ವ್ಯಕ್ತಿತ್ವವನ್ನು ಕಟ್ಟಿಕೊಳ್ಳಲು, ಆ ಮೂಲಕ ತಮ್ಮ ಬದುಕಿಗೆ ಪರಿಪೂರ್ಣತೆಯನ್ನು ತಂದುಕೊಳ್ಳಲು ಶ್ರಮಿಸಿದವರು. ಹೀಗಾಗಿ ನವೋದಯ ಕಾಲಘಟ್ಟದ ಬರಹಗಾರರಿಗೆ ಗಾಂಧಿ ಆದರ್ಶನಾಯಕನಾಗಿ, ಬಿಡುಗಡೆಯ ನೇತಾರನಾಗಿ, ಸಮಾನತೆಗಾಗಿ ತುಡಿಯುವ ಧನಿಯಾಗಿ ಕಂಡುಬರುತ್ತಾರೆ. ಹಾಗಾಗಿ ನವೋದಯದವರಲ್ಲಿ ಗಾಂಧಿಯನ್ನು ಕುರಿತಂತೆ ಭಕ್ತಿ, ಆರಾಧನಾ

ಮನೋಭಾವವೆ ಮೂರ್ತರೂಪ ಪಡೆದಿದೆ. "ನವೋದಯದವರಿಗೆ ಭಾರತದ ಬಿಡುಗಡೆಯ ರಹದಾರಿಯಾಗಿ, ಭಾರತದ ಪುನರುತ್ಥಾನದ, ಪುನರುಜ್ಜೀವನದ, ಪುನರ್‌ನಿರ್ಮಾಣದ ಹರಿಕಾರನಾಗಿ ಗಾಂಧಿ ಕಂಡರು. ಹೀಗಾಗಿ ನವೋದಯದವರ ಒಟ್ಟು ಬರವಣಿಗೆಯಲ್ಲಿ ಗಾಂಧಿ ಒಂದು ಭಾರತೀಯ ಮೌಲ್ಯದ ರೂಪಕವಾಗಿ ಒಡಮೂಡಿದ್ದಾರೆ. ಜನಾಂಗದ ಎಚ್ಚರವಾಗಿ, ಅರಿವಾಗಿ, ಜಾಗೃತಿಯಾಗಿ ತೋರಿದ್ದಾರೆ"[೧೬] ಈ ಮಾತುಗಳು ನವೋದಯ ಕಾವ್ಯ ಗಾಂಧಿಯನ್ನು ಕಂಡ ಬಗೆಯನ್ನು ಗುರುತಿಸುತ್ತವೆ. ಗಾಂಧಿ ವ್ಯಕ್ತಿತ್ವ ಹಲವು ಕವಿಗಳಿಗೆ ಹಲವು ರೂಪಗಳಲ್ಲಿ ಕಂಡಿದೆ. ಅವರೊಬ್ಬ ಆದರ್ಶ ತಂದೆ, ಗುರು, ಕಾಯುವ ಕಣ್ಣು, ಕಾರಣಪುರುಷ, ಪವಾಡಪುರುಷ, ಯೋಗಿ, ರಾಜ, ಕರುಣಾಮೂರ್ತಿ, ಎಲ್ಲರ ಮೊರೆಗಳನ್ನಾಲಿಸುವ ದೈವ, ಸಂತ, ಹೀಗೆ ಗಾಂಧಿ ಎಂಬ ವ್ಯಕ್ತಿತ್ವದಲ್ಲಿನ ಹಲವು ಮುಖಗಳನ್ನು, ಹಲವು ಸ್ವಭಾವಗಳನ್ನು ನವೋದಯ ಕವಿಗಳು ಗುರುತಿಸಿದ್ದಾರೆ.

ಸ್ವಾತಂತ್ರ್ಯ ನಂತರದ ಕವಿತೆಗಳು ಗಾಂಧಿ ಮತ್ತು ಅವರ ಚಿಂತನೆಗಳನ್ನು ಭಿನ್ನ ಧ್ವನಿಗಳ ಮೂಲಕ ಎದುರುಗೊಂಡಿವೆಯಾದರೂ, ಗಾಂಧಿ ಚಿಂತನೆಗಳಿಗಿಂತ ಸಮಕಾಲೀನ ಸಮಸ್ಯೆ, ಬಿಕ್ಕಟ್ಟುಗಳೇ ಇಲ್ಲಿ ಮುಖ್ಯವಾಗಿವೆ. ಗಾಂಧಿ ವ್ಯಕ್ತಿತ್ವದ ಹಿರಿಮೆಯನ್ನು ಗುರುತಿಸುವ ಪ್ರಯತ್ನದಲ್ಲಿ ಕವಿಗಳು ಅತ್ಯಂತ ಉತ್ಸಾಹ ಮತ್ತು ಕುತೂಹಲಿಗಳಾಗಿರುವುದನ್ನು ಕಾಣಬಹುದು. ಆ ವ್ಯಕ್ತಿತ್ವದ ಎದುರಿಗೆ ಸ್ವ ಮತ್ತು ಸಮಷ್ಠಿಯ ಆತ್ಮವಿಮರ್ಶೆಯಲ್ಲಿ ತೊಡಗಿವೆ. ಗಾಂಧಿ ಹತ್ಯೆಯ ಘಟನೆಗೆ ತೀವ್ರವಾಗಿ ಪ್ರತಿಕ್ರಿಯಿಸುವ ಪ್ರಯತ್ನಮಾಡಿವೆ. ಗಾಂಧಿ ಹತ್ಯೆ ಜನರ ಮನಸ್ಸಿನಲ್ಲಿ ಹಲವು ದ್ವಂದ್ವ, ಗೊಂದಲ, ಗುಮಾನಿಗಳನ್ನು ಹುಟ್ಟುಹಾಕಿದೆ. ಆದರೆ ಕನ್ನಡ ಕಾವ್ಯ ಗಾಂಧಿ ಹತ್ಯೆಯನ್ನು ಕಟುವಾಗಿ ಟೀಕಿಸುವುದರೊಂದಿಗೆ ಇದನ್ನು ಪ್ರಜಾಪ್ರಭುತ್ವದ ಮೇಲಿನ ಹಲ್ಲೆ, ಮಾನವೀಯ ಮೌಲ್ಯಗಳ ಅಧಃಪತನ ಎಂದು ಗುರುತಿಸಿದೆ. ನವ್ಯ ಕವಿತೆಗಳು ಗಾಂಧಿಯನ್ನು ಸಮಕಾಲೀನ ರಾಜಕೀಯ ಪರಿಸ್ಥಿತಿಯನ್ನು ವಿಡಂಬಿಸುವ, ರಾಜಕೀಯ ವಿದ್ಯಮಾನಗಳನ್ನು ಅಪಹಾಸ್ಯಮಾಡುವ, ಸಾಮಾಜಿಕ ಓರೆ ಕೋರೆಗಳನ್ನು ಪ್ರತಿರೋಧಿಸುವ ಶಕ್ತಿಯ ಸಾಂಕೇತಿಕ ರೂಪವಾಗಿ ಕಂಡಿವೆ. ಅನಂತರದ ಕವಿತೆಗಳಲ್ಲಿ ಗಾಂಧಿ ಜಾಗತೀಕರಣ, ನವವಸಾಹತುಶಾಹಿ, ಬಂಡವಾಳಶಾಹಿ ವ್ಯವಸ್ಥೆಗೆ ಪ್ರತಿರೋಧವನ್ನು ಒಡ್ಡುವ, ಅವುಗಳನ್ನು ವಿರೋಧಿಸುವ ಪ್ರಜ್ಞೆಯಾಗಿ ಮೂಡಿಬಂದಿದ್ದಾರೆ. "ನವೋದಯದವರು ಗಾಂಧೀಜಿಯನ್ನು ಹತ್ತಿರದಿಂದ ಕಂಡವರು. ಈ 'ಭೌತಿಕ' ಸ್ಪರ್ಶದಿಂದಾಗಿ ಈ ಕಾಲದ ಕವಿಗಳು ಗಾಂಧೀಜಿಯನ್ನು ಪ್ರಾಮಾಣಿಕವಾದ ಭಾವಾತಿರೇಕದಿಂದ ಚಿತ್ರಿಸಿದ್ದು ಸಹಜ. ಅಂದಿನ ನಾಯಕ ಗಡಣದಲ್ಲಿ ಕಾವ್ಯಕ್ಕೆ ವಸ್ತುವಾಗಬಲ್ಲವರು ಗಾಂಧೀಜಿ ಒಬ್ಬರೇ ಎಂಬುದೇ ಗಾಂಧೀಜಿಯ ವೈಶಿಷ್ಟ್ಯ ೧೯೪೮ರ ಗಾಂಧೀಜಿಯ ಕೊಲೆ ದೇಶದ ಬದುಕಿಗೆ ಒದಗಿದ ಒಂದು ರುದ್ರ- ನಾಟಕೀಯ ತಿರುವು. ಅಲ್ಲಿಯವರೆಗೆ 'ಗಾಂಧಿ ಅಂದರೆ ಇಂಡಿಯಾ' ಎಂಬಂತಿದ್ದ ಸಮೀಕರಣದ ಸೂತ್ರ ಹರಿದು ಹೋಗಿ 'ಗಾಂಧಿ ಮತ್ತು 'ಇಂಡಿಯಾ' ನಡುವಿನ ಅಂತರ ಹೆಚ್ಚಾಗುತ್ತಲೇ ಹೋಯಿತು. ಗಾಂಧಿ ನಂಬಿದ ಮೌಲ್ಯಗಳೆಲ್ಲ ಎಮರ್ಜೆನ್ಸಿಯಲ್ಲಿ ಅದೇ ಹೆಸರಿನ ಮತ್ತೊಬ್ಬ ವ್ಯಕ್ತಿಯಿಂದ ಧ್ವಂಸಗೊಂಡಾಗ ಗಾಂಧಿ ಆ ತುದಿಯಲ್ಲಿ ಮೌನವಾಗಿ ರೋಧಿಸುತ್ತಿದ್ದ ವ್ಯಂಗ್ಯಮೂರ್ತಿಯಾಗಿಯೇ ಕನ್ನಡದ ಕವಿಗಳಿಗೆ ಕಂಡರು."[೧೭] ಕನ್ನಡದ ಪ್ರಜ್ಞೆ ಗಾಂಧಿಯನ್ನು ಗ್ರಹಿಸಿರುವ, ಬಳಸಿಕೊಂಡಿರುವ ವಿಶಿಷ್ಟತೆಯನ್ನು ಈ ಮಾತುಗಳು ಗುರುತಿಸುತ್ತವೆ. ಕನ್ನಡ ಕಾವ್ಯ ಗಾಂಧಿ ವ್ಯಕ್ತಿತ್ವವನ್ನು ಶೋಧನೆಗೆ ಒಳಪಡಿಸಿರುವ ನೆಲೆಗಳನ್ನು ಮುಂದಿನಂತೆ ವಿಶ್ಲೇಷಿಸಲಾಗಿದೆ.

## ೬.೨.೧ ಗಾಂಧಿ ವ್ಯಕ್ತಿತ್ವದ ಅನನ್ಯತೆಯ ಶೋಧ : ಅದ್ವಿತೀಯ ಆದರ್ಶವಾಗಿ

ಆಧುನಿಕ ಕನ್ನಡ ಕಾವ್ಯ ಗಾಂಧಿ ವ್ಯಕ್ತಿತ್ವವನ್ನು ಗ್ರಹಿಸುವಲ್ಲಿ ಮುಖ್ಯವಾಗಿ ಎರಡು ನೆಲೆಗಳನ್ನು ಅನುಸರಿಸಿದೆ. ಒಂದು ವಿಸ್ಮಯದ ನೆಲೆಯಾದರೆ, ಇನ್ನೊಂದು ಸಂಘರ್ಷದ ನೆಲೆ.

**೧.ವಿಸ್ಮಯದ ನೆಲೆ** : ಗಾಂಧಿಯ ಪವಾಡ ಸದೃಶ ಹಾಗೂ ದೈವ ಸದೃಶ ವ್ಯಕ್ತಿತ್ವದ ಬಗೆಗಿನ ಬೆರಗು ವಿಸ್ಮಯಗಳು ಅವರನ್ನು ಹಲವು ಮೌಲ್ಯಗಳ ಸಂಕೇತರೂಪವಾಗಿ ಗ್ರಹಿಸುವಂತೆ ಮಾಡಿವೆ. ಗಾಂಧಿಯನ್ನು ಕುಂದಿಲ್ಲದ ಪರಿಪೂರ್ಣ ವ್ಯಕ್ತಿತ್ವವಾಗಿ, ಹಲವು ಮಾನವೀಯ, ದೈವೀ ಶಕ್ತಿಗಳ ಸಂಚಯರೂಪವಾಗಿ ಹಲವು ಕವಿತೆಗಳು ಚಿತ್ರಿಸಿವೆ. ಆ ಎತ್ತರದ ವ್ಯಕ್ತಿತ್ವವನ್ನು ಹೊಗಳುವ, ಕೀರ್ತಿಸುವ, ವ್ಯಕ್ತಿತ್ವದ ಹಲವು ಉನ್ನತ ಗುಣಗಳನ್ನು ಗುರುತಿಸುವ ಮೂಲಕ ಗಾಂಧಿ ವ್ಯಕ್ತಿತ್ವದ ಶ್ರೇಷ್ಠತೆಯನ್ನು, ಪ್ರಸ್ತುತತೆಯನ್ನು ಸಾಬೀತುಪಡಿಸುವ ಕೆಲಸಮಾಡಿವೆ. 'ಸ್ತುತಿ' ಇಂತಹ ಕವನಗಳ ಪ್ರಧಾನ ಗುಣವಾಗಿದ್ದರೂ ಗಾಂಧಿಯಂಥ ವಿಸ್ಮಯದ ವ್ಯಕ್ತಿತ್ವವನ್ನು ಗ್ರಹಿಸುವಲ್ಲಿ ಅದು ಅನಿವಾರ್ಯ ದಾರಿಯಾಗಿಯೂ ಕಂಡುಬಂದಿದೆ. ಹಾಗಾಗಿ ಹೆಚ್ಚಿನ ಕವಿತೆಗಳು ಗಾಂಧಿ ವ್ಯಕ್ತಿತ್ವವನ್ನು ಉದಾತ್ತ, ಪರಿಪೂರ್ಣ ವ್ಯಕ್ತಿತ್ವವಾಗಿಯೇ ಚಿತ್ರಿಸಲು ಪ್ರಯತ್ನಿಸಿವೆ. ಗಾಂಧಿ ವ್ಯಕ್ತಿತ್ವದ ಬಗೆಗೆ ಪ್ರಶ್ನೆ, ಅನುಮಾನ, ಸಂಘರ್ಷಗಳು ಕಂಡುಬರುವುದಿಲ್ಲ ಎಂದಲ್ಲ, ಅವುಗಳ ಪ್ರಮಾಣ ತೀರಾ ವಿರಳ. ಹೆಚ್ಚಿನ ಕವನಗಳಲ್ಲಿ ಗಾಂಧಿಯನ್ನು ಅವತಾರ ಪುರುಷನನ್ನಾಗಿ, ಸಂತನನ್ನಾಗಿ, ದೈವ ಸ್ವರೂಪವಾಗಿ ಕಾಣಲಾಗಿದೆ. ಗಾಂಧಿ ವ್ಯಕ್ತಿತ್ವವನ್ನು ನೆನೆಯುವುದು, ಹೊಗಳುವುದು ಪುಣ್ಯ ಹಾಗೂ ಸಾರ್ಥಕತೆಯ ಕಾಯಕವೆಂಬ ಭಾವ ಇಲ್ಲಿನ ಅಭಿವ್ಯಕ್ತಿಗಳ ಹಿಂದೆ ಕೆಲಸಮಾಡಿದೆ. ಇದಕ್ಕೆ ಗಾಂಧಿ ವ್ಯಕ್ತಿತ್ವದ ನೇರ ಪ್ರಭಾವವೇ ಕಾರಣ. ಏಕೆಂದರೆ ಇಂತಹ ಬಹುತೇಕ ಕವಿತೆಗಳನ್ನು ಬರೆದವರು ನವೋದಯ ಕಾಲಘಟ್ಟಕ್ಕೆ ಸೇರಿದ ಕವಿಗಳು. ಗಾಂಧಿಯೊಂದಿಗೆ ಒಡನಾಡಿದವರು. ಗಾಂಧಿ ಪ್ರಭಾವಕ್ಕೆ ಒಳಗಾಗಿ ಸ್ವಾತಂತ್ರ ಚಳುವಳಿಯಲ್ಲಿ ಪಾಲ್ಗೊಂಡವರು. ಗಾಂಧಿಯನ್ನು ವಿಸ್ಮಯ, ಬೆರಗುಗಳಿಂದ ಕಂಡವರು. ಹಾಗಾಗಿ ಈ ಕಾಲದ ಕವಿಗಳು ಗಾಂಧೀಜಿಯ ವ್ಯಕ್ತಿತ್ವವನ್ನು ಭಾವಾತಿರೇಕದಿಂದ ಚಿತ್ರಿಸಿದ್ದಾರೆ. ತಮ್ಮ ನಡುವೆಯೇ ಬದುಕಿದ್ದ ಮನುಷ್ಯನೊಬ್ಬ ಮಹಾತ್ಮನಾಗಿ ರೂಪಾಂತರ ಹೊಂದಿದ್ದು, ನಂಬಲಸಾಧ್ಯವಾದ, ಪವಾಡಸದೃಶ ಕಾರ್ಯಗಳನ್ನು ಮಾಡಿದ್ದು ಕವಿಗಳ ವಿಸ್ಮಯಕ್ಕೆ ಕಾರಣವಾಗಿದೆ. ಹಾಗಾಗಿ ಗಾಂಧಿ ವ್ಯಕ್ತಿತ್ವವನ್ನು ಅತಿಯಾದ ಭಕ್ತಿ, ಭಾವಾತಿರೇಕ, ಧನ್ಯತೆಯ ನೆಲೆಯಲ್ಲಿ ಚಿತ್ರಿಸಿದ್ದಾರೆ. ಇಂತಹ ರಚನೆಗಳು ಗಾಂಧಿ ವ್ಯಕ್ತಿತ್ವದ ಹಲವು ಮುಖಗಳನ್ನು, ಅನನ್ಯತೆಯನ್ನು, ಪ್ರಸ್ತುತತೆಯನ್ನು ಕಟ್ಟಿಕೊಡುವ ಪ್ರಾಮಾಣಿಕ ಪ್ರಯತ್ನವನ್ನು ಮಾಡುತ್ತವೆಯಾದರೂ ಅವರ ಬಗೆಗಿನ ಧನ್ಯತಾಭಾವ, ಭಕ್ತಿ, ಶರಣಾಗತಿಯ ಭಾವಗಳು ಅವರ ವ್ಯಕ್ತಿತ್ವವನ್ನು ಒಪ್ಪಿತ ಹಾಗೂ ಪರಿಪೂರ್ಣತೆಯ ನೆಲೆಯಲ್ಲಿಯೇ ಗ್ರಹಿಸುವಂತೆ ಮಾಡಿವೆ. ಇವು ಗಾಂಧಿ ವ್ಯಕ್ತಿತ್ವವನ್ನು ಹಲವು ನೆಲೆಗಳಿಂದ, ಪ್ರಶ್ನೆ, ಅನುಮಾನ, ಜಗಳಗಳ ಮೂಲಕ ಎದುರಾಗುವುದಿಲ್ಲ. ಹೀಗೆ ಮಾಡುವುದು ಅವರಿಗೆ ಅಗೌರವ ಸಲ್ಲಿಸಿದಂತೆ ಏನೂ ಅಲ್ಲ. ಏಕೆಂದರೆ ಬದಲಾದ ಕಾಲ, ಚಿಂತನೆ, ಬದುಕಿನ ಬಿಕ್ಕಟ್ಟುಗಳೊಂದಿಗೆ ಗಾಂಧಿ ವ್ಯಕ್ತಿತ್ವವನ್ನು ಮುಖಾಮುಖಿಯಾಗಿಸುವ ಮೂಲಕ ಅರ್ಥಮಾಡಿಕೊಂಡಾಗ ಮಾತ್ರ ಗಾಂಧಿ ವ್ಯಕ್ತಿತ್ವ, ಚಿಂತನೆಗಳ ಅರ್ಥವ್ಯಾಪ್ತಿ, ಪ್ರಸ್ತುತತೆಗಳು ಗೋಚರವಾಗುತ್ತವೆ. ಈ ದೃಷ್ಟಿಯಿಂದ ನೋಡಿದಾಗ 'ವಿಸ್ಮಯದ ನೆಲೆ'ಯ ರಚನೆಗಳು ವ್ಯಕ್ತಿತ್ವ ಶೋಧನೆಯ ಪರಿಪೂರ್ಣ ಮಾದರಿಗಳಾಗಲಾರವು. ಇಂತಹ ಕವಿತೆಗಳು ಗಾಂಧಿ ವ್ಯಕ್ತಿತ್ವವನ್ನು 'ಭಾವುಕ' ಮತ್ತು 'ಭಕ್ತಿ'ಯ ನೆಲೆಯಲ್ಲಿ

ಮಾತ್ರ ನೋಡಲು ಪ್ರಯತ್ನಿಸುವುದರಿಂದ ಗಾಂಧಿ ವ್ಯಕ್ತಿತ್ವವನ್ನು ಸರಿಯಾಗಿ ಗ್ರಹಿಸುವಲ್ಲಿ ಇವು ವಿಫಲವಾಗಿವೆ ಎಂದೆನಿಸುತ್ತದೆ.

೨. **ಸಂಘರ್ಷದ ನೆಲೆ** : ನವ್ಯ ಮತ್ತು ದಲಿತ ಬಂಡಾಯ ಸಂದರ್ಭದ ಕವಿತೆಗಳು ಗಾಂಧೀ ವ್ಯಕ್ತಿತ್ವವನ್ನು ಗ್ರಹಿಸುವಲ್ಲಿ ಭಕ್ತಿ ಮತ್ತು ಭಾವುಕ ನೆಲೆಯನ್ನು ಮೀರಿ ಆ ವ್ಯಕ್ತಿತ್ವವನ್ನು ಪ್ರಶ್ನಿಸುವ, ಅನುಮಾನಿಸುವ, ಸಂಘರ್ಷಕ್ಕಿಳಿಯುವ ಮೂಲಕ ಅರಿಯುವ ಪ್ರಯತ್ನಮಾಡಿವೆ. ಇದು ಗಾಂಧಿಯನ್ನು ಅರಿಯುವ ವಿಶಿಷ್ಟ ಪ್ರಯತ್ನವಾಗಿ ಕಂಡುಬಂದರೂ ಹೆಚ್ಚಿನ ಕವಿತೆಗಳು ಎತ್ತುವ ಪ್ರಶ್ನೆ, ಅನುಮಾನಗಳು ಗಾಂಧಿ ವ್ಯಕ್ತಿತ್ವ ಚಿಂತನೆಗಳ ಬಗ್ಗೆ ಎನ್ನುವುದಕ್ಕಿಂತ ಸಮಕಾಲೀನ ಸಾಮಾಜಿಕ, ರಾಜಕೀಯ ವ್ಯವಸ್ಥೆ ಹಾಗೂ ಮನುಷ್ಯ ವರ್ತನೆಗಳನ್ನು ಕುರಿತಂತೆಯೇ ಆಗಿವೆ. ಆದರೆ ಇವೂ ಕೂಡ ಗಾಂಧಿ ವ್ಯಕ್ತಿತ್ವವನ್ನು ತಮ್ಮ ಕಾಲದ ಪ್ರಶ್ನೆ, ಸಂದೇಹ, ವಿರೋಧಗಳೊಂದಿಗೆ ಅರಿಯುವಲ್ಲಿ ವಿಫಲವಾಗಿವೆ. ಆ ಶ್ರೇಷ್ಠ ವ್ಯಕ್ತಿತ್ವದ ಬೆಳಕಿನಲ್ಲಿ ತಮ್ಮನ್ನು, ಸಮಾಜವನ್ನು ಪ್ರಾಮಾಣಿಕವಾಗಿ ಶೋಧಿಸಿಕೊಳ್ಳುವ ಮೂಲಕ ಗಾಂಧಿ ವ್ಯಕ್ತಿತ್ವದ ಶ್ರೇಷ್ಠತೆಯನ್ನು ಗುರುತಿಸುವ ಪ್ರಯತ್ನವನ್ನಷ್ಟೇ ಮಾಡುತ್ತವೆ. ಗಾಂಧಿ ಎಂಬ ಮೌಲ್ಯ ಸಂಕೇತದೊಂದಿಗೆ ವ್ಯವಸ್ಥೆಯ ಬಗೆಗಿನ ತಮ್ಮೆಲ್ಲಾ ನೋವು, ಹತಾಶೆಗಳನ್ನು ನಿವೇದಿಸಿಕೊಳ್ಳುವ, ಅಸಮಧಾನ, ಆಕ್ರೋಶ, ಪ್ರತಿರೋಧಗಳನ್ನು ಹೊರಹಾಕುವ ವಿಶಿಷ್ಟ ಪ್ರಯತ್ನವನ್ನು ಮಾಡಿವೆ. ಇವೂ ಕೂಡ ವ್ಯಕ್ತಿತ್ವಗಳನ್ನು ಗ್ರಹಿಸುವ ವಿಶಿಷ್ಟ ಕ್ರಮಗಳೇ ಆಗಿವೆ. ಸಮಕಾಲೀನ ಸಾಂಸ್ಕೃತಿಕ ಸವಾಲು ಸಂಧಿಗ್ಧತೆಗಳ ನಡುವೆ ಗಾಂಧಿ ವ್ಯಕ್ತಿತ್ವವನ್ನೂ, ವರ್ತಮಾನದ ಬದುಕಿನ ನಡೆಯನ್ನೂ ಒಟ್ಟಿಗೆ ಗ್ರಹಿಸುವ ಪ್ರಯತ್ನಗಳಾಗಿ ಇವು ಮಹತ್ವದ ರಚನೆಗಳಾಗಿವೆ. ಆದರೂ ಈ ಬಗೆಯ ರಚನೆಗಳೂ ಕೂಡ 'ವಿಸ್ಮಯದ ನೆಲೆಯ' ರಚನೆಗಳಂತೆಯೇ ಗಾಂಧಿ ವ್ಯಕ್ತಿತ್ವವನ್ನು ಅದರ ಎಲ್ಲಾ ಸಂಕೀರ್ಣತೆಯ ನಡುವೆ ಅರಿಯುವಲ್ಲಿ ವಿಫಲವಾಗಿವೆ. ಗಾಂಧಿ ವ್ಯಕ್ತಿತ್ವವನ್ನು ಶ್ರೇಷ್ಠತೆಯ ನೆಲೆಯಲ್ಲಿಯೇ ಗ್ರಹಿಸಲು ಪ್ರಯತ್ನಿಸಿವೆ. ಹಾಗಾಗಿ ಇಂತಹ ಕವಿತೆಗಳೂ ಕೂಡ ಗಾಂಧಿ ವ್ಯಕ್ತಿತ್ವವನ್ನು ಸಮಕಾಲೀನ ಪ್ರಶ್ನೆ, ಅನಿವಾರ್ಯಗಳಿಗೆ ತಕ್ಕಂತೆ ಅರಿಯುವ ಮತ್ತು ಕಟ್ಟಿಕೊಡುವಲ್ಲಿ ಸೋತಿವೆ ಎಂದೇ ಹೇಳಬೇಕು.

ಈ ಎರಡೂ ಬಗೆಯ ಶೋಧನೆಯ ಕ್ರಮಗಳು ಅವುಗಳ ಯಶಸ್ಸಿನ ನಡುವೆಯೂ ಗಾಂಧಿಯನ್ನು ಭಾವುಕ ಮನಸ್ಥಿತಿಯಲ್ಲಿ ಕೇವಲ ಪಾವಿತ್ರೀಕರಿಸಿದ ನೆಲೆಯಲ್ಲಿ ಮಾತ್ರ ನೋಡಿವೆ ಎಂದೇ ಹೇಳಬೇಕಾಗುತ್ತದೆ. ಸಮಕಾಲೀನ ಸಂದರ್ಭದಲ್ಲಿ 'ಒಪ್ಪಿತ' ಮತ್ತು 'ಅನುಮಾನ' ಈ ಎರಡೂ ನೆಲೆಗಳಲ್ಲಿ ಗಂಭೀರ ವಿಮರ್ಶೆ–ಚರ್ಚೆಗೆ ಒಳಗಾಗುತ್ತಿರುವ ಗಾಂಧಿ ವ್ಯಕ್ತಿತ್ವ ಕವಿತೆಗಳ ಸಂದರ್ಭದಲ್ಲಿ ಪ್ರಶ್ನಾತೀತ ವ್ಯಕ್ತಿತ್ವವಾಗಿ ಚಿತ್ರಿಸಲ್ಪಟ್ಟಿದೆ. ಇದು ಕವಿತೆಗಳ ವ್ಯಕ್ತಿತ್ವ ಶೋಧ ಕ್ರಮದ ಮಿತಿಯನ್ನು ತಿಳಿಸುತ್ತದೆ. ಕವಿತೆಗಳು ಗಾಂಧಿಯನ್ನು ಪ್ರಶ್ನಿಸುವುದು, ಅನುಮಾನಿಸುವುದು ಗಾಂಧಿ ವ್ಯಕ್ತಿತ್ವಕ್ಕೆ ಎಸಗುವ ಅಪಚಾರವೆಂದು ಭಾವಿಸಿದಂತೆ ಕಾಣುತ್ತದೆ. ಇದಕ್ಕೆ ಗಾಂಧಿ ವ್ಯಕ್ತಿತ್ವದ ಪ್ರಭಾವ ಎಷ್ಟು ಕಾರಣವೋ, ಅಷ್ಟೇ ನಮ್ಮ ಪರಂಪರೆಯ, ವ್ಯಕ್ತಿತ್ವಗಳನ್ನು ಗ್ರಹಿಸಿಕೊಳ್ಳಬೇಕಾದ ಮನಸ್ಥಿತಿಯನ್ನು ನಿಯಂತ್ರಿಸುತ್ತಿರುವ ಸಾಮಾಜಿಕ, ರಾಜಕೀಯ ವ್ಯವಸ್ಥೆಗಳೂ ಕಾರಣ. ವ್ಯಕ್ತಿತ್ವಗಳನ್ನು ಆರಾಧನೆ ಮತ್ತು ಭಾವುಕತೆಗಳನ್ನು ಮೀರಿ ಗ್ರಹಿಸಬಹುದಾದ ಮನಸ್ಥಿತಿಗಳು ಇನ್ನೂ ರೂಪುಗೊಂಡಿಲ್ಲದಿರುವುದನ್ನು ಈ ಬಗೆಯ ರಚನೆಗಳು ಧ್ವನಿಸುತ್ತವೆ. ಆದರೂ ಅತ್ಯಂತ ಪ್ರಭಾವೀ ವ್ಯಕ್ತಿತ್ವವೊಂದನ್ನು ಮುಕ್ತವಾಗಿ ಅರಿಯಬಹುದಾದ ಮನಸ್ಥಿತಿಯನ್ನು ನಿಯಂತ್ರಿಸುತ್ತಿರುವ, ಭಾವುಕ ನೆಲೆಯಲ್ಲೇ ನೋಡುವುದನ್ನು ನಿರ್ದೇಶಿಸುತ್ತಿರುವ, ನಮ್ಮ

ಸಾಮಾಜಿಕ ವ್ಯವಸ್ಥೆಯ ಸ್ವರೂಪವನ್ನು ಅರಿಯುವ ದೃಷ್ಟಿಯಿಂದ ಇವು ಮಹತ್ವದವುಗಳೆನಿಸುತ್ತವೆ. ಈ ಮನಸ್ಥಿತಿಯೇ ಕಾರಣವಾಗಿ ಗಾಂಧಿಯಂತ ವ್ಯಕ್ತಿತ್ವವನ್ನು ಕೇವಲ ಪೂಜ್ಯತೆಯ ನೆಲೆಯಲ್ಲಿಯೇ ನೋಡಲಾಗಿದೆ. ಒಂದು ವ್ಯಕ್ತಿತ್ವವನ್ನು ಅದರೆಲ್ಲಾ ಶಕ್ತಿ, ದೌರ್ಬಲ್ಯಗಳ ನಡುವೆ ಅರಿಯುವ ಅಪೂರ್ವ ಅವಕಾಶಗಳನ್ನು ಇವು ಬಳಸಿಕೊಂಡಿಲ್ಲವೆಂದೇ ಹೇಳಬೇಕು. ಈ ನಿಟ್ಟಿನಲ್ಲಿ ಗಾಂಧೀಜಿಯ ವ್ಯಕ್ತಿತ್ವವನ್ನು ಅರಿಯಬಹುದಾದ ಮಾರ್ಗಗಳನ್ನು ಕುರಿತ ಯು.ಆರ್. ಅನಂತಮೂರ್ತಿಯವರ ಅಭಿಪ್ರಾಯ ಇಲ್ಲಿ ಉಲ್ಲೇಖಾರ್ಹವಾದುದಾಗಿದೆ. "ನಮ್ಮ ದೇಶದ ಅತ್ಯುತ್ತಮ ಚಿಂತಕ ಗಾಂಧಿಯೆ ಹೊರತು ಬೇರಾರೂ ಅಲ್ಲ. ಆದಾಗ್ಯೂ ನನಗೆ ಅವರ ಜೊತೆ ಅನೇಕ ಭಿನ್ನಾಭಿಪ್ರಾಯಗಳೂ ಉಂಟು. ಜಗಳವಾಡಿಯೇ ಪರಿಹರಿಸಿಕೊಳ್ಳಬೇಕಾದ ವಿಷಯಗಳೂ ಉಂಟು. ಆದ್ದರಿಂದಲೇ ಕಟ್ಟಾ ಗಾಂಧಿವಾದಿಗಳನ್ನು ಕಂಡಾಗ ಅವರೆಲ್ಲ ಶಠರು ಹಾಗೂ ಸತ್ವಹೀನರು ಎಂದು ನನಗನಿಸತೊಡಗುತ್ತದೆ. ಗಾಂಧಿಯನ್ನೂ, ಗಾಂಧಿವಾದವನ್ನೂ ಪ್ರಶ್ನಾತೀತವಾಗಿ ಪವಿತ್ರೀಕರಿಸಿಬಿಡುತ್ತಾರೆ. ಅಂಥ ಪೆದ್ದರು. ನಿಜದ ನೆಲೆ – ಬೆಲೆ ತಿಳಿದುಬರುವುದೇ ನಿರಂತರ ಅನ್ವೇಷಣೆಯ ಮೂಲಕ. ಅನುಮಾನ, ಪ್ರಶ್ನೆ, ಜಗಳಗಳ ಮೂಲಕ ಎಂಬುದನ್ನೇ ಮರೆತುಬಿಡುತ್ತಾರವರು. ಹಾಗಾಗಿ ಜಗತ್ತಿನ ಸಮಸ್ಯೆಗಳಿಗೆಲ್ಲ ಬಹುಶಃ ಗಾಂಧೀಜಿ ಕಂಡು ಕಾಣಿಸಿದ ಉತ್ತರಗಳೆ ಅಂತಿಮವಾದವು ಎನ್ನುವ ಪ್ರಜ್ಞಾಸ್ಥರದ ಅರಿವು ಒಂದೆಡೆ ಹಾಗೂ ಅವರ ಮಾರ್ಗವನ್ನು ಅನುಸರಿಸುವುದು ಪ್ರಾಯೋಗಿಕವಾಗಿ ದುಸ್ಸಾಧ್ಯವಾದುದು ಎಂಬ ಕೊರಗು ಇನ್ನೊಂಡೆದೆ – ಇವೆರಡರ ಸಂಧಿ ಬಿಂದುವನ್ನು ನಮ್ಮ ನಮ್ಮ ಮಟ್ಟದಲ್ಲಿ ಪ್ರಾಮಾಣಿಕವಾಗಿ ಹುಡುಕಿಕೊಳ್ಳುವುದೇ ಇಂದು ನಮ್ಮೆದುರಿರುವ ಬಹುಮುಖ್ಯವಾದೊಂದು ಸವಾಲು ಎಂದು ನನ್ನ ಅನಿಸಿಕೆ"[೧೮] ಈ ಮಾತುಗಳು ಗಾಂಧಿಯನ್ನೂ ಒಳಗೊಂಡಂತೆ ಎಲ್ಲಾ ಶ್ರೇಷ್ಠ ವ್ಯಕ್ತಿತ್ವಗಳನ್ನು ಸರಿಯಾಗಿ ಗ್ರಹಿಸಬೇಕಾದ ಮಾರ್ಗದ ಕಡೆಗೆ ಗಮನಸೆಳೆಯುತ್ತವೆ. ವ್ಯಕ್ತಿತ್ವವನ್ನು ಭಾವುಕವಾಗಿ ಗ್ರಹಿಸುವುದರ ಮಿತಿ ಮತ್ತು ಅಪಾಯಗಳನ್ನು ಗುರುತಿಸುತ್ತಲೇ ನಿಜವಾಗಿ ಗ್ರಹಿಸಬೇಕಾದ ನೆಲೆಗಳನ್ನು, ಅದರಿಂದ ತಮಗೆ ಮತ್ತು ದೇಶಕ್ಕೆ ಆಗುವ ಲಾಭಗಳನ್ನು ಈ ಅಭಿಪ್ರಾಯಗಳು ಧ್ವನಿಸುತ್ತವೆ.

ಕನ್ನಡ ಕವಿಗಳು ಗಾಂಧಿ ವ್ಯಕ್ತಿತ್ವವನ್ನು ಹಲವು ಮಾನವೀಯ ಮೌಲ್ಯಗಳ ಮೊತ್ತವಾಗಿಯೂ, ಸಮಾಜದ ಒಳಿತಿಗಾಗಿ ಸದಾ ತುಡಿಯುವ ಮಾತೃರೂಪಿಯಾಗಿಯೂ, ನೊಂದವರ, ಸಂಕಷ್ಟದಲ್ಲಿರುವವರ, ತಬ್ಬಲಿಗಳ ಪರವಾದ ಗಟ್ಟಿದನಿಯಾಗಿಯೂ, ಶ್ರೇಷ್ಠ ಸಂತನನ್ನಾಗಿಯೂ ಕಂಡು ಚಿತ್ರಿಸಿದ್ದಾರೆ. ಗಾಂಧಿ ಎಂಬುವ ಒಂದು ಶಕ್ತಿ, ಹೆಸರು ಇಂದಿಗೂ ನಮ್ಮ ಸಮಾಜವನ್ನು ಮುನ್ನಡೆಸುತ್ತಿದೆ ಎಂಬ ಗಾಢವಾದ ನಂಬಿಕೆ ಕವಿಗಳಿಗಿದೆ. ಹಾಗಾಗಿ ಕನ್ನಡ ಕಾವ್ಯ ಗಾಂಧಿ ವ್ಯಕ್ತಿತ್ವವನ್ನು ಹಲವು ಉನ್ನತ ಮೌಲ್ಯಗಳ ಸಂಕೇತ ರೂಪವಾಗಿ ಹಾಗೂ ಅದ್ವಿತೀಯ ಆದರ್ಶವಾಗಿ ಕಟ್ಟಿಕೊಡಲು ಪ್ರಯತ್ನಿಸಿದೆ. ಇದನ್ನು ಕೆಲವು ಮುಖ್ಯ ಕವಿತೆಗಳ ಮೂಲಕ ವಿಶ್ಲೇಷಿಸಲಾಗಿದೆ.

ಗಾಂಧಿಯನ್ನು ಸಾರ್ಥಕವಾಗಿ ಬದುಕಿದ ಒಬ್ಬ ಸಂತನನ್ನಾಗಿ, ತನ್ನ ಬದುಕಿನ ಮೂಲಕವೇ ಶ್ರೇಷ್ಠ ಸಾಧುವೆನಿಸಿ, 'ದೈವಸಂಪನ್ಮಾರ್ಗದರ್ಶಕ'ನಾಗಿ ಕೀರ್ತಿಪಡೆದವನೆಂದು, ತನ್ನ ಬದುಕನ್ನೆ ಪ್ರಯೋಗಕ್ಕೊಡ್ಡಿಕೊಂಡು ಸಂತನಾಗಿ ಬದುಕಿದ ಬಹುದೊಡ್ಡ ಸಾಧಕನೆಂದು ಡಿ.ವಿ.ಜಿ. ವರ್ಣಿಸುತ್ತಾರೆ.

ಇಂದ್ರಿಯಂಗಳ ಜಯಿಸಿ ಚಿತ್ತಶುದ್ಧಿಯ ಬಯಸಿ
ಲೋಭಮಂ ತ್ಯಜಿಸಿ ರೋಷವ ವರ್ಜಿಸಿ
ಸರ್ವಸಖ್ಯವ ಭಜಿಸಿ ತೃಪ್ತತೆಯನಭ್ಯಸಿಸಿ

ಸತ್ಯಪಾಲನೆಯೊಂದ ಮನದೊಳಿರಿಸಿ
ಕಾಯಕಷ್ಟವ ಸಹಿಸಿ ವೈರಿಗಣಮಂ ಕ್ಷಮಿಸಿ
ಸರ್ವಸಮತೆಯ ಗಳಿಸಿ ಶಮವನರಸಿ.[೧೯]

ಒಬ್ಬ ಶ್ರೇಷ್ಠ, ಪ್ರಾಮಾಣಿಕ ಸಂತನ ಎಲ್ಲಾ ಗುಣಗಳೂ ಗಾಂಧಿಯಲ್ಲಿದ್ದವು. ತನ್ನ ಬದುಕಿನುದ್ದಕ್ಕೂ ಕಠಿಣ ಪರಿಶ್ರಮಗಳಿಂದ ಸಂತನ ಹಾಗೆ ಬದುಕಿ ಸಾಧಿಸಿ ತೋರಿಸಿದವರು ಗಾಂಧಿ. ಗೋವಿಂದ ಪೈ ಗಾಂಧಿ ವ್ಯಕ್ತಿತ್ವದ ಶ್ರೇಷ್ಠ ಗುಣಗಳಾದ ಭಕ್ತಿ, ಪ್ರೀತಿ ಮತ್ತು ಆತ್ಮಶಕ್ತಿಗಳನ್ನು ಮೆಚ್ಚುತ್ತಾ ಆ ಗುಣಗಳಿಂದಾಗಿಯೆ ಗಾಂಧಿಯನ್ನು ಮಹಾತ್ಮನನ್ನಾಗಿ, ದೈವವನ್ನಾಗಿ ಕಾಣುತ್ತಾರೆ. ಗಾಂಧಿ ಒಬ್ಬ ಅದ್ವಿತೀಯ ಧೀಮಂತ ವ್ಯಕ್ತಿತ್ವವುಳ್ಳವರು. ತಮ್ಮ 'ದೈವೀಗುಣ'ಗಳಿಂದ ಎಲ್ಲರನ್ನು ಅತ್ಯಂತ ಪ್ರೀತಿಯಿಂದ ಸಲಹಿದವರು ಎನ್ನುತ್ತಾರೆ.

ಹಿಮನಗವೊ ನಿನ್ನಚಲ ವಿಮಲ ಭಗವದ್ಭಕ್ತಿ
ಜಗವನಪ್ಪುವ ವಾರ್ಧಿಯೆನೆ ಜಗತ್ಪ್ರೀತಿ
ನಿನ್ನ ಸೂರ್ಯಾತಪಕಭಿನ್ನಮಾತ್ಮಿಕ ಶಕ್ತಿ
ಕಾದುವೈ ನಮ್ಮನೀವರಮೇಕ ರೀತಿ[೨೦]

ಈ ಗುಣಗಳಿಂದಾಗಿಯೆ ಎಲ್ಲರನ್ನೂ ಸಮಾನವಾಗಿ ಕಂಡು ದೇಶವನ್ನು ಸಮರ್ಥವಾಗಿ ಮುನ್ನಡೆಸಲು ಸಾಧ್ಯವಾಗಿದ್ದು. ಮುಂದುವರಿದು ಗಾಂಧಿಯನ್ನು ಬಿಟ್ಟರೆ "ಇನ್ನು ನಮ್ಮನ್ನು ಸಮಾನವಾಗಿ ಕಾಣುವವರಾರು? ಬಿರುಗಾಳಿಗೆ ಸಿಕ್ಕು ಒಲೆದಾಡುವ ಹಡಗಿನಂತಿರುವ ಈ ದೇಶವನ್ನು ಮುನ್ನಡೆಸುವವರು ಇನ್ನಾರಿದ್ದಾರೆ?" ಎಂಬ ಆತಂಕ ವ್ಯಕವಾಗುತ್ತಿದೆ. ಗಾಂಧಿ ವ್ಯಕ್ತಿತ್ವದ ಗಾಢ ಪ್ರಭಾವಕ್ಕೆ ಒಳಗಾದ ಮನಸ್ಸುಗಳು ಆ ವ್ಯಕ್ತಿತ್ವವನ್ನು ಅದ್ವಿತೀಯ ಆದರ್ಶವಾಗಿ ಕಂಡು ಚಿತ್ರಿಸಿವೆ.

ಗಾಂಧಿಯಲ್ಲಿ ಹಲವು ವ್ಯಕ್ತಿತ್ವಗಳ ಸಮಾಗಮವನ್ನೇ ಕಾಣುಬಹುದು. ಮಾಸ್ತಿ ತಮ್ಮ 'ಗಾಂಧಿಯವರ ದರ್ಶನ' ಕವಿತೆಯಲ್ಲಿ ಇದನ್ನು ಗುರುತಿಸುತ್ತಾರೆ. 'ಹರಿಯ ಹಿರಿಸೇವಕ', 'ಭಾರತಮಾತೆಯ ಹಿರಿಯಕುವರ', 'ಸೋಲೇ ಅರಿಯದ ಕರ್ಮವೀರ', 'ಕರುಣೆಯಮೂರ್ತಿ', 'ಮಗುವಿನ ಮುಗ್ಧತೆಯನ್ನು', 'ರಾಜನ ಗಾಂಭೀರ್ಯವನ್ನು' ಹೊಂದಿದ ಧೀಮಂತ, ಲೋಕಬಾಂಧವ, ಸೋಲರಿಯದ ಹೋರಾಟಗಾರ ಹೀಗೆ ಹಲವು ದರ್ಶನಗಳನ್ನೆ ಗಾಂಧಿಯಲ್ಲಿ ಪಡೆಯುತ್ತಾರೆ. ಅವರಿಗೆ ಜನ್ಮ ನೀಡಿದ ಈ ಭೂಮಿಯೇ ಪುಣ್ಯಭೂಮಿ. ಅವರನ್ನು ನೋಡಿದ ನಾವೆ ಧನ್ಯರೆಂದು ವರ್ಣಿಸುತ್ತಾರೆ. ಅವರ ದೈಹಿಕ ಚಹರೆಯ ವರ್ಣನೆಯಲ್ಲೆ ಆಂತರಿಕ ವ್ಯಕ್ತಿತ್ವದ ಹಿರಿಮೆಯನ್ನು ಕಂಡರಿಸುವ ರಚನೆ ವಿಶಿಷ್ಟವಾದುದು.

ಜನರ ಸೇವೆಯಲ್ಲಿ ಮೆಯ್
ಸೋತವನೆಂದರು........
ಸೋತವನ ಮೆಯ್ಯೆ ಇದು?
ಆಲಸಿದನೆ ಇವನು?
ಈತ ಸೋತಿಹನೆನಲು
ಗೆಲಿದವರು ಎಲ್ಲಿ?
. . . . . . . . . .
ತಾಪಸ ವೃತ್ತಿಯಲಿ
ಘನಿಸಿರಲು ತೇಜ
ದೀಪವೋ ದೇಹವೋ
ಎನಿಸುತಿಹ ಒಡಲು[೨೧]

ಆಲಸಿಕೆಯಿಲ್ಲದೆ, ಸೋಲೆಂಬುದನ್ನೇ ಕಾಣದ, ಸದಾ ಜನರ ಸೇವೆಯಲ್ಲಿಯೇ ತೊಡಗಿ ಕೃಶಗೊಂಡ ದೇಹವನ್ನು ಹೊಂದಿದ್ದರೂ, ಆ ದೇಹದಲ್ಲಿ ಅದಮ್ಯ ಚೈತನ್ಯ ಸದಾ ಪುಟಿಯುತ್ತದೆ. ಗಾಂಧಿ ತನ್ನ ಇಡೀ ಬದುಕನ್ನು ಜನರ ಸೇವೆಗಾಗಿಯೆ ಮೀಸಲಿಟ್ಟು, ದೇಹವನ್ನು ದಂಡಿಸಿದವರು. ಅವರ ದೇಹವೇ ಸ್ವಯಂಪೂರ್ಣ ಬೆಳಕು ಬೀರುವ

ಜ್ಯೋತಿಯಾಗಿದೆ. ತನ್ನ ಸುತ್ತಲ ಅಜ್ಞಾನ, ಕತ್ತಲು, ಅನ್ಯಾಯಗಳನ್ನು ತೊಲಗಿಸುವ ತೇಜಸ್ಸು ಅದು. ಹೀಗಾಗಿ ಅವರ ದೇಹ ಮತ್ತು ದೀಪವನ್ನು ಅಭಿನ್ನವಾಗಿ ಗುರುತಿಸಲಾಗಿದೆ. ಕಠಿಣ ಪ್ರಯೋಗಗಳಿಂದ ಘನಿಸಿ ದೇಹವೆ ದೀಪವಾಗಿ ಬೆಳಗಿದ ವ್ಯಕ್ತಿತ್ವ ಗಾಂಧಿಯದು. ಮುಂದುವರಿದು ಗಾಂಧಿಯಲ್ಲಿ ಮಗುವಿನ ಮುಗ್ಧತೆ ಮತ್ತು ರಾಜನ ಗಾಂಭೀರ್ಯತೆಗಳು ಅಡಕವಾಗಿರುವುದನ್ನು ಗುರುತಿಸುತ್ತಾರೆ. ಮಗುವಿನ ನಿಷ್ಕಲ್ಮಶ ನಗೆಯನ್ನೂ, ಜನರ ಸೇವೆಯ, ಸಮರ್ಪಣೆಯ ಒಂದು 'ಅಹಂ'ನಿಂದಾದ ಗಾಂಭೀರ್ಯವನ್ನೂ ಗಾಂಧಿ ವ್ಯಕ್ತಿತ್ವದಲ್ಲಿ ಗುರುತಿಸುತ್ತಾರೆ. ಗಾಂಧಿಯನ್ನು ನೇರವಾಗಿ ನೋಡಿದ್ದ ಮಾಸ್ತಿ ಆ ವ್ಯಕ್ತಿಯಲ್ಲಿ ಹಲವು ದರ್ಶನಗಳನ್ನು ಪಡೆದು ಧನ್ಯತಾಭಾವವನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಗಾಂಧಿ ವ್ಯಕ್ತಿತ್ವದ ವಿವೇಚನೆಯಲ್ಲಿ ಭಕ್ತಿ, ಬೆರಗು ಮತ್ತು ಶರಣಾಗತಿಯ ಭಾವ ಕೆಲಸಮಾಡಿರುವುದನ್ನು ಕಾಣಬಹುದು.

ಗಾಂಧಿ ವ್ಯಕ್ತಿತ್ವ ಕವಿಗಳಿಗೆ ಒಂದು 'ಸಾರ್ಥಕ ಬದುಕಿನ ಸಂಕೇತ'ವಾಗಿ ಕಂಡಿದೆ. ಸಾರ್ಥಕ ಬದುಕಿನ ಸತ್ಯಗಳನ್ನು ಶೋಧಿಸಿದ ಒಬ್ಬ ತತ್ವಜ್ಞಾನಿಯನ್ನು ಗಾಂಧಿಯಲ್ಲಿ ಗುರುತಿಸಲಾಗಿದೆ. 'ಭಾರತೀಯರಲ್ಲಿದ್ದ ದೈನ್ಯತೆ, ದುರ್ಬಲತೆ, ಕುರಿತನಗಳನ್ನು ಹೋಗಲಾಡಿಸಲು ಪ್ರಯತ್ನಿಸಿದ ಕ್ರಾಂತಿಕಾರಿ', 'ಕತ್ತಲೆ ತುಂಬಿದ ಈ ನೆಲವನ್ನು ಬೆಳಗಿದ ಚಂದ್ರ', 'ತಾಳ್ಮೆಯಿಂದ ಕ್ರೌರ್ಯವನ್ನು, ಶಾಂತಿಯಿಂದ ಕೋಪವನ್ನು, ಸತ್ಯದಿಂದ ಸುಳ್ಳನ್ನೂ ಗೆಲ್ಲಬಯಸಿದ ರಾಜನೀತಿ ನಿಪುಣ- ಸಾಹಸಿ', 'ಜಿತೇಂದ್ರಿಯ', 'ಅಸಾಮಾನ್ಯ ನೇರನಡೆಯ ಛಲದ ವ್ಯಕ್ತಿ' ಹೀಗೆ ಗಾಂಧಿ ವ್ಯಕ್ತಿತ್ವದ ಅನನ್ಯತೆಯ ಹಲವು ಮುಖಗಳನ್ನು ಪು.ತಿ.ನ. 'ಗಾಂಧೀಸ್ತವ' ಕವಿತೆಯಲ್ಲಿ ಗುರುತಿಸುತ್ತಾರೆ. ಗಾಂಧಿಯ ವ್ಯಕ್ತಿತ್ವವೇ ಸ್ವಯಂದೀಪ್ತಿಯಿಂದ ಪ್ರಕಾಶಿಸುವಂತದ್ದು. ಗಾಂಧಿ ವ್ಯಕ್ತಿತ್ವಕ್ಕೆ ಪ್ರಕಾಶಮಾನತೆ ಬಂದದ್ದು ಸ್ವಯಂ ಸತ್ಯಶೋಧನೆಯ ಪ್ರಯೋಗಗಳಿಂದ. ಗಾಂಧಿ ಕಂಡುಕೊಂಡ ಬದುಕಿನ ನಿತ್ಯ ಸತ್ಯಗಳು ಸರ್ವಲೋಕ ಮಾನ್ಯವಾದವುಗಳು.

ತನ್ನ ನಿಜದೊಳು ತಾನು ನಡೆಯಲು ಲೋಕ ತನ್ನಂತಪ್ಪುದು
ಉನ್ನತಿಯ ಬಯಸುವೊಡೆ ವಿಷಯದ ನಂಟು ಸಾಧಕಗೊಪ್ಪದು
ಬಿನ್ನಗಳ ಬೆಲೆಯಿಂದಲಾತ್ಮದ ಸಂಪದವ ವಿಧಿಯಳೆವನು
ಎನ್ನುವೀ ಸಾಮಾನ್ಯ ನೀತಿಯನಾದನಿವನಸಮಾನನು......
..............................................................
ನಲ್ಮೆ ಗುರಿಯನು ಮುಟ್ಟೆ ಪೊಲ್ಲಮೆಯ ಬಳಿಸಲ್ಲ
ಭಾವದಂದದಿ ಬದುಕು ಬೇರೆಯಲ್ಲ
ಮೇಲ್ಮೆಯನು ಸಾಧಿಪೊಡೆ ನೇರವಿರಲೆಮ್ಮ ನಡೆ
ಎಂದಿವನ ಶಿವಛಲವನಾವ ಬಲ್ಲ? [32]

ಗಾಂಧಿ ಮಾನವ ಬದುಕನ್ನು ಪಾವಿತ್ರ್ಯಗೊಳಿಸಲು ನಿರಂತರವಾಗಿ ಶ್ರಮಿಸಿದ ಬದುಕಿನ ಶೋಧಕ'. ಸ್ವತಹ ಪರಿಶುದ್ಧ, ಪಾರದರ್ಶಕ ಬದುಕನ್ನು ನಡೆಸುವ ಮೂಲಕ ನೈತಿಕ ನೆಲೆಗಟ್ಟಿನ ಮೇಲೆ ಮನುಷ್ಯನ ಬದುಕನ್ನು ಕಟ್ಟುವ ಹಂಬಲವನ್ನು ಹೊಂದಿದ್ದಾತ. ಹಾಗಾಗಿಯೆ ಪು.ತಿ.ನ. ಗಾಂಧಿಯನ್ನು ಎಲ್ಲಾ ಧರ್ಮಗಳ ಸಾರರೂಪವಾಗಿ ಹಾಗೂ ಸಾರ್ಥಕ ಬದುಕಿನ ಮೌಲ್ಯಗಳನ್ನು ತನ್ನ ಬದುಕಿನ ಮೂಲಕವೇ ಕಂಡುಕೊಂಡ ತತ್ವಜ್ಞಾನಿಯನ್ನಾಗಿ ಕಾಣುತ್ತಾರೆ. ಇಂತಹ ನೈತಿಕ, ಸಾತ್ವಿಕ, ಮೌಲ್ಯಯುತ ಬದುಕಿನಿಂದಾಗಿಯೆ ಗಾಂಧಿ ಪ್ರೀತಿ, ಅಹಿಂಸೆ, ಕ್ಷಮೆಗಳೆಂಬ ಶ್ರೇಷ್ಠ ತತ್ವಗಳನ್ನು ಕಂಡುಕೊಂಡು ಅನುಸರಿಸಿದ್ದು. ಈ ಗುಣಗಳೆ ಗಾಂಧಿಯನ್ನು ದೈವತ್ವಕ್ಕೇರಿಸಿದ್ದು. ಸೇಡು, ದ್ವೇಷವೆಂಬ ವಿಕಾರಗಳು ದೇವರಿಗೂ ತಪ್ಪುವುದಿಲ್ಲ. ವಿಕಾರಗಳಿಂದಾಗಿಯೆ ದೇವರು

ಹಲವು ಅವತಾರಗಳಲ್ಲಿ ತೊಳಲಾಡುತ್ತಾನೆ. ಆದರೆ ಗಾಂಧಿ ತನ್ನ ಒಂದೇ ಜೀವಿತದಲ್ಲಿ ಆ ವಿಕಾರಗಳನ್ನೆಲ್ಲಾ ಗೆದ್ದು ಮಾನವತೆಯ ಉತ್ತುಂಗಕ್ಕೇರಿದವರೆಂದು ವರ್ಣಿಸುತ್ತಾರೆ.

> ಕೇಡಿಗೆ ಕೇಡೆಣಿಸುವ ಬಗೆ ದೇವಗು ತಪ್ಪದೆನೆ
> ಹಾಡುವವೆಂಟವತಾರದ ಗೋವಿಂದನ ಭವವ
> ಈಡಾಗದೆ ಈತರ ಖಲ ಶಾಪಕೆ ಮಾತಪಸಿ
> ನೀಡಿದನಭಯವ ಲೋಕಕೆ ಈತನಿಗಾವನೆಣೆ[31]

ಕೇಡನ್ನು ಪ್ರೀತಿಯಿಂದ ಪರಿವರ್ತಿಸುವ ಗುಣಗಳಿಂದಾಗಿಯೆ ಗಾಂಧಿ ಒಬ್ಬ 'ಪುಣ್ಯಪುರುಷ'ನೆನಿಸಿರುವುದು. ಅವರ ಬದುಕೇ 'ದಿವ್ಯ ಮಂಗಳಚರಿತೆ'ಯಾಗಿರುವುದು. ಗಾಂಧಿ ದೊಡ್ಡ ಆತ್ಮಶಕ್ತಿಯುಳ್ಳ, ಛಲವುಳ್ಳ ಸಾಹಸಿ. ಎಲ್ಲವನ್ನೂ ಸೋಲಿಸುವ, ಪರಿವರ್ತಿಸುವ ನೈತಿಕ ಶಕ್ತಿಯುಳ್ಳವರಾಗಿದ್ದರು. ಸತ್ಯದ, ನೈತಿಕವಾದ ಹಾದಿಯಿಂದ ಎಲ್ಲ ಅವಮಾನ-ಸೋಲು, ಕೇಡುಗಳನ್ನು ಗಾಂಧಿ ಮೆಟ್ಟಿನಿಲ್ಲುತ್ತಾರೆ. ಬದುಕಿನಲ್ಲಿ ಸೋಲೆಂಬುದು ಸೋಲಲ್ಲ. ಶಕ್ತಿ ಪ್ರಯೋಗದ ಗೆಲುವಿನ ಎದುರು ಸೋತು, ಶಾಂತಿಯಿಂದ ಎದುರಾಳಿಯಲ್ಲಿನ ಕ್ರೂರತೆಯನ್ನು ಪರಿವರ್ತಿಸುವ, ಪಶ್ಚಾತ್ತಾಪವನ್ನುಂಟು ಮಾಡಿಸುವ 'ಸೋಲು', 'ಸಹನೆ', 'ಕ್ಷಮೆ'ಗಳು ಸೋಲಲ್ಲ ಗೆಲುವು. 'ಗಾಂಧಿ ಬ್ರಿಟೀಷರನ್ನು ಗೆದ್ದದ್ದು' ಈ ಮಾರ್ಗದಲ್ಲಿಯೇ. ದೈಹಿಕ ಶಕ್ತಿ ಪ್ರಧಾನವಾದ ಗೆಲುವನ್ನು ಆತ್ಮಶಕ್ತಿ ಪ್ರಧಾನವಾದ ಶಾಂತಿ-ಸಂಯಮಗಳ ಸೋಲು ಸೋಲಿಸುತ್ತದೆ. ಹಿಂಸಕನಲ್ಲಿ ತನ್ನ ಹಿಂಸೆಯ ಪ್ರವೃತ್ತಿಯ ಬಗೆಗೇ ಹೇಸಿಗೆ ಹುಟ್ಟಿಸುವುದು ನಿಜವಾದ ಗೆಲುವು. ಹೀಗೆ ನಿರಂತರವಾದ ಸೋಲು, ಅವಮಾನಗಳಿಂದಲೇ ಕೊನೆಗೆ ತನ್ನ ಎದುರಾಳಿಯ 'ಗೆಲುವೆ'ಂಬ ಭ್ರಮೆಯನ್ನು ಅಳಿಸಿ, ಪಶ್ಚಾತ್ತಾಪ ಪಡುವಂತೆ ಮಾಡಿದ ಆತ್ಮಶಕ್ತಿಯುಳ್ಳವರು ಗಾಂಧಿ. ಇದು ಏಸು, ಬುದ್ಧರಲ್ಲಿ ಇದ್ದಂತ ಆತ್ಮಶಕ್ತಿ. ಇದನ್ನು ತಮ್ಮಲ್ಲಿ ಅಳವಡಿಸಿಕೊಂಡಿದ್ದರಿಂದಲೇ ಗಾಂಧಿ ಆತ್ಮಶಕ್ತಿಯುಳ್ಳ ಅಸಾಮಾನ್ಯರಾಗಿ ಎತ್ತರಕ್ಕೆ ಏರಿದ್ದಾರೆ.

ಗಾಂಧಿ ವ್ಯಕ್ತಿತ್ವದಲ್ಲಿ 'ರಾಜನೀತಿ ನಿಪುಣ'ತನವನ್ನು ಕವಿತೆಗಳು ಗುರುತಿಸುತ್ತವೆ. ದ್ವೇಷ, ಹಿಂಸೆ, ಆಕ್ರಮಣಗಳ ಮೂಲಕವೇ ನಿರ್ಜೀವ ರಾಜ್ಯವನ್ನು ಕಟ್ಟುವ ಹಳೆಯ ರೂಢಿಗತ ರಾಜನೀತಿಯನ್ನು ನಿರಾಕರಿಸಿ; ಪ್ರೀತಿ, ಸಮತೆ, ಸಹಬಾಳ್ವೆಯ ರಾಜ್ಯವನ್ನು ನಿರ್ಮಿಸಲು ಹೊರಟವರು. ಹಿಂಸೆಗೆ ಪ್ರತಿಹಿಂಸೆ ಎಂದು ಸೆಣಸಾಡುವ ರಾಜನೀತಿಯನ್ನು ತೊಡೆದು ತಾಳ್ಮೆಯಿಂದ ಕ್ರೌರ್ಯವನ್ನು, ಶಾಂತಿಯಿಂದ ಕೋಪವನ್ನು, ಸತ್ಯದಿಂದ ಸುಳ್ಳನ್ನು ಗೆಲ್ಲಬಯಸಿದವರು. ಹಾಗಾಗಿಯೇ ಪು.ತಿ.ನ. ಗಾಂಧಿಯನ್ನು ಈ ನೆಲದ ಕತ್ತಲೆಯನ್ನು ಕಳೆಯಲು ಬಂದ 'ಬೆಳಕಾ'ಗಿ ಕಾಣುತ್ತಾರೆ.

ಬಹುತೇಕ ಕವಿಗಳಿಗೆ ಗಾಂಧಿ ಒಂದು 'ಬೆಳಕಾಗಿ' ಕಂಡಿದ್ದಾರೆ. ಕತ್ತಲನ್ನು, ಅಸುರೀಶಕ್ತಿಯನ್ನೂ ಓಡಿಸಲು ಅವತರಿಸಿದ ದಿವ್ಯ ಬೆಳಕು. ಜನತೆಯ ಬದುಕನ್ನು ಅಸುರೀಶಕ್ತಿ ಆವರಿಸಿ ದಾಸ್ಯ, ನಿಶ್ಚೇಷ್ಟ್ಯತನದಲ್ಲಿ, ಕತ್ತಲಲ್ಲಿ ಮುಳುಗಿಹೋಗಿದ್ದ ಜನತೆಯಲ್ಲಿ ಆತ್ಮವಿಶ್ವಾಸ ಹಾಗೂ ಚೈತನ್ಯವನ್ನು ಮೂಡಿಸುವ ಬೆಳಕಾಗಿ ಅವತರಿಸಿದರು. ಇದೊಂದು ಜಗದಚ್ಚರಿ ಎಂಬ ಉದ್ಗಾರ ಮೇಲಿಂದ ಮೇಲೆ ವ್ಯಕ್ತವಾಗುತ್ತದೆ. ಈ ಬೆಳಕು ನಾಡಿಗೆ ಆವರಿಸಿದ್ದ ಕತ್ತಲನ್ನು ಓಡಿಸಿದ್ದಷ್ಟೇ ಅಲ್ಲ, ನಿಶ್ಚೇಷ್ಟವಾಗಿದ್ದ ಜನತೆಯನ್ನು ಎಚ್ಚರಿಸಿ ಸಿಡಿದೇಳುವ ಹಾಗೆ ಮಾಡಿತು. ಇಡೀ ನಾಡಿನ ಜನತೆಯ ನರನಾಡಿಗಳನ್ನು ಆವರಿಸಿಕೊಂಡಿದ್ದ ದಾಸ್ಯತನವನ್ನು ಕಿತ್ತೊಗೆಯುವ ಆತ್ಮಬಲವನ್ನು ಉತ್ತೇಜಿಸಿತು. ಇಡೀ ವಿಶ್ವವನ್ನೆ ವಿಸ್ಮಯಗೊಳ್ಳುವ ಹಾಗೆ ಆವರಿಸಿದ ಬೆಳಕು ಗಾಂಧಿ. ಈ

ಬೆಳಕಿನ ಮಹಿಮೆ ಸಾಮಾನ್ಯವಾದದ್ದಲ್ಲ. ಇಡೀ ಮಾನವ ಬದುಕನ್ನು ಹಸನುಗೊಳಿಸಿದ 'ವಿಸ್ಮಯದ ಬೆಳಕು' ಎಂದು ಚಿತ್ರಿಸಲಾಗಿದೆ.

ಬೆಳಕು ನಿಷ್ಕ್ರಿಯವಲ್ಲ. ಬೆಳಕಸತ್‌ಕ್ರಿಯವಲ್ಲ:
ಬೆಳಕು ಸ್ವಾತಂತ್ರ್ಯ ಮಂತ್ರವನುಸಿರಿತು
ಬೆಳಕು ಚೈತನ್ಯವನು ಜೀವನದೊಳೊದವಿಸಿತು
ಬೆಳಕು ಬಾಳಿಗೆ ಮಂಗಲವ ತಂದಿತು[೨೪]

ಹೀಗೆ ಬೆಳಕಾದ ಗಾಂಧಿ ವ್ಯಕ್ತಿತ್ವದಲ್ಲಿ ಸಿದ್ಧಿಯನ್ನು ಪಡೆದ 'ಯೋಗಿ'ಯನ್ನೂ, 'ಗುರು'ವನ್ನೂ, ದಾರಿತೋರುವ 'ಪರಂಜ್ಯೋತಿ'ಯನ್ನು, ಮಹಾನ್ 'ತ್ಯಾಗಿ'ಯನ್ನೂ ಕಾಣಲಾಗಿದೆ.

ಗಾಂಧಿಯದು 'ವಿಸ್ಮಯದ ವ್ಯಕ್ತಿತ್ವ'. ವೈಯಕ್ತಿಕ ಎಳ್ಗೆಗಿಂತ ಸಮಷ್ಟಿಯ ಒಳಿತಿಗಾಗಿಯೇ ಬದುಕನ್ನು ಮುಡುಪಾಗಿಟ್ಟವರು ಗಾಂಧಿ. ಬಲಾತ್ಕಾರ, ಮೋಸಗಳು ಧ್ವಂಸಗೊಳ್ಳುವ ಹಾಗೆ ಯುದ್ಧ ಮಾಡಿದ ರಾಜನಾಗಿ, ಬದುಕನ್ನು ಚೆಲುವಾಗಿಸಿಕೊಳ್ಳುವ ಕಲೆಯನ್ನು ಕಲಿಸಿದ ಗುರುವಾಗಿ, ಸಕಲ ಜನತೆಯ ಸಮಾನತೆಗಾಗಿ ತನ್ನ ಬದುಕನ್ನೇ ಬಲಿಕೊಟ್ಟ ನವವಿರಾಗಿಯಾಗಿ, ಬದುಕಿನುದ್ದಕ್ಕೂ ಸತ್ಯ-ಅಹಿಂಸೆಯ ದಾರಿಯಲ್ಲೇ ಸಾಗಿದ ಸಹಜಯೋಗಿಯಾಗಿ ಗಾಂಧಿ ಕಂಡಿದ್ದಾರೆ.

ನಿನ್ನ ಉಸಿರದೊಂದೊಂದೂ ಜಡಕೆ ಜೀವವಿತ್ತಿತೊ
ನಿನ್ನ ಧಮನಿಮಿಡಿತವಹಹ ಚೈತನ್ಯವ ಬಿತ್ತಿತೊ
ನಿನ್ನ ವಾಣಿ ದಿಗ್ ದೇಶಕೆ ನನ್ನಿಯ ನೆಲೆ ತಿಳಿಹಿತೊ
ನಿನ್ನ ಗೆಯ್ಮೆ ಸಾವಜೀವಜಂಗುಳಿಯನ್ನುಳಿಹಿತೊ..... ಸಹಜಯೋಗಿ![೨೫]

ಗಾಂಧಿಯ ಬದುಕು ಹಾಗೂ ಹೋರಾಟಗಳು ವಿಶಿಷ್ಟವಾದವುಗಳು. ವೈಯಕ್ತಿಕ ಹಾಗೂ ಸಾರ್ವಜನಿಕ ಬದುಕಿನ ಪ್ರತಿಯೊಂದು ನಡೆಯಲ್ಲೂ ಭಿನ್ನ ಹಾದಿಯನ್ನು ತುಳಿದವರು. ಆ ಮೂಲಕ ಇತಿಹಾಸದ ನಡೆಯನ್ನು ಪಲ್ಲಟಿಸಲು ಬಯಸಿದವರು. ಗಾಂಧಿ ಎಂಬುದೊಂದು ಚೈತನ್ಯಶಕ್ತಿ. ಜಡವನ್ನು ಚೇತನಗೊಳಿಸುವ, ಸಾಯುವವರನ್ನು ಉಳಿಸುವ ಜೀವಸೆಲೆಯಾಗಿದ್ದಾರೆ. ಇದು ಸಾಧ್ಯವಾಗಿದ್ದು ಅವರ ಪ್ರಾಮಾಣಿಕತೆ ಮತ್ತು ಹೋರಾಟದ ವಿಶಿಷ್ಟತೆ ಹಾಗೂ ಸತ್ಯದ ಬದುಕು ಮತ್ತು ಮಾನವ ಪ್ರೀತಿ, ಕರುಣೆಗಳಿಂದಾಗಿ. ಹಾಗಾಗಿಯೇ ಗಾಂಧಿ 'ಸಹಜಯೋಗಿ'ಯ ಹಾಗೆ ಕಂಡಿದ್ದಾರೆ.

ಕುವೆಂಪುರವರು ಗಾಂಧಿಯನ್ನು ಕುರಿತು ಮೂರು ಕವಿತೆಗಳನ್ನು ಬರೆದಿದ್ದಾರೆ. ಮೂರು ಕವಿತೆಗಳಲ್ಲೂ ಗಾಂಧಿ ವ್ಯಕ್ತಿತ್ವವನ್ನು ಅತ್ಯಂತ ಭಕ್ತಿ, ಬೆರಗುಗಳಿಂದ ವರ್ಣಿಸುತ್ತಾರೆ. ಅವರೊಬ್ಬ 'ಮಾನವ ಮಹಾತ್ಮ', ಯಾವ ಯಾವುದೋ ಪವಾಡಗಳನ್ನು ಮಾಡಿ ಭಯ ಮಿಶ್ರಿತ ಭಕ್ತಿಯಿಂದ ಪೂಜೆಗೊಳ್ಳುವ 'ಅನಾಗರಿಕ' ದೇವರುಗಳಿಗಿಂತ ಭಿನ್ನನಾದ 'ಸಭ್ಯತಾದೇವತೆ' ಗಾಂಧಿ. ಯಾವುದೇ ಪವಾಡಗಳನ್ನು ಮಾಡದ, ಜನರನ್ನು ವಂಚಿಸದ, ಉತ್ಪ್ರೇಕ್ಷೆ, ವಾಗ್ಝರಿಗಳಿಲ್ಲದ, ಯಾವ ಸೌಂದರ್ಯವೂ ಇಲ್ಲದ ಸರಳ ಸಹಜ ವ್ಯಕ್ತಿ. ಆದರೂ ಜನತೆ ಈತನನ್ನು ದೈವವೆಂದು ಆರಾಧಿಸುತ್ತಾರೆ. ಅದೇ ಗಾಂಧಿಯ ವಿಶಿಷ್ಟ ಶಕ್ತಿ. ಈ ಶಕ್ತಿ ಬೆರಗುಗೊಳಿಸುವಂತದ್ದು ಎನ್ನುತ್ತಾರೆ.

ಆನೆಯಂಬಾರಿಗಳ ರಾಜೈಸಿರಿಯಿಲ್ಲ
ಇವನು ಸುಂದರನಲ್ಲ; ಯುವಕನಂತೂ ಅಲ್ಲ
ಮುದುಕನಾಗಿಹನು, ಹಲ್ಲುಗಳುದುರಿ ಬಾಯಿ ಬರಿ
ಬೋಡಾಗಿಹುದು. ಇವಗೆ ಚೆಂದುಟಿಯ ಚೆಲುವಿಲ್ಲ;
ಕಮಲಾಕ್ಷನಿವನಲ್ಲ..... [೨೬]

ದೈಹಿಕವಾಗಿ ಸುಂದರನಲ್ಲದ, ಮಾತಿನಲ್ಲಿ ಮೋಡಿ, ರಸಿಕತೆಗಳಿಲ್ಲದ, ಬಡವ, ದರಿದ್ರ, ಅಸ್ಪೃಶ್ಯರ 'ದಿನದಿನದ ಸರಳ ಸಾಧಾರಣದ ಬಡಹೊಟ್ಟೆ ಪಾಡಿನದ'ನ್ನೇ ಮಾತನಾಡುವ ಈತನನ್ನು 'ಜೇನು ಹುಟ್ಟಿಗೆ ಜೇನುಹುಳು ಕವಿಯುವಂದದಲಿ' ಜನ ಮುಗಿಬಿದ್ದು ನೋಡುವುದನ್ನು, ಅನುಸರಿಸುವುದನ್ನು ಕಂಡ ಕುವೆಂಪು ಆ ವಿಸ್ಮಯದ ವ್ಯಕ್ತಿತ್ವವನ್ನು 'ಮಾನವದೇವ'ರೆಂದು ಕರೆಯುತ್ತಾರೆ.

ಮಾನವನ ಅಭ್ಯುದಯ
ಶ್ರೇಯಸ್ಸುಗಳಿಗಾಗಿ ನೊಂದವರ್, ಬೆಂದವರ್,
ಮನುಜರಂತೆಯೆ ಬಾಳಿ ಹೋರಾಡಿ ಸಂದವರ್
ರಾಜ್ಯಭೋಗತ್ಯಾಗದಮಲ ವೈರಾಗಿಗಳ್,
ಮನುಜ ತನುಜರ್ ಇಂದು, ಕ್ರಿಸ್ತ ಬುದ್ಧಾದಿಗಳೆ
ಮಾನವರೆ ಪೂಜೆ ಗೌರವಗಳನು ಕೈಕೊಳ್ವ
ದೇವತೆಗಳಾಗುವ ಕಾಲವೈತಂದಿಹುದು[೨೭]

ಕಲಿಗಾಲದಲ್ಲಿ ಸಂಪತ್ತು, ದರ್ಪ, ಅಹಂಕಾರದಲ್ಲಿ ದೈವತ್ವವನ್ನು ಕಾಣುವ ಹಾಗೂ ಅವತಾರ ಮತ್ತು ಹಿಂಸೆಗಳ ಮೂಲಕವೆ ದೇವರೆಂದು ಬಿಂಬಿಸಿಕೊಳ್ಳುವ ದೇವರುಗಳನ್ನು ಮೀರಿ-'ಆ ಅನಾಗರೀಕ ದೇವಭಾವಗಳು ದೂರಾಗಿ'- ಮಾನವರೇ ದೇವತೆಗಳಾಗಿ ಪೂಜೆಗೊಳ್ಳುವ ಸಂದರ್ಭ ಒದಗಿಬಂದಿದೆ. ಅಂಥ ಮಹಾತ್ಮರಲ್ಲಿ ಗಾಂಧಿ ಕೂಡ ಒಬ್ಬರು. ಗಾಂಧಿಯ ಬದುಕು ಅತ್ಯಂತ ಸರಳ ಹಾಗೂ ಮಾನವೀಯ ನೆಲೆಯುಳ್ಳದ್ದು. 'ಪ್ರೇಮ, ಸತ್ಯ, ಅಹಿಂಸೆ, ಸಮತೆಗಳನ್ನಾಚರಿಸಿ ಬೋಧಿಸುವ, ಸಾಧಿಸುವ, ಜನರನೆಚ್ಚರಗೊಳಿಪ 'ಸರಳ ಜೀವನ' ಅವರದು. ಇದೇ ಅವರು ಅನುಸರಿಸಿದ, ಪ್ರತಿಪಾದಿಸಿದ ಜೀವನ ಧರ್ಮ. ಈ ಧರ್ಮದಿಂದ ಕೂಡಿದ ಜೀವನದಿಂದಲೇ ದೈವತ್ವಕ್ಕೇರಿದವರು ಗಾಂಧಿ ಎಂಬುದು ಕುವೆಂಪು ಅಭಿಪ್ರಾಯ.

ಕುವೆಂಪು ಪ್ರಕಾರ ಕ್ರಿಸ್ತನ ಪ್ರೀತಿ ಮತ್ತು ಕರುಣೆ ಹಾಗೂ ಬುದ್ಧನ ಅಹಿಂಸೆ ಮತ್ತು ಸತ್ಯಗಳ ಮೈತ್ರಿಯನ್ನು ಸಾಧಿಸಿದ ವ್ಯಕ್ತಿತ್ವ ಗಾಂಧಿಯದ್ದು. ಕ್ರಿಸ್ತ-ಬುದ್ಧ ಇವರಿಬ್ಬರ ತಾತ್ವಿಕತೆಗಳನ್ನು ಒಗ್ಗೂಡಿಸುವ ಮೂಲಕ ಒಂದು ಮಾನವ ಧರ್ಮವನ್ನು ಪ್ರತಿಪಾದಿಸಿದವರು. ಯಂತ್ರ ನಾಗರೀಕತೆಯ ರಾಜಕೀಯ ಕುಟಿಲ ತಂತ್ರಕ್ಕೆ ಎದುರಾಗಿ ಆಧ್ಯಾತ್ಮ ಮಂತ್ರವನ್ನು ತಂದವರು. ಜಗತ್ತಿನ ಜನತೆಯ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು. ದರಿದ್ರರ, ಅಸ್ಪೃಶ್ಯರ ಸೇವೆಯಲ್ಲಿ ಮಗ್ನರಾಗುವ ಮೂಲಕ ಗಾಂಧಿ ವಿಶ್ವ ಸೇವಕರ ಪಂಕ್ತಿಯಲ್ಲಿ ನಿಲ್ಲುವಂತ ವ್ಯಕ್ತಿತ್ವವಾಗಿದ್ದಾರೆ ಎನ್ನುತ್ತಾರೆ.

ಇಲ್ಲಿ ಉತ್ಸವದೊಳವನಿಲ್ಲ ಆ ದೂರದಲಿ
ಕ್ರೋದ ಕಾರ್ಪಣ್ಯ ರೋದನಗಳೊಡನೆ
ಕೆನ್ನೀರು ಕಣ್ಣೀರುಗಳ ಹೊನಲ ಗೋಳ್‌ನಡುವೆ
ದಾರಿದ್ರ್ಯ ದೈನ್ಯ ಧನಮದಗಳೊಡನೆ
ವಾದಿಸುತೆ ಬೋಧಿಸುತೆ ಕರುಣೆಯಂ ಸಾಧಿಸುತೆ
ಭಕ್ತಿಯಿಂ ದೇವನಂ ಪ್ರಾರ್ಥಿಸುತೆ
ನಿರಶನ ವ್ರತನಿಷ್ಠನಾಗಿಹನು ನೋಡಲ್ಲಿ
ಧರ್ಮಶಕ್ತಿಯ ಕೃಪೆಯನರ್ಥಿಸುತ್ತೆ!![೨೮]

ಗಾಂಧಿ ವ್ಯಕ್ತಿತ್ವದಲ್ಲಿ ಕುವೆಂಪು ಗುರುತಿಸುವ ವಿಶಿಷ್ಟ ಅಂಶ ಅಧಿಕಾರದ ಬಗೆಗಿನ ನಿರ್ಮೋಹ. ಗಾಂಧಿ ಭಾರತದ ರಾಜಕೀಯ ಸ್ವಾತಂತ್ರ್ಯವನ್ನಷ್ಟೇ ಬಯಸಿದವರಲ್ಲ, ಅದಕ್ಕಾಗಿಯೆ ಹೋರಾಡಿದವರಲ್ಲ. ಅವರ ಗುರಿ ಮನುಷ್ಯ ಸ್ವಾತಂತ್ರ್ಯದ ಕಡೆಗಿತ್ತು. ಅಸ್ಪೃಶ್ಯರ, ಬಡವರ, ಮಹಿಳೆಯರ, ಅಲ್ಪಸಂಖ್ಯಾತರ ಉದ್ಧಾರವಾಗದೆ, ಮನುಷ್ಯರಲ್ಲಿನ ದ್ವೇಷ-ಹಿಂಸೆಯ ವರ್ತನೆಗಳು ಬದಲಾಗದೆ, ಮತೀಯ ಭಾವೈಕ್ಯ ಸಾಧಿತವಾಗದೆ ನಿಜವಾದ

ಸ್ವಾತಂತ್ರ್ಯ ಲಭಿಸುವುದಿಲ್ಲ ಎಂದು ಗಾಂಧಿ ನಂಬಿದ್ದರು. ಹಾಗಾಗಿ ಗಾಂಧಿ ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ಲಭಿಸಿದಾಗ ಇಡೀ ದೇಶವೇ ಸ್ವಾತಂತ್ರ್ಯದ ಸಂಭ್ರಮಾಚರಣೆಯಲ್ಲಿ ತೊಡಗಿದ್ದರೆ ತಾವು ಮಾತ್ರ ಉಪವಾಸ, ಪ್ರಾರ್ಥನೆ, ಚರಕದಲ್ಲಿ ನೂಲುವುದು, ಅಸ್ಪೃಶ್ಯರ ಸೇವೆ, ಹಿಂದೂ-ಮುಸ್ಲಿಂ ಕೋಮು ಸಾಮರಸ್ಯದಂಥ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರು. ಸದಾ ಅಧಿಕಾರದಿಂದ ದೂರ ಉಳಿದು ಸೇವೆಯನ್ನೆ ತನ್ನ ಜೀವನ ಧರ್ಮವೆಂದು ನಂಬಿ ಆಚರಿಸಿದವರು ಗಾಂಧಿ. ಹಾಗಾಗಿ ಕುವೆಂಪು ಗಾಂಧಿಯನ್ನು 'ಮಾನವ ದೈವ'ವೆಂದೂ, 'ಈಶ್ವರ ಕೃಪಾಬಲದ ಯಾಚನೆಯ ಸಲುವಾಗಿ ಭೂಮಾತೆ ಕಳುಹಿಸಿದ ದೂತಭಿಕ್ಷು'ವೆಂದೂ, "ಈ ಲೋಕಮಂ ನಿರ್ನಿಮೇಷಮವಲೋಕಿಸುವ ಅಲೋಕ ಋತದೊಂದಲೋಕಚಕ್ಷು"ವೆಂದೂ ಕರೆಯುತ್ತಾರೆ. ಈ ಲೋಕವನ್ನು ಹಿಂಸೆ, ಕ್ರೌರ್ಯಗಳಿಂದ ಕಾಪಾಡಲು ಸದಾ ಕಾವಲಿರುವ 'ಸತ್ಯದ ಕಣ್ಣು' ಗಾಂಧಿ ಎನ್ನುತ್ತಾರೆ.

ಗಾಂಧಿಯದು 'ಅಮರವ್ಯಕ್ತಿತ್ವ'. ಗಾಂಧಿಗೆ ಸಾವಿಲ್ಲ, ನೈತಿಕ ಮೌಲ್ಯಗಳ ರೂಪದಲ್ಲಿ ಪ್ರತಿಯೊಬ್ಬ ವ್ಯಕ್ತಿಯ ಅಂತರಂಗದಲ್ಲೂ, ವಿಶ್ವದಂತರಂಗದಲ್ಲೂ ಶಾಶ್ವತವಾಗಿ ನೆಲೆಸಿದ್ದಾರೆ. ಶ್ರೇಷ್ಠ ಮಾನವೀಯ ಗುಣಗಳಲ್ಲಿ ಗಾಂಧಿ ಎಂದೆಂದಿಗೂ, ಎಲ್ಲ ಮನುಷ್ಯರಲ್ಲೂ ಜೀವಂತವಾಗಿರುತ್ತಾರೆ ಎನ್ನುತ್ತಾರೆ ಡಿ.ಎಸ್.ಕರ್ಕಿ.

ನಮ್ಮ ಅಂತರಂಗದಿ
ನಿಂತಿರುವರು ಗಾಂಧೀಜಿ
ಸತ್ಯದೊಂದು ದೀಪವಾಗಿ
ಕರುಣೆಯೊಂದು ರೂಪವಾಗಿ
ಶ್ರದ್ಧೆಯೊಂದು ಗೀತವಾಗಿ
ವಿಶ್ವದಂತರಂಗದಿ
ನಿಂತಿರುವರು ಗಾಂಧೀಜಿ [39]

ಸತ್ಯ, ಕರುಣೆ, ಶ್ರದ್ಧೆಗಳೆಂಬ ಮೌಲ್ಯಗಳಲ್ಲಿ ಗಾಂಧಿ ಎಂದೆಂದೂ ಜೀವಂತವಾಗಿರುತ್ತಾರೆ. ಗಾಂಧಿಯನ್ನು ಇಲ್ಲಿ ಭೌತಿಕ ರೂಪವನ್ನು ಮೀರಿದ ತಾತ್ವಿಕ ಆಕಾರವಾಗಿ, ಮೌಲ್ಯ ಸಂಕೇತವಾಗಿ ಗ್ರಹಿಸಲಾಗಿದೆ.

ವಿ.ಸೀ. ತಮ್ಮ 'ಮಹಾತ್ಮ' ಕವಿತೆಯಲ್ಲಿ ಗಾಂಧಿಯನ್ನು ಜಗತ್ತಿಗೆ ಬದುಕಿನ ಪಾಠವನ್ನು ಕಲಿಸಿದ 'ಗುರು'ವಾಗಿ ಕಾಣುತ್ತಾರೆ. ನೈತಿಕ, ಸಾರ್ಥಕ ಹಾಗೂ ಸಂತೃಪ್ತಿಯ ಬದುಕನ್ನು ರೂಪಿಸಿಕೊಳ್ಳುವುದನ್ನು ತನ್ನ ಬದುಕಿನ ಮಾದರಿಯ ಮೂಲಕ ತಿಳಿಸಿಕೊಟ್ಟವರು. ಗಾಂಧಿ ಒಬ್ಬ ತತ್ವಜ್ಞಾನಿ, ಆಶಾವಾದಿ, ಜಗದ ಸೌಖ್ಯದ ಕನಸುಗಾರ, ಮನುಷ್ಯ ಸ್ವಭಾವಗಳನ್ನು ಅರಿತವರು, ಬದುಕಿನ ಸತ್ಯವನ್ನು ತಿಳಿದವರು, ಕರುಣಾಮೂರ್ತಿ ಎಂದು ಹೀಗೆಲ್ಲಾ ಗಾಂಧಿಯನ್ನು ಆದರ್ಶ ವ್ಯಕ್ತಿತ್ವವಾಗಿ ಕಾಣುತ್ತಾರೆ. ವಿ.ಸೀ. ಗಾಂಧಿ ವ್ಯಕ್ತಿತ್ವವನ್ನು ಪರಿಪೂರ್ಣ ಹಾಗೂ ಸಾರ್ಥಕ ನೆಲೆಯಲ್ಲಿ ಗುರುತಿಸಿದ್ದಾರೆ. ಅವರ 'ಕೈಮುಗಿವ ಗಾಂಧಿ' ಕವಿತೆ ಗಾಂಧಿ ವ್ಯಕ್ತಿತ್ವದಲ್ಲಿ ಈ ಎಲ್ಲಾ ಶ್ರೇಷ್ಠ ಗುಣಗಳನ್ನು ಗುರುತಿಸಿದೆ. ಇವರೂ ಕೂಡ ಗಾಂಧಿ ವ್ಯಕ್ತಿತ್ವವನ್ನು ಆದರ್ಶೀಕರಿಸಿ ನೋಡಿದ್ದಾರೆ.

ಬೆಳಗೆರೆ ಜಾನಕಮ್ಮ ಗಾಂಧಿಯನ್ನು 'ಸದ್ಗುಣದ ಕಣಿ' ಎನ್ನುತ್ತಾರೆ. ಇವರೂ ಕೂಡ ಗಾಂಧಿ ವ್ಯಕ್ತಿತ್ವವನ್ನು ವಿಸ್ಮಯದ ನೆಲೆಯಲ್ಲಿಯೇ ಕಾಣುತ್ತಾರೆ. ಗಾಂಧಿ ವ್ಯಕ್ತಿತ್ವಕ್ಕೆ ವಿಶಿಷ್ಟ ಮೆರುಗು ತಂದುಕೊಟ್ಟ ಗುಣಗಳೆಂದರೆ 'ಸಹನೆ' ಮತ್ತು 'ಶಾಂತಿ'. ಇವುಗಳಿಂದಲೇ ಗಾಂಧಿ ಎಲ್ಲವನ್ನೂ ಎದುರಿಸಿ ಗೆಲುವು ಸಾಧಿಸಲು ಸಾಧ್ಯವಾಯಿತು. ಶಾಂತಿ, ಸಹನೆಗೆ ಎಲ್ಲವನ್ನು ಗೆಲ್ಲುವ ಶಕ್ತಿಯಿರುತ್ತದೆ ಎಂಬುದನ್ನು ಗಾಂಧಿ ಸಾಧಿಸಿ

ತೋರಿಸಿದವರು ಎನ್ನುತ್ತಾರೆ. ಮುಂದುವರಿದು ಗಾಂಧಿಯನ್ನು 'ಪರಮಾತ್ಮ', 'ಪವಿತ್ರಾತ್ಮ', 'ದಿವ್ಯಜ್ಞಾನಿ', 'ಕರ್ಮಯೋಗಿ', 'ಪರಮತ್ಯಾಗಿ' ಎಂದು ಪೂಜ್ಯತೆಯ ನೆಲೆಯಲ್ಲಿ ಗ್ರಹಿಸುತ್ತಾರೆ.

ಚಿದ್ರೂಪನಂತೆ ತೊಳ ತೊಳಗಿ ಬೆಳಗುತಿಹ
ದಿವ್ಯಜ್ಞಾನಿ ತಾತ
ಸದ್ಗುಣದ ಕಣಿಯು ಬಹುಪೂಜ್ಯನೆಂದು ಮನ
ಗಂಡೆನೆಂದೂ ಪೂತ
ನಿಜತತ್ವವರಿತು ಗುರುಪೀಠವೇರಿ ಮೆರೆದಿರುವ
ಕರ್ಮಯೋಗಿ
ವಿಜಯವನುಗೈದೆ ಅದ್ವೈತದೊಳಗೆ ಬಿಡು
ನೀನೆ ಪರಮ ತ್ಯಾಗಿ [೩೦]

ಗಾಂಧಿ ವ್ಯಕ್ತಿತ್ವದ ಶ್ರೇಷ್ಠತೆಯನ್ನು ಬಣ್ಣಿಸುತ್ತಲೇ ತಮ್ಮ ಆತ್ಮವಿಮರ್ಶೆಯಲ್ಲಿ ತೊಡಗುತ್ತಾರೆ. ಆ ಮೇರು ವ್ಯಕ್ತಿತ್ವದ ಮುಂದೆ ತಾನೆಷ್ಟು ಕುಬ್ಜಳೆಂದು ಸ್ವವಿಮರ್ಶೆಯಲ್ಲಿ ತೊಡಗುವ ಪರಿ ವಿಶಿಷ್ಟವಾದುದು. ಜಾನಕಮ್ಮನವರು ಗಾಂಧಿಯನ್ನು ಒಂದು ಸಾರ್ಥಕ ಬದುಕಿನ ಸಂಕೇತವಾಗಿ ಕಾಣುತ್ತಾರೆ. ತನ್ನ ಬದುಕನ್ನು ಬಂಧನಗಳಿಂದ ಮುಕ್ತಗೊಳಿಸಿ ಆನಂದಮಯ ಮಾಡಿಕೊಂಡವರು ಗಾಂಧಿ. ಆದರೆ ಸಾಮಾನ್ಯ ಜನ ಮಾತ್ರ ಬಂಧನದಲ್ಲೇ ಯಾವಾಗಲೂ ಸಿಲುಕಿ ತೊಳಲಾಡುತ್ತಿರುತ್ತಾರೆ. ಗಾಂಧಿ ಸ್ವತಹ ಅನೇಕ ಪ್ರಯೋಗಗಳನ್ನು ತನ್ನ ಬದುಕಿನಲ್ಲಿ ನಡೆಸಿ ಯಶಸ್ವಿಯಾದವರು. ಆ ಮೂಲಕ ಬದುಕನ್ನು ಅತ್ಯಂತ ಸರಳ, ಆನಂದಮಯ ಮಾಡಿಕೊಳ್ಳಲು ಪ್ರಯತ್ನಿಸಿದವರು. ಇಂಥ ಪ್ರಯೋಗಗಳು ವೈಯಕ್ತಿಕ ನೆಲೆಯಿಂದ ಆರಂಭವಾದರೂ ಸಾಮಾಜಿಕ ದೃಷ್ಟಿಯಿಂದ ಕೈಗೊಂಡತವುಗಳೇ ಆಗಿವೆ. ಅಹಿಂಸೆ, ಬ್ರಹ್ಮಚರ್ಯ ಪಾಲನೆ ಗಾಂಧಿ ಕೈಗೊಂಡ ಪ್ರಯೋಗಗಳಲ್ಲಿ ಮಹತ್ವದವು. ಇದನ್ನು ತಮ್ಮ ಬದುಕಿನ ಅಂತ್ಯದವರೆಗೂ ಅನುಸರಿಸಿ ಎಲ್ಲ ಬಗೆಯ ಬಂಧನಗಳನ್ನು ಮೀರಿದ ಆನಂದಮಯ ಬದುಕನ್ನೆ ಶೋಧಿಸಿಕೊಂಡರು. ಇದು ಸಾಮಾನ್ಯ ಸಂಗತಿಯಲ್ಲ ಇದಕ್ಕೆ ಬಹುದೊಡ್ಡ ಆತ್ಮಸಂಯಮ ಬೇಕು. ಅದನ್ನು ಗಾಂಧಿ ಸಾಧಿಸಿದ್ದರು. ಆದರೆ ಜಡಮತಿಯಾದ ನಾನು ಇನ್ನೂ ಆ ಬಂಧನದಲ್ಲೆ ಸಿಲುಕಿದ್ದೇನೆ ಎಂದು ಮರುಗುತ್ತಾರೆ. ಗಾಂಧಿ ತನ್ನ ಜೀವಿತದಲ್ಲೆ 'ಪರಮಾತ್ಮ'ನೆನಿಸಿಕೊಂಡವರು. ದ್ವೈತವನ್ನು ಮೀರಿ ಅದ್ವೈತವನ್ನು ಸಾಧಿಸಿ ಮಾನವ, ಪರಮಾತ್ಮ ಬೇರೆಯಿಲ್ಲ ಎಂಬಂತೆ ಬದುಕಿದವರು ಎನ್ನುತ್ತಾರೆ.

ವಿನಾಯಕರ 'ಗಾಂಧೀಜಿ' ಕವಿತೆ ಗಾಂಧಿಯನ್ನು ಅವತಾರ ಮತ್ತು ಪವಾಡ ಪುರುಷನನ್ನಾಗಿ ಚಿತ್ರಿಸಿದೆ. ಅತ್ಯಂತ ಸರಳ ಹಾಗೂ ಆಕರ್ಷಕನಲ್ಲದಿದ್ದರೂ ಅಪಾರವಾದ ಕರುಣೆಯಿಂದ ರಾಷ್ಟ್ರದ ಜೀವನಾಡಿಯಾಗಿದ್ದಾರೆ ಎನ್ನುತ್ತಲೆ ಬುದ್ಧನ ಸ್ವಭಾವವನ್ನು ಗಾಂಧಿಯಲ್ಲಿ ಗುರುತಿಸುತ್ತದೆ.

ಬೇಕಾರಿ ಬರಿ ಚರ್ಮ, ಬರಿ ಎಲುಬು, ಆದರಿವನು
ರಾಷ್ಟ್ರರುಧಿರದ ಆಗರ
ಪಂಚೆಯುಟ್ಟಿಹ ರೈತ, ನಮ್ಮ ತಲೆಮಾರಿಗಿವನು
ಬುದ್ಧ ಕೃಪಾಸಾಗರ.[೩೧]

ಈ ಕವಿತೆಯಲ್ಲಿ ಗಾಂಧಿಯನ್ನು ದೇಶದ ಜೀವನಾಡಿ ಎಂದು ಗುರುತಿಸುವ ಮೂಲಕ ಗಾಂಧಿ ವ್ಯಕ್ತಿತ್ವದ ಹಿರಿಮೆಯನ್ನು ಎತ್ತಿ ಹಿಡಿಯುತ್ತದೆ. ಜೊತೆಗೆ ಸ್ವಾತಂತ್ರ್ಯದ ಬೀಜವನ್ನು ಬಿತ್ತಿಬೆಳೆದ 'ರೈತ'ನ್ನಾಗಿ ಚಿತ್ರಿಸಲಾಗಿದೆ. ಬುದ್ಧನ ಕರುಣೆಯನ್ನು ಗಾಂಧಿಯಲ್ಲಿ ಗುರುತಿಸುತ್ತಲೇ ಈ ನೆಲದ ಮನಸ್ಸುಗಳನ್ನು ರೂಪಿಸಿದ ಕೃಪಾಸಾಗರನೆಂದು ಕರೆಯಲಾಗಿದೆ.

ಗೋಪಾಲಕೃಷ್ಣ ಅಡಿಗರು 'ಗಾಂಧಿ' ಕವಿತೆಯಲ್ಲಿ ಗಾಂಧಿಯನ್ನು ಗಾಢ ಕತ್ತಲಲ್ಲಿ ಉದಿಸಿದ ಅಪಾರ ಕರುಣೆಯ 'ಕುಡಿದೀಪದ ಸಾಲು' ಎಂದು ಚಿತ್ರಿಸುತ್ತಾರೆ. ಕತ್ತಲನ್ನು ತೊಡೆಯಲು ಬೆಳಕಾಗಿ ಬಂದವರು ಗಾಂಧಿ ಎಂದು ಅವರ ವ್ಯಕ್ತಿತ್ವಕ್ಕೊಂದು ಅಪರಿಮಿತ ಎಲ್ಲೆಯನ್ನು ಕಲ್ಪಿಸುತ್ತಾರೆ. ಅದು ಭೂಮಿ, ಬಾನುಗಳಾಚೆಗೂ ಚಾಚಿಕೊಂಡು ಎಲ್ಲರ ದುಃಖ-ದುಮ್ಮಾನಗಳಿಗೆ ಮಿಡಿಯುತ್ತಿರುವುದನ್ನು ಗುರುತಿಸುತ್ತಾರೆ.

ಗಾಂಧಿ, ಗಾಂಧಿ, ಗಾಂಧಿ !
ಈ ಬಚ್ಚಲು ಕಗ್ಗವಿಯಲಿ
ತಮದ ಸಂತೆ ಗದ್ದಲದಲಿ
ಬಂತೆಲ್ಲಿಂದೆಂತು ಹೇಳು
ಈ ಅಮೂಲ್ಯ ಮಾಲು –
ನಾಲಗೆಗುಡಿ ಚೆಂಬೆಳಕುಲಿ
ಕುಡಿದೀಪದ ಸಾಲು?
ಬಾನ ಕರುಳು ಕರಗಿತ್ತೋ,
ಮುಗಿಲ ಕಣ್ಣು ಹನಿಯಿತೋ
ಬೀದಿಯಲಿ ಬಿಂದು ಬಿಂದು
ಬೆಳಕು ಬಂದು ಕುಣಿಯಿತೋ! [೩೨]

ಇಲ್ಲಿ 'ನಾಲಿಗೆ ಗುಡಿ ಚೆಂಬೆಳಕುಲಿ', 'ಕುಡಿದೀಪದ ಸಾಲು' ಎಂಬ ಸಾಲು ಗಾಂಧಿ ವ್ಯಕ್ತಿತ್ವದಲ್ಲಿನ ಸತ್ಯ, ಕರುಣೆ, ತ್ಯಾಗದ ಗುಣಗಳನ್ನು ಗುರುತಿಸುತ್ತದೆ. ತನ್ನನ್ನೆ ಉರಿಸಿಕೊಂಡು ತನ್ನ ಸುತ್ತಲಿನ ಕತ್ತಲನ್ನು ತೊಡೆಯುವ ದೀಪದ ತ್ಯಾಗ, ಸತ್ಯವನ್ನೇ ನುಡಿಯುವ, ನುಡಿದಂತೆ ನಡೆಯುವ, ಕರುಣೆಯೇ ಮೂರ್ತಿವೆತ್ತಂತೆ ಇರುವ ಗಾಂಧಿ 'ಬೆಳಕಿನ ಬಿಂದು'ವಾಗಿ ಕಂಡಿದ್ದಾರೆ. ಅಲ್ಲದೆ 'ಬಾನ ಕರುಳು ಕರಗಿತೋ, ಮುಗಿಲ ಮಣ್ಣು ಹನಿಯಿತೋ' ಎನ್ನುವ ಸಾಲುಗಳು ನೊಂದವರ, ಕಷ್ಟದಲ್ಲಿರುವವರ, ಅನ್ಯಾಯಕ್ಕೊಳಗಾದವರ, ಅಸ್ಪೃಶ್ಯರ, ತಬ್ಬಲಿಗಳ ನೋವು-ಕಷ್ಟಗಳಿಗೆ ಸ್ಪಂದಿಸಿದ ಗಾಂಧಿ ವ್ಯಕ್ತಿತ್ವದ ತಾಯ್ತನದ ಗುಣವನ್ನು ಧ್ವನಿಸುತ್ತದೆ. ಅಲ್ಲದೆ ಈ ಬೆಳಕು ಬೀದಿ ಬೀದಿಯಲ್ಲಿ ಬಿಂದು ಬಿಂದುವಾಗಿ ಕುಣಿಯುತ್ತಿರುವುದನ್ನು ಗುರುತಿಸುತ್ತದೆ. ಇದು ಗಾಂಧಿ ವ್ಯಕ್ತಿತ್ವದ ಪ್ರಭಾವದ ವ್ಯಾಪಕತೆಯನ್ನೂ, ಅದರ ಪರಿಣಾಮಗಳನ್ನೂ ಒಟ್ಟಿಗೆ ಹಿಡಿದಿಡುತ್ತದೆ.

ಕೆ.ಎಸ್.ನರಸಿಂಹಸ್ವಾಮಿಯವರ 'ಗಾಂಧೀಸ್ತವನ' ಕವಿತೆ ಗಾಂಧಿಯನ್ನು ನಮ್ಮೊಳಗಿನ ಅಂತಃಸಾಕ್ಷಿಯನ್ನು ನಿರಂತರವಾಗಿ ಕಾಡುವ 'ನೆರಳನ್ನಾಗಿ' ಗುರುತಿಸುತ್ತದೆ. ಗಾಂಧಿ ನಮ್ಮನ್ನು ಪ್ರತಿ ಕ್ಷಣ ಕಾಡುವ ನೈತಿಕ ಸಾಕ್ಷಿ ಪ್ರಜ್ಞೆಯಾಗಿದ್ದಾರೆ. ಇದು ನಮ್ಮೊಳಗೆ ಸಂಘರ್ಷವನ್ನು ಉಂಟು ಮಾಡಿ ಬೆಳಕು ಕಂಡುಕೊಳ್ಳುವ ಹಾಗೆ ಮಾಡುತ್ತದೆ. ನಮ್ಮನ್ನು ಎಡೆಬಿಡದೆ ನಿರಂತರವಾಗಿ ಹಿಂಬಾಲಿಸುವ 'ನೆರಳು' ಗಾಂಧಿ ಎಂಬುದು ಆ ವ್ಯಕ್ತಿತ್ವದ ಪ್ರಭಾವದಿಂದ ತಪ್ಪಿಸಿಕೊಳ್ಳಲಾಗದ ಸ್ಥಿತಿಯನ್ನು ಧ್ವನಿಸುತ್ತದೆ.

ಮನೆಗೆ ಬಂದವನೆ ದೀಪವ ಹುಡಿಕಿದೆ.
ಕಣ್ಣ ಮುಚ್ಚಿದೆ, ಎದೆಯಲಿ ಮುಳುಗಿದೆ.
ಹಾರಿ ತೇಲಿ ಬಂತು ಬಿಳಿಯ ರೆಕ್ಕೆಯ ಹಕ್ಕಿ :
ಮೀನಿಗೆ ಕಷ್ಟ ಬಂತು ಅದರ ಸೊಕ್ಕಿಗೆ ಸಿಕ್ಕಿ
ನೀರ ಮೇಲಿನ ಹಲಗೆ ನಕ್ಕು ಕನವರಿಸಿತು.
'ಗಾಂಧಿ' ಎನ್ನುವ ನೆರಳು ಆವರಿಸಿತು.
ತೆಂಗು ಗರಿ, ತಂತಿ, ಕಿಡಿ, ನೀವದನು ನೋಡಿ, ಬಿಡಿ :
ಹೊಗೆಯಾಡಿದರೆ ಕೆಂಡ, ಕೆಂಡ ಬೆಳೆದರೆ ಬೆಂಕಿ'
ಬೆಳಕು ಬೆಂಕಿಯ ನಾಲಗೆ.
ನಡೆದಿವೆ ಒಂದು ಸಾಲಿಗೆ [೩೩]

ನಮಗೆ ಇಷ್ಟವಿರಲಿ, ಇಲ್ಲದಿರಲಿ ನಮ್ಮನ್ನು ಹಿಂಬಾಲಿಸಿ ಕಾಡುವ, ಆವರಿಸಿಕೊಂಡು ಬಿಡುವ ಶಕ್ತಿ ಗಾಂಧಿ ವ್ಯಕ್ತಿತ್ವಕ್ಕಿದೆ. ಅದರ ಪ್ರಭಾವದಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ ಎಂಬಷ್ಟರ ಮಟ್ಟಿಗೆ ಅದು ನಮ್ಮನ್ನು ಕಾಡುತ್ತದೆ. ಇದಕ್ಕೆ ಗಾಂಧಿಯ ವ್ಯಕ್ತಿತ್ವದಲ್ಲಿನ ನೈತಿಕತೆ, ಪಾರದರ್ಶಕತೆ, ಸತ್ಯದ ಮೊನಚು ಕಾರಣ ಎಂಬುದನ್ನು ಮೇಲಿನ ಕವನ ಹಿಡಿದಿಡುತ್ತದೆ. 'ಬಿಳಿಯ ರೆಕ್ಕೆಯ ಹಕ್ಕಿ' ಎಂಬ ರೂಪಕ ಗಾಂಧಿಯ 'ಕುಂದಿಲ್ಲದ ವ್ಯಕ್ತಿತ್ವ'ವನ್ನು, ಅಂತಃಸಾಕ್ಷಿಯನ್ನು ಕೆಣಕಬಲ್ಲ ಶಕ್ತಿಯನ್ನು ಹಿಡಿದಿಡುತ್ತದೆ. 'ತೆಂಗುಗರಿ', 'ತಂತಿ', 'ಕಿಡಿ' ರೂಪಕಗಳು ಆ ವ್ಯಕ್ತಿತ್ವದ ತೀಕ್ಷ್ಣತೆಯನ್ನು ಧ್ವನಿಸುತ್ತವೆ. ನಮ್ಮೊಳಗೆ ಸಂಘರ್ಷದ ಕಿಡಿಯನ್ನು ಹೊತ್ತಿಸಿ ಬೆಳಕು ಕಾಣಿಸಬಲ್ಲ ಅದ್ಭುತ ಶಕ್ತಿ ಗಾಂಧಿ ವ್ಯಕ್ತಿತ್ವಕ್ಕಿದೆ ಎಂಬುದೇ ಆ ವ್ಯಕ್ತಿತ್ವದ ಶಕ್ತಿಯನ್ನು ಮನವರಿಕೆ ಮಾಡಿಕೊಡುತ್ತದೆ. ಮುಂದುವರಿದು ಸಾಕ್ರಟೀಸ್, ಕ್ರಿಸ್ತನ, ಅಪಾರವಾದ ಕರುಣೆ, ಪ್ರೇಮಗಳು ಗಾಂಧಿಯಲ್ಲೂ ಅಡಕವಾಗಿರುವುದನ್ನು ಗುರುತಿಸುತ್ತದೆ. ಈ ಕವನದಲ್ಲಿ ಬರುವ 'ಹೆಬ್ಬಾವಿನೂರೆಗೋಲು', 'ಹೆಬ್ಬುಲಿಯ ಹೆಜ್ಜೆ', 'ನಡೆಯುತ್ತಿದೆ ಎಲ್ಲಿಗಾದರಲ್ಲಿಗೆ' ಎಂಬ ಸಾಲುಗಳು ಗಾಂಧಿ ವ್ಯಕ್ತಿತ್ವದಲ್ಲಿನ ನಿರ್ಭಯತೆ, ದಿಟ್ಟತನ ಮತ್ತು ಸೋಲರಿಯದ ಧೀಮಂತ ಶಕ್ತಿಯನ್ನು ಧ್ವನಿಸುತ್ತವೆ. ಸತ್ಯ ಪ್ರಾಮಾಣಿಕತೆಯನ್ನು ಮೈಮನಸ್ಸಿನ ತುಂಬಾ ಹೊದ್ದುಕೊಂಡ ಗಾಂಧಿಯ ವ್ಯಕ್ತಿತ್ವಕ್ಕೆ ಅದರಿಂದಲೇ ಶಕ್ತಿ ಪ್ರಾಪ್ತವಾಗಿದೆ. ಆ ಶಕ್ತಿಯಿಂದಲೇ 'ಸುಡದ ಸೂರ್ಯನ ಸೀಮೆಯನ್ನು' ಎದುರಿಸಲು ಗಾಂಧಿಗೆ ಸಾಧ್ಯವಾದದ್ದು. ಗಾಂಧಿ ವ್ಯಕ್ತಿತ್ವದ ಅನನ್ಯತೆಯನ್ನು ಅವರಲ್ಲಿನ ದೃಢತೆಯ ಮೂಲಕ ಗುರುತಿಸುವ ಪ್ರಯತ್ನ ಕೂಡ ನಡೆದಿದೆ. ಅದನ್ನು ಹಿಡಿದಿಡುವ ಬಗೆ ವಿಶಿಷ್ಟವಾದದ್ದು.

ಕೈಮುಗಿದು ನಡೆದಿತ್ತು ಕಡೆಯ ನೆರಳು:
ನಡೆದಂತೆ ಬೆಟ್ಟಗಳು ಕರಗಿ ಬಂಡೆಗಳಾಗಿ
ಬಂಡೆಗಳು ಕರಗಿ ಕಲ್ಮಣಿಯಾಗಿ, ಮಣಿ ಕರಗಿ
ಕಣವಾಗಿ ಅಣುವಾಗಿ ಮುಗಿದಿತ್ತು, ಮಿಂಚಿನಲಿ
ಭೂಮಿಯಂಚಿನಲಿ
ಕಾಲದಾಚೆಗೆ ತೆರೆದ ಕಡೆಯ ಬಾಗಿಲ ತಳ್ಳಿ
ನೆಲದ ಬದುಕಿನ ನೆರಳು ಮುನ್ನುಗ್ಗುತಿಹುದು[೩೮]

ಎಂತಹ ಕಲ್ಲೆದೆಯನ್ನೂ ಪರಿವರ್ತಿಸಬಲ್ಲ ಗಾಂಧಿ ವ್ಯಕ್ತಿತ್ವದ ಶಕ್ತಿಯನ್ನು ಕವಿತೆ ನೆನಪಿಗೆ ತರುತ್ತದೆ. 'ಕೈ ಮುಗಿದು ನಡೆದಿತ್ತು' ಎಂಬುದು ಅಹಿಂಸೆ, ಪ್ರೇಮ ಮತ್ತು ಸತ್ಯದ ಅಸ್ತ್ರಗಳಿಂದ ಎಲ್ಲವನ್ನೂ ಮಣಿಸಬಲ್ಲ ದೈವೀಶಕ್ತಿಯನ್ನು ಗಾಂಧಿ ಹೊಂದಿದ್ದರು ಎಂಬುದರ ಕಡೆಗೆ ಗಮನ ಸೆಳೆಯುತ್ತದೆ.

ತನ್ನ ಜೀವಿತದಲ್ಲೆ ನಂಬಲಸಾಧ್ಯವಾಗಿ ಬದುಕಿದ ಗಾಂಧಿ ಹಲವು ಟೀಕೆಗಳಿಗೆ, ವಿರೋಧಗಳಿಗೆ ಒಳಗಾಗಿದ್ದರು. ಅವರ ಹುಚ್ಚು ಪ್ರಯೋಗಗಳನ್ನು ಕಂಡವರು ಇವನೊಬ್ಬ ಹುಚ್ಚನಿರಬೇಕೆಂದು ಟೀಕಿಸಿದ್ದರು. ಆದರೆ ಇಂದು ಗಾಂಧಿ ಬದುಕು-ಚಿಂತನೆ, ಪ್ರಯೋಗಗಳ ಮಹತ್ವ ಅರಿವಿಗೆ ಬರುತ್ತಿದೆ. ಆತನನ್ನು ಒಬ್ಬ ಮನುಷ್ಯನೆ ಎಂದು ಅನುಮಾನಿಸುತ್ತಿದ್ದ ಕಾಲ ಹೋಗಿ ಅವನನ್ನು ನಿಜವಾದ ಮನುಷ್ಯನೆಂದು ನಂಬುವ ಕಾಲ ಬಂದಿದೆ. ಕೆ.ಎಸ್.ನ ತಮ್ಮ ಕವನದಲ್ಲಿ ಗಾಂಧಿಯನ್ನು ಒಬ್ಬ ಅಪ್ಪಟ ಮನುಷ್ಯನೆಂದು ಕರೆಯುವ ಮೂಲಕ 'ಮನುಷ್ಯ ಶಕ್ತಿ'ಯ ಅಗಾಧತೆಯನ್ನು ಗುರುತಿಸುತ್ತಾರೆ. ತನ್ನನ್ನು ತಾನು ಒಬ್ಬ ನಿಜ ಮನುಷ್ಯನನ್ನಾಗಿಸಿಕೊಳ್ಳಲು ಗಾಂಧಿ ಸವೆಸಿದ ದಾರಿ ಸರಳವಾದುದಲ್ಲ ಎಂಬುದನ್ನು ಹೇಳುತ್ತಾರೆ. ಗಾಂಧಿಯನ್ನು 'ಭರವಸೆಯ ನೆರಳು' ಎನ್ನುತ್ತಲೆ ಗಾಂಧಿಯ ವ್ಯಕ್ತಿತ್ವದಲ್ಲಿನ ಅಪಾರವಾದ ಪ್ರೇಮ, ಕರುಣೆ, ಆಸರೆಯ ಗುಣಗಳನ್ನು ಎತ್ತಿಹಿಡಿಯುತ್ತಾರೆ. ಗಾಂಧಿ ನಿಜಕ್ಕೂ ಮಾನವೀಯ ಮೌಲ್ಯಗಳ ಆಗರವಾಗಿದ್ದರು. ಅದೇ ಗಾಂಧಿ ವ್ಯಕ್ತಿತ್ವದ ಶಕ್ತಿಯೂ ಆಗಿತ್ತು.

ಗಾಂಧಿ ಇಂದು ಭೌತಿಕವಾಗಿ ಇಲ್ಲದಿದ್ದರೂ 'ನೆರಳಾಗಿ' ಕಾಡುವ, 'ನೆರಳಾಗಿ' ಆಸರೆಯನ್ನು ನೀಡುವ ತಾಯಿಯಾಗಿದ್ದಾರೆ ಎನ್ನುವ ಮೂಲಕ ಗಾಂಧಿ ಅಂದಿಗೂ, ಇಂದಿಗೂ, ಎಂದೆಂದಿಗೂ ಪ್ರಸ್ತುತ ಎನ್ನುವ ಕಡೆಗೆ ಕವಿತೆ ಗಮನ ಸೆಳೆಯುತ್ತದೆ.

ಜಿ.ಎಸ್.ಎಸ್.ರ 'ಗಾಂಧಿ' ಕವಿತೆ ಗಾಂಧಿಯ ಪಾರದರ್ಶಕ ವ್ಯಕ್ತಿತ್ವದ ಶ್ರೇಷ್ಠತೆಯನ್ನು ಸಕಾರಣವಾಗಿ ಗುರುತಿಸುತ್ತದೆ. ಗಾಂಧಿಯನ್ನು ಒಬ್ಬ 'ವಿಚಿತ್ರ ಮನುಷ್ಯ' ಎಂದು ಕರೆಯುತ್ತಲೆ ಆ ವಿಚಿತ್ರತೆಯಲ್ಲಿನ ವೈಶಿಷ್ಟ್ಯತೆಗಳನ್ನು ಗುರುತಿಸುತ್ತದೆ.

ಉತ್ತಹೊಲ ; ತೆರೆದ ಪುಸ್ತಕ
ಗಾಜು ಮೈ ಗಡಿಯಾರ ;
ನಿನ್ನ ಬದುಕು,
ಕಾವಿಯುಡಲಿಲ್ಲ, ಹೆಣ್ಣ ಬಿಡಲಿಲ್ಲ ;
ಎಲ್ಲೋ ಮಠದೊಳಗೆ ಕೂತು ರಹಸ್ಯವಾಗಿ
ಜಪಮಣಿ ಎಣಿಸಿ ಸಮಾಧಿಸ್ಥನಾಗಲಿಲ್ಲ;
ತೆರೆದ ಬಯಲಿನ ಕೆಳಗೆ ಎಲ್ಲರ ಜೊತೆಗೂ ಕೂತು
ಪ್ರಾರ್ಥಿಸಿದೆ;
ಸಬಕೋ ಸನ್ಮತಿ ದೇ ಭಗವಾನ್
ಪವಾಡಗಳನ್ನು ತೋರಿಸಿ ಯಾರನ್ನು ಮರುಳು ಮಾಡಲಿಲ್ಲ.
ಮಾಡಿದ್ದೇ ಪವಾಡದ ತಲೆಮಟ್ಟಿತು.[೩೫]

ಈ ಕವನದಲ್ಲಿ ಬರುವ 'ಉತ್ತ ಹೊಲ', 'ತೆರೆದ ಪುಸ್ತಕ', 'ಗಾಜು ಮೈ ಗಡಿಯಾರ' ಎಂಬ ರೂಪಕಗಳು ಗಾಂಧಿಯ ಪಾರದರ್ಶಕ ಬದುಕನ್ನು ಬಿಂಬಿಸುತ್ತವೆ. ಗಾಂಧಿ ತಮ್ಮ ಬದುಕಿನ ಎಲ್ಲಾ ಪ್ರಯೋಗಗಳನ್ನು ಬಹಿರಂಗವಾಗಿಯೇ ಮಾಡಿದವರು. ತಮಗೆ ಸರಿಯೆಂದು, ಸತ್ಯವೆಂದು ತೋರಿದುದನ್ನು ಹೇಳಲು ಎಂದೂ ಹಿಂಜರಿದವರಲ್ಲ. ಹಾಗೆಯೇ ತಪ್ಪು, ಸರ್ವಜನರ ಹಿತಕ್ಕೆ ದಕ್ಕೆಯುಂಟುಮಾಡುತ್ತದೆ ಎಂದಾಗ ಎಂತಹ ವಿರೋಧಕ್ಕೂ ಹೆದರಿದವರಲ್ಲ. ಗಾಂಧಿ ತಮ್ಮ ಬದುಕನ್ನೇ ಸೇವೆಗಾಗಿ ಮುಡುಪಿಟ್ಟುಕೊಂಡಿದ್ದುದರಿಂದ ಯಾವ ಸ್ವಹಿತಾಸಕ್ತಿಯ ರಹಸ್ಯ ತಂತ್ರಗಳನ್ನು ಹೆಣೆಯುವ ಅವಶ್ಯಕತೆಯಿರಲಿಲ್ಲ. ಗಾಂಧಿ ನಡೆ-ನುಡಿಯಲ್ಲಿ, ಒಳ-ಹೊರಗುಗಳಲ್ಲಿ ಪಾರದರ್ಶಕತೆಯನ್ನು ಕಾಯ್ದುಕೊಂಡು ಬದುಕಿದವರು. ಗೃಹಸ್ಥನಾಗಿದ್ದುಕೊಂಡು ಸಂತನ ಹಾಗೆ ಬದುಕಿದ, ರಾಜಕೀಯದಲ್ಲಿದ್ದುಕೊಂಡು ಆಧ್ಯಾತ್ಮವಾದಿಯಾಗಿ ಬದುಕಿದ ವಿಶಿಷ್ಟ ವ್ಯಕ್ತಿತ್ವ ಅವರದು. ಧರ್ಮ, ಮಠ, ಮಠಾದೀಶರುಗಳು ಜನರಿಂದ ದೂರವಾಗಿ, ತಾವೇ ದೇವರೆಂದು, ಪವಾಡ ಸಾಧಕರೆಂದು ಬಿಂಬಿಸಿಕೊಳ್ಳುತ್ತಿರುವ ಹೊತ್ತಿನಲ್ಲಿ 'ತೆರೆದ ಬಯಲಿನ ಹಾಗೆ ಬದುಕಿ, ಬದುಕೇ ಪವಾಡವೆಂಬಂತೆ ಬದುಕಿದ' ಗಾಂಧಿ ವ್ಯಕ್ತಿತ್ವ ಅತ್ಯಂತ ವಿಶಿಷ್ಟವಾದುದು ಎಂಬುದನ್ನು ಕವಿತೆ ಗುರುತಿಸುತ್ತದೆ.

ಕತ್ತಿ ಕೋವಿ ಹಿಡಿಯಲಿಲ್ಲ
ಆದರೂ ಯದ್ಧ ಮಾಡಿದೆ.
ತುಟಿ ಬಿಗಿಯಲಿಲ್ಲ, ಹಲ್ಲು ಕಚ್ಚಲಿಲ್ಲ,
ಕಣ್ಣು ಕೆಂಪಗೆ ಮಾಡಲಿಲ್ಲ,
ನಗುನಗುತ್ತಲೇ ಎದುರಾಳಿಗಳ ಮೇಲೆ
ಮುನ್ನುಗ್ಗಿದೆ
ಗೆದ್ದೆ.[೩೬]

ಇದು ಗಾಂಧಿಯ ಹೋರಾಟದ ಹಾದಿಯ ಯಶಸ್ಸಿನ ಗುಟ್ಟನ್ನು ಬಿಚ್ಚಿಡುತ್ತದೆ. ಗಾಂಧಿ ವ್ಯಕ್ತಿತ್ವದ ಹಿರಿಮೆಯಿರುವುದು ಪ್ರೀತಿಯಿಂದ ಶತೃಗಳನ್ನು ಗೆದ್ದಿರುವುದರಲ್ಲಿ, ಅಹಿಂಸೆಯ ಅಸ್ತ್ರದಿಂದ ನಗುನಗುತ್ತಲೇ

ಎದುರಾಳಿಯನ್ನು ಹಿಮ್ಮೆಟ್ಟಿಸಿದ್ದರಲ್ಲಿ. ಕೋಪ, ಅಸೂಯೆಗಳಿರದ, ಯಾರಿಗೂ ನೋವನ್ನುಂಟುಮಾಡಲು ಬಯಸದ ವಿಶಿಷ್ಟ ವ್ಯಕ್ತಿತ್ವ ಗಾಂಧಿಯದು. ಪ್ರೇಮದಿಂದ ಜಗತ್ತನ್ನೇ ಗೆಲ್ಲಬಹುದೆಂಬುದನ್ನು ಸಾಧಿಸಿ ತೋರಿಸಿದವರು ಗಾಂಧಿ. ಹಾಗಾಗಿ ಜಿ.ಎಸ್.ಎಸ್. ಗಾಂಧಿಯ ವ್ಯಕ್ತಿತ್ವದಲ್ಲಿ ಮಾನವೀಯ ಗುಣಗಳ ಗಣಿಯನ್ನು ಕಾಣುತ್ತಾರೆ.

ಗಾಂಧಿ ಇಂದು ಒಬ್ಬ ವ್ಯಕ್ತಿಯಾಗಿ ಉಳಿಯದೆ ಧ್ವನಿಶಕ್ತಿಯಾಗಿ ಮಾರ್ಪಟ್ಟಿದ್ದಾರೆ. ಇಂದು ಯಾವೆಲ್ಲ ವಿಚಾರಗಳ ಅಭಿವ್ಯಕ್ತಿಗೆ, ಯಾವೆಲ್ಲ ಸಂದರ್ಭ-ಸನ್ನಿವೇಶಗಳಿಗೆ ಗಾಂಧಿಯನ್ನು ತಳುಕು ಹಾಕಲಾಗುತ್ತಿದೆ ಎಂಬುದನ್ನು ಗಮನಿಸಿದರೆ ಗಾಂಧಿ ವ್ಯಕ್ತಿತ್ವ ಪಡೆದುಕೊಂಡಿರುವ ವಿಚಿತ್ರ ಧ್ವನಿಶಕ್ತಿಯ ಸ್ವರೂಪದ ಅರಿವಾಗುತ್ತದೆ. ಹೀಗೆ ವ್ಯಕ್ತಿಯ ನೆಲೆಯನ್ನು ಮೀರಿ ವ್ಯಕ್ತಿತ್ವವೊಂದು ಸಾಂಸ್ಕೃತಿಕ ಬದುಕಿನಲ್ಲಿ ಪಡೆದುಕೊಳ್ಳುವ ರೂಪಾಂತರ, ಹೊಂದುವ ಸಂಕೀರ್ಣತೆಗಳು ಆ ವ್ಯಕ್ತಿತ್ವದ ಅನನ್ಯತೆಯನ್ನು, ಅದು ಸಾಂಸ್ಕೃತಿಕ ಬದುಕಿನೊಂದಿಗೆ ಹೊಂದಿರಬಹುದಾದ ಗಾಢ ಸಂಬಂಧವನ್ನು ಧ್ವನಿಸುತ್ತವೆ. ಚೆನ್ನವೀರ ಕಣವಿ ಅವರ 'ಆದರೂ ಅವನ ನೆನಪು' ಕವಿತೆ ಗಾಂಧಿ ವ್ಯಕ್ತಿತ್ವ ಗ್ರಹಿಸಲಾಗದ, ಶಬ್ದಗಳಲ್ಲಿ ಹಿಡಿದಿಡಲಾಗದ ಧ್ವನಿಶಕ್ತಿ ಪಡೆದುಕೊಂಡಿರುವುದನ್ನು ಗುರುತಿಸುತ್ತದೆ. ಗಾಂಧಿ ವ್ಯಕ್ತಿತ್ವ ಯಾವ ನಿರ್ದಿಷ್ಟ ಅರ್ಥಗಳಿಗೂ ನಿಲುಕದೆ ನಿರಂತರವಾಗಿ ಬೆಳೆಯುತ್ತಾ, ಅರ್ಥ ವಿಸ್ತಾರವನ್ನು ಪಡೆಯುತ್ತಾ ಸಾಗುತ್ತಿದೆ.

ಗಾಂಧೀಜಿ ಬಗ್ಗೆ ಈ ಕವಿತೆ ಬರೆದು
ಗೆದ್ದೆ
ಎಂದು ಭಾವಿಸಿದ್ದೆ
ಆದರೆ ಈಗ
ಶಬ್ದಗಳಿಗೆ ಸಿಲುಕದೆ, ಅರ್ಥಕ್ಕೂ ನಿಲುಕದೆ
ಬರಿಯ ಧ್ವನಿಯಾಗಿ ಬಿಟ್ಟಿದ್ದಾನೆ. [೩೭]

ಈ ಕವನ ಗಾಂಧಿಯನ್ನು ಗ್ರಹಿಸುವಲ್ಲಿನ ಇಕ್ಕಟ್ಟನ್ನು ತಿಳಿಸುತ್ತದೆ. ಗಾಂಧಿ ವ್ಯಕ್ತಿತ್ವ ಅಮೂರ್ತ ಹಾಗೂ ಧ್ವನಿಶಕ್ತಿಯ ರೂಪವನ್ನೂ ಪಡೆದುಕೊಂಡಿರುವಂತದ್ದು. ಹಾಗಾಗಿಯೆ ಗಾಂಧಿ ಅರಿತಷ್ಟೂ ನಿಗೂಢವಾಗುತ್ತಾ ಸಾಗುವ ವ್ಯಕ್ತಿತ್ವ, ಗಾಂಧಿ ಇಂದು ವ್ಯಕ್ತಿಯಾಗಿ ಉಳಿದಿಲ್ಲ. ಮಾನವ ಬದುಕಿನ ಹಲವು ಆಯಾಮಗಳನ್ನು ಪ್ರತಿನಿಧಿಸಬಲ್ಲ, ಅಭಿವ್ಯಕ್ತಿಸಬಲ್ಲ ಧ್ವನಿಶಕ್ತಿಯಾಗಿದ್ದಾರೆ ಎಂಬುದನ್ನು ಕವಿತೆ ಗುರುತಿಸಿದೆ.

ಕನ್ನಡ ಕವಿಗಳಿಗೆ ಗಾಂಧಿ ವ್ಯಕಿತ್ವವೆಂಬುದು ಹಲವು ಮಾನವೀಯ ಹಾಗೂ ಉನ್ನತ ಗುಣಗಳ ಆಗರವಾಗಿ ಕಂಡಿದೆ. ಹಾಗಾಗಿಯೆ ಆ ವ್ಯಕ್ತಿತ್ವದ ಬಗೆಗೆ ವಿಸ್ಮಯ, ಬೆರಗು, ಭಕ್ತಿಯ ಭಾವಗಳು ಮೇಲಿಂದ ಮೇಲೆ ವ್ಯಕ್ತವಾಗುತ್ತವೆ. ಶಾಂತರಸರ 'ಗಾಂಧಿ ಎಂಬುವ ಹೆಸರು' ಕವಿತೆ ಗಾಂಧಿ ವ್ಯಕ್ತಿತ್ವದಲ್ಲಿ ಪ್ರೇಮ, ಕರುಣೆ, ತ್ಯಾಗ ಧೈರ್ಯ, ಸತ್ಯ ಮುಂತಾದ ಶ್ರೇಷ್ಠ ಗುಣಗಳ ಸಂಗಮವನ್ನು ಗುರುತಿಸಿದೆ. ಈ ಕವಿತೆ ಗಾಂಧಿ ವ್ಯಕ್ತಿತ್ವದಲ್ಲಿನ ತಾಯ್ತನದ ಗುಣವನ್ನು ಗುರುತಿಸುತ್ತದೆ. ಎಲ್ಲರ ನೋವಿಗೂ ಸ್ಪಂದಿಸುವ, ಕಳವಳಿಸುವ, ತುಡಿವಜೀವ ಅದು. ಹಾಗೆಯೇ ಸಮಾನತೆ, ಸತ್ಯ, ಒಳಿತುಗಳು ಗಾಂಧಿ ಬದುಕಿನ ಭಾಗಗಳಾಗಿದ್ದವು. ಅವುಗಳಿಗಾಗಿ ಗಾಂಧಿ ತಮ್ಮ ಬದುಕನ್ನು ಸವೆಸಿದುದನ್ನು ಕವಿತೆ ಚಿತ್ರಿಸಿದೆ.

ಹರಿಜನರು, ಗಿರಿಜನರು, ಎಲ್ಲ ಜಾತಿಯ ಜನರು
ಎಲ್ಲರಿಗು ಅವನಿಂದ ಸಮತೆ ಪಾಠ
ಸತ್ಯಕ್ಕೆ ಉಂಟಾದ ಯುಗಯುಗದ ಹಸಿವನ್ನು

ನಡೆನುಡಿಯ ಸುಧೆಯಿಂದ ಕಳೆದನಘಟ
ಕೆಟ್ಟದನು ಕಂಡರಿಯ ಒಳಿತೊಂಬನೇ ಬಲ್ಲ
ಲೇಸಗ್ಯೆಯುತ ಸವೆದು ಶ್ರೀಗಂಧವಾದ
How dangerous it is to be too good
ಜ್ಞಾನಿಯೊಬ್ಬನು ಹೀಗೆ ಮನಗರಗಿ ನುಡಿದ
- - - - - - - - - - - -
ಸಂಸಾರ ಸನ್ಯಾಸ ಎರಡಕ್ಕೂ ಅವನಿಂದ
ಬೆಲೆ ಬಂತು ಅವನೆಂಥ ಪುಣ್ಯವಂತ. [೩೮]

ತನ್ನ ಜೀವಿತದ ಅವಧಿಯಲ್ಲೇ ನಂಬಲಸಾಧ್ಯವಾದ, ವಿಸ್ಮಯಪಡಬಹುದಾದ ರೀತಿಯಲ್ಲಿ ಬದುಕಿದ ವಿಶಿಷ್ಟ ವ್ಯಕ್ತಿತ್ವ ಗಾಂಧಿಯದು. ಮನುಷ್ಯ ಅತೀ ಒಳ್ಳೆಯವನಾಗಿ ಬದುಕುವುದು ಸುಲಭವೇನಲ್ಲ. ಉನ್ನತ ಮೌಲ್ಯಗಳನ್ನು ನಡೆಯಲ್ಲೂ, ನುಡಿಯಲ್ಲೂ ಎಂತಹ ಕಠಿಣ ಸಂದರ್ಭಗಳಲ್ಲೂ ಪಾಲಿಸಿಕೊಂಡು ಬರುವುದು ಸರಳವೇನಲ್ಲ. ಶ್ರೇಷ್ಠವಾಗಿ ಬದುಕುವುವರ ಮೂಲಕ ಮಾನವ ಬದುಕಿಗೇ ಘನತೆಯನ್ನು ತಂದುಕೊಡುವುದು ಸಣ್ಣ ಕೆಲಸವೇನಲ್ಲ. ಆದರೆ ಗಾಂಧಿ ತಮ್ಮ ಒಂದು ಜೀವಿತದಲ್ಲೇ ಇವೆಲ್ಲವೂ ಆಗಿದ್ದರು ಎಂಬುದು ನಂಬಲಸಾಧ್ಯವಾದರೂ ಸತ್ಯ. ಗಾಂಧಿ ವ್ಯಕ್ತಿತ್ವದ ಈ ಹಿರಿಮೆಯನ್ನು ಕವಿತೆ ವಿಶಿಷ್ಟವಾಗಿ ಗುರುತಿಸಿದೆ.

ಗಾಂಧಿ ವ್ಯಕ್ತಿತ್ವ ವೈಯಕ್ತಿಕ ನೆಲೆಯಲ್ಲಿ ವಿಕಾಸಶೀಲವಾಗಿ ಬೆಳೆದದ್ದಷ್ಟೇ ಅಲ್ಲ, ಅದು ನೆಲದ ಬದುಕಿನೊಂದಿಗೆ ಬೆಸೆದುಕೊಂಡಿದ್ದ ಜೀವವೂ ಹೌದು. ಗಾಂಧಿ ವ್ಯಕ್ತಿತ್ವಕ್ಕೆ ಹಿರಿಮೆ ಬಂದಿರುವುದು ಅವರು ಆಕಾಶದೆತ್ತರಕ್ಕೆ ಬೆಳೆದಿದ್ದರು ಎಂದಲ್ಲ; ಜನರ ನಡುವೆ ಬದುಕುತ್ತಾ, ನೆಲದ ಬದುಕನ್ನು ಸುಧಾರಿಸಲು ಇನ್ನಿಲ್ಲದಂತೆ ಶ್ರಮಿಸಿದರು, ಅದಕ್ಕಾಗಿ ಸರ್ವವನ್ನೂ ಸಮರ್ಪಿಸಿದ್ದರು ಎಂಬುದಕ್ಕಾಗಿ. ಸುಜನಾರ 'ಗಾಂಧಿ' ಕವಿತೆ ನೆಲದೊಂದಿಗೆ ಆ ವ್ಯಕ್ತಿತ್ವ ಬೆಸೆದುಕೊಂಡಿರುವ ನಂಟನ್ನು ಗುರುತಿಸುತ್ತದೆ. ನೆಲದ ನಂಟನ್ನು ಕಡಿದುಕೊಂಡು ಎತ್ತರವಾಗಿ ಬೆಳೆದು ಎಲ್ಲೋ ಅಮೂರ್ತವಾಗುಳಿದ ವ್ಯಕ್ತಿ ಗಾಂಧಿಯಲ್ಲ. ನೆಲದಿಂದಲೇ ಪುಟಿದು ಎತ್ತರಕ್ಕೆ ಬೆಳೆದರೂ ನೆಲದಲ್ಲೇ ತನ್ನ ಬೇರುಗಳನ್ನು ಆಳವಾಗಿ ಊರಿದ, ಬದುಕಿನ ಎಲ್ಲ ಕಷ್ಟ- ಸವಾಲುಗಳ ನಡುವೆ ಮೂರ್ತವಾಗಿ ಬದುಕಿದ ಉದಾತ್ತ ವ್ಯಕ್ತಿ ಗಾಂಧಿ ಎಂಬುದನ್ನು ಸಮರ್ಥವಾಗಿ ಚಿತ್ರಿಸಿದೆ.

ಇವನೊಬ್ಬ ಎದ್ದ
ಮುಗಿಲುದ್ದ ನಿಮಿರಿ ಬೆಳೆದ.
ನೆಲದ ನೆಲೆಗಟ್ಟನೊದೆದೆಲ್ಲೋ ಮುಗಿಲ ಮರೆ ಬಿದ್ದ
ಆಕಾಶ ಕ್ಷಿಪಣಿಯಂತಲ್ಲ;
ಪಾತಾಳದಿಂದೆದ್ದು ನೆಲದೊಳಕ್ಕೆ ಕಾಲೂರಿ
ಬಾನ ಮುಡಿಯೊಳು ಧರಿಸಿ ನಿಂತಂತೆ ಮಂದರಾದ್ರಿ [೩೯]

ಗಾಂಧಿ ವ್ಯಕ್ತಿತ್ವದ ಹಿರಿಮೆಯಿರುವುದು ನೆಲದಲ್ಲೇ ಆಳವಾಗಿ ಬೇರೂರಿ ನಿಂತ ಮಂದರಾದ್ರಿಯಾಗುವುದರಲ್ಲಿ. ನೆಲವನ್ನೊದೆದು ಜಿಗಿದು ಮೆರೆಯಾಗುವ ಆಕಾಶ ಕ್ಷಿಪಣಿಯ ಮುಂದೆ ಮಂದರಾದ್ರಿಯ ಮಹತ್ವ ಹಿರಿದಾದುದು. ಗಾಂಧಿ ಹಾಗೆ ಯಾವ ಅತಿರೇಕಗಳಿಗೂ ಹೋಗದೆ ಜನರ ನಡುವೆಯೇ ಅತಿ ಸಾಮಾನ್ಯವಾಗಿ ಬದುಕಿದ್ದು, ಮೂರ್ತವಾಗಿ ಉಳಿದದ್ದು ಅವರ ವ್ಯಕ್ತಿತ್ವಕ್ಕೆ ಘನತೆಯನ್ನು ತಂದುಕೊಟ್ಟಿದೆ. ನೆಲದ ಬದುಕನ್ನು ನಿರಾಕರಿಸಿ ಆಕಾಶಕ್ಕೆ ಕಣ್ಣು ನೆಟ್ಟ ವಿರಾಗಿಯಾಗಿರಲಿಲ್ಲ, ನೆಲದ ಬದುಕಿನೊಂದಿಗೆ ಗಾಢವಾಗಿ ಬೆಸೆದುಕೊಂಡಿದ್ದ ಆಧ್ಯಾತ್ಮ ಸಾಧಕರಾಗಿದ್ದರು ಗಾಂಧಿ ಎಂಬುದನ್ನು ಕವಿತೆ ಗುರುತಿಸಿದೆ.

ಗಾಂಧಿ ತಮ್ಮನ್ನು ದೇವರೆಂದು, ದೇವದೂತ, ಅವತಾರಿಯೆಂದು ಬಿಂಬಿಸಿಕೊಳ್ಳಲು ಹೆಣಗಿದವರಲ್ಲ. ಬದಲಾಗಿ ತಮ್ಮನ್ನು ಒಬ್ಬ 'ಮನುಷ್ಯ'ನನ್ನಾಗಿ ರೂಪಿಸಿಕೊಳ್ಳುವ ನಿರಂತರ ಪ್ರಯತ್ನದಲ್ಲಿ ತೊಡಗಿದ್ದರು. ಇದು ಗಾಂಧಿ ವ್ಯಕ್ತಿತ್ವದ ಹಿರಿಮೆ. ಪಾ.ವೆಂ. ಆಚಾರ್ಯರ 'ಗಾಂಧಿಗೆ' ಕವಿತೆ ಅದನ್ನು ಹೀಗೆ ಹಿಡಿದಿಟ್ಟಿದೆ.

ಎಲ್ಲಾರು ನಿನ್ನನು ದೇವರು ಮಾಡಬೇಕಂ
ದಿದ್ದಾಗ್ಗೆ ನೀನೊಬ್ಬ ಹಟಮಾರಿಯ ಹಾಗೆ
ಮಾನುಷರ ಮಧ್ಯೇ ಮನುಷ್ಯನಾಗಿರುವ
ಅಮಾನುಷೀ ಒಂಟಿದಾರಿಯಲ್ಲಿ ನಡೆದೆ. [೮೦]

ಎಂದು ತಮ್ಮನ್ನು ದೇವರೆಂದು ಬಿಂಬಿಸಿಕೊಳ್ಳುತ್ತಿರುವವರ, ಜನರ ಕಣ್ಣಲ್ಲಿ ದೇವರಾಗಲು ಬಯಸುವವರ ನಡುವೆ ಗಾಂಧಿ ಮನುಷ್ಯನಾಗಬಯಸಿದ್ದು, ಅದಕ್ಕಾಗಿ ವಿಚಿತ್ರವಾದ ಪ್ರಯೋಗಗಳಿಗೆ ತನ್ನ ಬದುಕನ್ನು ಒಡ್ಡಿಕೊಂಡಿದ್ದು ಅವರ ವ್ಯಕ್ತಿತ್ವದ ಹಿರಿಮೆಗೆ ಕಾರಣವಾಗಿದೆ.

ಗಾಂಧಿ ಆಕರ್ಷಕ ದೈಹಿಕ ಸೌದರ್ಯವನ್ನು, ದೇಹದಾರ್ಢ್ಯತೆಯನ್ನು ಹೊಂದಿದವರೇನಲ್ಲ. ಸೊಗಸು ಮಾತುಗಾರರಲ್ಲ. ಹೀಗಿದ್ದರೂ ಆ ವ್ಯಕ್ತಿತ್ವ ಅತ್ಯಂತ ಪ್ರಭಾವಶಾಲಿ, ಶಕ್ತ. ಜನ ಮಂತ್ರಮುಗ್ಧರಾಗಿ ಗಾಂಧಿಯನ್ನು ಅನುಸರಿಸುತ್ತಿದ್ದರು. ಇದು ವಿಸ್ಮಯವಾದರೂ ಸತ್ಯ. ಗಾಂಧಿ ವ್ಯಕ್ತಿತ್ವಕ್ಕೆ ಆ ಘನತೆ ಬಂದದ್ದು ಅವರ ಸತ್ಯದಿಂದ ಕೂಡಿದ ಪಾರದರ್ಶಕ ಬದುಕಿನಿಂದ.

ಇವನೊಬ್ಬ ಬೈರಾಗಿ !
ತುಂಬ ಹರೆಯದ ಮಾಗಿ ಇವನ ದೇಹ!
ಥೇಟು ತಟ್ಟಿಗೆ –ಅಲ್ಲ– ಎಣ್ಣೆ ಗೊರವನ ಗೂಡು !!
ತಲೆಬೋಳು, ಬಾಯ್ ಬಚ್ಚು
ಹರಕು ಗಡ್ಡದ ಮೇಲೆ ಮುರುಕು ಮೀಸೆ
ಕಣ್ಣೆರಡು ಮೂಸೆ?
ಸಣ್ಣ ಸೋರೆಯ ಬುರುಡೆಗಂಟಿಸಿದ ರೆಕ್ಕೆಗಿವಿ
ಇವನ ಮೈ ಬಳಿದವಗೆ ಸಿಗಬಹುದು ಮಾಂಸ ಒಂದೇ ಒಂದು ಕೆ.ಜಿ
ಹೀರಿದರೆ ಬರಬಹುದು ಕಾಲು ಲೀಟರು ರಕ್ತ!
ಆದರೂ ಈತ ಬಹು ಶಕ್ತ!
ಈ ಬಡಜೋಗಿ ತೂಗುವೊಡೆ ಶೆಟ್ಟಿಯಂಗಡಿಯಲ್ಲಿ ಕಲ್ಲುಗಳೇ ಇಲ್ಲ!
ಕೊಳ್ಳುವೊಡೆ ಬ್ಯಾಂಕಿನಲಿ ಹಣವಿಲ್ಲ!
ಇಲ್ಲಾ . . . . ಇಲ್ಲಾ . . . . ಇಲ್ಲಾ . . . .
ಇವನಿಗೊಂದು ಇಂದು ಸಾಟಿಯಿಲ್ಲ! [೮೧]

ಗಾಂಧಿ ಅತ್ಯಂತ ಸರಳವಾಗಿ, ವಿಚಿತ್ರವಾಗಿ ಬದುಕಿದರೂ ಆ ವ್ಯಕ್ತಿತ್ವದ ಘನತೆಗೆ ಸರಿಸಾಟಿಯೆಂಬುದಿಲ್ಲ ಎಂಬುದು ವಿಸ್ಮಯವೇ ಸರಿ. ಗಾಂಧಿ ವ್ಯಕ್ತಿತ್ವ ಬೀರಿದ, ಇನ್ನೂ ಬೀರುತ್ತಲೇ ಇರುವ ಪ್ರಭಾವವನ್ನು ಗಮನಿಸಿದರೆ ಆ ವ್ಯಕ್ತಿತ್ವದ ಘನತೆ, ಶ್ರೇಷ್ಠತೆ, ಕಾಲಾತೀತತೆ ಮನವರಿಕೆಯಾಗಬಲ್ಲದು. ಈ ಕವಿತೆ ಗಾಂಧಿ ವ್ಯಕ್ತಿತ್ವವನ್ನು ದೌರ್ಬಲ್ಯರಹಿತ ಪರಿಪೂರ್ಣ ವ್ಯಕ್ತಿತ್ವವಾಗಿ ಗ್ರಹಿಸಿದೆ ಎಂದೆನಿಸಿದರೂ ಆ ವ್ಯಕ್ತಿತ್ವದ ಹಿರಿಮೆಯನ್ನು ಸಮರ್ಥವಾಗಿ ಗುರುತಿಸಿದೆ. ಗಾಂಧಿ ಬಗೆಗಿನ ಭಕ್ತಿ ಮತ್ತು ವಿಸ್ಮಯಗಳು ಆ ವ್ಯಕ್ತಿತ್ವದಲ್ಲಿನ ಅಸಂಗತತೆ, ವಿರೋಧಾಭಾಸ, ಮಿತಿಗಳನ್ನು ಗುರುತಿಸದ ಹಾಗೆ ತಡೆದಿವೆ. ತಪ್ಪಿಯೂ ಕುಂದುಗಳನ್ನು ಕಾಣದ ಅತಿ ವಿಶ್ವಾಸ ಗಾಂಧಿಯನ್ನು 'ಕಪ್ಪು ಕಲೆಯಿಲ್ಲದ' ವ್ಯಕ್ತಿತ್ವವನ್ನಾಗಿ ನೋಡುವ ಹಾಗೆ ಮಾಡಿದೆ. ಆರಾಧನಾ ಮನಸ್ಥಿತಿಯು ಕಾಣುವ ಯಾವುದೇ ವ್ಯಕ್ತಿತ್ವದ ಸ್ವರೂಪ ಅತಿಮಾನುಷವೆಂಬ ನೆಲೆಯಲ್ಲಿಯೇ ಚಿತ್ರಿತಗೊಂಡಿರುತ್ತದೆ ಎಂಬುದಕ್ಕೆ ಗಾಂಧಿ ಕುರಿತ ಬಹುತೇಕ ಕವಿತೆಗಳು ಸಾಕ್ಷಿ.

ಇವನೊಬ್ಬ ಬ್ರಹ್ಮಚಾರಿ'
ಒಬ್ಬಳೇ ಹೆಂಡತಿ, ನಾಲ್ಕು ಜನ ಮಕ್ಕಳು!
ಇದ್ದದ್ದೇ ಬಿಡಿ ಇವನ ಗೋಳು !!
ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ!
ಮಾತೆತ್ತಿದರೆ ಸಾಕು
ಇವನು ಹಾಕಿದ್ದೇ ಹಾಕಿದ್ದು ಹೈಡ್ರಾಲಿಕ್ಕು ಬ್ರೇಕು!!
ಆದರೂ ಈ ಮುದುಕ ಕಸ್ತೂರಿ ಪ್ರಿಯ !
ಮೈಯೆಲ್ಲಾ ಕಸ್ತೂರಿ, ಮನವೆಲ್ಲ ಕಸ್ತೂರಿ,
ಮನೆಯ ಮುಡುಕಿನೊಳಲ್ಲೂ ತುಂಬಿದ್ದ ಕಸ್ತೂರಿ !
ಶುದ್ಧ ಸೌರಭ ಅಷ್ಟೇ!
ಕಪ್ಪು ಕಲೆ ಇಲ್ಲವೇ ಇಲ್ಲ!! [೪೨]

ಪದ್ಯದ ಮೊದಲ ಭಾಗ ಗಾಂಧಿಯನ್ನು ಅನುಮಾನಿಸಿ ನೋಡುತ್ತಿದೆಯೇನೋ ಎಂದು ಅನ್ನಿಸಿದರೂ ಎರಡನೆಯ ಭಾಗ ಆ ಅಭಿಪ್ರಾಯವನ್ನು ಬದಲಾಯಿಸಿಬಿಡುತ್ತದೆ. ಗಾಂಧಿ ವ್ಯಕ್ತಿತ್ವದ ಹಿರಿಮೆಯನ್ನು ಈ ಕವಿತೆ ಸಮರ್ಥವಾಗಿ ಗುರುತಿಸುತ್ತದೆಯಾದರೂ 'ಕಪ್ಪು ಕಲೆಯೇ ಇಲ್ಲದ' ವ್ಯಕ್ತಿಯಾಗಿ ನೋಡಿರುವುದರ ಹಿಂದೆ ಗಾಂಧಿ ಬಗೆಗಿನ ಅಪಾರವಾದ ಭಕ್ತಿ ಕೆಲಸಮಾಡಿದೆ. ಇದು ಆ ವ್ಯಕ್ತಿತ್ವವನ್ನು ಕೇವಲ ಸಕಾರಾತ್ಮಕ ನೆಲೆಯಲ್ಲಿ ಮಾತ್ರ ನೋಡಿದೆ. ಗಾಂಧಿಯನ್ನು ಮನುಷ್ಯ ಸಹಜ ನೆಲೆಯನ್ನು ಮೀರಿ 'ಕಾರಣಿಕ'ನನ್ನಾಗಿ ನೋಡಲಾಗಿದೆ. ಗಾಂಧಿ ಸಂಸಾರಸ್ಥರಾಗಿದ್ದೂ ಸಾಧಿಸಿದ್ದ ಆತ್ಮ ಸಂಯಮ, ಬದುಕಿನುದ್ದಕ್ಕೂ ಅದನ್ನು ಕಾಪಾಡಿಕೊಂಡು ಬಂದ ರೀತಿ ಅವರಿಗೆ ಕಪ್ಪು ಕಲೆಯಿಲ್ಲದ ವ್ಯಕ್ತಿತ್ವದ ಹಿರಿಮೆಯನ್ನು ತಂದುಕೊಟ್ಟಿದೆ.

ಜೀವಿ ಕುಲಕರ್ಣಿ ಅವರ 'ನಾಲ್ಕು ಧ್ವನಿ' ಕವಿತೆ ಗಾಂಧಿ ವ್ಯಕ್ತಿತ್ವದಲ್ಲಿ ಯೋಗಿ ಮತ್ತು ರಾಜಕಾರಣಿಯ ಸಮನ್ವಯವನ್ನು ಗುರುತಿಸುತ್ತದೆ. ಜಗತ್ತಿಗೆ ರಾಜಕಾರಣದ ನಡೆಯನ್ನು ಬದುಕಿ ತೋರಿಸಿಕೊಟ್ಟ ವಿಶಿಷ್ಟ ರಾಜಕಾರಣಿ ಗಾಂಧಿ. ಆಧ್ಯಾತ್ಮವನ್ನು ಉಸಿರಾಗಿಸಿಕೊಂಡಿರುವ ಈ ಯೋಗಿ ಆಧ್ಯಾತ್ಮವಿಲ್ಲದ ರಾಜಕಾರಣ ಕ್ರೂರವಾಗಿರುತ್ತದೆ ಎಂದು ಪ್ರತಿಪಾದಿಸಿದ್ದರು. ಗಾಂಧಿ ವ್ಯಕ್ತಿತ್ವದ ಈ ವಿಶಿಷ್ಟ ಗುಣವನ್ನು ಕವಿತೆ ಹೀಗೆ ಚಿತ್ರಿಸಿದೆ.

ಸಿಂಹ ಮುಖಕ್ಕೆ ಇತ್ತು ನವಿಲಿನ ಛತ್ರ
ರಾಜಕಾರಣಿಯ ಒಳಗಿತ್ತು ಯೋಗಿಯ ಚಿತ್ರ!
ಯೋಗಿಗಳ ವೇಶದಲಿ ರಾಜಕಾರಣಿಯೊಬ್ಬ
ವಿಶ್ವ ಧರ್ಮದ ಸಭೆಯ ಚಕಿತಗೊಳಿಸಿದ್ದ
ರಾಜ – ಕಾರಣಿ ವೇಷ ತೊಟ್ಟಿರುವ ಈ ಯೋಗಿ
ರಕ್ತ ರಹಿತ ಕ್ರಾಂತಿ ಮಾಡಿಬಿಟ್ಟ [೪೩]

ಗಾಂಧಿ ರಾಜಕಾರಣಕ್ಕೂ, ಆಧ್ಯಾತ್ಮಕ್ಕೂ ಹೊಸ ಅರ್ಥ– ಪರಿಭಾಷೆಗಳನ್ನೆ ನೀಡುತ್ತಾರೆ. ಇವರೆಡನ್ನೂ ಸಮನ್ವಯಗೊಳಿಸುವ ಮೂಲಕ ಆ ಎರಡೂ ಕ್ಷೇತ್ರಗಳಿಗೂ ಅರ್ಥವಂತಿಕೆಯನ್ನು ತಂದುಕೊಡುತ್ತಾರೆ. ಗಾಂಧಿ ತಮ್ಮೊಳಗಿನ ಆಧ್ಯಾತ್ಮಿಕ ಶಕ್ತಿಯನ್ನು ಬಳಸಿಕೊಂಡು ರಾಜಕಾರಣದಲ್ಲಿ ರಕ್ತ ರಹಿತ ಕ್ರಾಂತಿಯನ್ನೇ ಮಾಡಿದರು. ಗಾಂಧಿ ವ್ಯಕ್ತಿತ್ವ ವಿರೋಧಾಭಾಸವುಳ್ಳ, ವಿಚಿತ್ರ ವ್ಯಕ್ತಿತ್ವದಂತೆ ತೋರಿದರೂ ಆ ವ್ಯಕ್ತಿತ್ವ ಬೀರಿದ ಪ್ರಭಾವ, ಉಂಟುಮಾಡಿದ ಪವಾಡ ನಂಬಲಸಾಧ್ಯವಾದುದು. ಇದೂ ಕೂಡ ಗಾಂಧಿ ಬದುಕಿನ ಪ್ರಯೋಗವೇ ಆಗಿದೆ. ದೈಹಿಕವಾಗಿ ಬಲಾಢ್ಯನೂ, ಸುಂದರನೂ ಅಲ್ಲದ ಆ ಬಡಕಲು ದೇಹದೊಳಗೆ ಅದ್ಭುತವಾದ ಆಧ್ಯಾತ್ಮಿಕ ಶಕ್ತಿ ಇದ್ದುದ್ದರಿಂದಲೇ ಜಗತ್ತನ್ನು ಪ್ರಭಾವಿಸಲು ಸಾಧ್ಯವಾದದ್ದು. ಇದೊಂದು ವಿಸ್ಮಯದ ಹಾಗೆ ಎಲ್ಲರನ್ನೂ ಕಾಡಿದೆ. ಗಾಂಧಿ ಒಳಗಿದ್ದ ಅದ್ಭುತವಾದ ಶಕ್ತಿ ಯಾವುದು? ಆ ವ್ಯಕ್ತಿತ್ವವನ್ನು ಮಾನವತೆಯ ಉನ್ನತ ಶಿಖರಕ್ಕೇರಿಸಿದ

ಗುಣಗಳು ಯಾವುವು? ಎಂಬ ಪ್ರಶ್ನೆಗಳಿಗೆ ಬೆರಗಿನಿಂದ ಉತ್ತರಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಬಹುತೇಕ ಕವಿತೆಗಳು ತೊಡಗಿಸಿಕೊಂಡಿವೆ.

ಬಡಕಲಾಗಿಹ ದೇಹದಲ್ಲಿ ಕೂಡ
ಜಗವ ನಡುಗಿಪ ಶಕ್ತಿ ಇರುವುದೆಂದ
ಎಲ್ಲವನು ತೊರೆದರೂ; ಏನು ವಿರೋಧಾಭಾಸ
ಎಲ್ಲದರ ಒಡೆಯನೇ ಇವನಾಗಿಬಿಟ್ಟ !
. . . . . . . . . . . . . . . . . .
ಸಂಸಾರಿಯಾಗಿಯೂ ಬ್ರಹ್ಮಚರ್ಯವ ನಡೆಸಿ
ಮೌನಾಗ್ನಿಯಿಂದಲೇ ಜನರ ಬೇಯಿಸಿದ
ತಿನ್ನುವ ಬಕಾಸುರ ಶಕ್ತಿಗಿಂತ
ಉಪವಾಸದ ಭೀಮ ಶಕ್ತಿಯ ಮಹಿಮೆ
ಜಗಕೆ ತೋರಿಸಿದ [೪೪]

ತಮ್ಮ ಪ್ರಯೋಗಶೀಲ ಬದುಕಿನ ಮೂಲಕವೇ ಹಲವು ಅಚ್ಚರಿಗಳಿಗೆ ಕಾರಣರಾದ ಗಾಂಧಿಯದು ಮಾನವ ಇತಿಹಾಸ ಕಂಡ ಅಪರೂಪದ ಹಾಗೂ ನಂಬಲಸಾಧ್ಯವಾದ ವಿಸ್ಮಯದ ವ್ಯಕ್ತಿತ್ವ. ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಉಪವಾಸ, ಸತ್ಯಾಗ್ರಹದಂತಹ ಉನ್ನತ ಮೌಲ್ಯಗಳು ಗಾಂಧಿ ವ್ಯಕ್ತಿತ್ವಕ್ಕೆ ಅತಿಮಾನುಷ ಶಕ್ತಿಯನ್ನು ತಂದುಕೊಟ್ಟವು. ಅದನ್ನು ಮೇಲಿನ ಕವಿತೆ ಸಮರ್ಥವಾಗಿ ಗುರುತಿಸಿದೆ. ಎಂತಹ ಕ್ರೂರಿಯೂ ಕಡುವಿರೋಧಿಯೂ ಕೊನೆಗೊಮ್ಮೆ ಬೆರಗುಗೊಳ್ಳಬಹುದಾದ ವ್ಯಕ್ತಿತ್ವ ಗಾಂಧಿಯದು. ಗಾಂಧಿ ವ್ಯಕ್ತಿತ್ವದ ದೌರ್ಬಲ್ಯ – ವಿರೋಧಾಭಾಸಗಳ ಬಗೆಗೆ ಎಷ್ಟೇ ಕಡು ವಿರೋಧಗಳಿದ್ದರೂ ಕಾಲ ಬದಲಾದಂತೆ, ಬದುಕಿನ ಅನುಭವಗಳು ಹೆಚ್ಚಿದಂತೆ ಆ ವ್ಯಕ್ತಿತ್ವವನ್ನು ಮೆಚ್ಚುವ ಪ್ರಸಂಗಗಳು ಬಂದೊದಗಿಬಿಡುತ್ತವೆ. ಕೆ.ಎಸ್.ನಿಸಾರ್ ಅಹಮದ್‌ರ 'ಬಾಪು' ಕವಿತೆ ಗಾಂಧಿ ವ್ಯಕ್ತಿತ್ವದ ಹಿರಿಮೆಯನ್ನು ಸ್ವಾನುಭವದ ಮೂಲಕವೇ ಕಂಡುಕೊಳ್ಳುವ ಪ್ರಯತ್ನ ಮಾಡಿದೆ. 'ಯಾರನ್ನೋ ಅನುಕರಿಸಿ' ಇಲ್ಲವೇ 'ಅರ್ಜೆಂಟಿನಲಿ' ಗ್ರಹಿಸಿಬಿಡಬಹುದಾದ ವ್ಯಕ್ತಿತ್ವ ಗಾಂಧಿಯದಲ್ಲ. ಹಾಗೆ ಗಾಂಧಿ ದಕ್ಕುವುದೂ ಇಲ್ಲ. 'ಬುದ್ಧಿಯ ಮೊನೆ ಹಾಗೂ 'ಸ್ವಾನುಭಾವದ ಒರೆ'ಯ ಮೂಲಕ ಗ್ರಹಿಸಿದಾಗ ಮಾತ್ರ ವ್ಯಕ್ತಿತ್ವದ ಹಿರಿಮೆ ಗೊತ್ತಾಗುವುದು. ಅಪಾರವಾದ ಭಕ್ತಿ ಮತ್ತು ಅತಿಯಾದ ವಿರೋಧ ಇವೆರಡೂ ವ್ಯಕ್ತಿತ್ವವನ್ನು ಅಪವ್ಯಾಖ್ಯಾನಗೊಳಿಸಿಬಿಡುತ್ತವೆ. ಈ ಎಚ್ಚರ ಇದ್ದಾಗ ಮಾತ್ರ ಗಾಂಧಿ ವ್ಯಕ್ತಿತ್ವವನ್ನು ಅದರ ಶಕ್ತಿ ಮಿತಿಗಳೊಂದಿಗೆ ಅರಿಯಲು ಸಾಧ್ಯ.

ಲೋಕಕೇ ಕಣ್ಣಾದ ಬೆಳುದಿಂಗಳು
ಮನೆಯ ಬೆಳಗಿಲ್ಲೆಂದು ಕೂಗಾಡಲೇ,
ಹೊತ್ತಿಸದೆ ದೀಪ?
ಮೇರೆಯಿಲ್ಲದ ಕಡಲು ನನ್ನ ಬಾಯಾರಿಕೆಯ
ತಣಿಸಲಿಲ್ಲೆಂದು ರೇಗಾಡಲೆ,
ತೋಡದೆಯ ಕೂಪ
ವ್ಯಕ್ತಿ ಬದುಕಿನ ಕಿರಿಯ ಪಾತ್ರವೆ ನಿನ್ನದು?
ಒಂಟಿಯೇ ನೀನು?
ಎಲ್ಲವೂ ನಿಸ್ಸೀಮ ಸ್ವಾತಂತ್ರ್ಯ ಉದ್ಧಾರ ಕ್ರಿಯೆ ಸರ್ವಭ್ರಾತೃತ್ವ
ಹಿರಿದು ಬದುಕಿನ ತತ್ವ
ಕೊನೆತನಕ ದೇಶವೇ ನಿನ್ನ ಜೊತೆಯಲ್ಲಿ
ಬೆಟ್ಟವೇರಿದ ಹಾಗೆ ನಟ್ಟಿರುಳಿನಲ್ಲಿ [೪೫]

ಗಾಂಧಿ ವ್ಯಕ್ತಿತ್ವದ ಅನನ್ಯತೆಯನ್ನೂ, ಕಾಲಾತೀತತೆಯನ್ನೂ ಸ್ವಾನುಭವದ ಮೂಲಕವೇ ಕಂಡುಕೊಳ್ಳಬೇಕಾದ ಅಗತ್ಯವನ್ನು ಒತ್ತಾಯಿಸುವುದರ ಮೂಲಕ ಆ ವ್ಯಕ್ತಿತ್ವದ ಹಿರಿಮೆಯನ್ನು ಗುರುತಿಸುವ ಪ್ರಯತ್ನಮಾಡಲಾಗಿದೆ. ಇಡೀ ದೇಶ ಆ ವ್ಯಕ್ತಿತ್ವದ ಗಾಢ ಪ್ರಭಾವಕ್ಕೆ ಒಳಗಾಗಿದ್ದುದ್ದನ್ನು ಕೊನೆಯ ಸಾಲುಗಳು ಧ್ವನಿಸುತ್ತವೆ. 'ಬೆಟ್ಟವೇರಿದ ಹಾಗೆ ನಟ್ಟಿರುಳಿನಲ್ಲಿ' ಎಂಬ ಪ್ರತಿಮೆ ಗಾಂಧಿ ವ್ಯಕ್ತಿತ್ವದ ಶಕ್ತಿ ಮತ್ತು ಪ್ರಭಾವವನ್ನು ಸಮರ್ಥವಾಗಿ ಹಿಡಿದಿಟ್ಟಿದೆ.

ಅಬ್ದುಲ್ ಮಜೀದ್ ಖಾನ್‌ರ 'ಬಾಪೂ' ಕವಿತೆ ಗಾಂಧಿ ವ್ಯಕ್ತಿತ್ವದ ಹಿರಿಮೆಯನ್ನು ಗುರುತಿಸುತ್ತಲೇ ಸ್ವ ವಿಮರ್ಶೆ, ರಾಜಕೀಯ ವಿಡಂಬನೆಗಳಲ್ಲಿ ತೊಡಗುತ್ತದೆ. ಈ ಕವಿತೆ ಪರರ ಹಿತಕ್ಕಾಗಿ ಎದುರಿಸಿದ ಕಷ್ಟ, ನೋವು, ಹಿಂಸೆ, ಬಲಿದಾನಗಳಲ್ಲಿ ಅವರ ವ್ಯಕ್ತಿತ್ವದ ಹಿರಿಮೆಯನ್ನು ಗುರುತಿಸುತ್ತದೆ. ಎಲ್ಲ ಬಗೆಯ ಸುಖ ಮತ್ತು ಅಧಿಕಾರಗಳನ್ನು ತೊರೆದು ಜನರ ಸೇವೆಗಾಗಿಯೇ ಬದುಕನ್ನು ಸವೆಸಿದ ಗಾಂಧಿಯ ಹೆಸರೆತ್ತಲೂ ಭಯವಾಗುತ್ತದೆ. ಗಾಂಧಿಯ ಬಗೆಗೆ ಮಾತನಾಡಲು ನೈತಿಕ ಶಕ್ತಿ ಬೇಕು ಎನ್ನುತ್ತದೆ.

ಗಾಂಧಿ ವ್ಯಕ್ತಿತ್ವ ಪ್ರತಿಯೊಬ್ಬರ ಆತ್ಮಸಾಕ್ಷಿಯನ್ನು ಕೆಣಕಿ ಭಯ ಮತ್ತು ಮುಜುಗರವನ್ನು ಒಟ್ಟಿಗೆ ಉಂಟುಮಾಡುವಷ್ಟು ನೈತಿಕವಾದುದು. ಸ್ವಾರ್ಥತೆ ಮತ್ತು ಅಧಿಕಾರಕ್ಕಾಗಿ ಒದ್ದಾಡುವವರ ನಡುವೆ ಗಾಂಧಿ ಜನರ ಹಿತಕ್ಕಾಗಿ, ಸಾರ್ವಜನಿಕರ ಕಷ್ಟಗಳ ನಡುವೆ ಬದುಕಿದರು. ದೇಶಕ್ಕೆ ಸ್ವಾತಂತ್ರ್ಯ ಬಂದಾಗ ಎಲ್ಲರೂ ಅಧಿಕಾರ ಮತ್ತು ಸಂಭ್ರಮದಲ್ಲಿ ಮುಳುಗಿದ್ದರೆ ಗಾಂಧಿ ಮಾತ್ರ ನೌಖಾಲಿಯಲ್ಲಿ ಮತೀಯ ಗಲಭೆ, ಹಿಂಸೆಗಳ ಶಮನಕ್ಕಾಗಿ ಏಕಾಂಗಿಯಾಗಿ ಹೋರಾಡುತ್ತಿದ್ದರು. ಹಲವು ಹಿಂಸೆ–ಅವಮಾನಗಳನ್ನು ಸಹಿಸಿ ಜನರಲ್ಲಿ ಭಾವೈಕ್ಯತೆಯನ್ನೂ ಬಿತ್ತುತ್ತಿದ್ದರು. 'ಕಲ್ಲುಮುಳ್ಳಿನ ಹಾದಿಬೀದಿಗಳಲ್ಲಿ ಪರರ ಹಿತಕ್ಕಾಗಿ ಅಲೆದವನು' ಎಂಬ ಸಾಲು ನೌಖಾಲಿ, ಕಲ್ಕತ್ತಾ ಮತ್ತು ದೆಹಲಿಯಲ್ಲಿ ಕೋಮುಹಿಂಸೆಯನ್ನು ತಡೆಯಲು ಗಾಂಧಿ ಮಾಡಿದ ಪ್ರಯತ್ನಗಳನ್ನು ನೆನಪಿಗೆ ತರುತ್ತದೆ. ಸ್ವಾತಂತ್ರ್ಯ ಪಡೆಯುವುದೊಂದೇ ಗಾಂಧಿಯ ಗುರಿಯಾಗಿರಲಿಲ್ಲ. ಸಾಮರಸ್ಯದಿಂದ ಕೂಡಿದ ಸ್ವರಾಜ್ಯವನ್ನು ಹೊಂದುವುದು ಅವರ ಗುರಿಯಾಗಿತ್ತು. ಗಾಂಧಿ ವ್ಯಕ್ತಿತ್ವದ ಹಿರಿಮೆ ಪ್ರಕಟಗೊಳ್ಳುವುದೇ ಇಂಥ ಸಂದರ್ಭಗಳ ಮೂಲಕ ಎಂಬುದನ್ನು ಕವಿತೆ ಗುರುತಿಸಿದೆ.

ಗಾಂಧಿ ಅವತಾರ ಪುರುಷನೂ ಅಲ್ಲ. ಕಾರಣಿಕನೂ ಅಲ್ಲ. ಆತ ಹುಟ್ಟಿದಾಗ ಯಾವ ಅಲೌಕಿಕ ಪವಾಡಗಳೂ ಈ ಭೂಮಿಯಲ್ಲಿ ಸಂಭವಿಸಲಿಲ್ಲ. ಸಾಮಾನ್ಯ ಮನುಷ್ಯನಾಗಿ ಹುಟ್ಟಿ ಅಸಾಮಾನ್ಯನಾಗಿ ಬದುಕಿದ ಆತನ ಬದುಕೇ ಒಂದು ಪವಾಡ. ಗಾಂಧಿ ಎಂದರೆ ನೆನಪಾಗುವುದು 'ಮುದುಕ'ನ ಚಿತ್ರವೇ. ಆ ಮುದುಕನ ಒಳಗೆ ಇದ್ದ ಕನಸು, ನಗು, ಕರುಣೆ, ದಿಟ್ಟತನಗಳು ಅವರನ್ನು ಮಹಾತ್ಮನ ಎತ್ತರಕ್ಕೆ ಏರಿಸಿದವು. ಇದನ್ನು ಗಿರಡ್ಡಿ ಗೋವಿಂದರಾಜರ 'ಗಾಂಧೀಜಿಯ ನೆನಪು' ಕವಿತೆ ಹೀಗೆ ಅಭಿವ್ಯಕ್ತಿಸಿದೆ.

ಇವನು ಮರ್ತ್ಯದ ಬಾಳಿನಲ್ಲಿ ಅಮೃತತ್ವದ ಕನಸು ಕಂಡ
ಕಂಡ ಕಂಡುದಕ್ಕಾಗಿ ಅನವರತ ಕಷ್ಟಗಳನುಂಡ
ಆದರೂ ಅದಕ್ಕಾಗಿಯೇ ಹಗಲಿರುಳು ಬಡಕೊಂಡ
ನಮ್ಮ ಪಾಲಿಗೆ ಇವನು ಯಾವಾಗಲೂ ಮುದುಕ
(ಮುದುಕನಾಗಿಯೇ ಹುಟ್ಟಿರಬಹುದೇ?)
ಇವನ ನೆನೆದಾಗೆಲ್ಲ
ಬೊಚ್ಚ ಬಾಯಿಯ ತುಂಬ
ಪಕಳೆ ಪಕಳೆಯ ಚೆಲುವ ಬಿಚ್ಚಿಟ್ಟ ಮುಗುಳುನಗೆ –
ಇವನ ಮುಂಗಿಗೆ

ಜವುಗು ಭೂಮಿಗು ಹೂ ಅರಳಿಸಿ ನಗುವ ಮನಸಾಯಿತು:
ಗಾಳಿಯಲೆಯಲೆಗುಂಟ ಹೊಸ ಕನಸುಗಳ ಕಂಪು ಹರಿದಾಡಿತು.[೪೬]

ಆ ಮುದುಕನಲ್ಲೂ ಇದ್ದ ಕಷ್ಟ ಸಹಿಷ್ಣುತೆ, ಉತ್ಸಾಹ, ಕನಸು, ಮುಗುಳುನಗೆಗಳು ಎಲ್ಲರನ್ನೂ ತನ್ನ ಪ್ರಭಾವಕ್ಕೆ ಒಳಗುಮಾಡಿಕೊಳ್ಳುವಷ್ಟು ಶಕ್ತತೆಯನ್ನು ಆ ವ್ಯಕ್ತಿತ್ವಕ್ಕೆ ತಂದು ಕೊಟ್ಟಿದ್ದವು ಎಂಬುದನ್ನು ಕವಿತೆ ಗುರುತಿಸುತ್ತದೆ. ಗಾಂಧಿ ವ್ಯಕ್ತಿತ್ವದ ವಿಶಿಷ್ಟ ಗುಣಗಳು ಧೈರ್ಯ, ಸತ್ಯ ಮತ್ತು ನೈತಿಕ ಬದುಕು, ಇವು ಅವರ ವ್ಯಕ್ತಿತ್ವವನ್ನು ಎತ್ತರಕ್ಕೆ ಒಯ್ದಿವೆ. ಇದನ್ನು ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರ 'ಅಪರೂಪದವನು' ಕವಿತೆ ಹೀಗೆ ಚಿತ್ರಿಸಿದೆ.

ಗಾಂಧಿ ನೀನು
ಹತ್ತು ಹುತ್ತಗಳಲ್ಲಿ ಕೈಯಿಟ್ಟು ಹುಲಿಬಾಯ
ಮುತ್ತಿಟ್ಟು ಸಾಗಿದವನು,
ನಾವೆಲ್ಲ ಗೇಟಾಚೆ ಎಸೆದ ನಯನೀತಿಗಳ
ಮೈಯಲ್ಲಿ ನೆಟ್ಟು ಮರ ಬೆಳೆದು ಫಲಭಾರಕ್ಕೆ
ತಲೆಬಾಗಿದವನು;
ಸತ್ಯಶುಭಗಳ ಕಲ್ಪನೆ ಹಂಸತಲ್ಪದಲಿ
ಹೊರಳಿಯೂ ಮಣ್ಣನ್ನು ಮರೆಯದವನು;
ಗೊಬ್ಬರವಾಗಿ ಬಿದ್ದು
ಮಲ್ಲಿಗೆಯಾಗಿ ಎದ್ದು
ಹೆತ್ತ ಬಳ್ಳಿಗೆ ರತ್ನಕರೀಟವಾದವನು.[೪೭]

ಹಲವು ಕಠಿಣ ಪ್ರಯೋಗಗಳಿಗೆ ತಮ್ಮನ್ನು ಒಡ್ಡಿಕೊಂಡ ಗಾಂಧಿ ವ್ಯಕ್ತಿತ್ವದ ಧೈರ್ಯ, ಸಾಹಸಗಳು, ನೈತಿಕ ಮೌಲ್ಯಗಳು ಆ ವ್ಯಕ್ತಿತ್ವಕ್ಕೆ 'ರತ್ನ ಕರೀಟದ' ಮೆರಗು ತಂದುಕೊಟ್ಟಿವೆ. ಹಾಗಾಗಿಯೇ ಗಾಂಧಿ ನಮ್ಮನ್ನು ನಿರಂತರವಾಗಿ ಕಾಡುವ, ನಮ್ಮ ಅಂತಃಸಾಕ್ಷಿಯನ್ನು ಬಡಿದೆಚ್ಚರಿಸುವ ನೈತಿಕ ಶಕ್ತಿಯೂ ಆಗಿದ್ದಾರೆ. ಅವರ ಪಾರದರ್ಶಕ ಮೌಲ್ಯಯುತ ಬದುಕಿಗೆ ಆ ಶಕ್ತಿಯಿದೆ. 'ಹತ್ತು ಹುತ್ತಗಳಲ್ಲಿ ಕೈಯಿಟ್ಟು ಹುಲಿಬಾಯ ಮುತ್ತಿಟ್ಟು ಸಾಗಿದವನು' ಎಂಬ ಸಾಲು ಗಾಂಧಿಯ ಧೈರ್ಯ, ಪ್ರಯೋಗಶೀಲತೆ ಮತ್ತು ಅವರು ಎದುರು ಹಾಕಿಕೊಂಡ ಸವಾಲುಗಳನ್ನೂ, ಅವುಗಳನ್ನು ದಿಟ್ಟತನದಿಂದ ಗೆದ್ದುದನ್ನೂ ಧ್ವನಿಸುತ್ತದೆ.

ಎಂಥ ಮೊಂಡನೋ ನೀನು?
ಸತ್ತು ಸುಡುಗಾಡು ಸೇರಿದೆಯೆಂದು
ನಿಶ್ಚಿಂತೆಯಿಂದಿದ್ದರೆ
ರಸ್ತೆ ತಿರುಗುತ ಮತ್ತೆ ಎಚ್ಚರಿಸುವೆ?
. . . . .
ಏನೇ ಅನ್ನು ಸತ್ತು ಬದುಕಿದ ಬೇತಾಳ ನೀನು
ಬಿಸಿಲು ನಡುನೆತ್ತಿಗೇರಿದಾಗಲೂ
ನೀ ಬರುವ ಭಯ ತಪ್ಪದು ನಮಗೆ
ಯಾಕೆ ಗೊತ್ತಾ?
ಮತ್ತೆಲ್ಲಿ ಬರುತ್ತೀಯೋ
ನಮ್ಮ ಕುರುಕ್ಷೇತ್ರದ ಮಧ್ಯೆ
ಗೀತೆಯ ಗಂಟು ಬಿಚ್ಚಲಿಕ್ಕೆಂದು.[೪೮]

ಗಾಂಧಿ ಇಂದು ಭೌತಿಕವಾಗಿ ಇರದಿದ್ದರೂ ಅವರು ನೈತಿಕ ಮೌಲ್ಯಗಳ ಸಂಕೇತರೂಪವಾಗಿ ನಮ್ಮನ್ನು ನಿರಂತರವಾಗಿ ಕಾಡುವ, ಎಚ್ಚರಿಸುವ ಶಕ್ತಿಯಾಗಿ ಉಳಿದಿದ್ದಾರೆ. ಕವಿತೆ ಗಾಂಧಿಯನ್ನು ಒಬ್ಬ ವ್ಯಕ್ತಿಯನ್ನಾಗಿ ನೋಡದೆ ಹಲವು ಉನ್ನತ ಮೌಲ್ಯಗಳ ಶಕ್ತಿರೂಪವಾಗಿ ಕಾಣುತ್ತದೆ. ಗಾಂಧಿ ಎಂಬ ಮೌಲ್ಯ ಸಂಕೇತ ನಮ್ಮ ನಡೆಯನ್ನು ನಿರಂತರವಾಗಿ ನಿಯಂತ್ರಿಸುವ ನೈತಿಕ ಜವಾಬ್ದಾರಿಯನ್ನು ಹೊತ್ತಿದೆ. ಮಾನವ ಬದುಕನ್ನು ಒಳಿತಿನ

ಕಡೆಗೆ ಕೊಂಡೊಯ್ಯುವ ಕೆಲಸವನ್ನು ನಿರಂತರವಾಗಿ ಮಾಡುತ್ತಿರುವ 'ಬೇತಾಳ' ಸ್ವರೂಪದ ವ್ಯಕ್ತಿತ್ವ ಗಾಂಧಿಯದು. ಅದು ಎಲ್ಲರಲ್ಲೂ ಒಂದು ನೈತಿಕ ಭಯವನ್ನು ನಿರಂತರವಾಗಿ ಉಳಿಸಿಕೊಂಡಿರುವಂಥದ್ದು. ಪ್ರತಿಯೊಬ್ಬ ಮನುಷ್ಯನೊಳಗಿನ ಮಾನವೀಯ ಪ್ರಜ್ಞೆಯಾಗಿ ಗಾಂಧಿ ಉಳಿದು ಬಂದಿರುವುದು ಅವರ ಸತ್ಯದ ಬದುಕಿನಿಂದಾಗಿ. ಹಾಗಾಗಿಯೇ ಗಾಂಧಿ ವ್ಯಕ್ತಿತ್ವಕ್ಕೆ ಕಾಲ ದೇಶಾತೀತವಾಗಿ ಕಾಡುವ ಶಕ್ತಿ ಇದೆ. ಅದು ಸದಾ ಎಚ್ಚರದಿಂದಿದ್ದು ನಮ್ಮ ಪ್ರತಿಯೊಂದು ನಡೆಯನ್ನೂ ತಿದ್ದುತ್ತಿರುತ್ತದೆ.

ಸಿದ್ಧಲಿಂಗಯ್ಯನವರ 'ಗಾಂಧಿ' ಕವಿತೆ ಗಾಂಧಿ ವ್ಯಕ್ತಿತ್ವದಲ್ಲಿ ತಾಯಿ-ತಂದೆಯ ಮಮತೆ, ವಾತ್ಸಲ್ಯ, ಕಳಕಳಿಗಳನ್ನು ಗುರುತಿಸುತ್ತದೆ. ಗಾಂಧಿ ವ್ಯಕ್ತಿತ್ವದ ಶ್ರೇಷ್ಠ ಗುಣಗಳನ್ನು ಅಪಾರವಾದ ಭಕ್ತಿ ಗೌರವಗಳೊಂದಿಗೆ ನೆನೆಯುವ ಕವಿತೆ ಆ ವ್ಯಕ್ತಿತ್ವವನ್ನು ವಿಶಾಲವಾದ ಭಿತ್ತಿಯಲ್ಲಿ ನೋಡುವುದಿಲ್ಲ. ವ್ಯಕ್ತಿತ್ವದೊಂದಿಗೆ ಯಾವುದೇ ಸಂಘರ್ಷಕ್ಕೆ ಇಳಿಯ ಬಯಸದ ಕವಿತೆ ಕೇವಲ ಮೆಚ್ಚುಗೆಯ ನೆಲೆಯಲ್ಲಿಯೆ ಮಾತನಾಡುತ್ತದೆ. ನೊಂದವರಿಗಾಗಿ ಮಿಡಿದ ಆ ವ್ಯಕ್ತಿತ್ವದಲ್ಲಿನ ತಾಯ್ತನದ ಗುಣವನ್ನು ಗುರುತಿಸುವ ಪ್ರಯತ್ನಮಾಡಿದೆ.

ಜನವು ದಿಕ್ಕೆಟ್ಟಿರಲು ಹಾರಿದಿರಿ ಹಕ್ಕಿಯಂತೆ,
ಭಾರತದ ಕಡುನೀಲಿ ಗಗನದಲಿ
ಜೀವ ಚೈತನ್ಯವನು ತುಂಬಿದಿರಿ ತಾಯಿಯಂತೆ,
ಬಸವಳಿದ ಜನಮನದ ಭಾವದಲ್ಲಿ.
ಛತ್ರಿ ಚಾಮರವಿಲ್ಲ, ಬಹುಪರಾಕುಗಳಿಲ್ಲ
ಭಾರತದ ಬೀದಿಯಲಿ ಅರಸನಂತೆ,
ನಡೆದು ಬಂದಿರಿ ನೀವು, ನೊಂದ ಜೀವಿಯ ಕಂಡು
ತಬ್ಬಿಕೊಂಡಿರಿ ಬಾಚಿ ತಂದೆಯಂತೆ.[೪೯]

ಇದು ಗಾಂಧಿ ವ್ಯಕ್ತಿತ್ವವನ್ನು ಮೆಚ್ಚಿ ಹೊಗಳುವ ನೆಲೆಯ ರಚನೆಯಂತೆ ಕಂಡುಬಂದರೂ ಆ ವ್ಯಕ್ತಿತ್ವದ ಕಳಕಳಿಯನ್ನು ಸಮರ್ಥವಾಗಿ ಗುರುತಿಸಿದೆ. 'ತಾಯಿ,' 'ತಂದೆ' ಎಂಬ ಉಪಮೆಗಳು ಗಾಂಧಿ ವ್ಯಕ್ತಿತ್ವಕ್ಕೆ ಸಮರ್ಥವಾಗಿ ಒಪ್ಪುತ್ತವೆ. ತಾಯಿಯಾಗಿ ತಂದೆಯಾಗಿ ನೊಂದವರನ್ನು ಅಪ್ಪಿಕೊಂಡ ಗಾಂಧಿ ನಿಜವಾದ ಅರಸನಾಗಿ ಕಂಡಿದ್ದಾನೆ. ಗಾಂಧಿ 'ಅರಸ'ನಾದರೂ ಅವನ ಬಳಿ ಛತ್ರಿ ಚಾಮರಗಳಿಲ್ಲ. ಅಧಿಕಾರದ ಗತ್ತಿಲ್ಲ. ನೊಂದವರನ್ನು ಸಂತೈಸಲು ಬೀದಿ ಬೀದಿ ಅಲೆದ 'ಅರಸ' ಅವರು. ಇದು 'ಅರಸುತನ'ದ ಪರಂಪರೆಗಳನ್ನು ವಿಡಂಬಿಸುತ್ತಲೇ ಅದಕ್ಕೆ ಹೊಸ ಭಾಷ್ಯ ಬರೆದ ಗಾಂಧಿ ನಿಜವಾದ 'ಅರಸ' ಎನ್ನುತ್ತಾರೆ.

ಶಾಂತಿ-ಪ್ರೇಮಗಳಿಗಾಗಿ ಗಾಂಧಿ ತಮ್ಮ ಬದುಕಿನುದ್ದಕ್ಕೂ ಹೋರಾಡಿದರು. ಸ್ವತಹ ಅವರು ಶಾಂತಿಯ, ಪ್ರೇಮದ ಸಂಕೇತವಾಗಿದ್ದರು. ಶಾಂತಿ, ಪ್ರೇಮಗಳು ಇಡೀ ಜಗತ್ತನ್ನೇ ಆವರಿಸಿಕೊಳ್ಳಬೇಕೆಂದು ಕನಸಿದ್ದರು. ಆದರೆ ಜಗತ್ತು ಅದಕ್ಕೆ ವಿರುದ್ಧವಾಗಿ ಹಿಂಸೆಯ ಹಾದಿ ಹಿಡಿದಿದೆ. ಶಾಂತಿ ಪ್ರೇಮಗಳಿಗೆ ದಕ್ಕೆಯುಂಟಾದಾಗ ಹಾಗೂ ಅವುಗಳು ಅನುಭವಕ್ಕೆ ಬಂದಾಗ ಗಾಂಧಿ ನೆನಪಾಗುತ್ತಾರೆ. ಅವರ ಪ್ರಯೋಗಗಳ ಮಹತ್ವ ಅರಿವಿಗೆ ಬರುತ್ತದೆ.

ಬಾಂಬುಗಳ ಹೆಣ ಸುಟ್ಟ
ಸ್ತಬ್ಧ ನೀರವ ರಾತ್ರಿ
ತುಂಬು ಬೆಳದಿಂಗಳ
ತುಟಿಗೆ ಲೇಪಿಸಿಕೊಂಡು
ತಾರೆಗಳ ತೋಟದಲಿ
ತಂಪು ಛಾಪಿಸಿಕೊಂಡು
ಹೂವ ಹೆಜ್ಜೆಯನಿಟ್ಟು

ಚಂದ್ರ ಚಲಿಸುತ್ತಿರಲು
ಪ್ರೇಮಿಗಳ ತೋಳುಗಳು
ಭೂಮಿಯನು ಬಿಗಿದಾಗ
ಗಾಂಧಿ ನೆನಪಾಗುತ್ತಾನೆ [೫೦]

ಹಿಂಸೆ ಕ್ರೌರ್ಯಗಳಿಂದಲೇ ತುಂಬಿಹೋಗಿರುವ ಇಂದಿನ ಜಾಗತಿಕ ವಾತಾವರಣದಲ್ಲಿ ಗಾಂಧಿ ವ್ಯಕ್ತಿತ್ವ ಮತ್ತು ಪ್ರತಿಪಾದನೆಗಳು ಅತಿ ಹೆಚ್ಚು ಮಹತ್ವ ಪಡೆದುಕೊಳ್ಳುತ್ತಿವೆ. 'ಪ್ರೇಮಿಗಳ ತೋಳುಗಳು ಭೂಮಿಯನು ಬಿಗಿದಾಗ' ಎಂಬ ಸಾಲು ಜಗತ್ತಿನಲ್ಲಿ ಎಲ್ಲಿಯವರೆಗೆ 'ಪ್ರೇಮ' ಮುಖ್ಯ ತತ್ವವಾಗಿ ನೆಲೆಸುವುದಿಲ್ಲವೋ ಅಲ್ಲಿಯವರೆಗೂ ಹಿಂಸೆ ಜಗತ್ತನ್ನು ಆಳುತ್ತಿರುತ್ತದೆ. ಅದನ್ನು ಗೆಲ್ಲುವ ಏಕೈಕ ದಾರಿ ಇದು. ಆ ಪ್ರತಿಯೊಂದು ಪ್ರಯತ್ನಗಳಲ್ಲೂ ಗಾಂಧಿ ನೆನಪಾಗುತ್ತಿರುತ್ತಾರೆ.

ಗಾಂಧಿ ಸತ್ಯದ ಮಾರ್ಗದಲ್ಲಿ ಮುಕ್ತವಾಗಿ ಬದುಕಿದವರು. ಅವರು ನಡೆಸಿದ ಎಲ್ಲ ಪ್ರಯೋಗಗಳೂ ಸಾರ್ವಜನಿಕವಾಗಿ, ಪಾರದರ್ಶಕವಾಗೇ ನಡೆದಂತವು. ತಮ್ಮ ಬದುಕನ್ನೆ ಬೆತ್ತಲೆಗೊಳಿಸಿಕೊಂಡು ಬದುಕಿದ ಗಾಂಧಿಯದು ಮಾನವ ಇತಿಹಾಸದಲ್ಲೇ ವಿಶಿಷ್ಟವಾದ ವ್ಯಕ್ತಿತ್ವ. ಇದನ್ನು ಎಚ್.ಎಸ್. ವೆಂಕಟೇಶಮೂರ್ತಿ ಅವರ 'ಗಾಂಧಿ ಮತ್ತು ನಿರಾವರಣ' ಕವಿತೆ ಹೀಗೆ ಹಿಡಿದಿಡುತ್ತದೆ.

ಸತ್ಯ ಅಗ್ನಿಯ ಹಾಗೆ ನಗ್ನ, ಅಂಬರವಿಲ್ಲ
ಬೆಟ್ಟದೆತ್ತರದಲ್ಲಿ ಬಿಚ್ಚು ಬಾಳಿನ ನಿಲುವು
ಮುಖಕಷ್ಟೇ ಅಲ್ಲ ಮರ್ಮಾಂಗಕ್ಕೂ ಹಿಡಿದೀಪ
ಬೀದಿಗೆ ಎಳೆತಂದ ಜೋಡಿ ಮಂಚದ ಜೀಕು

ಹೆತ್ತವ್ವಗೂ ಪೂರ ತೋರಿಸದೆ ಮರೆಸಿದ್ದ
ಬೊಗಸೆಯಗಲದ ಬಟ್ಟೆ ಒಳತೊಡೆಗೆ ಕಟ್ಟಿ
ಇಲ್ಲಿ ಎಲ್ಲವು ಮುಕ್ತ –ನೀರು ಗಾಳಿಯ ಹಾಗೆ
ಅಂತ್ಯವಿರದಾಕಾಶದಂತೆ ತೇಜಸ್ಸಂತೆ.[೫೧]

ಗಾಂಧಿ ಅಷ್ಟು ಮುಕ್ತವಾಗಿ ಬದುಕಿದ್ದರಿಂದಲೇ ಅವರ ವ್ಯಕ್ತಿತ್ವಕ್ಕೆ ಶಕ್ತಿ ಮತ್ತು ಘನತೆಗಳು ಬಂದಿರುವುದು. ನಿರಂತರವಾಗಿ ನಮ್ಮ ಆತ್ಮಸಾಕ್ಷಿಯನ್ನು ಬೆದಕಿ ನೋಡುವ ತಾಕತ್ತು ಆ ವ್ಯಕ್ತಿತ್ವಕ್ಕೆ ಇದೆ. 'ಬೆಟ್ಟದೆತ್ತರದಲ್ಲಿ ಬಿಚ್ಚು ಬಾಳಿನ ನಿಲುವು' ಎಂಬುದು ಗಾಂಧಿ ಬದುಕು ಎಷ್ಟು ಮುಕ್ತ ಹಾಗೂ ಸತ್ಯದಿಂದ ಕೂಡಿತ್ತು ಎಂಬುದನ್ನು ತೋರಿಸುತ್ತದೆ. ಆ ಬಿಚ್ಚು ಬಾಳಿನ ನಿಲುವಿಗೆ ಮಾತ್ರ ಕಾಲಾತೀತವಾಗಿ ಮನುಷ್ಯ ಪ್ರಜ್ಞೆಯನ್ನು ರೂಪಿಸುವ, ಶೋಧಿಸುವ ಶಕ್ತಿಯಿರುತ್ತದೆ. ಗಾಂಧಿ 'ಒಳಜಲದ ಕಣ್ಣಾಗಿ' ನಮ್ಮೊಳಗೆ ಸದಾ ಇರುವಂತವರು. ನಮ್ಮೊಳಗೆ ಒಳಿತನ್ನು ಪ್ರಚೋದಿಸುವ, ನಮ್ಮ ಮನಸಾಕ್ಷಿಯೇ ಆಗಿರುವ ವ್ಯಕ್ತಿತ್ವ ಅವರದ್ದು.

ನಮ್ಮೆಲ್ಲರ ಮಧ್ಯೆ ಹುಟ್ಟಿ
ನಮ್ಮ ಹಾಗೇ ಬೆಳೆದು
ನಮ್ಮೊಂದಿಗೆ ಇದ್ದ – ನಮ್ಮ ಮನಸ್ಸಾಕ್ಷಿಯಂತೆ[೫೨]

ಗಾಂಧಿ ಸತ್ತಿಲ್ಲ, ಸಾಯುವುದೂ ಇಲ್ಲ. ಆ ವ್ಯಕ್ತಿತ್ವ ನಮ್ಮ ಮನಸ್ಸಾಕ್ಷಿಯಾಗಿ ಸದಾ ನಮ್ಮೊಟ್ಟಿಗೆ ಇರುವಂತದ್ದು. ಗಾಂಧಿ ಬದುಕಿದ ರೀತಿ, ನಂಬಿದ್ದ ಮೌಲ್ಯಗಳು ಅವರ ವ್ಯಕ್ತಿತ್ವಕ್ಕೆ ಅಮರತ್ವವನ್ನು, ನೈತಿಕ ಯಜಮಾನಿಕೆಯನ್ನು ತಂದುಕೊಟ್ಟಿವೆ. ಗಾಂಧಿ ವ್ಯಕ್ತಿತ್ವದ ವಿಶಿಷ್ಟ ಗುಣಗಳಾದ ನೇರ ನಡೆನುಡಿ, ಆಪ್ತತೆ, ಸತ್ಯ, ಮುಗ್ಧತೆ, ಪಕ್ವತೆಗಳನ್ನು ಕಂಡು ಅಗಾಧ ವಿಸ್ಮಯ ವ್ಯಕ್ತವಾಗಿದೆ. ಆ ವಿಸ್ಮಯಕಾರಿ ವ್ಯಕ್ತಿತ್ವದ ಬಗೆಗೆ ಭಕ್ತಿ, ಗೌರವ, ಧನ್ಯತೆಯ ಭಾವಗಳು ಪ್ರಕಟಗೊಂಡಿವೆ.

ಇಷ್ಟೊಂದು ದೊಡ್ಡ ಮಟ್ಟದಲ್ಲಿ ಗಾಂಧಿ ವ್ಯಕ್ತಿತ್ವವನ್ನು ಗ್ರಹಿಸಲು ನಡೆದಿರುವ ಪ್ರಯತ್ನಗಳು ಗಾಂಧಿಯ ಉಜ್ವಲ ವ್ಯಕ್ತಿತ್ವದ ಹಲವು ವಿಸ್ಮಯಕಾರಿ ಗುಣ ನಡವಳಿಕೆಗಳನ್ನು ಅಪಾರವಾದ ಭಕ್ತಿ, ಗೌರವ, ಬೆರಗು, ಮೆಚ್ಚುಗೆಗಳೊಂದಿಗೆ ಕಟ್ಟಿಕೊಡುವ ಪ್ರಯತ್ನಮಾಡಿದೆ. ಇಲ್ಲೆಲ್ಲಾ ಆರಾಧಿಸುವ ಗುಣವೇ ಹೆಚ್ಚಾಗಿ ಕಂಡುಬಂದಿದೆ. ಗಾಂಧಿಯನ್ನು ಅವತಾರಿ, ಕಾರಣಿಕ ಎಂದೆಲ್ಲಾ ಕಂಡಿರುವ ಕವಿತೆಗಳು ಅವರಲ್ಲಿ ಅಲೌಕಿಕ ಶಕ್ತಿಯನ್ನು ಅರೋಪಿಸುವ ಕೆಲಸ ಮಾಡಿವೆ. ಇನ್ನು ಕೆಲವು ಕವಿತೆಗಳು ಗಾಂಧಿ ವ್ಯಕ್ತಿತ್ವದ ಹಲವು ಶ್ರೇಷ್ಠ ಗುಣಗಳನ್ನು ವೈಭವೀಕರಿಸಿ ವರ್ಣಿಸಿವೆಯಾದರೂ ಅವು ಆ ವ್ಯಕ್ತಿತ್ವಕ್ಕೆ ಸಹಜವೆಂಬಂತೆ ಭಾಸವಾಗುವುದೂ ಉಂಟು. ಒಟ್ಟಾರೆಯಾಗಿ ಹೊಸಗನ್ನಡ ಕನ್ನಡ ಕಾವ್ಯ ಗಾಂಧಿ ವ್ಯಕ್ತಿತ್ವವನ್ನು ಉನ್ನತ ಆದರ್ಶವಾಗಿ, ಮೆಚ್ಚುಗೆಯ ನೆಲೆಯಲ್ಲಿ ಗ್ರಹಿಸುವ ಪ್ರಯತ್ನಮಾಡಿದೆ. ಹೀಗೆ ಮಾಡಿರುವುದು ತಪ್ಪಲ್ಲವಾದರೂ ಇತಿಹಾಸ ಕಂಡ ಅಪರೂಪದ ವ್ಯಕ್ತಿಯಾದ ಗಾಂಧಿ ಸಕಾರಣವಾಗಿಯೇ ಹಲವು ವಾಗ್ವಾದ, ಚರ್ಚೆ, ಸಂದೇಹ, ವಿರೋಧ, ವಿಮರ್ಶೆ, ಆರಾಧನೆ, ತಿರಸ್ಕಾರಗಳಿಗೆ ಒಳಗಾಗುತ್ತಿರುವ ಸಂದರ್ಭದಲ್ಲಿ ಆ ವ್ಯಕ್ತಿತ್ವವನ್ನು ಹಲವು ನೆಲೆಗಳಿಂದ ಮುಖಾಮುಖಿಯಾಗುವ ಮೂಲಕ ಅರಿಯುವ ಪ್ರಯತ್ನದ ಅನಿವಾರ್ಯತೆಯಿದೆ. ಈ ನಿಟ್ಟಿನಿಂದ ನೋಡಿದಾಗ ಬೆರಳೆಣಿಕೆಯ ಕವಿತೆಗಳನ್ನು ಹೊರತು ಪಡಿಸಿದರೆ ಬಹುತೇಕ ಕವಿತೆಗಳು ಮೆಚ್ಚುಗೆ, ಆರಾಧನೆ, ಬೆರಗಿನ ಭಾವಗಳನ್ನು ಗಾಂಧಿ ವ್ಯಕ್ತಿತ್ವದ ಬಗೆಗೆ ವ್ಯಕ್ತಪಡಿಸುತ್ತವೆಯೇ ಹೊರತು ಪ್ರಶ್ನೆ, ಅನುಮಾನ, ಜಗಳಗಳನ್ನಲ್ಲ. ಈ ಮಾತಿನ ಅರ್ಥ ಗಾಂಧಿಯನ್ನು ಪ್ರಶ್ನಿಸಲೇಬೇಕು ಎಂದಲ್ಲ. ಪ್ರಶ್ನಿಸುವ, ಅನುಮಾನಿಸುವ, ಜಗಳವಾಡುವ, ತಮ್ಮ ಕಾಲದ ಗ್ರಹಿಕೆಗಳೊಂದಿಗೆ ಮುಖಾಮುಖಿಯಾಗಿಯೇ ಅರ್ಥೈಸಿಕೊಳ್ಳಬೇಕಾದ ವ್ಯಕ್ತಿತ್ವ ಗಾಂಧಿಯದು. ಏಕೆಂದರೆ ಗಾಂಧಿ ಇಂದು ವ್ಯಕ್ತಿಯಾಗಿ ಉಳಿದಿಲ್ಲ. ಜಾಗತಿಕ ಬದುಕನ್ನು ಆವರಿಸಿಕೊಂಡಿರುವ ಮೌಲ್ಯ ಸಂಕೇತವಾಗಿದ್ದಾರೆ. ನಮ್ಮನ್ನು ನಿರಂತರವಾಗಿ ಕಾಡುವ ನೈತಿಕ ಪ್ರಜ್ಞೆಯಾಗಿದ್ದಾರೆ. ಯಾವುದೇ ಒಂದು ಉನ್ನತ ವ್ಯಕ್ತಿತ್ವ ಆ ಹಂತವನ್ನು ಅತಿ ಸರಳವಾಗಿ ತಲುಪಲು ಸಾಧ್ಯವಿಲ್ಲ. ಹಾಗೆಯೇ ದೌರ್ಬಲ್ಯ, ಗೊಂದಲರಹಿತವಾಗಿರಲೂ ಸಾಧ್ಯವಿಲ್ಲ. ಅವರು ಪ್ರತಿಪಾದಿಸಿದ ಚಿಂತನೆಗಳು ಎಲ್ಲಾ ವರ್ಗ, ಕಾಲ, ದೇಶಗಳಿಗೂ ಪ್ರಶ್ನಾತೀತವಾಗಿ ಅನ್ವಯವಾಗುತ್ತವೆ ಎಂದೇನೂ ಇಲ್ಲ. ಹೀಗಿರುವಾಗ ವ್ಯಕ್ತಿತ್ವವನ್ನು ಕೇವಲ 'ಒಳಿತಿನ ಸಂಚಯ'ವಾಗಿ ಮಾತ್ರ ನೋಡುವುದರಿಂದ ಚರಿತ್ರೆಯನ್ನು ವಾಸ್ತವದ ನೆಲೆಯಲ್ಲಿ ಅರಿಯುವ, ಕಟ್ಟುವ ಪ್ರಯತ್ನಗಳಿಗೆ ಹಿನ್ನಡೆಯಾಗುತ್ತದೆ. ಆರಾಧನೆ, ವೈಭವೀಕರಣ, ಉತ್ಪ್ರೇಕ್ಷೆಯ ವರ್ಣನೆಗಳು ವ್ಯಕ್ತಿತ್ವಕ್ಕೆ ಅಲೌಕಿಕತೆಯನ್ನು ಆರೋಪಿಸಿ ಕೇವಲ ದಂತಕತೆಗಳೆಂದು ನಂಬುವ ಹಾಗೆ ಮಾಡಿಬಿಡುತ್ತವೆ. ವ್ಯಕ್ತಿಯನ್ನು ಮನುಷ್ಯ ಮಾತ್ರವಾಗಿಯೆ ಗ್ರಹಿಸಬಹುದಾದ ಪ್ರಯತ್ನಗಳು ವ್ಯಕ್ತಿತ್ವವನ್ನು ಎಲ್ಲಾ ಆಯಾಮಗಳಿಂದ ಪರಿಚಯಿಸಬಲ್ಲುವು. ಮನುಷ್ಯ ಸ್ವಭಾವಗಳನ್ನು ಮೀರಿದ ದೈವೀಶಕ್ತಿಯಾಗಿ ನೋಡುವ ಪ್ರಯತ್ನಗಳು ವ್ಯಕ್ತಿತ್ವಕ್ಕೂ, ನೆಲಕ್ಕೂ ಇರಬಹುದಾದ ಸಂಬಂಧದ ಎಳೆಗಳನ್ನು ಕತ್ತರಿಸುವ ಪ್ರಯತ್ನಗಳಾಗಿ ಕಂಡುಬರುತ್ತವೆ.

ಇವನೊಬ್ಬ ಮಾಂತ್ರಿಕನು ಯುಗಕೊಮ್ಮೆ ಬರುವವನು
ಕೊಳಲೂದಿ ದನಗಳನು ಕಾಯ್ದಿದ್ದನೊಮ್ಮೆ
ಪಾರ್ಥನಿಗೆ ಸಾರಥಿಯು ಆಗಿದ್ದನೊಮ್ಮೆ
ಇವನ ಕತೆಯೇ ಇಂದು ದೇಶದ್ದೇ ಕತೆಯಾಯ್ತು
ಇವನ ಚರಿತೆಯೆ ಇಂದು ಇತಿಹಾಸವಾಯ್ತು.[೫೩]

ಹೀಗೆ ಗಾಂಧಿ ವ್ಯಕ್ತಿತ್ವವನ್ನು ಲೋಕೋತ್ತರ ಚರಿತವಾಗಿ, ಪುರಾಣೀಕರಿಸಿ ಕಾಣುವುದರಿಂದ ಯಾವ ಪ್ರಯೋಜನವೂ ಇಲ್ಲ. ಇಲ್ಲಿ ಗಾಂಧಿಯನ್ನು ಕೃಷ್ಣನ ಅವತಾರಗಳೊಂದಿಗಿಟ್ಟು ನೋಡಲಾಗಿದೆ. ಇಂಥ ಪ್ರಯತ್ನಗಳು ವ್ಯಕ್ತಿತ್ವವನ್ನು ದೈವೀಕರಿಸಿಬಿಡುವುದರಿಂದ ನೈಜತೆಯನ್ನು ಗ್ರಹಿಸಲಾರವು. ಇಂಥ ಕವಿತೆಗಳ ನಡುವೆಯೂ ಕೆಲವೊಂದು ಕವಿತೆಗಳು ಗಾಂಧಿ ವ್ಯಕ್ತಿತ್ವದೊಂದಿಗೆ ಸಂಘರ್ಷಕ್ಕಿಳಿಯುವ ಪ್ರಯತ್ನವನ್ನೂ ಮಾಡಿವೆ. ಗಾಂಧಿಯ ಚಿಂತನೆ, ಹೋರಾಟ, ನಡವಳಿಕೆಗಳನ್ನು ಅನುಮಾನಿಸುವ ಮೂಲಕ ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಿವೆ. ಇವು ಗಾಂಧಿಯ ವಿರುದ್ಧ ದೊಡ್ಡ ಆರೋಪಗಳನ್ನೇನು ಮಾಡದಿದ್ದರು ಅವರನ್ನು ಆರಾಧನೆಯ ನೆಲೆಯಲ್ಲಿ ನೋಡುವ ನೋಟಕ್ರಮವನ್ನು ಪಲ್ಲಟಿಸುವ ಪ್ರಯತ್ನಮಾಡಿವೆ. ಗಾಂಧಿಯನ್ನು ಅದ್ವಿತೀಯ ಆದರ್ಶವಾಗಿ ಕಾಣುವ ಬದಲಾಗಿ ತಮ್ಮ ಕಾಲದ ಬೇರೆ ಬೇರೆ ಪ್ರಶ್ನೆಗಳ ಮೂಲಕ ಮುಖಾಮುಖಿಯಾಗಿವೆ. ಶಶಿಕಲಾ ವೀರಯ್ಯಸ್ವಾಮಿ ಅವರ 'ಕಸ್ತೂರಿಯ ಕಂಪು', ಕೆ.ಎಸ್.ನಿಸಾರ್ ಅಹಮದ್‌ರ 'ಬಾಪೂ', ಡಿ.ಬಿ ಶಂಕರಪ್ಪ ಅವರ 'ಗಾಂಧಿ', ಎಂ. ಲೋಕೇಶ್‌ರ 'ಹರಿಜನ ಮೋಹನದಾಸರಿಗೆ', ಶಿವಾನಂದ ಬೆಳಕೂಡರ 'ಶರಣು ಶರಣಾರ್ಥಿ', ವಿ. ಮುನಿವೆಂಕಟಪ್ಪರ 'ಈ ದೇಶದ ಗಾಂಧಿ' ಮುಂತಾದ ಕವಿತೆಗಳು ಈ ನೆಲೆಯಲ್ಲಿ ನಿರೂಪಿತವಾಗಿವೆ.

ಗಾಂಧಿ ಎಂಬ ಅಲೆ ಈ ದೇಶವನ್ನು ಆವರಿಸಿಕೊಂಡು ಬೇರೆ ವ್ಯಕ್ತಿತ್ವಗಳು ಬೆಳೆಯದಂತೆ ತಡೆದಿದೆ. ಗಾಂಧಿಯ ಪ್ರಭಾವಿ ವ್ಯಕ್ತಿತ್ವದ ಅಡಿಯಲ್ಲಿ ಬೇರೆ ಬೇರೆ ವ್ಯಕ್ತಿ, ಚಿಂತನೆಗಳು ತಲೆ ಎತ್ತಲಾರದೆ ಹೋದವು ಎಂಬ ಗಂಭೀರ ಆರೋಪವನ್ನು ಕೆಲವು ಕವಿತೆಗಳು ಮಾಡಿವೆ. ಗಾಂಧಿ ವ್ಯಕ್ತಿತ್ವದ ಹಠ, ನಿಷ್ಠುರತೆ, ಸಾವಿಗೂ ಹೆದರದ ದಿಟ್ಟತನದ ನಡವಳಿಕೆಗಳು ಬೇರೆ ವ್ಯಕ್ತಿ ಮತ್ತು ಚಿಂತನೆಗಳು ಮುಂದೆ ಬರದ ಹಾಗೆ ತಡೆದಿರುವುದು ನಿಜವಾದರೂ ಅವುಗಳ ಉದ್ದೇಶ ಬೇರೆಯೇ ಆಗಿದ್ದುದನ್ನು ಗಮನಿಸಬೇಕು. ಗಾಂಧಿಗೆ ಬೇರೆ ವ್ಯಕ್ತಿಗಳು ಬೆಳೆಯಬಾರದೆಂಬ ವೈಯಕ್ತಿಕ ಉದ್ದೇಶವಿದ್ದಂತೆ ಕಾಣಲಾರದು. ತನ್ನ ಹಠ, ನಿಷ್ಠುರತೆಗಳಿಂದ ಅಂಬೇಡ್ಕರ್ ಮುಂತಾದ ವ್ಯಕ್ತಿತ್ವಗಳಿಗೆ ದಕ್ಕೆಯಾಗಿರುವುದನ್ನು ಪೂನಾ ಒಪ್ಪಂದದಂತಹ ಘಟನೆಗಳು ನೆನಪಿಗೆ ತರುತ್ತವೆ.

ಗಾಂಧಿ ಯುಗವೆಂದರೆ
ಸೃಜನಶೀಲತೆ ಸತ್ತು ಹೋದ ಯುಗ,
ಅವನ ಮಾತು –ಕೃತಿ– ಪ್ರಭಾವದ ಕೆಳಗೆ
ಕವಿಗಳಾದರು ನಾಯಿ ಛತ್ತರಿಗೆ
. . . . . . . . . .
ದೊಡ್ಡ ಆಲದ ಗಿಡದ ಕೆಳಗೆ ಭಿತ್ತೆ
ಬೆಳೆಯಬಹುದೇನು? ಬರಿಹುಲ್ಲು ಮತ್ತೆ!
ಟೊಂಗೆಯಲಿ ಬೇರಿಳಿಸಿ ನೆಲವನಪ್ಪಿದ ವೃಕ್ಷ
ಗಿಡವು ಇಂದಿಲ್ಲ, ಬೇರು ನೆಲ ಬಿಟ್ಟಿಲ್ಲ
ನೆಲ ರೆಂಟೆ ಹೊಡೆಯದೆ ಹೊಸ ಸೃಷ್ಟಿಯಿಲ್ಲ
ತರುಣ ಕವಿಗಳನೆಲ್ಲ ನಿರ್ವೀರ್ಯ ಮಾಡಿದನು
ಪ್ರತಿಭೆಯ ಕೊರಳಿಗೇ ನೇಣು ಹಾಕಿದನು
ಕೈಯಲಿ ರಾಮ - ಜಪ–ಮಾಲೆ ಕೊಡಿಸಿದನು [೫೪]

ಗಾಂಧಿ ವ್ಯಕ್ತಿತ್ವದ ಪ್ರಭಾವ ಆ ಯುಗದ ಮೇಲೆ ಬೀರಿದ ಇತ್ಯಾತ್ಮಕ ಮತ್ತು ನೇತ್ಯಾತ್ಮಕ ಪರಿಣಾಮಗಳನ್ನು ಕುರಿತು ಪ್ರಶ್ನಿಸುತ್ತಿರುವ ಕವಿತೆ ಗಾಂಧಿ ವ್ಯಕ್ತಿತ್ವ ಎಂಥವರನ್ನು ಬೆಳೆಸಿತು ಎಂಬುದನ್ನು 'ಪ್ರಭಾವದ ಕೆಳಗೆ ಕವಿಗಳಾದರು ನಾಯಿ ಛತ್ತರಿಗೆ' ಎನ್ನುವ ಮೂಲಕ ಹಿಡಿದಿಡುತ್ತದೆ. ಇತರೆ ಸೃಜನಶೀಲ ಚಿಂತನೆಗಳನ್ನು ಮತ್ತು

ವ್ಯಕ್ತಿಗಳನ್ನು ಬೆಳಕಿಗೆ ಬಾರದ ಹಾಗೆ ಗಾಂಧಿ ವ್ಯಕ್ತಿತ್ವ ಆವರಿಸಿಕೊಂಡಿತ್ತು ಎಂಬುದನ್ನು 'ದೊಡ್ಡ ಆಲದ ಮರ'ದ ಸಂಕೇತ ಧ್ವನಿಸುತ್ತದೆ. ಆಲದ ಮರ ಆಶ್ರಯವೂ ಹೌದು, ಅಪಾಯವೂ ಹೌದು. ಗಾಂಧಿ ವ್ಯಕ್ತಿತ್ವದಲ್ಲಿನ ದ್ವಿಮುಖಗಳನ್ನು ಹೀಗೆ ಹಿಡಿದಿಡಲಾಗಿದೆ. ಗಾಂಧಿಯ ಹಠ. ಉಪವಾಸ, ಸತ್ಯಾಗ್ರಹ ಮುಂತಾದ ಅಸ್ತ್ರಗಳು ಗಾಂಧಿಯನ್ನು ಒಪ್ಪುವ ಹಾಗೆ ಮಾಡಿಬಿಡುತ್ತಿದ್ದವು. ಪೂನಾ ಒಪ್ಪಂದ ಇದಕ್ಕೆ ಸೂಕ್ತ ಉದಾಹರಣೆ. ಗಾಂಧಿ ಚಿಂತನೆ – ಕ್ರಿಯೆಗಳು ದೂರಗಾಮಿ ಆಶಯಗಳು ಏನೇ ಇದ್ದರೂ ಗಾಂಧಿ ಎಂಬ ಪ್ರಬಲ ಅಲೆ ಇಡೀ ಯುಗವನ್ನು ಆವರಿಸಿಕೊಂಡಿತ್ತು ಎಂಬುದು ಗಾಂಧಿ ವ್ಯಕ್ತಿತ್ವದ ಇತ್ಯಾತ್ಮಕವೂ, ನೇತ್ಯಾತ್ಮಕವೂ ಆದ ಗುಣವಾಗಿದೆ.

ಗಾಂಧಿಯ ಪ್ರತಿಪಾದನೆಗಳಾದ ಸತ್ಯ, ಅಹಿಂಸೆ, ಅಪರಿಗ್ರಹ, ಉಪವಾಸ, ಸತ್ಯಾಗ್ರಹ, ಬ್ರಹ್ಮಚರ್ಯ ಮುಂತಾದವು ಉನ್ನತ ಮೌಲ್ಯಗಳಾದರೂ ವರ್ತಮಾನದಲ್ಲಿ ಸಾಮಾನ್ಯ ಮನುಷ್ಯನು ಅನುಸರಿಸಲಾಗದಂತವುಗಳಾಗಿವೆ. ಅವು ತಮ್ಮ ಮೌಲ್ಯವನ್ನು ಕಳೆದುಕೊಂಡು ಅಪಹಾಸ್ಯಕ್ಕೆ ಒಳಗಾಗುತ್ತಿವೆ. ಮೆಚ್ಚಿ ಹೊಗಳುವ ಉನ್ನತ ಮೌಲ್ಯಗಳಾಗಿದ್ದೂ ಬದುಕಿನಲ್ಲಿ ಪ್ರಾಯೋಗಿಕವಾಗಿ ಅನುಸರಿಸಲಾಗದ ಇಕ್ಕಟ್ಟುಗಳಾಗಿವೆ. ಗಾಂಧಿಯ ಕೆಲವು ಪ್ರತಿಪಾದನೆಗಳು ವ್ಯಕ್ತಿಯೊಬ್ಬನು ಅನುಸರಿಸಲು ಸಾಧ್ಯವೇ ಹೊರತು ಸಾಮೂಹಿಕವಾಗಿ ಎಲ್ಲರೂ ಅನುಸರಿಸಬಹುದಾದವುಗಳಲ್ಲ. ಇಂಥ ಕೆಲವು ಮಿತಿಗಳು ಗಾಂಧಿ ಪ್ರತಿಪಾದನೆಗಳಿಗೆ ಇರುವುದನ್ನು ಕವಿತೆಗಳು ಗುರುತಿಸುತ್ತವೆ.

ಬಾಪೂ
ಜಿಂಕೆ ಮೊಲ ನವಿಲೊಡನೆ ಇವೆ ಹಾವು ಹುಲಿ ಹಂದಿ
ಪ್ರಕೃತಿಯ ದ್ವಂದ್ವಕ್ಕೆ ಯಾವ ಬಟ್ಟೆ?
ಬರೀ ಹೃದಯ ಕರುಳಷ್ಟೇ ಇದ್ದಿದ್ದರಿವಕೆಲ್ಲ!
ಕೂಡಿಕೊಂಡಿವೆ ಹಾಳು ಹಲ್ಲು ಹೊಟ್ಟೆ
ಇದಕ್ಕೇನನ್ನುವುದು ಹೇಳು :
ಅರಿವೆ ಇಲ್ಲದೆ ನಿತ್ಯ ಹಿಂಸೆಯಲೆ ಹಿಗ್ಗುತಿದೆ ಜಗದ ಬಾಳು
ನೋಡಿದನ್ನು ಹಿತ್ತಲಿನ ಈ ಬಳ್ಳಿ ಮರವನ್ನು
ಹೂವಿಂದ ಹೆರಳು ಚೆನ್ನು
ನಾಲಗೆಯ ನಲಿಸುವುದು ಹಣ್ಣುಕಾಯಿ
ಕೊಂಬೆ ಕಡಿದೊಟ್ಟಿರಲು ಒಲೆಯಲ್ಲಿ ತಣಿಯುವುದು ಹಸಿವು – ನಾಯಿ
ಮೊನ್ನೆ ಲಕ್ವಾ ಹೊಡೆದ ನೆರೆಯಾತ ನರಳುತ್ತ
ಪಾರಿವಾಳವ ಕೊಯ್ದು ರಕ್ತ ಹೀರದೆ ಸತ್ತ
ಮಡದಿ ಮಕ್ಕಳಿಗಾರು ಗತಿಯೋ ತಂದೆ? [೨೨]

ಗಾಂಧಿ ಪ್ರತಿಪಾದಿಸಿದ ಅಹಿಂಸೆ, ಸಸ್ಯಾಹಾರ, ಆತ್ಮ ಸಂಯಮ ಮುಂತಾದ ಜೀವನ ಮೌಲ್ಯಗಳು ಪ್ರಕೃತಿಗೆ ವಿರುದ್ಧವಾದವುಗಳು, ಪಾಲಿಸಲು ಅಸಾಧ್ಯವಾದ ಉನ್ನತ ಆದರ್ಶಗಳು ಎಂಬುದನ್ನು ಈ ಕವಿತೆ ತೋರಿಸಲು ಯತ್ನಿಸುತ್ತಿದೆ. ಪ್ರಕೃತಿಯೇ ಆಹಾರ ಸರಪಳಿಯನ್ನು, ಜೀವಿಗಳ ಜೀವನ ವಿಧಾನವನ್ನು ನಿರ್ಧರಿಸಿರುವಾಗ ಅದನ್ನು ನಿಗ್ರಹಿಸುವ, ನಿರಾಕರಿಸುವ ಪ್ರಯತ್ನಗಳು ಪ್ರಕೃತಿಗೆ ವಿರುದ್ಧವಾಗುತ್ತವೆ. ಇಂತಹ ಪ್ರತಿಪಾದನೆಗಳು ಉತ್ತಮ ಬದುಕನ್ನು ರೂಪಿಸುವ ಉದ್ದೇಶ-ಗುರಿಗಳನ್ನು ಹೊಂದಿದ್ದರೂ ಕೂಡ ಅನುಸರಿಸಲು ಕಷ್ಟಸಾಧ್ಯವಾಗಿವೆ. ಹಾಗಾಗಿ ಗಾಂಧಿ ಪ್ರತಿಪಾದನೆಗಳು ಕೈಗೆಟುಕದ ಉನ್ನತ ಆದರ್ಶಗಳಾಗಿ ಕಾಣುತ್ತವೆ. ವ್ಯಕ್ತಿಯಾಗಲೀ, ಸಮಷ್ಟಿಯಾಗಲೀ ಅನುಸರಿಸಲಾಗದ ಉನ್ನತ ಬದುಕನ್ನು ಬದುಕಿದವರು ಗಾಂಧಿ. ಇದು ಗಾಂಧಿ ವ್ಯಕ್ತಿತ್ವದ ಉನ್ನತಿಯೂ ಹೌದು, ಮಿತಿಯೂ ಹೌದು. ಇದನ್ನು ಕೆ.ಎಸ್. ನಿಸಾರ್ ಅಹಮದ್ 'ವಾಸ್ತವತೆ ನಾನು ಆದರ್ಶ ನೀನು' ಎನ್ನುತ್ತಾರೆ. ವಾಸ್ತವತೆ ಮತ್ತು ಆದರ್ಶಗಳ ನಡುವಿನ ಅಂತರ ಇಂದು ನಮಗೂ ಗಾಂಧಿಗೂ

ಏರ್ಪಟ್ಟಿದೆ. ಗಾಂಧಿಯದು ಉನ್ನತ ವ್ಯಕ್ತಿತ್ವವಾದರೂ ವರ್ತಮಾನದಲ್ಲಿ ನಮ್ಮದಾಗಿಸಿಕೊಳ್ಳಲಾಗದ ಆದರ್ಶವೂ ಹೌದು. 'ಬಾಳಿಗೆ ದಕ್ಕದೆ ಮೀರಿರುವೆ' ಎಂಬ ಮಾತು ಏಕಕಾಲಕ್ಕೆ ಗಾಂಧಿ ವ್ಯಕ್ತಿತ್ವ ತಲುಪಿರುವ ಎತ್ತರವನ್ನೂ, ನಮ್ಮ ಬಾಳಿಗೆ ಎಟುಕದ ಅದರ ಮಿತಿಯನ್ನೂ ಹೇಳುತ್ತದೆ.

ಗಾಂಧಿ ವ್ಯಕ್ತಿತ್ವದ ಉನ್ನತಿಯ ಹಿಂದೆ ಕಸ್ತೂರ ಬಾ ಅವರ ತ್ಯಾಗ, ಪ್ರೋತ್ಸಾಹಗಳೂ ಇವೆ. ಆದರೆ ಗಾಂಧಿ ವ್ಯಕ್ತಿತ್ವಕ್ಕೆ ಸಿಕ್ಕಷ್ಟು ಮನ್ನಣೆ ಕಸ್ತೂರ ಬಾ ಅವರ ವ್ಯಕ್ತಿತ್ವಕ್ಕೆ ಸಿಗಲಿಲ್ಲ. ಕಸ್ತೂರ ಬಾ ಅವರ ನೆಲೆಯಿಂದ ಗಾಂಧಿ ವ್ಯಕ್ತಿತ್ವವನ್ನು ನೋಡಿದಾಗ ಏಳುವ ಪ್ರಶ್ನೆಗಳಾವುವು ಎಂಬುದು ಕುತೂಹಲಕರ ವಿಷಯವಾಗಿದೆ. ಗಾಂಧಿ ವ್ಯಕ್ತಿತ್ವದ ಪ್ರಭೆಯಲ್ಲಿ ಮಂಕಾದ ವ್ಯಕ್ತಿತ್ವ ಕಸ್ತೂರ ಬಾ ಅವರದು. ಗಾಂಧಿಯ ಆದರ್ಶ ಕಸ್ತೂರ ಬಾ ಅವರ ಅಸ್ತಿತ್ವವನ್ನೇ ಇಲ್ಲವಾಗಿಸಿಬಿಟ್ಟಿತು ಎಂಬ ಪ್ರಶ್ನೆಗಳೂ ಇವೆ. ಇದನ್ನು ಶಶಿಕಲಾ ವೀರಯ್ಯಸ್ವಾಮಿ ತಮ್ಮ 'ಕಸ್ತೂರಿಯ ಕಂಪು' ಎನ್ನುವ ಕವನದಲ್ಲಿ ಹೀಗೆ ಹೇಳಿದ್ದಾರೆ.

ಆದರೆ ಮೋಹಕ್ಕೆ ದಾಸಾನುದಾಸನಾಗಿದ್ದವನು
ಮಹಾತ್ಮನಾಗಿ ಮುಗಿಲುದ್ದ ಬೆಳೆದಾಗ
ಕಾಮವಳಿದ ಕಸ್ತೂರಿಯ ಕಂಪಾದೆ? ನಾನಾಗ
ಈ ಪರಿಮಳದಲ್ಲೇ ಅರಳಿ ಹೆಮ್ಮರವಾದ
ಇವನ ನೆಲದಡಿಯ ಬೇರು ನಾನಲ್ಲವೇ?
ಹಲವು ಹನ್ನೊಂದು ಪ್ರಯೋಗಗಳಿಗೆ
ಪಶುಬಲಿಯಾದವಳು ನಾನು
ಪಶುಪತಿಯಂತೆ ಪೂಜೆಗೊಂಡವನು ಅವನು.[೫೬]

ಗಾಂಧಿ ವ್ಯಕ್ತಿತ್ವ ಚರಿತ್ರೆಯಲ್ಲಿ ಪೂಜೆಗೊಂಡಂತೆ ಆ ವ್ಯಕ್ತಿತ್ವದ ರೂಪಣ ಕ್ರಿಯೆಯ ಹಿಂದಿನ ಶಕ್ತಿಯೂ ಆದ ಕಸ್ತೂರ ಬಾ ಅವರ ತ್ಯಾಗ ಮುನ್ನೆಲೆಗೆ ಬರಲೇ ಇಲ್ಲ. ಪುರುಷ ಪ್ರಧಾನ ವ್ಯವಸ್ಥೆಯ ಯಜಮಾನಿಕೆ ಹೇಗೆ ಹೆಣ್ಣಿಗೂ ಇರುವ ವ್ಯಕ್ತಿತ್ವದ ಉನ್ನತಿಕೆಯನ್ನು ಅಮುಖ್ಯವಾಗಿಸಿಬಿಡುತ್ತದೆ ಎಂಬುದನ್ನು ಕವಿತೆ ವಿಡಂಬಿಸುತ್ತದೆ. ಗಾಂಧೀಜಿಯ ಹಲವು ಪ್ರಯೋಗ, ನಿರ್ಧಾರಗಳ ಹಿಂದೆ ಕಸ್ತೂರ ಬಾ ಅವರ ತ್ಯಾಗ, ಸಹನೆ, ಪ್ರೋತ್ಸಾಹಗಳು ಕೆಲಸಮಾಡಿವೆ. ಆದರೆ ಗಾಂಧಿ ವ್ಯಕ್ತಿತ್ವವನ್ನು ವಿವೇಚಿಸುವಾಗ ಮಾತ್ರ ಕಸ್ತೂರ ಬಾ ಅವರನ್ನು ಬದಿಗೆ ಸರಿಸಿ ವಿವೇಚಿಸಲಾಗುತ್ತಿದೆ. ಯಾವ ವ್ಯಕ್ತಿತ್ವವೂ ಹಾಗೆ ಸ್ವಯಂಭೂ ಆಗಿರುವುದಿಲ್ಲ. ಹಲವು ವ್ಯಕ್ತಿತ್ವಗಳ ಸಹಕಾರ, ತ್ಯಾಗ, ಪ್ರೇರಣೆಗಳಿಂದಲೇ ರೂಪುಗೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ಕಸ್ತೂರ ಬಾ ಅವರನ್ನು ಹೊರತುಪಡಿಸಿ ಗಾಂಧಿ ವ್ಯಕ್ತಿತ್ವದ ಬಗೆಗೆ ಮಾತನಾಡುವುದು ಅಪೂರ್ಣವೆನಿಸುತ್ತದೆ. ಇಂತಹ ಪ್ರಸಂಗದ ವಿಷಮತೆಯನ್ನು ಶಶಿಕಲಾ ವೀರಯ್ಯಸ್ವಾಮಿ ಕಸ್ತೂರಬಾ ಮನಸ್ಥಿತಿಯ ಹಿನ್ನೆಲೆಯಲ್ಲಿ ಚಿತ್ರಿಸಲು ಪ್ರಯತ್ನಿಸಿದ್ದಾರೆ.

ಲಂಗದಾವಣಿಯ ನನ್ನ ನಿರಿಗೆಗಳಿಗಿನ್ನೂ
ಪುರುಷ ಸನ್ನಿಧಿಯ ಪಾರಮ್ಯದರಿವಿರಲಿಲ್ಲ
ಆಟದಂಗಳದಲ್ಲಿ ಕುಣಿದು ಕುಪ್ಪಳಿಸುತ್ತಿದ್ದ
ಎಳೆಯ ಬಾಲೆಯನ್ನೆಳೆತಂದು
ಎಡೆಬಿಡದೆ ಹಿಂಡಿ ಹಿಪ್ಪಿ ಮಾಡಿದ ಇವನು
ಕಾಮಕಸ್ತೂರಿಯ ಕಂಪು ಕಂಪಿಸುವಾಗ ಕೈ ಬಿಟ್ಟನಲ್ಲ!
ಕರೆವಾಗಲೂ, ತೊರೆವಾಗಲೂ ನನ್ನ
ನ್ನೊಂದು ಮಾತು ಕೇಳಿದನೇನೀ ಮಹಾತ್ಮ?
ಪುಟಪುಟಗಳಲ್ಲೂ ಬಿಚ್ಚಿ ಕೊಂಡಿದ್ದಾನೆ ಬದುಕ ಸಂಪುಟದಲ್ಲಿ
ಅಕ್ಷರಕ್ಷರವನ್ನೂ ಬಿಡದೇ ಕ್ಷಣಕ್ಷಣಕೂ ಲೆಕ್ಕವಿಟ್ಟಿದ್ದಾನೆ
ನಾನು? ಈ ಕಿಕ್ಕಿರಿದ ಅಕ್ಷರಗಳ ಸಂತೆಯೊಳಗೆ
ಸ್ವರ ಸಮೇತ ಕಳೆದುಹೋಗಿದ್ದೇನೆ

ಚರಿತ್ರೆಯ ಸಾಲುಗಳಲಿ ಸಲ್ಲದೇ
ಮಾತುಕ್ಕುವ ಮೂಕಿಯಾಗುಳಿದೆನಲ್ಲ
ಇದಕ್ಕಿಂತ ಹೆಚ್ಚೇಗೇನು ಹೇಳಲಿ?[೫೭]

ಗಾಂಧಿ 'ಮಹಾತ್ಮ'ನಾಗಿ ರೂಪುಗೊಂಡುದರ ಹಿಂದೆ ಕಸ್ತೂರ ಬಾ ಅವರ ತ್ಯಾಗ ಮಹತ್ತರವಾದುದು. ತಮ್ಮ ಬದುಕಿನ ಹಲವು ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಗಾಂಧಿ, ಕಸ್ತೂರ ಬಾ ಜೊತೆ ಅತ್ಯಂತ ನಿಷ್ಠುರವಾಗಿ, ನಿರ್ದಯವಾಗಿ ವರ್ತಿಸಿದ್ದಾರೆ. ಹೀಗೆ ಮಾಡಿದ್ದರ ಉದ್ದೇಶ ಎಷ್ಟೇ ಉದಾತ್ತವಾದುದಾದರೂ ಕಸ್ತೂರ ಬಾ ಅವರ ನೆಲೆಯಿಂದ ನೋಡಿದಾಗ ಅನ್ಯಾಯವೆಂದೆನಿಸದೆ ಇರದು. 'ಕರೆವಾಗಲೂ, ತೊರೆವಾಗಲೂ ನನ್ನನ್ನೊಂದು ಮಾತು ಕೇಳಿದನೇನೀ ಮಹಾತ್ಮ?' ಎಂಬ ಸಾಲು ಗಾಂಧಿ ತಮ್ಮ ಉನ್ನತ ಆದರ್ಶಕ್ಕಾಗಿ ತೆಗೆದುಕೊಂಡ ನಿರ್ಧಾರಗಳ ಹಿಂದೆ ಕಸ್ತೂರ ಬಾ ಅವರ ಬಲಿದಾನವಾಗಿದೆ ಎಂಬುದನ್ನು ಹೇಳುತ್ತಿದೆ. ಹಾಗೆಯೇ ಅಂಥ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಹೆಣ್ಣಿನ ಅಸ್ತಿತ್ವ ಅಲಕ್ಷ್ಯಕ್ಕೆ ಒಳಗಾಗುತ್ತಿರುವುದನ್ನು ವಿಡಂಬಿಸುತ್ತಿದೆ. ಪುರುಷ ದೃಷ್ಟಿಕೋನದ ಚರಿತ್ರೆಯ ನೋಟಕ್ರಮವನ್ನು ವಿರೋಧಿಸುತ್ತಲೆ; ಗಾಂಧಿ ವ್ಯಕ್ತಿತ್ವದ ಪ್ರಭೆ ಕಸ್ತೂರ ಬಾ ಅವರನ್ನು ಚರಿತ್ರೆಯಲ್ಲಿ ಇಲ್ಲವಾಗಿಸಿರುವುದನ್ನು ಪ್ರಶ್ನಿಸುತ್ತದೆ.

ಇನ್ನು ಗಾಂಧಿ ಅಸ್ಪೃಶ್ಯತಾ ನಿವಾರಣೆಯ ಕಾರ್ಯಯೋಜನೆಗಳ ಭಾಗವಾಗಿ ಅಸ್ಪೃಶ್ಯರನ್ನು 'ಹರಿಜನ' ಎಂದು ಕರೆಯುತ್ತಾರೆ. ಇದು ಕೇವಲ ಹೆಸರಿನ ಬದಲಾವಣೆಯಾಯಿತೆ ಹೊರತು ಅಸ್ಪೃಶ್ಯತೆ ನಿವಾರಣೆಯಾಗಲಿಲ್ಲ. ದೇವಸ್ಥಾನಗಳಿಗೆ ಪ್ರವೇಶವಿರದ, ದೇವರನ್ನು ಕಂಡಿರದ, ನಿರಂತರವಾಗಿ ಶೋಷಣೆಗೆ ಒಳಗಾಗುತ್ತಿರುವವರು 'ಹರಿಜನ' ಹೇಗಾಗಲು ಸಾಧ್ಯ ಎಂಬ ಪ್ರಶ್ನೆ ಹಲವರನ್ನು ಕಾಡಿದೆ.

ಬಡವ ಬಲ್ಲಿದರೊಂದೆ ಎನ್ನುವ
ಟಾಟಾ ಬಿರ್ಲಾರ ಮಠದೊಳ ಕೂತು
"ರಾಮಾ . . . ರಾಮಾ . . ."ಎಂದವ ನೀನೆ
ನಮಗಿನ್ನೇತಕೆ ಬಿರುದನು ಕೊಟ್ಟೆ
ಹರಿಜನ . . . .ನೀವೆ . . .ಬ್ರಹ್ಮಜನ ! [೫೮]

ಈ ಕವಿತೆಯಲ್ಲಿ ಅಸ್ಪೃಶ್ಯರನ್ನು ಕುರಿತ ಗಾಂಧಿಯ ನಡೆಯ ಬಗೆಗೆ ವಿರೋಧ ವ್ಯಕ್ತವಾಗಿದೆ. ಶೋಷಣೆಗೆ ಕಾರಣರಾದ ಬಂಡವಾಳಶಾಹಿಗಳ ಜೊತೆಯಲ್ಲಿ ನಿಂತು ಶೋಷಿತರ ಪರವಾಗಿ ಮಾತನಾಡುವುದರಿಂದಾಗುವ ಪ್ರಯೋಜನಗಳೇನು ಎಂಬ ಸಂದೇಹವನ್ನು ವ್ಯಕ್ತಪಡಿಸಲಾಗಿದೆ. ಗಾಂಧಿ 'ಹರಿಜನ' ಎಂದು ಕರೆದ ಹೆಸರು ಅಸ್ಪೃಶ್ಯರ ಮತ್ತು ಸವರ್ಣೀಯರ ಅಂತರವನ್ನು ಮತ್ತಷ್ಟು ಹೆಚ್ಚಿಸಿತೆ ಹೊರತು ಯಾವ ಬದಲಾವಣೆಗಳನ್ನೂ ತಂದುಕೊಡಲಿಲ್ಲ. ಇಂಥ ಆರೋಪಗಳ ನಡುವೆಯೂ ಅಸ್ಪೃಶ್ಯತೆಯ ನಿವಾರಣೆಗಾಗಿ ಗಾಂಧಿ ಮಾಡಿದ ಪ್ರಯತ್ನಗಳನ್ನು ಅಲ್ಲಗಳೆಯುವಂತಿಲ್ಲ. 'ಟಾಟಾ – ಬಿರ್ಲಾರ ಮಠದೊಳು ಕೂತಿದ್ದ'ರೂ ಅಸ್ಪೃಶ್ಯರ ಕೇರಿಗಳಲ್ಲಿ, ಭಂಗಿಗಳ ಮಧ್ಯೆ ಗಾಂಧಿ ವಾಸವಿದ್ದರು ಎಂಬುದೂ ಸತ್ಯ. ಅಸ್ಪೃಶ್ಯ ಹೆಣ್ಣು ಮಗಳನ್ನು ತಮ್ಮ ಆಶ್ರಮದಲ್ಲಿ ತಮ್ಮ ಮಗಳಂತೆ ಸಾಕುತ್ತಿದ್ದರು ಎಂಬುದು ಅಸ್ಪೃಶ್ಯರ ಬಗೆಗಿನ ಗಾಂಧಿಯ ಕಾಳಜಿಯನ್ನು ತೋರಿಸುತ್ತದೆ.

ಗಾಂಧಿ ತೋರಿಸಿದ ಬದುಕಿನ ಮಾರ್ಗಗಳು ವರ್ತಮಾನದಲ್ಲಿ ಅಪಹಾಸ್ಯ, ಅಪ್ರಸ್ತುತವೆನಿಸತೊಡಗಿವೆ. ಗಾಂಧಿ ಮಾರ್ಗದಲ್ಲಿ ನಡೆಯುವುದೆಂದರೆ ಅಪಹಾಸ್ಯಕ್ಕೀಡಾಗುವುದು, ಸೋಲನ್ನು ಒಪ್ಪಿಕೊಳ್ಳುವುದೆಂದೇ ಆಗಿದೆ. ಹೀಗಿರುವಾಗ ಗಾಂಧಿ ತತ್ವಗಳು ಯಾರಿಗೆ ಬೇಕು ಎಂದು ಕೇಳುವಂತಾಗಿದೆ. ಹಿಂಸೆ–ಕ್ರೌರ್ಯಗಳೇ ತುಂಬಿರುವ

ಸಮಾಜದಲ್ಲಿ ಅಹಿಂಸೆ, ಸಾತ್ವಿಕ ಸ್ವಭಾವಗಳು ಬೆಲೆಕಳೆದುಕೊಂಡಿವೆ. ಇದನ್ನು ಬಹುತೇಕ ಕವಿತೆಗಳು ವಿಡಂಬಿಸುತ್ತಲೆ ಹೀಗಾಗಿದ್ದರ ಹಿಂದಿನ ಕಾರಣಗಳನ್ನು ಹುಡುಕುವ ಪ್ರಯತ್ನ ಮಾಡುತ್ತವೆ.

ನೀ ಶಾಂತಿ ಎಂದೆ;
ನಾ ಜಪಿಸಿದೆ, ಜಪಿಸಿ
ಸೊಂಟವ ಮುರಿದುಕೊಂಡು ಬಿದ್ದೆ.
ಒಂದು ಕೆನ್ನೆಗೆ ಹೊಡೆದರೆ
ಮತ್ತೊಂದು ಕೆನ್ನೆ ನೀಡೆಂದೆ;
ನೀಡಿದೆ, ಮತ್ತೊಂದು ಏಟು ತಿಂದೆನಲ್ಲದೆ
ಬೆನ್ನ ಮೇಲೊಂದು ಗುದ್ದಿಸಿಕೊಂಡು
ಬಕ್ಕಬಾರಲೇ ಬಿದ್ದೆ. [೫೯]

ವರ್ತಮಾನದಲ್ಲಿ ಗಾಂಧಿ ತತ್ವಗಳು ಅಪಹಾಸ್ಯಕ್ಕೆ ಒಳಗಾಗುತ್ತಿರುವುದು ಗಾಂಧಿ ಪ್ರತಿಪಾದನೆಗಳ ಮಿತಿಯೋ, ಅದನ್ನು ಅರಗಿಸಿಕೊಳ್ಳಲಾಗದ, ಅನುಸರಿಸಲಾಗದ ವ್ಯವಸ್ಥೆ ಮತ್ತು ಜನರ ಮಿತಿಯೋ ಎಂಬ ಪ್ರಶ್ನೆಗಳೇಳುತ್ತವೆ. ಗಾಂಧಿ ಪ್ರತಿಪಾದನೆಗಳು ಉನ್ನತ ಆದರ್ಶಗಳಾಗಿದ್ದರೂ ಅದನ್ನು ಅನುಸರಿಸಹೋಗುವವರು ಮಾತ್ರ ಅಪಹಾಸ್ಯಕ್ಕೆ ಒಳಗಾಗುತ್ತಿರುವುದು ವ್ಯವಸ್ಥೆಯ ದುರಂತವಾಗಿದೆ.

ಗಾಂಧಿ ಕುರಿತಾದ ಕವನಗಳು ತಳಸಮೂದಾಯಗಳ ಜೀವನ ಕ್ರಮಗಳು ಅವರ ಬದುಕಿನ ಅಸ್ಮಿತೆಯ ಭಾಗಗಳೂ ಹಾಗೂ ಬದುಕಿನ ನೋವು-ಸಂಕಷ್ಟಗಳನ್ನು ಮರೆಯುವ, ಮೀರಿಕೊಳ್ಳುವ ದಾರಿಗಳಾಗಿರುತ್ತವೆ. ಇವುಗಳನ್ನು ಏಕಾಏಕಿ ಬಿಟ್ಟುಕೊಡುವುದು ಅವರ ಅಸ್ತಿತ್ವಕ್ಕೆ ದಕ್ಕೆ ತಂದುಕೊಂಡಂತೆ. ಈ ನಿಟ್ಟಿನಲ್ಲಿ ಗಾಂಧಿ ಪ್ರತಿಪಾದಿಸಿದ ಸಾತ್ವಿಕ ಜೀವನ ಮಾರ್ಗಗಳು ವಾಸ್ತವ ಬದುಕಿನಲ್ಲಿ ಅನುಸರಿಸಲಾಗದ ಆದರ್ಶಗಳಾಗಿ ಮಾತ್ರ ಉಳಿಯಬಲ್ಲವು. ಡಿ. ಬಿ. ಶಂಕರಪ್ಪ ಅವರ 'ಗಾಂಧಿ' ಕವಿತೆಯಲ್ಲಿ ತಳಸಮೂದಾಯಗಳ ಅಸ್ತಿತ್ವದ ಪ್ರಶ್ನೆಯಿದೆ. ಕುಡಿತವನ್ನು ಗಾಂಧಿ ವಿರೋಧಿಸುತ್ತಾರಾದರೂ ಅದು ತಳಸಮೂದಾಯಗಳ ಬದುಕಿನ ಅನಿವಾರ್ಯವಾದ ಭಾಗವೆ ಆಗಿರುವುದನ್ನು ಕವಿತೆ ಸಾಬೀತುಪಡಿಸುತ್ತದೆ. ಆದರ್ಶಕ್ಕಾಗಿ ತಮ್ಮ ಬದುಕಿನ ಕ್ರಮಗಳನ್ನು ಬದಲಾಯಿಸಿಕೊಳ್ಳಬಹುದಾದರೂ; ತಮ್ಮ ಬದುಕಿನ ಭಾಗವೇ ಆಗಿರುವ ಹಿಂಸೆ, ಶೋಷಣೆ, ಅನ್ಯಾಯಗಳು ತೊಲಗದೆ, ಬರೀ ಬದುಕಿನ ಸುಧಾರಣೆಗೆ ಅರ್ಥವಿರುವುದಿಲ್ಲ. ತಳ ಸಮೂದಾಯಗಳ ಬದುಕಿನ ಕ್ರಮಗಳು, ತಮ್ಮ ಮೇಲಾಗುತ್ತಿರುವ ಶೋಷಣೆ, ಹಿಂಸೆಗಳನ್ನು ಮರೆಯುವ, ಪ್ರತಿರೋಧಿಸುವ ಚೇತನದ ಸೆಲೆಗಳೂ ಆಗಿರಬಲ್ಲವು. ಹಾಗಾಗಿ ಹಸಿವು, ಬಡತನ, ನೋವು, ಶೋಷಣೆಯ ಅನುಭವಗಳು ಎಲ್ಲಿಯವರೆಗೆ ತಳಸಮೂದಾಯಗಳ ಬದುಕಿನ ಭಾಗವಾಗಿರುತ್ತವೊ; ಅಲ್ಲಿಯ ವರೆಗೆ ಕುಡಿತ ಮುಂತಾದವು ಅವರ ಬದುಕಿನ ಅನಿವಾರ್ಯ ಭಾಗವೇ ಆಗಿರಬೇಕಾಗುತ್ತದೆ. ಹಾಗಾಗಿ ತಳಸಮೂದಾಯಗಳು ತಮ್ಮ ಅಸ್ತಿತ್ವದ ಉಳಿವಿಗಾಗಿ ಗಾಂಧಿ ತತ್ವಗಳನ್ನು ಬಿಟ್ಟುಕೊಡಲೇಬೇಕಾಗಿದೆ. ಹೀಗೆ ಗಾಂಧಿಯನ್ನು ಅನುಸರಿಸಲಾಗದ ಮೌಲ್ಯ ಪ್ರತಿಪಾದಕನನ್ನಾಗಿ ಕಾಣಲಾಗಿದೆ.

ಗಾಂಧಿಯನ್ನು ಕುರಿತ ಮೇಲಿನ ಹಲವು ಪ್ರಶ್ನೆ, ಅನುಮಾನಗಳು ಅವರ ವ್ಯಕ್ತಿತ್ವವನ್ನು ಇನ್ನಷ್ಟು ಆಳವಾಗಿ, ಸೂಕ್ಷ್ಮವಾಗಿ ವಿವೇಚಿಸಲು ಸಹಕಾರಿಯಾಗಿವೆ. ಗಾಂಧಿ ವ್ಯಕ್ತಿತ್ವವನ್ನು ಪ್ರಶ್ನಾತೀತವಾಗಿ ಪಾವಿತ್ರೀಕರಿಸಿ ನೋಡುವುದಕ್ಕಿಂತ ಸಂಘರ್ಷದ ಮೂಲಕ ಎದುರಾಗುವುದರಿಂದ ವ್ಯಕ್ತಿತ್ವದ ನೈಜತೆಯನ್ನು ಅರಿಯಲು ಸಾಧ್ಯ. ವಿಕಾಸಶೀಲ ವ್ಯಕ್ತಿತ್ವ ಗಾಂಧಿಯದ್ದಾದ್ದರಿಂದ ಆ ನೆಲೆಯಲ್ಲಿಯೆ ಅವರ ವ್ಯಕ್ತಿತ್ವವನ್ನು ಗ್ರಹಿಸುವ ಅವಶ್ಯಕತೆ ಇದೆ. ಮೇಲೆ ಎತ್ತಲಾದ ಪ್ರಶ್ನೆಗಳು ಸಂದರ್ಭನಿಷ್ಠವಾದವುಗಳು. ಗಾಂಧಿ ನಿಲುವುಗಳು ಮತ್ತು ಪ್ರಯೋಗಗಳ ಸಾಧಕ-ಬಾಧಕಗಳು, ವರ್ತಮಾನದಲ್ಲಿ ಅವುಗಳ ಪ್ರಾಮುಖ್ಯತೆ, ಸಮಕಾಲೀನ ಸಾಂಸ್ಕೃತಿಕ ಸನ್ನಿವೇಶಗಳಿಗೆ ಅವುಗಳನ್ನು

ತಂದುಕೊಳ್ಳುವ ಅವಶ್ಯಕತೆ ಮತ್ತು ಇಕ್ಕಟ್ಟುಗಳ ಹಿನ್ನೆಲೆಯಲ್ಲಿ ಗಾಂಧಿಯನ್ನು ವಿಮರ್ಶಾತ್ಮಕವಾಗಿ ಎದುರಾದಾಗ ಮಾತ್ರ ಗಾಂಧಿಯನ್ನು ಅರಿಯಲು ಸಾಧ್ಯ. ಗಾಂಧಿ ಬದುಕಿನ ಪ್ರಯೋಗಶೀಲತೆ, ಅವುಗಳ ದೂರಗಾಮಿ ಆಶಯಗಳ ಮತ್ತು ಮಹತ್ವದ ಹಿನ್ನೆಲೆಯಲ್ಲಿ ವಿವೇಚಿಸಿದಾಗ ಗಾಂಧಿ ವ್ಯಕ್ತಿತ್ವದ ಹಿರಿಮೆ, ಸಂಕೀರ್ಣತೆ, ದ್ವಂದ್ವತೆಗಳು ಅರಿವಿಗೆ ಬರುತ್ತವೆ.

### ೬.೨.೨ : ಗಾಂಧಿ ವ್ಯಕ್ತಿತ್ವ : ಸಾಂಸ್ಕೃತಿಕ ಮುಖಾಮುಖಿ

ಕನ್ನಡ ಕವಿಗಳು ಗಾಂಧಿಯನ್ನು ಕುರಿತು ಚರ್ಚಿಸುವ ಸಂದರ್ಭದಲ್ಲೆಲ್ಲಾ ಸಮಕಾಲೀನ ಬದುಕಿನ ಹಲವು ಸಮಸ್ಯೆ, ಬಿಕ್ಕಟ್ಟುಗಳನ್ನು ಎದುರಿಸಲು ಗಾಂಧಿ ವ್ಯಕ್ತಿತ್ವದೊಂದಿಗೆ ಅನುಸಂಧಾನ ಮಾಡುತ್ತಾ ಬಂದಿದ್ದಾರೆ. ಇಂದು ಗಾಂಧಿ ಒಬ್ಬ ಚಾರಿತ್ರಿಕ ವ್ಯಕ್ತಿಯಾಗಿ ಮಾತ್ರ ಉಳಿದಿಲ್ಲ. ನಮ್ಮ ಸಮಕಾಲೀನ ಸವಾಲುಗಳಿಗೆ ಉತ್ತರವಾಗಬಲ್ಲ ನೈತಿಕ ಮಾರ್ಗವಾಗಿಯೂ ಕಂಡುಬರುತ್ತಾರೆ. ಸ್ವಾತಂತ್ರ್ಯೋತ್ತರ ಭಾರತದ ಹಲವು ಸಾಂಸ್ಕೃತಿಕ ಬಿಕ್ಕಟ್ಟುಗಳು ತಂದೊಡ್ಡಿರುವ ಆತಂಕ ಮತ್ತು ನಿರಾಶೆಗಳು ಇಡೀ ಬದುಕನ್ನು ಅತಂತ್ರ ಸ್ಥಿತಿಗೆ ದೂಕಿರುವ ಸಂದರ್ಭದಲ್ಲಿ ಕನ್ನಡ ಕಾವ್ಯ ತನ್ನ ಭರವಸೆಯ ಬೇರುಗಳನ್ನು ಗಾಂಧಿಯಲ್ಲಿ ಹುಡುಕಿಕೊಳ್ಳಲು ಪ್ರಯತ್ನಿಸಿದೆ. ವೈಯಕ್ತಿಕ ಮತ್ತು ಸಾಂಸ್ಥಿಕ ಮಟ್ಟದಲ್ಲಿ ನೈತಿಕತೆಯ ಅಧಃಪತನ, ಕೋಮುಹಿಂಸೆ, ಅನೈತಿಕ ರಾಜಕಾರಣ, ಜಾಗತೀಕರಣ, ಜಾತಿಯತೆ, ಭ್ರಷ್ಟಾಚಾರ, ಭೋಗ ಸಂಸ್ಕೃತಿ ಮುಂತಾದ ವಿಕೃತಿಗಳು ಬದುಕನ್ನು ಆವರಿಸಿಕೊಂಡು ಕೊಲ್ಲುತ್ತಿರುವ ಸಂದಿಗ್ಧ ಸಮಕಾಲೀನ ಪರಿಸ್ಥಿತಿಯಲ್ಲಿ ಅವುಗಳನ್ನು ಸೂಕ್ಷ್ಮವಾಗಿ ಗ್ರಹಿಸುವ, ಪ್ರತಿರೋಧ ಒಡ್ಡುವ, ಹೊಸ ಸಾಂಸ್ಕೃತಿಕ ಪರಿಸರವನ್ನು ಹುಟ್ಟುಹಾಕುವ, ಮಾನವೀಯ ಮೌಲ್ಯಗಳಿಗಾಗಿ ಹುಡುಕಾಟ ನಡೆಸುವ ಪ್ರಯತ್ನಗಳನ್ನು ಕನ್ನಡ ಕಾವ್ಯ ಗಾಂಧಿಯೊಂದಿಗೆ ಮುಖಾಮುಖಿಯಾಗುವುದರ ಮೂಲಕ ಮಾಡಿದೆ. ಆ ವಿಶಿಷ್ಟ ಪ್ರಯತ್ನಗಳನ್ನು ಮುಂದಿನಂತೆ ಚರ್ಚಿಸಲಾಗಿದೆ.

### ೧. ಗಾಂಧಿ ಹತ್ಯೆ : ಗಾಢ ನಿರಾಶೆಯ ಅನುಭವ, ಮತೀಯವಾದಕ್ಕೆ ತೀವ್ರ ಪ್ರತಿಕ್ರಿಯೆಯಾಗಿ

ತಮ್ಮ ಪಾರದರ್ಶಕ-ನಿಸ್ವಾರ್ಥ ಬದುಕು, ಜೀವಪರ ಚಿಂತನೆ, ನೈತಿಕ-ಮಾನವೀಯ ಗುಣಗಳಿಂದಾಗಿ ಇಡೀ ಜಗತ್ತನ್ನೆ ಆಕರ್ಷಿಸಿದ್ದ, ಜನರ ಕಣ್ಣಲ್ಲಿ ಪವಾಡ ಪುರುಷ, ದೇವರೇ ಆಗಿದ್ದ ಗಾಂಧಿಯ ಹತ್ಯೆ ಈ ದೇಶದ ಜನರಲ್ಲಿ ಉಂಟುಮಾಡಿದ ಆಘಾತದ ಅನುಭವಗಳು ಹಲವು. ಸತ್ಯದ ಹಾದಿಯಲ್ಲಿ ಪಾರದರ್ಶಕವಾಗಿ ಬದುಕಿ ಜಗದ ಉದ್ಧಾರಕ್ಕಾಗಿ ಶ್ರಮಿಸಿದ ಗಾಂಧಿಯ ಸಾವು ಇಡೀ ದೇಶಕ್ಕೇ ದೊಡ್ಡ ಆತಂಕವನ್ನು, ತಬ್ಬಲಿತನವನ್ನು, ಗಾಢ ನಿರಾಶೆಯನ್ನು ಕವಿಸಿದ ಅನುಭವವಾಗಿದೆ. ಗಾಂಧಿಯ ಅನಿರೀಕ್ಷಿತ ಸಾವು ದೇಶದ ನಾನಾ ಮನಸ್ಸುಗಳಲ್ಲಿ ಹುಟ್ಟುಹಾಕಿದ ಆತಂಕ, ಆಘಾತಗಳು ದಿಕ್ಕೆಟ್ಟ ಅನಾಥತೆಯ ಅನುಭವಗಳಾಗಿದ್ದವು. ಕನ್ನಡ ಕಾವ್ಯ ಗಾಂಧಿ ಸಾವನ್ನು ಅನುಭವಕ್ಕೆ ತಂದುಕೊಂಡ, ಪ್ರತಿಕ್ರಿಯಿಸಿದ ರೀತಿ ಯಾವ ಬಗೆಯದು ಎಂಬುದು ಕುತೂಹಲಕಾರಿಯಾದ ಸಂಗತಿಯಾಗಿದೆ. ಕನ್ನಡ ಕಾವ್ಯ ಗಾಂಧಿ ಸಾವನ್ನು ಗಾಢ ನಿರಾಶೆಯ ಅನುಭವವಾಗಿ ಕಾಣುವುದರ ಜೊತೆಗೇ ಅನಾಥತೆಯ ನೋವನ್ನೂ ಅನುಭವಿಸಿದೆ. ಹಾಗೆಯೆ ಹಿಂಸೆಗೆ, ಮತೀಯವಾದಕ್ಕೆ, ಕೇಡಿನ ವಿಜೃಂಭಣೆಗೆ ತನ್ನದೇ ಆದ ಪ್ರತಿರೋಧವನ್ನು ಒಡ್ಡುವ ಕೆಲಸವನ್ನೂ ಮಾಡಿದೆ. ಗಾಂಧಿ ಹತ್ಯೆಯನ್ನು ಒಬ್ಬ ವ್ಯಕ್ತಿಯ ಹತ್ಯೆ ಎನ್ನುವುದಕ್ಕಿಂತ ಮಾನವೀಯ, ನೈತಿಕ ಮೌಲ್ಯಗಳ ಹತ್ಯೆ ಎಂದೇ ಭಾವಿಸಲಾಗಿದೆ. ಗಾಂಧಿ ಸತ್ತಿದ್ದಾರೆ ಎಂಬುದನ್ನು ನಂಬುವ, ನಿರಾಕರಿಸುವ, ಅದನ್ನು

ಬೇರೆ ಬೇರೆ ಸಂಕಥನಗಳಾಗಿ ಬೆಳೆಸುವ ಪ್ರಯತ್ನವನ್ನು ಮಾಡಿವೆ. ಗಾಂಧಿ ಹತ್ಯೆಗೆ ಒಂದು ಕಡೆ ಆಕ್ರೋಶಗಳು ವ್ಯಕ್ತವಾದರೆ, ಇನ್ನೊಂದು ಕಡೆ ಗಾಂಧಿ ಹತ್ಯೆಯನ್ನು ನಿರಾಕರಿಸಿ ಅವರಿಗೆ ಸಾವಿಲ್ಲ, ಅಮರ ಎನ್ನುವ ನಿಲುವುಗಳು ಪ್ರಕಟಗೊಂಡಿವೆ. ಗಾಂಧಿಯ ಕೊಲೆಯನ್ನು ಹಿಂಸೆ ಮತ್ತು ಅಹಿಂಸೆಯ ನಡುವಿನ ಸಂಘರ್ಷವಾಗಿ ಕಾಣಲಾಗಿದೆ. ಹಾಗೂ ಕೋಮುಹಿಂಸೆಯ ಪರಂಪರೆಗಳಿಗೆ ತೀವ್ರ ಪ್ರತಿರೋಧ ಒಡ್ಡಲು ಬಳಸಿಕೊಳ್ಳಲಾಗಿದೆ. ಪು.ತಿ.ನ. ಬೇಂದ್ರೆ, ಗೋವಿಂದ ಪೈ, ಡಿ.ಎಸ್. ಕರ್ಕಿ, ಮುಂತಾದವರ ಕವಿತೆಗಳು ಈ ಬಗೆಯ ಆತಂಕಗಳನ್ನು ವ್ಯಕ್ತಪಡಿಸಿವೆ.

ಪು.ತಿ.ನ.ರ 'ಗಾಂಧೀಸ್ತವ' ಕವಿತೆ ಗಾಂಧಿಯನ್ನು ಅವತಾರಪುರುಷನೆಂದು ಕರೆದು ಅವರ ವ್ಯಕ್ತಿತ್ವಕ್ಕೆ ಅಲೌಕಿಕತೆಯನ್ನು ಆರೋಪಿಸಿದೆ. ಗಾಂಧಿ ಇಲ್ಲಿ ಕೇಡಿನ ವಿರುದ್ಧ ಬಳಕೆಯಾದ ಒಳಿತಿನ ಅಸ್ತ್ರವಾಗಿದ್ದಾರೆ. ನರಲೋಕದಲ್ಲಿ ಅಸುರರ ಅಟ್ಟಹಾಸವೇ ಮೇಲುಗೈ ಸಾಧಿಸಿರುವಾಗ ಅದನ್ನು ಸರಿದೂಗಿಸಲು ಸಾಧ್ಯವಾಗದೆ ದುರ್ಬಲನಾದ ಶಿವ ಸದ್ಬಲನಾದ ಗಾಂಧಿಯನ್ನು ಇಲ್ಲಿ ಅವತರಿಸುವಂತೆ ಮಾಡುತ್ತಾನೆ. ಇದರಿಂದಾಗಿ 'ಶಿವ–ಅಶಿವದ ಸಮತುಲನೆ' ಲೋಕದಲ್ಲಿ ಆಗಿದ್ದಾಗಲೇ ವಿಧಿ ಈತನನ್ನು ಇಲ್ಲಿಂದ ಒಯ್ದನು ಏನಿದು ವಿಷಮ ವಿಲಾಸ? ಎಂದು ಗಾಂಧಿ ಸಾವಿನ ಬಗೆಗೆ ನೋವಿನ ಉದ್ಗಾರ ತೆಗೆಯುತ್ತಾರೆ.

ಹದಗೆಡುವೊಲು ನರಲೋಕದೊಳಸುರಶಕ್ತಿಯೆ ತುಂಬಿ
ಅದ ತೂಗಲು ದುರ್ಬಲ ಶಿವ ಸದ್ಬಲನೊಬ್ಬನ ತಂದು
ಒದಗುತ್ತಿರಲೀ ತೂಕಕ್ಕೆ ಶಿವ–ಅಶಿವದ ಸಮತುಲನೆ
ವಿಧಿಯೀತನನೊಯ್ದನಲಾ ಏನೀ ವಿಷಮವಿಲಾಸ [೬೦]

ಲೋಕದಲ್ಲಿ ಅಸುರಶಕ್ತಿ ಬಾಳನ್ನು ಹದಗೆಡಿಸುತ್ತಿರಲು ಅದನ್ನು ಸರಿಪಡಿಸಲು ದೈವ ನಿರ್ದೇಶನದಂತೆ ಬಂದವನು ಗಾಂಧಿ ಎಂದು ಅಲೌಕಿಕ ನೆಲೆಯಲ್ಲಿ ಗ್ರಹಿಸುವ ಈ ಕವಿತೆ; ಅದೆಲ್ಲಾ ಸರಿಯಾಗುತ್ತಿದೆ ಎನ್ನುವಾಗಲೇ ದೈವ ಅವನನ್ನು ಕರೆದೊಯ್ದಿದೆ ಎನ್ನುತ್ತಾರೆ. 'ವಿಧಯೀತನನೊಯ್ದನಲಾ' ಎಂಬ ಉದ್ಗಾರದಲ್ಲಿ ಗಾಂಧಿಯದು ಹತ್ಯೆ ಎಂಬುದನ್ನು ಒಪ್ಪಲೂ, ನಿರಾಕರಿಸಲೂ ಸಾಧ್ಯವಿಲ್ಲದ ಮನಸ್ಥಿತಿ ಪ್ರಕಟಗೊಂಡಿರುವುದನ್ನು ನೋಡಬಹುದು. ದೈವ ನಿಯತಿಯಂತೆ ಧರೆಗೆ ಬಂದವನ ಹತ್ಯೆ ಸಾಧ್ಯವೇ? ಎಂಬ ನಿಲುವಿನ ಹಿಂದೆ ಗಾಂಧಿ ಹತ್ಯೆಯನ್ನು ಒಪ್ಪಿಕೊಳ್ಳಲಾಗದ ಪ್ರೀತಿಯಿದೆ. ಗಾಂಧಿಗೆ ಸಾವಿಲ್ಲ, ಗಾಂಧಿ ಸಾವು ಯಾರಿಂದಲೂ ಸಾಧ್ಯವಾಗುವಂತದಲ್ಲ ಎಂಬ ನಿಲುವು ಕವಿತೆಯಲ್ಲಿ ವ್ಯಕ್ತವಾಗಿದೆ.

ಗಾಂಧಿ ಸಾವು ಮೂಡಿಸಿದ ಅನಾಥತೆ ಮತ್ತು ಅತಂತ್ರತೆಯ ಅನುಭವವನ್ನು ಗೋವಿಂದ ಪೈ ಅವರ 'ಇನ್ನಿನಿಸು ಮಹಾತ್ಮ ನೀ ಬದುಕಬೇಕಿತ್ತು' ಕವಿತೆ ಕಟ್ಟಿಕೊಡುತ್ತದೆ. ದೇಶಕ್ಕೆ ಒದಗಿರುವ ದುಸ್ಥಿತಿಯನ್ನು, ಜನರ ದುಷ್ಟ ವರ್ತನೆಗಳನ್ನು ಟೀಕಿಸುತ್ತಲೇ ಇಂಥ ಸಂದರ್ಭದಲ್ಲಿ ನಮ್ಮನ್ನು ಉದ್ಧರಿಸುವವರು ಯಾರು ಎಂಬ ಆತಂಕವನ್ನು ವ್ಯಕ್ತಪಡಿಸುತ್ತದೆ.

ಇನ್ನಿನಿಸು ನೀ ಮಹಾತ್ಮಾ ಬದುಕಬೇಕಿತ್ತು!
ಈಗ ಭಾರತಕತ್ಯಗತ್ಯವಿದೆ ನಿನ್ನ;
ಬಿರುಗಾಳಿಗೊಲೆವ ಹಡಗಂತಿಹುದಾಸತ್ತು,
ನಿನ್ನ ಹೊರತಾರೊಯ್ಕೆ ರೇವಿನೊಳದನ್ನ?
. . . . . . . . . . . . . . . . . . .
ಸ್ವಾರ್ಥಪರರಾಗಿಹೆವು, ದೇವರಿಲ್ಲೆಮಗಿಂದು
ಸೋದರತೆ ಇಲ್ಲ, ಮುಂದಿನದಿಲ್ಲ ಗೊಡವೆ;

ಧರ್ಮಬಾಹಿರರೆಮ್ಮನೆತ್ತಲಿನ್ನಾರೆಂದು
ತೋಚದೆ ಮಹಾತ್ಮಾ ನಿನಗಿಂತು ಮೊರೆಯಿಡುವೆ...[10]

ಗಾಂಧಿಯಿಲ್ಲದೆ ದೇಶ ಬಿರುಗಾಳಿಗೆ ಸಿಕ್ಕ ಹಡಗಿನಂತಾಗಿದೆ. ದೇಶದಲ್ಲಿ ನಾಯಕನಿಲ್ಲದ ಅತಂತ್ರತೆ ಸೃಷ್ಟಿಯಾಗಿದೆ. ಗಾಂಧಿಯಲ್ಲದೆ ಮತ್ಯಾರು ತಮ್ಮನ್ನು ಕಾಪಾಡುತ್ತಾರೆ ಎಂಬ ಆತಂಕ ಇಲ್ಲಿ ವ್ಯಕ್ತವಾಗಿದೆ. ಈ ಬಗೆಯ ಆತಂಕಗಳು ಭಾರತದ ಜನಮಾನಸವನ್ನು ಗಾಂಧಿ ವ್ಯಕ್ತಿತ್ವ ಪ್ರಭಾವಿಸಿದ್ದ ಬಗೆಯನ್ನು ಧ್ವನಿಸುತ್ತವೆ.

ಗಾಂಧಿ ಹತ್ಯೆಯನ್ನು ಹಿಂಸೆ ಮತ್ತು ಅಹಿಂಸೆ ನಡುವಿನ ಸಂಘರ್ಷವಾಗಿಯೂ ಕನ್ನಡ ಕಾವ್ಯ ಗ್ರಹಿಸಿದೆ. ಈ ಸಂಘರ್ಷದಲ್ಲಿ ಮೇಲ್ನೋಟಕ್ಕೆ ಹಿಂಸೆ ಗೆದ್ದ ಹಾಗೆ ಕಂಡರೂ ಅದು ಅದರ ಜಯವಲ್ಲ. ಅಹಿಂಸೆಯನ್ನು ಕೊಲ್ಲಲು ಸಾಧ್ಯವಿಲ್ಲ ಎಂಬ ನಿಲುವನ್ನು ವ್ಯಕ್ತವಾಗಿದೆ. ಬೇಂದ್ರೆಯವರ 'ಶ್ರದ್ಧಾಂಜಲಿ', 'ಮರಣ' ಮುಂತಾದ ಕವಿತೆಗಳು ಈ ಬಗೆಯವು. ಕೋಮುಹಿಂಸೆ ಮತೀಯವಾದಗಳಂತ ಹೇಯ ಕೃತ್ಯಗಳಿಗೆ ತೀವ್ರವಾದ ರಾಜಕೀಯ ಪ್ರತಿಕ್ರಿಯೆಗಳಾಗಿ ಇವು ಮೂಡಿಬಂದಿವೆ. ಬೇಂದ್ರೆ ಗಾಂಧಿಯನ್ನು ಕುರಿತು ಬರೆದ ಹದಿನೆಂಟು ಕವಿತೆಗಳಲ್ಲಿ ಸುಮಾರು ಹತ್ತು ಕವಿತೆಗಳು ಗಾಂಧಿ ಹತ್ಯೆಯನ್ನು ಕುರಿತವಾಗಿವೆ. ಈ ಎಲ್ಲಾ ಕವಿತೆಗಳು ಹಿಂಸೆ ಮತ್ತು ಅಹಿಂಸೆ ಪರಿಭಾಷೆಯಲ್ಲಿ, ಕೋಮುವಾದ, ಧಾರ್ಮಿಕ ಸಾಮರಸ್ಯದ ನೆಲೆಗಳಲ್ಲಿ ಚರ್ಚಿತವಾಗಿವೆ. "ಗಾಂಧಿ ಹತ್ಯೆಯ ಆಘಾತವನ್ನು ತನ್ನ ಸೃಜನಶೀಲತೆಯ ಬಹುಮುಖ್ಯ ರೂಪಕವಾಗಿ ಸ್ವೀಕರಿಸಿರುವುದು, ಗಾಂಧಿ ಮತ್ತು ಗೋಡ್ಸೆ ವೈರುಧ್ಯಗಳನ್ನು ನಿರಂತರವಾಗಿ ಮುಖಾಮುಖಿಯಾಗಿಸುವುದು, ಜನತೆಯ ತಲ್ಲಣ ಸಂಕಟಗಳನ್ನು ಮರಳಿ ಮರಳಿ ಅಭಿವ್ಯಕ್ತಿಸುವುದು, ಸೌಹಾರ್ದತೆಯ ಗಾಂಧೀ ಚಿಂತನೆಗಳನ್ನು ಎತ್ತಿಹಿಡಿಯುವುದು, ಬೇಂದ್ರೆಯವರ ಗಾಂಧಿ ಕವಿತೆಗಳ ಲಕ್ಷಣಗಳಾಗಿವೆ. ಕವಿಯೊಬ್ಬ ಕೋಮುವಾದದ ವಿರುದ್ಧ ತೋರಿದ ಪ್ರಖರ ರಾಜಕೀಯ ಪ್ರತಿಭಟನೆಯ ಕಾವ್ಯಾತ್ಮಕ ಮಾದರಿ ಇದು."[11] ಈ ಮಾತುಗಳು ಬೇಂದ್ರೆ ಗಾಂಧಿ ಹತ್ಯೆಯ ಘಟನೆಯನ್ನು ತಮ್ಮ ಕಾವ್ಯದಲ್ಲಿ ಹೇಗೆ ಸೃಜನಾತ್ಮಕವಾಗಿ ದುಡಿಸಿಕೊಂಡಿದ್ದಾರೆ ಎಂಬುದನ್ನು ತಿಳಿಸುತ್ತವೆ.

ಗಾಂಧಿ ಕೊಲೆಯನ್ನು ಇಲ್ಲಿ ಹಿಂಸೆ ಮತ್ತು ಅಹಿಂಸೆಯ ನಡುವಿನ ಸಂಘರ್ಷವಾಗಿ ನೋಡಲಾಗಿದೆ. ಈ ಸಂಘರ್ಷದಲ್ಲಿ ಹಿಂಸೆ ಅಹಿಂಸೆಯನ್ನು ಕೊಂದಿದೆ ಎಂದು ಮೇಲ್ನೋಟಕ್ಕೆ ಭಾಸವಾದರೂ ಅಲ್ಲಿ ಅಹಿಂಸೆಯೇ ಗೆದ್ದಿದೆ. ಅಹಿಂಸೆ ಹಿಂಸೆಯ ಮುಂದೆ ಎದೆಯೊಡ್ಡಿ ಹೆದರದೆಯೆ ನಿಂತಿತು. ಕೊನೆಗೆ ಹಿಂಸೆಯೆ ಮಣಿದಿದೆ, ಸೋತಿದೆ ಎನ್ನುತ್ತಾರೆ. ಗಾಂಧಿಯ ಅಹಿಂಸಾ ತತ್ವ ಹಿಂಸೆಗೆ ಹೆದರಿ ಓಡುವುದಲ್ಲ; ಹಿಂಸೆಗೆ ಧೈರ್ಯದಿಂದ ಎದೆಯೊಡ್ಡಿ ಅದನ್ನು ಮಣಿಸುವುದು. ಅದು ಸಾವನ್ನು ಕಂಡು ಹೆದರದ ದಿಟ್ಟತನ. ಅಹಿಂಸಾ ವ್ರತಿ ಹಿಂಸೆಯನ್ನು ಪರಿವರ್ತಿಸುವ ಸಲುವಾಗಿ ಸಾಯಲು ಸಿದ್ಧವಿರಬೇಕು. ಸಾಯಲು ಹೆದರುವವರು ಅಹಿಂಸಾವ್ರತಿಯಲ್ಲ ಎಂದು ಗಾಂಧಿ ಹೇಳುತ್ತಿದ್ದರು. ಆ ಶಕ್ತಿ ಗಾಂಧಿಗೆ ಮಾತ್ರ ಇತ್ತು. ಹಾಗಾಗಿಯೇ ಹಿಂಸೆಗೆ ಗಾಂಧಿಯನ್ನು ಗೆಲ್ಲಲು ಸಾಧ್ಯವಾಗಿಲ್ಲ. ಕೊನೆಗೆ ಹಿಂಸೆಯೇ ಅಹಿಂಸೆಯ ಕಾಲ ಬಳಿ ಶರಣು ಬೀಳುತ್ತದೆ. ಅಹಿಂಸೆಗೆ ಗೆಲುವು ಇದ್ದೇ ಇರುತ್ತದೆ. ಗಾಂಧಿ ದೇಹವನ್ನು ಕೊಲ್ಲಬಹುದು ಆದರೆ ವ್ಯಕ್ತಿತ್ವ ಎಂದೆಂದೂ ಅಮರ.

ಗಾಂಧಿ ದೇಹ ಸುಟ್ಟ ಬೆಳಕು ಜಗದ ತಮವ ಕಳೆದಿದೆ,
ಗಾಂಧಿ ಹೋದರೆಂಬ ಸುದ್ದಿ ಬಾನ ತುಂಬಿ ಉಳಿದಿದೆ,
ಗಾಂಧಿಗಂಧ ದಿಗ್-ದಿಗಂತ ಕೀರ್ತಿರೂಪ ತಳೆದಿದೆ
. . . . . . . . . . . . . . . . . . . .

ಬತ್ತಿ ಸುಟ್ಟು ಹೋದರೇನು ಬೆಳಕು ನಂದಿತೆಂಬರೆ?
ಹಾಕಿ ಬತ್ತಿ ದೀಪವತ್ತಿ ಇರುವ ಜ್ಯೋತಿ ಕಾಂಬರೆ!
ಎಣ್ಣೆ ತೀರಿತೆನ್ನಬೇಡಿ ಬೇರೆ ನೇಹ ತುಂಬರೆ..[14].

ಹಿಂಸೆಯ ನಿರರ್ಥಕ ಕೃತ್ಯಗಳನ್ನು, ಅದರ ಗೆಲುವೆಂಬ ಭ್ರಮೆಗಳನ್ನು ತೀವ್ರವಾಗಿ ವಿರೋಧಿಸುವ ಕವಿತೆ ಗಾಂಧಿಯನ್ನು ಕೊಂದ ಹಿಂಸೆಗೆ ಸಾವೇ ಹೊರತು, ಗಾಂಧಿಗೆ ಸಾವಿಲ್ಲ ಎಂಬ ನಿಲುವಿಗೆ ಬರುತ್ತದೆ. ಗಾಂಧಿಯ ಹತ್ಯೆಯನ್ನೂ, 'ಗಾಂಧಿ ಇನ್ನಿಲ್ಲಾ' ಎಂಬುದನ್ನು ನಂಬದ ಕವಿತೆ ಆ ಕುರಿತ ಆತಂಕ-ದು:ಖಗಳನ್ನು ನಿರಾಕರಿಸುತ್ತದೆ. ಆತಂಕ, ದುಃಖ, ಪಶ್ಚಾತ್ತಾಪಗಳೇನಿದ್ದರೂ ಹಿಂಸೆಗೇ ಹೊರತು ಅಹಿಂಸೆಗಲ್ಲ. ಆತನ ದೇಹ ಸುಟ್ಟು ಜಗದ ಕತ್ತಲನ್ನು ತೊಡೆದಿದೆ, ಆತನ ಸಾವಿನ ಸುದ್ಧಿಯೂ, ಕೀರ್ತಿಯೂ ಆಕಾಶ- ದಿಗಂತಗಳನ್ನು ಆವರಿಸಿಕೊಂಡಿವೆ. ಆದರೆ ಗಾಂಧಿಯನ್ನು ಕೊಂದ ಕೈ ಮಾತ್ರ ತನ್ನ ಕೃತ್ಯಕ್ಕೆ ನರಳಬೇಕಾಗಿದೆ. ಈ ಕವಿತೆ ಗಾಂಧಿ ಸಾವಿನ ಬಗೆಗೆ ನಿರಾಶೆ, ಆತಂಕವನ್ನು ವ್ಯಕ್ತಪಡಿಸುತ್ತಿಲ್ಲ. ಏಕೆಂದರೆ ದೇಶದ ಜನಮಾನಸದಲ್ಲಿ, ಆಕಾಶ- ದಿಗಂತಗಳಲ್ಲಿ ಗಾಂಧಿ ಆವರಿಸಿಕೊಂಡಿರುವಾಗ ಗಾಂಧಿ ಸತ್ತನೆಲ್ಲಿ? ಎಂದು ಪ್ರಶ್ನಿಸುತ್ತದೆ. 'ಎಣ್ಣೆ ತೀರಿತೆನ್ನಬೇಡಿ ಬೇರೆ ನೇಹ ತುಂಬರೆ' ಎಂಬ ಸಾಲು ಗಾಂಧಿ ವ್ಯಕ್ತಿತ್ವದ ಅಮರತ್ವವನ್ನೂ, ಅದನ್ನು ಪ್ರೀತಿಯಿಂದ ಕಾಪಿಟ್ಟುಕೊಳ್ಳಬೇಕಾದ ಹೊಣೆಗಾರಿಕೆಗಳನ್ನೂ ಧ್ವನಿಸುತ್ತಿದೆ. ಇಷ್ಟಕ್ಕೂ ಗಾಂಧಿ ಹಿಂಸೆಗೆ ಹೆದರಿದನೇ? ನರಳಿದನೇ? ಬದುಕಲು ಹಂಬಲಿಸಿದನೇ? ಆತನ ಮುಖದಲ್ಲಿ ಆತಂಕ, ದು:ಖಗಳು, ನೋವಿನ ಚಹರೆಗಳು ಇನಿತಾದರೂ ಇಣುಕುತ್ತಿದ್ದವೇ? ಇಲ್ಲ. ಹೀಗಿರುವಾಗ ಗಾಂಧಿ ಸೋತನೆಂತು? ಸತ್ತನೆಂತು? ಹಿಂಸೆ ಗೆದ್ದಿದಾದರೂ ಹೇಗೆ? ಇದು ನಿಜವಾಗಿಯೂ ಹಿಂಸೆಯ ಸೋಲೇ ಸರಿ. ಬೇಂದ್ರೆ 'ಮರಣ' ಕವಿತೆಯಲ್ಲಿ ಗಾಂಧಿಯ ಮರಣವನ್ನು 'ಅದ್ಭುತ ಘಟನೆ' ಎಂದು ಆಶ್ಚರ್ಯ ವ್ಯಕ್ತಪಡಿಸುತ್ತಾರೆ.

ಅದ್ಭುತವು ಅದ್ಭುತವು ವಿಶ್ವಕದ್ಭುತವು
ಸತ್ಯ ಶರಣನ ಸಂದಮರಣದದ್ಭುತವು
ಮಣಿಹ ಸಂದಿತು; ದೇಹ ಕೆಳಗೆ ಇಟ್ಟ;
ಧ್ಯೇಯವನೆ ನಕ್ಷತ್ರ ಮಾಡಿ ಬಿಟ್ಟ
ಎಂಥ ನಗು! ಎಂಥ ಮಗು! ಎಂಥ ಮನುಜ!
ನಮ್ಮಂತೆ ಕಂಡರೂ ದೇವತನುಜ.[15]

ಈ ಕವಿತೆ ಗಾಂಧಿ ಸತ್ತನೆಂಬುದನ್ನು ನಿರಾಕರಿಸುತ್ತದೆ. ಗಾಂಧಿ ಹತ್ಯೆಯನ್ನು ಮತ್ತು ಹಿಂಸೆಯ ಗೆಲುವನ್ನು ನಿರಾಕರಿಸುತ್ತಿರುವುದಕ್ಕೆ ಸೂಕ್ತ ಸಮರ್ಥನೆಯನ್ನು ನೀಡುತ್ತದೆ. ಗಾಂಧಿ ಮುಖದಲ್ಲಿ ಸಾವಿನ-ನೋವಿನ ಯಾವ ಭಾವವೂ, ಹತ್ಯೆಗಾರನ ಬಗೆಗೆ ಯಾವ ಸಿಟ್ಟೂ ಗೋಚರಿಸದ ಕಾರಣ ಅದು ಹತ್ಯೆಯಲ್ಲ. ಹಿಂಸೆಯ ಗೆಲುವೂ ಅಲ್ಲ. ದೇಹವನ್ನು ಭೂಮಿಗೆ ಬಿಟ್ಟು, ಧ್ಯೇಯವನ್ನು ನಕ್ಷತ್ರ ಮಾಡಿ ನಗುತ್ತಲೇ ಮಗುವಿನಂತೆ ಸಾಗಿದ ಅವನು ಮನುಷ್ಯನ ಹಾಗೆ ಕಂಡರೂ ಆತನ ಅದ್ಭುತ ಸಾವಿನಿಂದಾಗಿ ದೇವತನುಜನಾಗಿದ್ದಾನೆ! ಹಾಗಾಗಿ ಗಾಂಧಿಯ ಕೊಲೆಯಾಗಿಲ್ಲ; ಹಿಂಸೆ ಗೆದ್ದಿಲ್ಲ. ಮಗುವಿನ ನಗುವಿನೊಂದಿಗೆ ಸ್ವರ್ಗಕ್ಕೆ ನಡೆದಿದ್ದಾನೆ ಅಷ್ಟೆ. ಹಾಗಾಗಿ ಗಾಂಧಿ ಮರಣ ಜಗತ್ತಿನ ಅದ್ಭುತ ಘಟನೆಯಾಗಿದೆ ಎನ್ನುತ್ತಾರೆ.

ಮತೀಯ ಸಾಮರಸ್ಯಕ್ಕಾಗಿ ಶಕ್ತಿಮೀರಿ ಪ್ರಯತ್ನಿಸಿದ್ದ ಗಾಂಧಿ ಮತೀಯವಾದಿಯೊಬ್ಬನ ಗುಂಡಿಗೆ ಬಲಿಯಾಗಿದ್ದು ದುರಂತವೇ ಆಗಿದೆ. ಇಂಥ ಘಟನೆಯನ್ನು ಬೇಂದ್ರೆ ಮತೀಯವಾದವನ್ನು ವಿರೋಧಿಸುವ ಅಸ್ತ್ರವನ್ನಾಗಿ ಬಳಸಿಕೊಂಡಿದ್ದಾರೆ. "ಮತಗಳನ್ನು ಮತೀಯತೆಯಿಂದ ಶುದ್ಧೀಕರಿಸುವ ಯಜ್ಞವನ್ನೇ ಬದುಕಾಗಿಸಿಕೊಂಡ ಗಾಂಧಿ ಅಸಹಾಯಕರಾಗಿದ್ದರು. ತಮ್ಮ ಜೀವಿತಾವಧಿಯ ಎಲ್ಲ ಪ್ರಯತ್ನಗಳೂ

ಸಂಪೂರ್ಣ ಗೆಲುವನ್ನು ನೀಡಿರಲಿಲ್ಲ. ಬದುಕಿನ ಸೋಲನ್ನೆಲ್ಲ ಕೊಲೆಗೀಡಾಗುವುದರ ಮೂಲಕ ಗೆಲುವಾಗಿ ಪರಿವರ್ತಿಸಿದ್ದರು. ಗಾಂಧಿ ಸಾವಿನ ಸಾರ್ಥಕತೆಯ ಬಗ್ಗೆ ಬೇಂದ್ರೆ ಹಲವಾರು ಬಾರಿ ಉದ್ಗಾರ ತೆಗೆಯುತ್ತಾರೆ. ಸತ್ತು ಸೌಹಾರ್ದತೆ ಸಾಧಿಸಿದ ಸಾವದು. ಬೇಂದ್ರೆಯವರ ಕವಿತೆ ಅಂತಿಮವಾಗಿ ಧಾರ್ಮಿಕ ಸೌಹಾರ್ದತೆಯ ಕರೆಯನ್ನು ನೀಡುತ್ತದೆ. ಸೌಹಾರ್ದತೆಯ ಪಣತಿ ಶಾಶ್ವತವಾಗಿ ಉರಿಯಲು ಗಾಂಧಿ ಬಿಟ್ಟುಹೋದ ಬೆಳಕಿನಿಂದ ಹೊಸ ಬತ್ತಿ, ಹೊಸ ಸ್ನೇಹಗಳ ಎಣ್ಣೆಯನ್ನು ತುಂಬುತ್ತ, ಹೊತ್ತಿಸುತ್ತ ಹೋಗಬೇಕೆಂದು ಕವಿಯ ಸ್ಪಷ್ಟ ಸಂದೇಶ.[೬೩] ಗಾಂಧಿ ಹತ್ಯೆಯ ಸಂದರ್ಭದ ಭಾರತದ ಚರಿತ್ರೆಗೆ ಸೃಜನಶೀಲವಾದ ಪ್ರತಿಕ್ರಿಯೆಗಳಾಗಿ ಬೇಂದ್ರೆಯ ಕವಿತೆಗಳು ಕಂಡುಬರುತ್ತವೆ.

ಗಾಂಧಿ ಎಂಥ ಕಠಿಣ ಅಹಿಂಸಾವ್ರತಿ ಎಂಬುದನ್ನು ಅವರ ಸಾವು ಸಾಬೀತುಪಡಿಸುತ್ತದೆ. ಸತ್ಯ, ಪ್ರೇಮ, ತ್ಯಾಗ, ಕ್ಷಮೆ, ದಯೆಗಳು ಗಾಂಧಿ ಅಹಿಂಸಾ ತತ್ವದಲ್ಲಿ ಅಂತರ್ಗತವಾಗಿದ್ದವು. ಇವು ಗಾಂಧಿ ಬದುಕಿನಲ್ಲಿ ನಿರಂತರವಾಗಿ ಪ್ರಯೋಗಗೊಳ್ಳುತ್ತಿದ್ದ ಆದರ್ಶ ಮೌಲ್ಯಗಳಾಗಿದ್ದವು. ಪ್ರಚಾರದ, ತೋರಿಕೆಯ ಸಾಧನಗಳಾಗಿರದ, ಉಸಿರಿನೊಂದಿಗೆ ಬೆರೆತುಹೋಗಿದ್ದ ಜೀವನ ಕ್ರಮಗಳಾಗಿದ್ದವು. ಹಾಗಾಗಿಯೇ ಗಾಂಧಿ ತಮ್ಮ ಹತ್ಯೆಯ ಸಂದರ್ಭದಲ್ಲೂ ಸಾವಿಗಾಗಿ ಅಂಜಿಕೆಯನ್ನಾಗಲೀ, ಹತ್ಯೆಗಾರನ ಬಗ್ಗೆ ಕೋಪವನ್ನಾಗಲೀ ವ್ಯಕ್ತಪಡಿಸಲಿಲ್ಲ.

> ಎಸೆದ ಗುಂಡಿಗಾ ಕುಸಿದ ದೇಹದಲಿ ವಿಮಲ ರಕ್ತ ಚೆಲ್ಲಿ
> ಮೀಯಿಸಿತ್ತು ಈ ಜಗದ ಮನವನೇ ಶೋಕ ಜಲಧಿಯಲ್ಲಿ
> ಮುಗಿದ ಕೈಯು ಮುಗಿದಂತೆಯಿತ್ತು; ನೆಲೆಸಿತ್ತು
> ಕ್ಷಮೆಯು ಮೊಗದಿ
> ಎದೆಯೊಳೆಂಥ ತಿಳಿ ಭಾವವಿತ್ತು! ಅದನಾವ ಬಲ್ಲ ಜಗದಿ?
> ಹೋದ ಹೋದನವ ತ್ಯಾಗಜೀವನದ ತುತ್ತತುದಿಯನೇರಿ. [೬೬]

ಗಾಂಧಿ ಸಾವಿನಲ್ಲೂ ತ್ಯಾಗ, ಕ್ಷಮೆ, ಪ್ರೀತಿಗಳನ್ನೇ ಸಾರಿದ ಎಂಬುದೇ ಆತ ಹಿಂಸೆಯನ್ನು ಗೆದ್ದುನಿಂತ ಎಂಬುದನ್ನು ಧ್ವನಿಸುತ್ತದೆ.

ಗಾಂಧಿ ಹತ್ಯೆಯನ್ನು ಹೀಗೆ ಹಿಂಸೆ ಮತ್ತು ಅಹಿಂಸೆಗಳೊಂದಿಗೆ ಮುಖಾಮುಖಿಯಾಗಿಸಿ ನೋಡಿದಂತೆಯೇ ಸಮಕಾಲೀನ ಬದುಕಿನ ಬಿಕ್ಕಟ್ಟುಗಳು ಮತ್ತು ಮನುಷ್ಯನ ಸಣ್ಣತನಗಳ ಜೊತೆಗೆ ಮುಖಾಮುಖಿಯಾಗಿಸುವ ಪ್ರಯತ್ನವನ್ನು ಮಾಡಲಾಗಿದೆ. ಒಂದು ಕಡೆ ಗೋಡ್ಸೆಯಿಂದಾದ ಗಾಂಧಿ ಹತ್ಯೆಯನ್ನು 'ಗಾಂಧಿಯ ನಿಜವಾದ ಸಾವು' ಎಂದು ಒಪ್ಪಲು ನಿರಾಕರಿಸಿ ಗಾಂಧಿಯನ್ನು ಅಮರನನ್ನಾಗಿಸಿಕೊಳ್ಳುವ ಪ್ರಯತ್ನಗಳು ಪ್ರಕಟಗೊಂಡರೆ, ಇನ್ನೊಂದು ಕಡೆ ಗಾಂಧಿ ನಂಬಿದ್ದ ಮೌಲ್ಯಗಳಿಗೆ ವಿರುದ್ಧವಾಗಿ ನಡೆದುಕೊಳ್ಳುವ ಮೂಲಕ ನಿಜವಾಗಿ ಗಾಂಧಿಯನ್ನು ಕೊಲ್ಲುತ್ತಿದ್ದೇವೆ ಎಂಬ ಪಶ್ಚಾತ್ತಾಪ ಭಾವ ವ್ಯಕ್ತವಾಗುತ್ತದೆ. ನಿಜವಾದ ಗಾಂಧಿ ಸಾವು ಸಂಭವಿಸುತ್ತಿರುವುದು ನಮ್ಮ ಸಮಕಾಲೀನ ಸಾಮಾಜಿಕ, ರಾಜಕೀಯ ವ್ಯವಸ್ಥೆಯ ಪ್ರತಿಯೊಂದು ಅನೈತಿಕ ನಡೆಯಲ್ಲಿ ಎಂಬ ನಿಲುವು ಪ್ರಕಟವಾಗುತ್ತಿದೆ. ಸಮಕಾಲೀನ ವಾತಾವರಣದಲ್ಲಿ ಮಾನವೀಯತೆ, ನೈತಿಕತೆಗಳು ಅಧಃಪತನಗೊಂಡಿರುವ ಪರಿಸ್ಥಿತಿಯಲ್ಲಿ ಹತಾಶೆಗೊಂಡ ಸೃಜನಶೀಲ ಮನಸ್ಸುಗಳು ಗಾಂಧಿಯನ್ನು ಗೋಡ್ಸೆ ಕೊಂದದ್ದೇ ಒಳ್ಳೆಯದಾಯಿತು, ಇಲ್ಲದಿದ್ದರೆ ಕನಿಷ್ಠ ಮಾನವೀಯತೆಯೂ ಇಲ್ಲದ ಜನರನ್ನು ಕಂಡು ಗಾಂಧಿ ನಿಜವಾಗಿ ಸಾಯುತ್ತಿದ್ದ ಎಂಬ ಆತಂಕವನ್ನು ವ್ಯಕ್ತಪಡಿಸುತ್ತವೆ. ಗೋಡ್ಸೆ ಗಾಂಧಿಯನ್ನು ಹತ್ಯೆಗೈದು ಅಮರನನ್ನಾಗಿಸಿದ. ಅವನು ಕೊಂದದ್ದು ಗಾಂಧಿ

ದೇಹವನ್ನು. ಆದರೆ ನಾವು ಇಂದು ಕೊಲ್ಲುತ್ತಿರುವುದು ನಿಜವಾದ ಗಾಂಧಿ ಆತ್ಮವನ್ನು. ಹಾಗಾಗಿ ಗಾಂಧಿಯನ್ನು ಕೊಂದ ಗೋಡ್ಸೆಯೇ ಮಹಾತ್ಮನಾಗಿ ಕಂಡಿದ್ದಾನೆ. ಆದರೆ ಇಂದು ಅವನಿಗೆ ಹಿಂಸೆಯಾಗುವ ಹಾಗೆ ಬದುಕುವ ಮೂಲಕ ಅವನನ್ನು ನಿಜವಾಗಿಯೂ ಮುಗಿಸಲಾಗುತ್ತಿದೆ. ಆ ಹಂತಕನಿಗೂ ತಾನು ನಿಜವಾದ ಗಾಂಧಿಯನ್ನು ಕೊಲ್ಲಲು ಎಂದೂ ಸಾಧ್ಯವಿಲ್ಲ ಎಂಬುದು ಗೊತ್ತಿತ್ತು. ಆದರೆ ಗಾಂಧಿ ಅನುಯಾಯಿಗಳೆಂದು ಹೇಳಿಕೊಂಡು ಅವನಿಗೆ ಅಪಚಾರ ಎಸಗುತ್ತಿರುವವರು ಗಾಂಧಿಯನ್ನು ಭೀಕರವಾಗಿ ಕೊಲ್ಲುತ್ತಿದ್ದಾರೆ ಎಂಬ ಆಕ್ರೋಶ ಕವಿತೆಗಳಲ್ಲಿ ವ್ಯಕ್ತವಾಗಿದೆ.

ಮೂಳೆ ಚಕ್ಕಳದೊಳಗೆ ತಾನು ಕೊಲ್ಲಲಾರದ
ಆತ್ಮವೊಂದಿತ್ತೆಂದು ಕನಿಷ್ಠ ಆ
ಗೋಡ್ಸೆ ಮಹಾತ್ಮನಿಗಾದರು ತಿಳಿದಿತ್ತು
ಆ ದೇಶಭಕ್ತ ಸೂಮ ನಿನ್ನ
ಕ್ಷುದ್ರ ಆತ್ಮಕ್ಕೆ ಗುಂಡಿಕ್ಕಿರಲಿಲ್ಲ ನಿನ್ನ
ಬೀಜಾಂಕುರರೆಂದು ಬೀಗುವ
ನಾವೆಲ್ಲ ಗೋಡ್ಸೆಮಹಾತ್ಮ ಕೊಲ್ಲದೇ
ಬಿಟ್ಟಿದ್ದ ನಿನ್ನ ಆತ್ಮವನ್ನು ಎಗರಿಸಿ
ಧನ್ಯರಾಗಿಬಿಟ್ಟೆವು ![11]

ಗಾಂಧಿಯನ್ನು ನಿತ್ಯ ಕೊಲ್ಲುತ್ತಿರುವ ಸಮಕಾಲೀನ ರಾಜಕಾರಣಗಳು ಮತ್ತು ಮನುಷ್ಯನ ಸಣ್ಣತನಗಳ ವಿಡಂಬನೆಯನ್ನು ಕವಿತೆ ಸಮರ್ಥವಾಗಿ ಮಾಡಿದೆ. 'ಮೂಳೆ ಚಕ್ಕಳದೊಳಗೆ ತಾನು ಕೊಲ್ಲಲಾರದ ಆತ್ಮವೊಂದಿತ್ತು' ಎಂಬ ಸಾಲು ಗೋಡ್ಸೆಗೆ ಗಾಂಧಿಯನ್ನು ಕೊಲ್ಲಲು ಸಾಧ್ಯವಾಗಲಿಲ್ಲ ಎಂಬುದನ್ನು ಧ್ವನಿಸಿದರೆ, 'ನಾವೆಲ್ಲ ಗೋಡ್ಸೆ ಮಹಾತ್ಮ ಕೊಲ್ಲದೇಬಿಟ್ಟಿದ್ದ ನಿನ್ನ ಆತ್ಮವನ್ನು ಎಗರಿಸಿ ಧನ್ಯರಾಗಿಬಿಟ್ಟೆವು!' ಎಂಬ ಸಾಲುಗಳು ಆತ ಮಾಡದುದನ್ನು ನಾವು ಮಾಡಿ ಮುಗಿಸಿರುವುದನ್ನು ವ್ಯಂಗ್ಯವಾಡುತ್ತದೆ. ಇಲ್ಲಿ ಗಾಂಧಿಯನ್ನು ವಿರೋಧಿಸಿದ್ದವರಿಗಿಂತ ಆತನ ಅನುಯಾಯಿಗಳೆಂದು ಹೇಳಿಕೊಳ್ಳುತ್ತಿರುವವರಿಂದಲೇ ಗಾಂಧಿಯ ನಿಜವಾದ ಕೊಲೆ ನಡೆದಿದೆ ಎಂಬ ಆತಂಕಗಳು ಇಲ್ಲಿ ವ್ಯಕ್ತವಾಗುತ್ತಿವೆ.

ಸಮಕಾಲೀನ ಮನುಷ್ಯನ ಅನೈತಿಕ ನಡವಳಿಕೆಗಳನ್ನು, ಗಾಂಧಿಯ ಸುತ್ತಾ ನಡೆಸಲಾಗುತ್ತಿರುವ ವಿಕೃತ ರಾಜಕಾರಣಗಳನ್ನು ವಿಡಂಬಿಸಲು ಗಾಂಧಿ ಹತ್ಯೆಯ ಘಟನೆಯನ್ನು ಬಳಸಿಕೊಳ್ಳಲಾಗಿದೆ. ಆ ಮೂಲಕ ನಿಜವಾದ ಗಾಂಧಿಯ ಹತ್ಯೆ ಯಾರಿಂದ ಮತ್ತು ಯಾವಾಗ ನಡೆಯಿತು ಎಂಬುದರ ಚರ್ಚೆಯನ್ನು ಬಹುತೇಕ ಕವಿತೆಗಳು ಬೆಳೆಸಿವೆ. ಸಮಕಾಲೀನ ವಾತಾವರಣದಲ್ಲಿ ಗಾಂಧಿಯನ್ನು ಸಂಪೂರ್ಣವಾಗಿ ಇಲ್ಲವಾಗಿಸುವ, ಗಾಂಧಿ ವ್ಯಕ್ತಿತ್ವವನ್ನು ತಿರುಚುವ ಎಲ್ಲಾ ಅನೈತಿಕ ನಡೆಗಳನ್ನು ವಿಡಂಬಿಸುವ ಆಕ್ರೋಶದ ಅಭಿವ್ಯಕ್ತಿಗಾಗಿ, ಆತ್ಮವಿಮರ್ಶೆ ಭಾಗವಾಗಿ ಗಾಂಧಿ ಹತ್ಯೆಯ ಘಟನೆ ಚರ್ಚಿತಗೊಂಡಿದೆ.

ಗೋಡ್ಸೆ ಗಾಂಧೀಜಿಯನ್ನು ಕೊಲ್ಲಲಿಲ್ಲ
ಏಕೆಂದರೆ
ಗಾಂಧೀಜಿಯನ್ನು ಕೊಲ್ಲುವುದು
ಸಾಧ್ಯವಿರಲಿಲ್ಲ
ಆದರೆ ನಾವು ಗೋಡ್ಸೆಯನ್ನು ಕೊಂದೆವು
ಕಾರಣ
ಗೋಡ್ಸೆಯನ್ನು ಕೊಲ್ಲುವುದು ಸುಲಭವಿತ್ತು
ಗೋಡ್ಸೆಯನ್ನು ಕೊಲ್ಲುವಾಗಲೇ
ನಾವು ಗಾಂಧಿಯನ್ನು ಕೊಂದೆವು
ಏಕೆಂದರೆ

ಕೇವಲ ಒಬ್ಬರಿಂದ
ಗಾಂಧೀಜಿಯನ್ನು ಕೊಲ್ಲುವುದು
ಸಾಧ್ಯವಿರಲಿಲ್ಲ.[೬೮]

ಗಾಂಧಿಯನ್ನು ಕೊಲ್ಲುವ ವರ್ತಮಾನದ ಪ್ರಯತ್ನಗಳನ್ನು ಈ ಕವಿತೆ ವಿಡಂಬಿಸುತ್ತಿದೆ. 'ಗೋಡ್ಸೆಯನ್ನು ಕೊಲ್ಲುವಾಗಲೇ ನಾವು ಗಾಂಧಿಯನ್ನು ಕೊಂದೆವು' ಎಂಬ ಮಾತಿನ ಧ್ವನಿಯ ಮಾರ್ಮಿಕತೆಯನ್ನು ಇಲ್ಲಿ ಗಮನಿಸಬೇಕು. ಕೊಲ್ಲುವವನ ಬಗೆಗೂ ಕರುಣೆಯ ನೋಟ ಬೀರುವ ಗಾಂಧಿಯ ಉದಾತ್ತ ಗುಣವನ್ನು ಮರೆತು, ಕೊಲ್ಲುವುದನ್ನೇ ಪ್ರವೃತ್ತಿ ಮಾಡಿಕೊಂಡಿರುವ ಮನುಷ್ಯನ ಕ್ರೌರ್ಯಗಳನ್ನು ಇದು ವಿಡಂಬಿಸುತ್ತದೆ. ಗಾಂಧಿಯ ತತ್ವಗಳನ್ನು ನಿತ್ಯವೂ ಮೀರುವ ಮುಖಾಂತರ ಗಾಂಧಿಯನ್ನು ನಿತ್ಯವೂ ಕೊಲ್ಲುತ್ತಿದ್ದೇವೆ ಎಂಬ ಆತಂಕವನ್ನು ವ್ಯಕ್ತಪಡಿಸುತ್ತಿದೆ. ಗೋಡ್ಸೆಗೆ ಸಾಧ್ಯವಾಗದ್ದು ನಮ್ಮಿಂದ ಸಾಧ್ಯವಾಗಿದೆ ಎಂಬುದು ನಮ್ಮಲ್ಲಿನ ಕ್ರೌರ್ಯದ ಪರಾಕಾಷ್ಠೆಯನ್ನು ಧ್ವನಿಸುತ್ತದೆ.

ಗಾಂಧಿ ಹತ್ಯೆಯ ಪಾಪಪ್ರಜ್ಞೆಯಿಂದ ಹೊರಬರಲಾಗದ ಸಂಕಟದ ಅನುಭವಗಳೂ ಕವಿತೆಗಳಲ್ಲಿ ವ್ಯಕ್ತವಾಗಿವೆ. ಗಾಂಧಿಯನ್ನು ಕೊಂದ, ನಿತ್ಯವೂ ಕೊಲ್ಲುತ್ತಿರುವ ದೇಶದ ಜನರ ನಡವಳಿಕೆಗಳನ್ನು ವಿಡಂಬಿಸುತ್ತಲೇ ತಮ್ಮ ಆತ್ಮಸಾಕ್ಷಿಯನ್ನು ಪ್ರಶ್ನಿಸಿಕೊಳ್ಳುವ ಪ್ರಯತ್ನವನ್ನು ಕವಿತೆಗಳು ಮಾಡಿವೆ.

ಈ ಮಧ್ಯೆ ನಾನು ನನ್ನ ಮಗಳು
ಗೋಡೇಲಿ ನಗೋ ಗಾಂಧಿ
ನೋಡೋಕು ತಾಕತ್ತಿಲ್ಲದ ಸ್ಥಿತಿ.
ಮಗಳು ಮತ್ತೆ ಕೇಳ್ತಾಳೆ
ಗಾಂಧಿ ತಾತ ಎಲ್ಲಿ?
ಸತ್ತೋಯ್ತು ಅಂದ್ರೆ ಬಿಡದೆ ಕೇಳ್ತಾಳೆ ಯಾಕೇಂತ?
ಆಗ ಮತಾಂಧ ಗೋಡ್ಸೆ ಗುಂಡು
ನನ್ನೆದೆಗೆ ಹೊಡೆಯುತ್ತೆ
ಈ ಸಲ ಸುಳ್ಳು ಹೇಳದೆ
ಸತ್ಯ ಹೇಳುತ್ತೇನೆ.
"ನಾವೇ ಕೊಂದು ಹಾಕಿದೆವು
ಇನ್ನೂ ಕೊಲ್ತಾನೇ ಇದ್ದೀವಿ"[೬೯]

ಇಲ್ಲಿ ಮಗಳು ಕೇಳುತ್ತಿರುವ ಮುಗ್ಧ ಪ್ರಶ್ನೆಗಳು ತಂದೆಯ ಆತ್ಮಸಾಕ್ಷಿಯನ್ನೇ ಅಣಕಿಸುವಂತಿವೆ. 'ಗೋಡೇಲಿ ನಗೋ ಗಾಂಧಿ'ಯನ್ನೂ ಮುಖಕೊಟ್ಟು ನೋಡಲಾಗದಷ್ಟು ನೈತಿಕವಾಗಿ ಭ್ರಷ್ಟಗೊಂಡಿರುವುದನ್ನು, 'ಗಾಂಧಿ ಎಲ್ಲಿ' ಎಂಬ ಪ್ರಶ್ನೆಗೆ ಉತ್ತರಿಸಲಾಗದ ಅಳುಕನ್ನು ಅನುಭವಿಸುತ್ತಿರುವುದನ್ನು ಕವಿತೆ ಹಿಡಿದಿಟ್ಟಿದೆ. ಹೊಸ ಪೀಳಿಗೆ ಕೇಳುವ ಗಾಂಧಿ ಕುರಿತ ಪ್ರಶ್ನೆಗಳು ನಮ್ಮ ಆತ್ಮಸಾಕ್ಷಿಯನ್ನು ಕೆಣಕುವುದನ್ನು, ಆ ಪ್ರಶ್ನೆಗಳಿಗೆ ಉತ್ತರಿಸುವ ನೈತಿಕ ಹಕ್ಕನ್ನೇ ಕಳೆದುಕೊಂಡಿರುವ ಸ್ಥಿತಿಗೆ ತಲುಪಿರುವುದನ್ನು ಕವಿತೆ ಮಾರ್ಮಿಕವಾಗಿ ವಿಡಂಬಿಸುತ್ತದೆ. ಗಾಂಧಿ ಸತ್ತಿದ್ದಾನೋ, ಬದುಕಿದ್ದಾನೋ ಎಂಬ ಪ್ರಶ್ನೆಗಳನ್ನು ಮೈಮೇಲೆ ಹಾಕಿಕೊಂಡು ಗಾಂಧಿಯನ್ನು ಬದುಕಿಸಿಕೊಳ್ಳುವ, ಸಾಯಿಸುವ, ಸತ್ತದ್ದೇ ಒಳ್ಳೆಯದಾಯಿತೆನ್ನುವ, ಒಂದು ವೇಳೆ ಗಾಂಧಿ ಬದುಕಿದ್ದಿದ್ದರೆ ಏನಾಗುತ್ತಿದ್ದ ಎನ್ನುವ ಹಲವು ಸಂದೇಹಗಳಿಗೆ ಉತ್ತರಿಸಿಕೊಳ್ಳುವ ಪ್ರಯತ್ನವನ್ನು ಕವಿತೆಗಳು ಮಾಡಿವೆ.

ಗಾಂಧಿ ಸತ್ತಿಲ್ಲ.
ಅವನು ಕೊಲೆಯಾಗಿಲ್ಲ
. . . . . . . . . . . .
ಗಾಂಧಿ ಇನ್ನೂ ಬದುಕಿದ್ದಾನೆ.
ಅವನ ಕಣ್ಣು, ಬಾಯಿ, ಕಿವಿಗಳಿಗೆ ಕಪ್ಪು ಬಟ್ಟೆ ಕಟ್ಟಿ

ಕೈಕಾಲಿಗೆ ಹಗ್ಗ ಸುತ್ತಿ
ಕತ್ತಲ ಕೋಣೆಯಲ್ಲಿ ದೂಡಿದ್ದೇವೆ.
ನಮ್ಮ ಬೇಳೆ ಬೇಯಿಸಲು
ಕಣ್ಣು ಮುಚ್ಚಿ ಬಂಧಿಸಿಟ್ಟಿದ್ದೇವೆ[೨೦]

ಗಾಂಧಿಯ ಭೌತಿಕ ಸಾವಿಗಿಂತ ವರ್ತಮಾನದಲ್ಲಿ ಆತನ ತತ್ವಗಳಿಗೆ ಒದಗಿಬಂದಿರುವ ದುಸ್ಥಿತಿಯನ್ನು ಘೋರ ಹತ್ಯೆಯಾಗಿ ಕಾಣಲಾಗಿದೆ. ಗಾಂಧಿ ಸತ್ತಿಲ್ಲ ಆದರೆ ಅವನನ್ನು ಬಂಧಿಸಿ ಹಿಂಸಿಸಲಾಗುತ್ತಿದೆ. ಇದು ಗಾಂಧಿ ಸಾವಿಗಿಂತ ಭೀಕರವಾದುದು. ಒಂದು ಬಾರಿ ಸಾಯುತ್ತಿದ್ದವನನ್ನು ನಿತ್ಯ ಸಾಯಿಸಲಾಗುತ್ತಿದೆ ಎಂಬ ನೋವು ಇಲ್ಲಿ ವ್ಯಕ್ತವಾಗಿದೆ.

ಗಾಂಧೀ, ನೀ
'ಸತ್ತಾವಾ–ಗೆದ್ದವಾ'
ಇಂದು ನೀ ಒಂದು ವ್ಯಾಳೆ ಇದ್ದಿದ್ದರ, ನಿನ್ನ ಬಾಳೆ
ಹರಕ ಹೋಳಿಗೆ ಆಗತಿತ್ತ.
ನಿನ್ನ ಚರಕಾ ದರಕಾರ ಇಲ್ಲದ ಮುರಕೊಂಡ
ಮೂಲಿಗೆ ಬೀಳುತಿತ್ತ
ಯಾರು ಕೇಳತಿದ್ದರ ನಿನ್ನ ಮಾತ?
ಮತ್ತೊಂದು ಹತ್ತ ಸಲ ಉಪವಾಸ ಕುಂತು
ಉಪ್ಪುನೀರ ಕುಡದು ಕೂಳಗೇಡಿ ಆಗಿ
ಸತ್ತಹೋಗತಿದ್ದಿ. [೨೧]

ಈ ಕವಿತೆ ಒಂದು ವೇಳೆ ಗಾಂಧಿ ಇಂದು ಬದುಕಿದ್ದಿದ್ದರೆ ಅವನ ಸ್ಥಿತಿ ಏನಾಗುತ್ತಿತ್ತು ಎಂಬ ಊಹೆಗೆ ಕಂಡುಕೊಂಡಿರುವ ಉತ್ತರ ಆಘಾತಕಾರಿಯಾದುದು. ತನ್ನ ತತ್ವಗಳಿಗೆ ಒದಗಿರುವ ದುಸ್ಥಿತಿಯನ್ನು, ಇಂದಿನ ವಿಕೃತ ರಾಜಕಾರಣವನ್ನು, ಜನರ ನಡವಳಿಕೆಗಳನ್ನು ಕಂಡು ಗಾಂಧಿ ಖಂಡಿತಾ ಕೊರಗಿ ಸಾಯುತ್ತಿದ್ದ, ಇಲ್ಲವೇ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದ. ಹಾಗಾಗಿ ಗೋಡ್ಸೆ ಗಾಂಧಿಯನ್ನು ಕೊಂದದ್ದೇ ಒಳ್ಳೆಯದಾಯಿತು. ಆತ ಗಾಂಧಿಯನ್ನು ಕೊಂದು ಮಹಾತ್ಮನನ್ನಾಗಿಸಿದ. ಆದರೆ ಗಾಂಧಿ ಅನುಯಾಯಿಗಳೆಂದು ಹೇಳಿಕೊಳ್ಳುವ ನಾವು ಅವನನ್ನು ನಿಜವಾಗಿ ಸಾಯಿಸುತ್ತಿದ್ದೇವೆ ಎಂಬ ಸಂಕಟವನ್ನು ಕವಿತೆ ಹೊರಹಾಕಿದೆ. ನಮ್ಮ ಪರಂಪರೆಯ ಉದಾತ್ತ ವ್ಯಕ್ತಿತ್ವಗಳನ್ನು, ಅವರ ಆದರ್ಶಗಳನ್ನು ಉಳಿಸಿಕೊಳ್ಳಲಾಗದ ಹೊಣೆಗೇಡಿತನವನ್ನು, ಗೌರವಿಸಲಾಗದ ಕೃತಘ್ನತೆಯನ್ನು, ನಾಶಪಡಿಸುವ ಕ್ರೂರತೆಯನ್ನು ಕವಿತೆ ವಿಡಂಬಿಸುತ್ತದೆ.

ನಿನ್ನ ನೆನಸುವ ಈ ಹೊತ್ತು
ನೀನಂದುಕೊಳ್ಳುತ್ತಿರಬಹುದು. "ನಾ ಸತ್ತು
ಈ ದೃಶ್ಯಗಳ ಕಣ್ಣಾರೆ ಕಾಣದಿರುವುದೇ ಒಳಿತು.
ಎಂಥ ಮಂಗಗಳಿವು?
ನನಗೆ 'ಮಹಾತ್ಮಾ' ಎಂದು ಹೆಸರಿಟ್ಟು
ನನಗವಮಾನ ಎಸಗುತ್ತಿಹರು.
ನಾನಲ್ಲ ಮಹಾತ್ಮಾ. . . .
ಮೂರೇ ಗುಂಡಿಗೆ ನನಗೆ ಮೋಕ್ಷ ತೋರಿಸಿದನಲ್ಲಾ
ಅವನೇ ದೊಡ್ಡ ಪುಣ್ಯಾತ್ಮ". [೨೨]

ಗಾಂಧಿ ಆತ್ಮ ಅಂದುಕೊಳ್ಳುತ್ತಿರುವ ಈ ಮಾತುಗಳು ಈ ದೇಶದ ಜನರ ಅನ್ಯೆತಿಕ ಮಟ್ಟವನ್ನು ಧ್ವನಿಸುತ್ತದೆ. 'ಗಾಂಧಿಯನ್ನು ಗೋಡ್ಸೆ ಕೊಂದದ್ದೇ ಒಳ್ಳೆಯದಾಯ್ತು' ಎಂಬ ಮಾತಿನ ಹಿಂದಿನ ವ್ಯಂಗ್ಯ, ಮಾರ್ಮಿಕ ವಿಡಂಬನೆ ನೇರವಾಗಿ ದೇಶದ ಜನರ ಆತ್ಮಸಾಕ್ಷಿಯನ್ನು ಭೇದಿಸುವಂತದ್ದು.

ಹೀಗೆ ಕನ್ನಡ ಕಾವ್ಯ ಗಾಂಧಿ ಹತ್ಯೆಯ ಘಟನೆಯನ್ನು ಎದುರಾಗುತ್ತಲೇ ಅದು ದೇಶದ ಜನಸಮೂದಾಯಕ್ಕೆ ಉಂಟು ಮಾಡಿದ ದೊಡ್ಡ ಆಘಾತದ ಅನುಭವಗಳನ್ನು ಕಟ್ಟಿಕೊಟ್ಟಿದೆ. ಹಾಗೆಯೇ ಈ ದೇಶದ ಮತೀಯವಾದದ ಕ್ರೌರ್ಯವನ್ನು ಹಿಡಿದಿಡುತ್ತಲೇ ಅದಕ್ಕೆ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದೆ. ಹಿಂಸೆಯ ನಿರರ್ಥಕತೆಯನ್ನೂ, ಅಹಿಂಸಾ ತತ್ವದ ಶ್ರೇಷ್ಠತೆಯನ್ನು ಎತ್ತಿಹಿಡಿಯುವ ಪ್ರಾಮಾಣಿಕತೆಯನ್ನು ಮೆರೆದಿದೆ. ಅಂತಿಮವಾಗಿ ಗಾಂಧಿಯ ಮರಣವನ್ನು ಕೊಲೆ ಎಂದಾಗಲೀ, ಗಾಂಧಿ ಸಾವನ್ನಪ್ಪಿದ್ದಾರೆ ಎಂಬುದನ್ನಾಗಲೀ ಒಪ್ಪುವ ಮನಸ್ಥಿತಿಯನ್ನು ಪ್ರಕಟಿಸದೆ ಆ ದಿವ್ಯ ವ್ಯಕ್ತಿತ್ವಕ್ಕೆ ಸಾವೆಲ್ಲಿ? ಎಂಬ ಪ್ರಶ್ನೆಯನ್ನೇ ಮುಂದಿಡುವ ಪ್ರಯತ್ನ ಮಾಡಿದೆ. ಮುಂದುವರಿದು ನಿಜವಾದ ಗಾಂಧಿಯ ಕೊಲೆ ನಡೆಯುತ್ತಿರುವುದು ಸಮಕಾಲೀನ ಸಾಮಾಜಿಕ ಮತ್ತು ರಾಜಕಾರಣದ ಸಂದರ್ಭದಲ್ಲಿ ಎಂಬ ಸಂಗತಿಯನ್ನು ಶೋಧಿಸಿಕೊಡುವ ಕೆಲಸವನ್ನು ಮಾಡಿವೆ. ಗಾಂಧಿಯ ಭೌತಿಕ ಸಾವಿಗಿಂತ ಆತನ ತತ್ವಗಳಿಗೆ ಒದಗಿಬಂದಿರುವ ಸಾವು ಆಘಾತಕಾರಿಯಾದುದು. ಹಾಗಾಗಿ ಕವಿತೆಗಳು ಗಾಂಧಿ ಹತ್ಯೆಯನ್ನು ನೆಪವಾಗಿರಿಸಿಕೊಂಡು ಗಾಂಧಿ ಹತ್ಯೆಯ ಕಾಲದ ಭಾರತದ ಚರಿತ್ರೆಯನ್ನು ಹಾಗೂ ಗಾಂಧಿ ನಂತರದ ಭಾರತದ ಸಾಮಾಜಿಕ, ರಾಜಕೀಯ ನಡೆಯನ್ನು ವಿಮರ್ಶಿಸುವ ಕೆಲಸ ಮಾಡಿವೆ.

**೨. ಸ್ವ ಮತ್ತು ಸಮಷ್ಠಿಯ ಆತ್ಮವಿಮರ್ಶೆಯ ನೈತಿಕ ಶಕ್ತಿಯಾಗಿ ಹಾಗೂ ಹತಾಶೆಗಳ ಅಭಿವ್ಯಕ್ತಿಯ ಮಾರ್ಗವಾಗಿ**

ಗಾಂಧಿಯನ್ನು ಕುರಿತ ಕವಿತೆಗಳ ಇನ್ನೊಂದು ವಿಶಿಷ್ಟವಾದ ಅಭಿವ್ಯಕ್ತಿಯೆಂದರೆ ಸ್ವವಿಮರ್ಶೆ ಮತ್ತು ಸಮಷ್ಠಿಯ ಆತ್ಮವಿಮರ್ಶೆಯಲ್ಲಿ ತೊಡಗಿರುವುದು. ಕನ್ನಡದ ಕವಿಗಳು ಗಾಂಧಿಯ ಪಾರದರ್ಶಕ ವ್ಯಕ್ತಿತ್ವದ ಎದುರು ತಮ್ಮನ್ನು, ತಮ್ಮೆದುರಿಗಿರುವ ಸಮಾಜವನ್ನು ವಿಮರ್ಶೆಗೆ ಒಡ್ಡಿಕೊಳ್ಳುವ ಮೂಲಕ ನೈತಿಕ ಎಚ್ಚರವನ್ನು ಕಾಯ್ದುಕೊಳ್ಳುವ ಪ್ರಾಮಾಣಿಕ ತುಡಿತವನ್ನು ವ್ಯಕ್ತಪಡಿಸಿದ್ದಾರೆ. ಗಾಂಧಿಯ ಸತ್ಯ, ಅಹಿಂಸೆ ಪ್ರಯೋಗಶೀಲ ಮತ್ತು ಪಾರದರ್ಶಕ ವ್ಯಕ್ತಿತ್ವದ ಮುಂದೆ ತಮ್ಮ ಅಲ್ಪತೆಯನ್ನು, ಸಾಮಾಜಿಕ, ರಾಜಕೀಯ ವ್ಯವಸ್ಥೆಗಳ ದುರಂತವನ್ನು ತೋಡಿಕೊಂಡು ಪಶ್ಚಾತ್ತಾಪದ ಬೇಗೆಯಲ್ಲಿ ಬೇಯುವ, ಬೆಂದು ಹೊಸ ಹುಟ್ಟು ಪಡೆಯುವ ಪ್ರಯತ್ನವನ್ನು ಮಾಡಿವೆ. ಹಾಗೆಯೇ ಕವಿತೆಗಳು ಗಾಂಧಿ ಎದುರಿಗೆ ಸಮಕಾಲೀನ ಬದುಕಿನ ವೈರುಧ್ಯಗಳನ್ನು, ತಲ್ಲಣಗಳನ್ನು, ನೋವು, ಹತಾಶೆಗಳನ್ನು ಹೇಳಿಕೊಳ್ಳುವ, ಅವೆಲ್ಲವನ್ನೂ ಸರಿಪಡಿಸಲು ಮತ್ತೊಮ್ಮೆ ಜನ್ಮವೆತ್ತಿ ಬರುವಂತೆ ಹಂಬಲಿಸುವ ಪ್ರಕ್ರಿಯೆಯಲ್ಲಿ ತೊಡಗಿವೆ. ಗಾಂಧಿಯನ್ನು ಸಾಕ್ಷಿಪ್ರಜ್ಞೆಯಾಗಿಟ್ಟುಕೊಂಡು ಸಮಕಾಲೀನ ಸಾಂಸ್ಕೃತಿಕ ಬದುಕಿನ ದುರಂತವನ್ನು ಕಟ್ಟಿಕೊಡುವ ಹಾಗೂ ಬದುಕನ್ನು ತಿದ್ದುವ ವಿಶಿಷ್ಟ ಕಾಳಜಿಗಳನ್ನು ವ್ಯಕ್ತಪಡಿಸಿದ್ದಾರೆ. ಇದೂ ಕೂಡ ವ್ಯಕ್ತಿತ್ವ ಶೋಧದ ವಿಶಿಷ್ಟ ಪ್ರಕ್ರಿಯೆಯಾಗಿದೆ. ತಮ್ಮ ಸಾಂಸ್ಕೃತಿಕ ಪರಂಪರೆಯ ಉನ್ನತ ವ್ಯಕ್ತಿತ್ವವನ್ನು ವರ್ತಮಾನದ ಹಲವು ವಿಚ್ಛಿದ್ರಕಾರೀ ಸಂಗತಿಗಳ ನಡುವೆ ಅರ್ಥಮಾಡಿಕೊಳ್ಳುವ ಹಾಗೂ ಆ ವ್ಯಕ್ತಿತ್ವದ ಬೆಳಕಿನಲ್ಲಿ ವರ್ತಮಾನವನ್ನು ಅರ್ಥಮಾಡಿಕೊಳ್ಳುವ ವಿಶಿಷ್ಟ ಪ್ರಯತ್ನ ಇದು. ಉನ್ನತ ವ್ಯಕ್ತಿತ್ವದ ಮೂಲಕ ತಮ್ಮನ್ನೂ, ಸಮಾಜವನ್ನೂ ವಿಮರ್ಶಿಸಿಕೊಳ್ಳುವ ಪ್ರಯತ್ನ ಸಾಹಿತ್ಯದ ಜೀವಪರ ಕಾಳಜಿಗಳನ್ನು ತೋರಿಸುತ್ತದೆ.

ಗಾಂಧಿ ನಂತರದ ಭಾರತದ ರಾಜಕಾರಣದ ಹಲವು ವಿಕೃತ ಮುಖಗಳನ್ನು ದರ್ಶಿಸುವ ಕವಿತೆಗಳು ಸಮಕಾಲೀನ ಸಾಂಸ್ಕೃತಿಕ ಚರಿತ್ರೆಯನ್ನು ದಾಖಲಿಸುವ ಕೆಲಸದೊಂದಿಗೆ ಗಾಂಧಿ ವ್ಯಕ್ತಿತ್ವದ ಪ್ರಸ್ತುತತೆಯನ್ನು ಸಾಬೀತುಪಡಿಸುವ ಕೆಲಸವನ್ನು ಮಾಡುತ್ತವೆ. ಭ್ರಷ್ಟಾಚಾರ, ಕೋಮುಹಿಂಸೆ, ಶೋಷಣೆ, ಜಾತೀಯತೆ,

ಅಭಿವೃದ್ಧಿಯ ವಿಕಾರಗಳಾದ ನಗರೀಕರಣ, ಯಾಂತ್ರಿಕತೆ ಮುಂತಾದವುಗಳಿಂದಾಗಿ ಬದುಕು ನಲುಗಿ ಹೋಗುತ್ತಿರುವ ಸಂದರ್ಭದಲ್ಲಿ ಗಾಂಧಿ ಕೇವಲ ಆರಾಧನೆಯ ಪ್ರತಿಮೆಯಾಗಿ, ಅಗ್ಗದ ಪ್ರಚಾರದ ಸಾಧನವಾಗಿ, ರಾಜಕೀಯ ಅಧಿಕಾರದ ದಾಳವಾಗಿ ಬಳಕೆಯಾಗುತ್ತಿರುವ ಸ್ಥಿತಿಯನ್ನು ಅತ್ಯಂತ ನೋವು, ಹತಾಶೆಗಳಿಂದ ಅಭಿವ್ಯಕ್ತಿಸುವ, ಪ್ರತಿರೋಧಿಸುವ ಕೆಲಸವನ್ನು ಕವಿತೆಗಳು ಮಾಡಿವೆ.

ಗಾಂಧಿಯನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳು ಅವರ ವ್ಯಕ್ತಿತ್ವದ ಅನನ್ಯತೆಯನ್ನು ಗುರುತಿಸುವುದರ ಜೊತೆಗೆ ಅವರ ವ್ಯಕ್ತಿತ್ವದ ಕನ್ನಡಿಯಲ್ಲಿ ತಮ್ಮನ್ನೂ, ಸಮಷ್ಟಿಯನ್ನೂ ಪ್ರಾಮಾಣಿಕವಾಗಿ ವಿಮರ್ಶಿಸಿಕೊಳ್ಳುವ ಪ್ರಯತ್ನಮಾಡಿವೆ. ಸಮಷ್ಟಿಯ ಆತ್ಮಸಾಕ್ಷಿಯನ್ನು ಕೆಣಕುವ ನೈತಿಕ ಶಕ್ತಿ ಗಾಂಧಿ ವ್ಯಕ್ತಿತ್ವಕ್ಕಿದೆ. ಹಾಗಾಗಿಯೇ ಆ ವ್ಯಕ್ತಿತ್ವದೆದುರು ತಮ್ಮ ಅಪ್ರಮಾಣಿಕತೆ, ಅನೈತಿಕ ವರ್ತನೆ, ಅಮಾನವೀಯತೆ, ಅಸಹಾಯಕತೆಗಳನ್ನು ತೆರೆದಿಡುವ ಪ್ರಯತ್ನಮಾಡಿವೆ. ತಮ್ಮ ಅಂತರಂಗವನ್ನು ಗಾಂಧಿ ವ್ಯಕ್ತಿತ್ವದೆದುರಿಗೆ ಬಿಚ್ಚಿಡುವ ಮೂಲಕ ತಮ್ಮನ್ನು ತಿದ್ದಿಕೊಳ್ಳುವ ಹಾಗೂ ವ್ಯವಸ್ಥೆಯನ್ನು ವಿಡಂಬಿಸುವ ಕೆಲಸವನ್ನು ಮಾಡಿವೆ. ಹಾಗೂ ಗಾಂಧಿ ವ್ಯಕ್ತಿತ್ವದ ಹಿರಿಮೆಯನ್ನೂ, ಗಾಂಧಿಯಿಂದ ದೂರವಾದ ಸಮಕಾಲೀನ ಬದುಕಿನ ದುರಂತ ಸ್ಥಿತಿಯನ್ನು ಒಟ್ಟಿಗೇ ಹಿಡಿದಿಡುವ ಪ್ರಯತ್ನಮಾಡಿವೆ. ಗಾಂಧಿ ಮತ್ತು ಗಾಂಧಿ ತತ್ವಗಳು ಸಮಕಾಲೀನ ಬದುಕಿನಲ್ಲಿ ಅಪಮೌಲ್ಯಗೊಳ್ಳುತ್ತಿರುವುದನ್ನು, ಗಾಂಧಿಮಾರ್ಗಕ್ಕೆ ವಿರುದ್ಧವಾಗಿ ನಡೆದುಕೊಳ್ಳುತ್ತಿರುವ ರಾಜಕೀಯ ನಡೆಯನ್ನೂ, ಅದರಿಂದಾಗಿ ಎದುರಿಸಬೇಕಾಗಿ ಬಂದಿರುವ ಸಮಸ್ಯೆ-ಸವಾಲುಗಳನ್ನೂ, ಗಾಂಧಿಯನ್ನು ಕೊಂದಿರುವ, ಕೊಲ್ಲುತ್ತಿರುವ ಪ್ರವೃತ್ತಿಗಳನ್ನೂ, ಇವೆಲ್ಲವನ್ನು ನೋಡಿಯೂ ಬದಲಾಯಿಸಲಾಗದ ತಮ್ಮ ಅಸಹಾಯಕ ಸ್ಥಿತಿಯನ್ನು, ಹತಾಶೆ, ನೋವುಗಳನ್ನು ಅಭಿವ್ಯಕ್ತಿಸಿಕೊಳ್ಳುವ ಮಾರ್ಗವಾಗಿ ಗಾಂಧಿ ಕಂಡುಬಂದಿದ್ದಾರೆ. ನಮ್ಮೊಳಗನ್ನು ಪ್ರವೇಶಿಸಿ ಬೆತ್ತಲು ಮಾಡುವ ಶಕ್ತಿ ಗಾಂಧಿ ವ್ಯಕ್ತಿತ್ವಕ್ಕಿದೆ. ಹಾಗಾಗಿಯೇ ಅಂತಹ 'ನೈತಿಕ ಶಕ್ತಿ'ಯ ಮೂಲಕ ಸಮಕಾಲೀನ ಬದುಕನ್ನು ಸರಿಪಡಿಸಿಕೊಳ್ಳುವ ಆತ್ಮವಿಶ್ವಾಸವನ್ನು ಕವಿತೆಗಳು ವ್ಯಕ್ತಪಡಿಸಿವೆ. ಈ ಬಗೆಯ ಅಭಿವ್ಯಕ್ತಿಗಳಲ್ಲಿ ತಮ್ಮ ದೌರ್ಬಲ್ಯಗಳನ್ನು ಒಪ್ಪಿಕೊಳ್ಳುವ ಪ್ರಾಮಾಣಿಕತೆ, ತಮ್ಮ ವ್ಯಕ್ತಿತ್ವವನ್ನು ಶೋಧಿಸಿಕೊಳ್ಳುವ ತುಡಿತ, ಗಾಂಧಿ ವ್ಯಕ್ತಿತ್ವದ ಬಗೆಗಿನ ಅಪಾರವಾದ ಗೌರವ-ನಿಷ್ಠೆ, ಸಮಷ್ಟಿಯ ಉದ್ಧಾರದ ಬಗೆಗಿನ ಅಪಾರವಾದ ಕಾಳಜಿಗಳು ವ್ಯಕ್ತವಾಗಿವೆ. ತಮ್ಮ ಮತ್ತು ಸಮಷ್ಟಿಯ ಎಲ್ಲ ನೋವು, ಹತಾಶೆಗಳಿಗೆ ಗಾಂಧಿಯಲ್ಲಿ ಪರಿಹಾರಗಳನ್ನು ಹುಡುಕುವ ಪ್ರಯತ್ನವಾಗಿಯೂ ಇವು ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಗಾಂಧಿ ವ್ಯಕ್ತಿತ್ವದ ಬೆಳಕಿನಲ್ಲಿ ಕವಿತೆಗಳು ನಡೆಸುತ್ತಿರುವ ಆತ್ಮವಿಮರ್ಶೆಯ ಪ್ರಯತ್ನಗಳ ಬಗೆಗಳನ್ನು, ಅವು ಅನಾವರಣ ಮಾಡುತ್ತಿರುವ ಮನುಷ್ಯ ಸ್ವಭಾವಗಳನ್ನು, ದೇಶದ ದುರಂತ ಸ್ಥಿತಿಯನ್ನೂ, ಅವುಗಳ ಹಿಂದಿನ ರಾಜಕಾರಣಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ದೇಶದ ಸದ್ಯದ ಎಲ್ಲ ಬಗೆಯ ಸಮಸ್ಯೆಗಳಿಗೆ ಮನುಷ್ಯನಲ್ಲಿನ ನೈತಿಕತೆಯ ಅಧಃಪತನವೇ ಕಾರಣ. ಹಾಗಾಗಿ ನೈತಿಕ ಹಾದಿಯಲ್ಲಿ ಮುನ್ನಡೆಸುವಂತೆ ಗಾಂಧಿಯಲ್ಲಿ ಮೊರೆಯಿಡುವ ಮೂಲಕ ಸಮಕಾಲೀನ ಮನುಷ್ಯ ಸ್ವಭಾವಗಳನ್ನು ವಿಮರ್ಶೆಗೆ ಒಳಪಡಿಸುವ ಪ್ರಯತ್ನವನ್ನು ಹಲವು ಕವಿತೆಗಳು ಮಾಡಿವೆ.

ಸ್ವಾರ್ಥಪರರಾಗಿಹೆವು, ದೇವರಿಲ್ಲೆಮಗಿಂದು
ಸೋದರತೆ ಇಲ್ಲ, ಮುಂದಿನದಿಲ್ಲ ಗೊಡವೆ,

ಧರ್ಮಬಾಹಿರರೆಮ್ಮನೆತ್ತಲಿನ್ನಾರೆಂದು
ತೋಚದೆ ಮಹಾತ್ಮನಿನಗಿಂತು ಮೊರೆಯಿಡುವೆ.[೭೩]

ಗಾಂಧಿ ಎಂಬ ಮೌಲ್ಯ ಸಂಕೇತ ಮಾತ್ರ ಮನುಷ್ಯನಲ್ಲಿನ ಅನೈತಿಕ ಗುಣಗಳನ್ನು ತೊಲಗಿಸಲು ಸಾಧ್ಯ ಎಂಬ ಭರವಸೆಯೊಂದಿಗೆ ಗಾಂಧಿಯಲ್ಲಿ ಆರ್ತತೆಯಿಂದ ಮೊರೆಯಿಡಲಾಗುತ್ತಿದೆ. ಆ ವ್ಯಕ್ತಿತ್ವದ ಕೃಪೆಯಿಂದ ತಾವೂ, ತಾವು ಬದುಕುತ್ತಿರುವ ಸಮಾಜವೂ ಉದ್ಧಾರವಾಗಬೇಕೆಂಬ ಕಳಕಳಿ ಈ ಆತ್ಮವಿಮರ್ಶೆಯ ಹಿಂದೆ ಇದೆ. ಒಂದು ಕಡೆ ಮನುಷ್ಯನಲ್ಲಿನ ಅನಾಗರೀಕ ವರ್ತನೆಗಳನ್ನು ನೀಗಿಕೊಳ್ಳುವ ಬಯಕೆಯನ್ನು ವ್ಯಕ್ತಪಡಿಸಿದರೆ, ಇನ್ನೊಂದು ಕಡೆ ದ್ವಂದ್ವತೆ, ಅಪ್ರಮಾಣಿಕತೆಗಳನ್ನು ವಿಮರ್ಶೆಗೆ ಒಳಪಡಿಸಿರುವುದನ್ನು ಕಾಣಬಹುದು.

ಇಲ್ಲಿ ನಿನ್ನ ತೊಡೆಯ ಮೇಲೆ
ನಾನು ಸತತ ಬಂಧಿ:
ಅಲ್ಲಿ ಕುಳಿತು ಕನವರಿಸುವೆ;
ಗಾಂಧಿ, ಗಾಂಧಿ, ಗಾಂಧಿ! [೭೪]

ವ್ಯಕ್ತಿತ್ವದಲ್ಲಿನ ನೈತಿಕ ಬ್ರಷ್ಟತೆ, ದ್ವಂದ್ವತೆ ಮತ್ತು ಸೋಗಲಾಡಿತಯನಗಳನ್ನು ವಿಡಂಬಿಸುವ ಕವಿತೆ ಗಾಂಧಿಯನ್ನು ತೋರಿಕೆಯ ಮಟ್ಟದಲ್ಲಿ ಮಾತ್ರ ಅನುಸರಿಸುವ ಪ್ರವೃತ್ತಿಯನ್ನು ವಿಮರ್ಶೆಗೆ ಒಳಪಡಿಸಿದೆ. ಗಾಂಧಿ ಕೇವಲ ಕನವರಿಕೆಯ ನೆಲೆಯಲ್ಲಿಯೇ ನಿಂತು ಬಿಟ್ಟಿದ್ದಾನೆ. ನಮ್ಮ ಆಂತರ್ಯದ ಶಕ್ತಿಯಾಗಿ, ಬದ್ಧತೆಯಾಗಿ ಪ್ರಕಟವಾಗುತ್ತಿಲ್ಲ ಎಂಬುದರ ವಿಡಂಬನೆ ಇಲ್ಲಿದೆ. ಇನ್ನು ಗಾಂಧಿ ವ್ಯಕ್ತಿತ್ವ, ವಿಚಾರಗಳು ಕಣ್ಣ ಮುಂದಿದ್ದರೂ ಕುರುಡುತನವನ್ನು ಪ್ರದರ್ಶಿಸುವ, ಎಚ್ಚರಗೇಡಿತನಗಳನ್ನೂ ಕಟುವಿಮರ್ಶೆಗೆ ಒಳಗುಮಾಡಿರುವುದನ್ನು ಕಾಣಬಹುದು.

ನಮಗೂ ನಿದ್ದೆ.
ಒಮ್ಮೊಮ್ಮೆ ಎಚ್ಚರ
ಯಾರ್‍ಯಾರೋ ಬರುತ್ತಾರೆ, ಹೋಗುತ್ತಾರೆ
ತುಂಬಿರುವ ಜಂಕ್ಷನ್ನಿನಲ್ಲೇ
ರೈಲಿಗೆ ಟಿಕೇಟು ಕೊಂಡೂ ಕೂಡ
ವೆಯಿಟಿಂಗ್ ರೂಮಿನಲ್ಲಿ ಗೊರಕೆ
. . . . . . . . . . . . . .
ನೀ ಬಂದು ಹೋದಾ ಮೇಲೆ
ಏನೇನಾಗಿದೆ ಎಂದು ಹೇಳಲಾರೆ
ನಿನ್ನೆದೆಗೆ ತಾಕಿದ ಗುಂಡು ನಮ್ಮೆದೆಗೂ ತಾಕಿದ್ದರೆ . . . .
ಆ ಮಾತೆ ಬೇರೆ. [೭೫]

ಗಾಂಧಿ ಬಂದು ಹೋದ ಮೇಲೆ ಇಲ್ಲಿ ಆವರಿಸಿರುವ 'ನಿದ್ದೆ', ಅದರ ಫಲವಾಗಿ ಒದಗಿಬಂದಿರುವ ದುಸ್ಥಿತಿಗಳ ನಿವೇದನೆ ಇಲ್ಲಿದೆ. ತಮ್ಮ ಎಚ್ಚರಗೇಡಿತನವನ್ನು ವಿಡಂಬಿಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ. ಗಾಂಧಿಯ ಮೇರು ವ್ಯಕ್ತಿತ್ವದ ಎದುರಿಗೆ ತಮ್ಮ ಅಲ್ಪತೆಯನ್ನೂ, ಸಣ್ಣತನಗಳನ್ನು, ಅವರ ಎತ್ತರಕ್ಕೆ ಏರಲಾಗದ ಅಸಹಾಯಕತೆಯನ್ನು ಬಿಚ್ಚಿಡುವ ಪ್ರಯತ್ನವನ್ನು ಹಲವು ಕವಿತೆಗಳು ಮಾಡಿವೆ.

ಬೆಟ್ಟದ ತಪ್ಪಲಲ್ಲೇ ಹುಟ್ಟಿ ಅಲ್ಲೇ ಬಾಳು ಕಟ್ಟಿದ್ದೇವೆ
ಕೊಪ್ಪಲು ಬಿಟ್ಟು ಬೆಟ್ಟದ ನೆತ್ತಿ ಹತ್ತಲಾರದೆ ಹೋಗಿದ್ದೇವೆ
ಇಲ್ಲೇ ಹುಟ್ಟಿದ ನೀನು
ಅಲ್ಲಿಗೆ ಮುಟ್ಟಿದ್ದಕ್ಕೆ
ನಗಾರಿ ಬಡಿದರು ಹೊರಗೆ
ನಡುಗಿದ್ದೇವೆ ಒಳಗೆ
ಅಲ್ಲಿಗೆ ಸೇರಿದ ನೀನು ಮಲ್ಲಿಗೆ ಪರಿಮಳವಾದೆ
ಗಾಳಿಸವಾರಿ ಹೊರಟು ದಿಗಂತದಲ್ಲಿ ಲಂಗರು ನಿಂತೆ
ನಾವೋ
ಹಿಂದು ಹಿಂದಾಗಿ ಮೇವಿಗೆ

ಕಂಡ ಕಂಡಲ್ಲಿ ಅಲೆದಿದ್ದೇವೆ
ಮುಟ್ಟಲೊಂದು ಗುರಿಯಿಲ್ಲದೆ, ಉಟ್ಟಿದ್ದ ಬಿಚ್ಚಿ ಕುಣಿದಿದ್ದೇವೆ.[೭೬]

ಗಾಂಧಿ ವ್ಯಕ್ತಿತ್ವದ ಎತ್ತರ, ಅದರೆದುರು ಕುಬ್ಜವಾಗಿಯೇ ಉಳಿದ ತಮ್ಮ ಕುರಿತನ, ಕಪಿತನಗಳನ್ನು ಪ್ರಾಮಾಣಿಕವಾಗಿ ಇಲ್ಲಿ ವಿಮರ್ಶೆಗೆ ಒಳಪಡಿಸಲಾಗಿದೆ. ಆತ 'ಗಿರಿಕಡಲುಗಳ ನುಡಿಸುವ' ಎತ್ತರಕ್ಕೆ ಬೆಳೆದಿದ್ದರೂ ನಮಗೆ ಮಾತ್ರ ಇನ್ನೂ 'ಬೆಳೆಯದ ಒಳಗು', ವಿಕಾಸವಾಗಲೇ ಇಲ್ಲ. ಅದನ್ನು ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರ 'ಅಪರೂಪದವನು' ಕವಿತೆ ವಿಶಿಷ್ಟವಾಗಿ ಗುರುತಿಸಿದೆ.

ಸಿಕ್ಕ ನೆಲದಲ್ಲೆಲ್ಲ ಸಂಶಯ ಬೆಳೆಯುವ ನಾನು
ಅದರ ಹೆಣವನ್ನೂ ಸಹ ಶ್ರದ್ಧೆಯಲ್ಲಿ ಸುಡುವ ನೀನು
ಎಲ್ಲಿಗೆ ಎಲ್ಲಿಯ ಮೇಳ?
ನಿಂತರೆ ಎದುರೆದುರು ನಾವು
ನಿಂತಂತೆ ಮುಖಮಾಡಿ ನೆಲಕ್ಕೆ ಬಾನು[೭೭]

ತನ್ನ ದೌರ್ಬಲ್ಯಗಳನ್ನು ನೀಗಿಕೊಳ್ಳಲು ನಿರಂತರವಾಗಿ ಶ್ರದ್ಧೆಯಿಂದ ಶ್ರಮಿಸಿದ ಗಾಂಧಿ ವ್ಯಕ್ತಿತ್ವದ ಎದುರು ತಮ್ಮ ಅಲ್ಪತೆಗಳನ್ನು ಹೋಲಿಸಿಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಇದರ ಮೂಲಕ ತಮ್ಮ ವ್ಯಕ್ತಿತ್ವವನ್ನು ಸುಧಾರಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನದಲ್ಲಿ ತೊಡಗಿರುವುದನ್ನು ಕಾಣಬಹುದು. ಎಲ್ಲರಲ್ಲೂ ಆತ್ಮವಿಮರ್ಶೆಯನ್ನು ಪ್ರಚೋದಿಸುವ ಶಕ್ತಿ ಗಾಂಧಿ ವ್ಯಕ್ತಿತ್ವಕ್ಕಿದೆ. ಹಾಗಾಗಿಯೇ ಗಾಂಧಿ ಎದುರು ತಮ್ಮ ಅಂತರಂಗವನ್ನು ತೆರೆದುಕೊಳ್ಳುವ ಪ್ರಯತ್ನಗಳು ದೊಡ್ಡ ಮಟ್ಟದಲ್ಲಿ ನಡೆದಿವೆ.

ಗಾಂಧಿ ಬದುಕಿದ್ದ ನಾಡು ಇಂದು ತಲುಪಿರುವ ದುಸ್ಥಿತಿಯನ್ನು, ಅದಕ್ಕೆ ಕಾರಣವಾದ ಜನರ ವರ್ತನೆಗಳನ್ನು ಹಲವು ಕವಿತೆಗಳು ವಿಮರ್ಶಿಸಿವೆ. ಗಾಂಧಿಯುಗದ ಭರವಸೆ, ಕನಸುಗಳು ಕಳಚಿಬಿದ್ದು ದೊಡ್ಡ ನಿರಾಶೆ ಕವಿದಿದೆ. ಗಾಂಧಿ ಪ್ರತಿನಿಧಿಸಿದ ಮೌಲ್ಯಗಳನ್ನು ಗಾಳಿಗೆ ತೂರಲಾಗಿದೆ. ಈ ದೇಶ ಗಾಂಧಿ ತತ್ವಗಳಿಗೆ ವಿರುದ್ಧವಾಗಿಯೆ ನಡೆದುಬಂದಿದೆ. ಕೇವಲ 'ಮಹಾತ್ಮ'ನೆಂದು ಕರೆದು ನಿರ್ಲಕ್ಷಿಸಲು ಬೇಕಾದ ಗೌರವವನ್ನು ಮಾತ್ರ ಗಾಂಧಿಯ ಮೇಲೆ ಇರಿಸಿಕೊಳ್ಳಲಾಗಿದೆ. ಗಾಂಧಿಯೊಂದಿಗೆ ಜಯಕಾರ ಹಾಕುತ್ತಾ ಸಂಭ್ರಮಿಸಿದವರು ಗಾಂಧಿಯನ್ನು ತಮ್ಮೊಳಗೆ ಬಿಟ್ಟುಕೊಳ್ಳಲೇ ಇಲ್ಲ. ಹಾಗಾಗಿ ಗಾಂಧಿಯಿಲ್ಲದ ಹೊತ್ತಿನಲ್ಲಿ ನಾವು ದಿಕ್ಕು ಕಾಣದವರಾಗಿದ್ದೇವೆ ಎಂಬ ಹಳಹಳಿಕೆ ಕವಿತೆಗಳಲ್ಲಿ ವ್ಯಕ್ತವಾಗಿದೆ.

ಈಗ ಚಂಡೆ ಕತ್ತರಿಸಲ್ಪಟ್ಟ
ಲೊಳ ಲೊಳ ಬೆಂಡೆಕಾಯಾಗಿದ್ದೇವೆ
ನಮ್ಮ ಕರ್ಮವೋ ಏನೋ ಗಾಂಧಿ ಚಂದ್ರ ಮುಳುಗಿದ ಮೇಲೆ
ಹಗಲು ಕಾಣದ ಹಳ್ಳ ಬಿದ್ದು, ಕತ್ತಲ ಹುದಲದಲ್ಲೊದ್ದಾಡುವ
ಪಂಕ ಪಶುಗಳಾಗಿದ್ದೇವೆ
ಎಷ್ಟೋ ವರ್ಷಗಳಿಂದ
ಸೂರ್ಯ ಮೂಡುತಾನೆಂದು ಬಾಯ್ಕಿಸಿದು ಕೂತಿದ್ದೇವೆ
ಮೂಡಲ ಗುಡ್ಡದಾಚೆ ಬಥಾಸೇಡಜಿ ಟ್ರಕ್ಕು ಹಾಯ್ದು
ಸೂರ್ಯನ ತಲೆಯೊಡೆದು ಬಿದ್ದಲ್ಲಿಯೇ
ರಕ್ತ ಕಾವಲಿ ಹರಿಯಿತೆಂದು ಕೇಳಿದ್ದೇವೆ.[೭೮]

ಗಾಂಧಿ ನಂತರದ ದೇಶದ ಚರಿತ್ರೆಯನ್ನು ಕವಿತೆ ವಿಮರ್ಶೆಗೆ ಒಡ್ಡಿದೆ. ಗಾಂಧಿ ಎಂಬ ಶಕ್ತಿ ದೇಶವನ್ನು, ದೇಶದ ಜನರನ್ನು ಕಾಪಾಡುತ್ತಿತ್ತು. ಆದರೆ ಗಾಂಧಿ ಗತಿಸಿದ ಮೇಲೆ ದೇಶದ ಪರಿಸ್ಥಿತಿ ಹಾಳಾಗಿದೆ ಎಂಬುದನ್ನು 'ಚಂದ್ರ ಮುಳುಗಿದ ಮೇಲೆ ಹಗಲು ಕಾಣದ ಹಳ್ಳ ಬಿದ್ದಿದ್ದೇವೆ' ಎಂಬ ಸಾಲು ಧ್ವನಿಸುತ್ತದೆ. ಇದ್ದ ಗಾಂಧಿಯನ್ನು ಕೊಂದು, ನಮ್ಮ ನಡುವೆ ಮೌಲ್ಯವಾಗುಳಿದ ಗಾಂಧಿಯನ್ನು ನಿತ್ಯ ಕೊಲ್ಲುತ್ತಾ; ನಮ್ಮ ಉದ್ಧಾರಕ್ಕಾಗಿ ಮತ್ತೊಬ್ಬ

ಗಾಂಧಿಯ ಹುಟ್ಟಿಗಾಗಿ ಕಾಯುತ್ತಾ ಕೂತಿದ್ದೇವೆ. ಗಾಂಧಿ ವಿಚಾರಗಳಿಂದ ದೂರವಾಗಿ ಒಂದು ಬಗೆಯ ಅತಂತ್ರತೆ, ಅರಾಜಕತೆ, ಅನಾಥತೆ ದೇಶದ ಜನರಲ್ಲಿ ಆವರಿಸಿದೆ. ಶೋಷಣೆ, ಹಿಂಸೆ, ಅನ್ಯಾಯ, ಭ್ರಷ್ಟತೆಗಳು ಸಾಮಾನ್ಯವಾಗಿವೆ. ಒಳ್ಳೆಯ ದಿನಗಳಿಗಾಗಿ, ಉದ್ದರಿಸುವ ನಾಯಕನ ಆಗಮನಕ್ಕಾಗಿ ಕಾಯುತ್ತಾ ಕೂರುವ ಹೊಣೆಗೇಡಿಗಳಾಗಿದ್ದೇವೆ ಎಂಬ ಪಶ್ಚಾತ್ತಾಪ ಭಾವನೆ ಇಲ್ಲಿ ವ್ಯಕ್ತವಾಗಿದೆ.

ಅಹಿಂಸೆ, ಮತೀಯ ಭಾವೈಕ್ಯವನ್ನು ಪ್ರತಿಪಾದಿಸಿದ ಗಾಂಧಿ ನಾಡಿನಲ್ಲಿ ಕೋಮುಹಿಂಸೆ ಸಾಮಾನ್ಯ ವಿಷಯವಾಗಿದೆ. ಹಿಂಸೆಯನ್ನೇ ಉದ್ಯೋಗ ಮಾಡಿಕೊಂಡಿರುವ ರಾಜಕಾರಣ ಮತೀಯ ವೈಷಮ್ಯಕ್ಕೆ ಕುಮ್ಮಕ್ಕು ಕೊಡುತ್ತಿದೆ. ಗಾಂಧಿ ವಿಚಾರಗಳನ್ನು ಗಾಳಿಗೆ ತೂರಿ ಗಾಂಧಿಯ ವಿರುದ್ಧವೇ ಯುದ್ಧಕ್ಕೆ ನಿಂತಿರುವ ದೇಶದ ಜನರ ಮನಸ್ಥಿತಿಯನ್ನು ವಿಡಂಬಿಸುವ ಪ್ರಯತ್ನವನ್ನು ಕವಿತೆಗಳು ಮಾಡಿವೆ.

ನಿನ್ನನ್ನು ಎದುರಿಸಲಿಕ್ಕೆ
ನಾವಿಬ್ಬರೂ ಸದಾ ಒಂದೇ
ನಿನ್ನ ಗುಜರಾತದೊಳಗೇ
ಕೂಡಿಕೊಂಡು ಹೇಗೆ ಹೂಡಿದ್ದೇವೆ ದೊಂಬಿ
ನಿನ್ನನ್ನು ಯಾರೋ
'ಅಜಾತ ಶತ್ರು' ಎಂದು ಕರೆದ ನೆನಪು
ನಾವು ಜನಿಸಿದ್ದೇವೆ ನೋಡು
ಢಣಾಡಂಗುರವಾಗಿ ಸಾರ್ತಾಯಿದ್ದೇವೆ ಕೇಳು
ನಾವು ನಿನ್ನ ವೈರೀ ವೈರೀ ಎಂದು
. . . . .
ವೀಳ್ಯ ಎತ್ತಿದ್ದೇವೆ, ನೋಡೋಣ
ನೀನುಂಟು, ನಾವುಂಟು![25]

ಗಾಂಧಿ ನಂತರದ ಭಾರತದ ಕೋಮುಹಿಂಸೆಯ ರಾಜಕಾರಣದ ಚರಿತ್ರೆಯನ್ನು ಗಾಂಧಿಯ ಮೂಲಕ ಪ್ರತಿರೋಧಿಸುವ ಕೆಲಸವನ್ನು ಕವಿತೆ ಮಾಡಿದೆ. ದೇಶದ ಹಿಂಸೆಯ ಚರಿತ್ರೆಗೆ ಪ್ರತಿಯೊಬ್ಬರೂ ಹೊಣೆಗಾರರಾಗಿದ್ದೇವೆ. ಪ್ರತಿಯೊಂದು ಹಿಂಸೆಯ ಪ್ರಯತ್ನಗಳೂ ನೇರವಾಗಿ ಗಾಂಧಿಯ ವಿರುದ್ಧವೆ ಹೂಡಿದಂತಿದೆ. ಗಾಂಧಿಯನ್ನು ಶತ್ರುವಾಗಿ ಕಂಡು ವೈರತ್ವ ಸಾಧಿಸುವ ಸ್ಥಿತಿಗೆ ದೇಶದ ಮನಸ್ಥಿತಿಗಳು ತಲುಪಿರುವ ದುರಂತವನ್ನು ಕವಿತೆ ಹಿಡಿದಿಟ್ಟಿದೆ. ಅಹಿಂಸೆಯ ಪ್ರತಿಪಾದಕನಿಗೆ ಹಿಂಸೆಯ ಉತ್ತರವನ್ನು ನಿರಂತರವಾಗಿ ನೀಡುತ್ತಾ ಬಂದಿರುವ ದೇಶದ ಆತ್ಮಸಾಕ್ಷಿಯನ್ನು ಕೆಣಕುತ್ತಲೇ ವಿಡಂಬಿಸಿಕೊಳ್ಳುವ ಪ್ರಯತ್ನ ವಿಶಿಷ್ಟವಾದುದು. ಹಿಂದೂ ಮುಸ್ಲೀಮರ ನಡುವೆ ಐಕ್ಯತೆ ಸಾಧಿಸುವುದು ಗಾಂಧಿ ಬದುಕಿನ ಪರಮ ಉದ್ದೇಶಗಳಲ್ಲಿ ಒಂದಾಗಿತ್ತು. ಅದಕ್ಕಾಗಿ ಗಾಂಧಿ ಅವಿರತವಾಗಿ ಶ್ರಮಿಸಿದರು. ಆದರೆ ನಾವು ಗಾಂಧಿ ಬದುಕಿದ್ದಾಗಲೂ, ಇಂದಿಗೂ ಕೋಮುಹಿಂಸೆಗೆ ಪ್ರಚೋದನೆಯನ್ನು ನೀಡುತ್ತಲೇ ಬಂದಿರುವುದನ್ನು, ಗಾಂಧಿಗೆ ವಿರುದ್ಧವಾಗಿ ನಡೆಯುವ ಮೂಲಕ ಅವರ ವಿರುದ್ಧವೇ ಸಮರ ಸಾರಿರುವುದನ್ನು ವಿಡಂಬಿಸಿಕೊಳ್ಳಲಾಗಿದೆ. ದೇಶದ ಕೋಮುಹಿಂಸೆಯ ಚರಿತ್ರೆಯನ್ನೇ ಕವಿತೆ ಬಿಚ್ಚಿಡುತ್ತದೆ. ಆ ಮೂಲಕ ಕೋಮು ಸಾಮರಸ್ಯದ ಅಗತ್ಯ, ಅದಕ್ಕಾಗಿ ಗಾಂಧಿ ಹೋರಾಡಿದ್ದುದರ ಮಹತ್ವವನ್ನು ಮನವರಿಕೆ ಮಾಡಿಕೊಡುವ ಪ್ರಯತ್ನ ಮಾಡಲಾಗಿದೆ.

ಗಾಂಧಿ ವ್ಯಕ್ತಿತ್ವದ ಎದುರು ತಮ್ಮ ಅಲ್ಪತೆ, ಸಣ್ಣತನ, ಕ್ರೂರ ಮನಸ್ಥಿತಿಗಳನ್ನು ಬಿಚ್ಚಿಡುವ ಮೂಲಕ ಪಶ್ಚಾತ್ತಾಪದ ಭಾವವನ್ನು ಹಲವು ಕವಿತೆಗಳು ವ್ಯಕ್ತಪಡಿಸಿವೆ. ಗಾಂಧಿಗೆ ವಿರುದ್ಧವಾದ ಪ್ರತಿನಡೆಯೂ ಗಾಂಧಿ ಹತ್ಯೆಯಷ್ಟೇ ಮಹಾಪಾಪ ಎಂದು ಭಾವಿಸುತ್ತಾ, ಗಾಂಧಿಗೆ ಗುಂಡಿಡುವ ಕ್ರೌರ್ಯವನ್ನು ಇನ್ನೂ ಬಿಡದಿರುವ ದೇಶದ

ಜನರ ವರ್ತನೆಗಳನ್ನು ಕವಿತೆಗಳು ವಿಡಂಬಿಸುತ್ತವೆ. ತಮ್ಮಲ್ಲಿನ ನಯವಂಚಕತನಗಳನ್ನು ತೀವ್ರವಾಗಿ ಬಿಡಂಬಿಸಿಕೊಳ್ಳುವ ಮತ್ತು ಗಾಂಧಿಯಲ್ಲಿನ ಮಾನವ ಪ್ರೇಮದ ಗುಣವನ್ನು ಇನ್ನೂ ಕಲಿಯಲಾಗದ್ದಕ್ಕೆ ಪಶ್ಚಾತ್ತಾಪ ಪಡುವ ಭಾವಗಳು ಕವಿತೆಗಳಲ್ಲಿ ವ್ಯಕ್ತವಾಗಿವೆ. ಗಾಂಧಿ ವ್ಯಕ್ತಿತ್ವದ ಹಿರಿಮೆಯನ್ನು ಗುರುತಿಸುತ್ತಲೇ ಅವರ ಎದುರಿಗೆ ತಮ್ಮಲ್ಲಿನ ಕ್ರೌರ್ಯಗಳನ್ನು ಬಿಚ್ಚಿಡುವ ಪ್ರಾಮಾಣಿಕತೆಯನ್ನು ಮೆರೆಯಲಾಗಿದೆ. ಗಾಂಧಿಯ ಬಲಿದಾನದಿಂದ ಇನ್ನೂ ಪಾಠ ಕಲಿಯದಿದ್ದಕ್ಕೆ ತೀವ್ರವಾದ ನೋವು ವ್ಯಕ್ತವಾಗಿದೆ.

ದೇಶದ ಉದ್ಧಾರಕ್ಕಾಗಿ, ಜನರಿಗಾಗಿ ತಮ್ಮ ಬದುಕನ್ನೇ ತೆತ್ತುಕೊಂಡ ಗಾಂಧಿಗೆ ನಾವು ಕೊಟ್ಟಿದ್ದೇನು ಎಂದು ಪ್ರಶ್ನಿಸಿಕೊಂಡರೆ ಉತ್ತರ ಆಘಾತಕಾರಿಯಾದುದು. ಗಾಂಧಿಯನ್ನು ಕೊಂದದ್ದೇ ಅವರ ತ್ಯಾಗಕ್ಕೆ ನಾವು ನೀಡಿದ ಉಡುಗೊರೆ. ಗಾಂಧಿ ಹತ್ಯೆಯ ಮಹಾಪಾಪವನ್ನು ಎಂತಹ ಪಶ್ಚಾತ್ತಾಪದಿಂದಲೂ ತೊಡೆದುಕೊಳ್ಳಲಾಗದ ಮರುಕ ಕವಿತೆಗಳಲ್ಲಿ ವ್ಯಕ್ತವಾಗಿದೆ.

ಅದೋ ನಿನ್ನ ಎದೆಗುಂಡಿಗೊಂದು
ಗೋಲಿಗುಂಡು
ಮತ್ತೊಂದು ಮಾತು ಗಾಂಧೀ
"ಸತ್ಯ ಹೇಳಿದರೆ ನಾಲಿಗೆ ಉರಿಯುತ್ತೆ"
ಎಂಬ ಸಿದ್ಧಾಂತದ ಹಂತಕ್ಕೇರಿದ್ದು
ನಾಲಿಗೆ ಉರಿದರೆ
ಗ್ಲಿಸರಿನ್ ಹಚ್ಚುತ್ತೇವೆಂದು ಕರೆದು –ಸೈನೈಡ್ ಹಚ್ಚಿ ಸೈ ಎನಿಸಿಕೊಳ್ಳುತ್ತಿದ್ದೇವೆ
ಸೈತಾನ ಕುಲದವರು. ೮೦

ನಾಡು ಮತ್ತು ನಾಡಿನ ಜನರನ್ನು ಶ್ರೇಷ್ಠ ಸಂಸ್ಕೃತಿಯ ಪ್ರತೀಕವೆಂದು ಬಿಂಬಿಸಿಕೊಳ್ಳುತ್ತಿರುವ, ಒಣ ಹೆಮ್ಮೆಯನ್ನು ಗವಿಸಿದ್ಧ ಎನ್. ಬಳ್ಳಾರಿ ಅವರ ಬಾಪೂಜಿ ಕವಿತೆ ತೀವ್ರವಾಗಿ ವಿಡಂಬಿಸಿದೆ. ದೇಶದ ಎರಡು ಮುಖಗಳನ್ನು ಕವಿತೆ ಅನಾವರಣ ಮಾಡುತ್ತದೆ. ಭವ್ಯ ಪರಂಪರೆಯ ನಾಡು ಎಂಬ ಭಾವುಕ ನೋಟ ಒಂದು ಮುಖವಾದರೆ, ಅಂಥ ನಾಡಿನಲ್ಲಿ ನಡೆಯುತ್ತಿರುವ ಹಿಂಸೆ, ಕ್ರೌರ್ಯಗಳು ಇನ್ನೊಂದು ಮುಖ. ಹೀಗಿರುವಾಗ ಅದನ್ನು ಶ್ರೇಷ್ಠನಾಡೆಂದು ಕರೆಯುವುದಾದರು ಹೇಗೆ. 'ಕತ್ತಲಿನ ಈ ಕಾಡ ನಾಡು' ಎಂಬ ಸಾಲು ದೇಶದ ವಾಸ್ತವ ಸ್ಥಿತಿಯನ್ನು ಮನವರಿಕೆ ಮಾಡಿಕೊಡುತ್ತದೆ. 'ಹೆಮ್ಮೆಯೊಂದನೇ ನಂಬಿ ಎಮ್ಮೆಗಳಾಗಿ ತಿಂದು ಕೊಬ್ಬಿದ್ದೇವೆ' ಎಂಬ ಸಾಲು ದೇಶವನ್ನು ಭಾವುಕವಾಗಿ ನೋಡದೆ ಅದರ ನಿಜ ವಾಸ್ತವದಲ್ಲಿ ಗ್ರಹಿಸಿಕೊಳ್ಳಬೇಕಾದ ಅಗತ್ಯವನ್ನು ಹೇಳುತ್ತದೆ. ಶ್ರೇಷ್ಠತೆ ಮಾತಿನಲ್ಲಿ ಉಳಿಯದೆ ನಿತ್ಯ ಬದುಕಿನಲ್ಲಿ ಪ್ರಕಟಗೊಳ್ಳಬೇಕು. ಆದರೆ ನಾವು ಬರೀ 'ಒಣಹೆಮ್ಮೆ'ಯನ್ನೇ ನೆಚ್ಚಿಕೊಂಡು ಕನವರಿಸುತ್ತಿದ್ದೇವೆಯೆ ಹೊರತು ಸುಧಾರಿಸಿಕೊಳ್ಳುವ ಪ್ರಯತ್ನ ಮಾಡುತ್ತಿಲ್ಲ. ದೇಶದ ಜನರ ಎಚ್ಚರಗೇಡಿತನವನ್ನು 'ನಾವೆಲ್ಲ ಗಂಧವಿಲ್ಲದ ಸಂಧಿವಾತದ ಮಂದಿ' ಎಂಬ ಮಾತು ಮಾರ್ಮಿಕವಾಗಿ ವಿಡಂಬಿಸಿದೆ. ಗಾಂಧಿಯಂತ ದಿಟ್ಟ ವ್ಯಕ್ತಿತ್ವದ ಮಾದರಿ ಕಣ್ಣೆದುರಿಗಿದ್ದೂ ಅವರಿಂದ ಕಲಿಯದ ತಮ್ಮ ದೌರ್ಬಲ್ಯಗಳನ್ನು ವಿಮರ್ಶಿಸಿಕೊಳ್ಳುವ ಪ್ರಯತ್ನಗಳೂ ನಡೆದಿವೆ.

ನೀವು ಧನ್ಯರು ಗಾಂಧಿ ನೀವು ದೇವರು ಗಾಂಧಿ
ನಾವಿಂದು ಸೈತಾನರೇಕಾದೆವು?
ಅಂತರಂಗದ ಮಾತ ಏಕೆ ಮರೆತೆವು ನಾವು?
ಏಕೆ ಭಾರತವನ್ನು ಬಲಿಕೊಟ್ಟೆವು? ೮೧

ಭಾರತವನ್ನು ಬಲಿಕೊಟ್ಟ, ನಿತ್ಯವೂ ಬಲಿಕೊಡುತ್ತಿರುವ ದೇಶದ ಜನರ 'ಸೈತಾನ' ತನವನ್ನು ವಿಮರ್ಶಿಸುವ ಪ್ರಯತ್ನ ಕವಿತೆಯಲ್ಲಿ ನಡೆದಿದೆ. ಜನಸಾಮಾನ್ಯರಿಗಾಗಿ ಬದುಕಿದ್ದ ಗಾಂಧಿ ವ್ಯಕ್ತಿತ್ವ ಪ್ರತಿಯೊಬ್ಬರ

ಅಂತರಂಗದ ದನಿಯೂ ಕೂಡ ಹೌದು. ಅಂತರಂಗದ ಮಾತಿಗೆ ಬೆಲೆಕೊಡದೆ ಅನ್ಯ ದಾರಿ ಹಿಡಿದು 'ಸೈತಾನ'ರಾಗಿದ್ದೇವೆ. ದೇಶದ ಹಲವು ಸಮಸ್ಯೆಗಳಿಗೆ ಗಾಂಧಿಯನ್ನು ಮರೆತ, ಗಾಂಧಿಯಿಂದ ಯಾವ ಪ್ರೇರಣೆಯನ್ನೂ ಪಡೆಯದ ನಮ್ಮ ಮನಸ್ಥಿತಿಗಳೇ ಕಾರಣ ಎಂಬುದನ್ನು ಕವಿತೆ ಸೂಚಿಸುತ್ತದೆ.

ಗಾಂಧಿ ನಮ್ಮೊಳಗಿನ ನೈತಿಕತೆಯನ್ನು ಪ್ರಶ್ನಿಸುವ ಅಸ್ತ್ರವಾಗಿದ್ದಾರೆ. ತನ್ನ ಒಳಗನ್ನೆಲ್ಲಾ ತೆರೆದುಕೊಂಡು ಬದುಕಿದ ಗಾಂಧಿಗೆ ನಮ್ಮೊಳಗನ್ನು ಪ್ರವೇಶಿಸಿ ಬೆತ್ತಲುಗೊಳಿಸುವ ಶಕ್ತಿಯಿದೆ. ಗಾಂಧಿಯ ಬಗೆಗೆ ಇರುವ ಒಂದು ಬಗೆಯ ನೈತಿಕ ಭಯ ನಮ್ಮ ಅಂತರಂಗವನ್ನು ತೆರೆದುಕೊಳ್ಳುವಂತೆ ಮಾಡುವಂತದ್ದು. ನಮ್ಮೊಳಗಿನ ಆತ್ಮಸಾಕ್ಷಿಯನ್ನು ಕೆಣಕಿ ಸಂಘರ್ಷಕ್ಕಿಳಿಸುವ ಶಕ್ತಿ ಗಾಂಧಿ ವ್ಯಕ್ತಿತ್ವಕ್ಕಿದೆ. ಅದನ್ನು ಕೃಷ್ಣಮೂರ್ತಿ ಬಿಳಿಗೆರೆ ಅವರ 'ಗಾಂಧಿ ತಾತ, ನಾನು ಮತ್ತು ನನ್ನ ಮಗಳು' ಕವಿತೆ ಹಿಡಿದಿಡಲು ಪ್ರಯತ್ನಿಸುತ್ತದೆ. 'ಸತ್ಯವಾಗಿ ನಗೋ ಗಾಂಧಿ'ಯ ಮುಂದೆ 'ನಗಕಾಗದೇ ಇರುವ' ಸ್ಥಿತಿ ವ್ಯಕ್ತಿತ್ವದ ಅಪ್ರಾಮಾಣಿಕತೆಯನ್ನು ಸೂಚಿಸುತ್ತದೆ. ಗಾಂಧಿ ವಿಚಾರಗಳನ್ನು ಮೀರುವ ಮೂಲಕ ಅವರನ್ನು ನಿತ್ಯ ಕೊಲ್ಲುತ್ತಿರುವ ಪಾಪಪ್ರಜ್ಞೆ ಬಹಳವಾಗಿ ಕಾಡಿದೆ. 'ಗೋಡೇಲಿ ನಗೋ ಗಾಂಧಿ ನೋಡೋಕು ತಾಕತ್ತಿಲ್ಲದ ಸ್ಥಿತಿ' ಉಂಟಾಗಿದೆ. ಮಗಳು ಕೇಳುವ 'ಗಾಂಧಿ ತಾತ ಎಲ್ಲಿ?' ಎಂಬ ಪ್ರಶ್ನೆಗೆ ಉತ್ತರ ಕೊಡಲಾಗದ ಸಂಧಿಗ್ಧ ಪರಿಸ್ಥಿತಿಯನ್ನು ಎದುರಿಸುವ ಸಂಕಟ ಕವಿತೆಯಲ್ಲಿ ವ್ಯಕ್ತವಾಗಿದೆ.

ಆಗ ಮತಾಂಧ ಗೋಡ್ಸೆ ಗುಂಡು
ನನ್ನೆದೆಗೆ ಹೊಡೆಯುತ್ತೆ
ಈ ಸಲ ಸುಳ್ಳು ಹೇಳದೆ
ಸತ್ಯ ಹೇಳುತ್ತೇನೆ.
"ನಾವೇ ಕೊಂದು ಹಾಕಿದೆವು
ಇನ್ನೂ ಕೊಲ್ತಾನೇ ಇದ್ದೇವೆ."[೮೨]

ಮುಗ್ಧ ಮಗು ಕೇಳುವ ಪ್ರಶ್ನೆಗೆ ಉತ್ತರ ಕೊಡಲಾಗದ ಸ್ಥಿತಿ. ಗಾಂಧಿ ಹತ್ಯೆಯ ಬಗೆಗಿನ ಪ್ರಶ್ನೆ ನಮ್ಮ ನೈತಿಕತೆಯನ್ನೇ ಪ್ರಶ್ನಿಸುತ್ತದೆ. ಮಗಳ ಮುಗ್ಧ ಪ್ರಶ್ನೆ, ಗಾಂಧಿಯ ಮುಗ್ಧ ನಗು ಇವೆರಡರಲ್ಲೂ ಇರುವ ನಿಷ್ಕಲ್ಮಷ ಭಾವಗಳು ನಮ್ಮೊಳಗಿನ ಅಪರಾಧಿಯನ್ನು ಹೊರಹಾಕುವಂತೆ ಮಾಡಿವೆ. ಮಾತಿಗೂ ಕೃತಿಗೂ ಇರುವ ಅಂತರವನ್ನು ನೀಗಿಸಿಕೊಂಡ ಗಾಂಧಿ, ಆ ಅಂತರವನ್ನು ಇನ್ನೂ ಅಗಾಧವಾಗಿಸಿಕೊಳ್ಳುತ್ತಲೇ ಇರುವ ನಾವು ನಿತ್ಯ ಗಾಂಧಿಯನ್ನು ಹತ್ಯೆಗೆಯ್ಯುತ್ತಲೇ ಇದ್ದೇವೆ. ಮಗು ಕೇಳುವ ಮುಗ್ಧ ಪ್ರಶ್ನೆಗೆ ಉತ್ತರಿಸಲಾಗದೆ ತಲೆಮರೆಸಿಕೊಳ್ಳುತ್ತಿದ್ದೇವೆ. ಸ್ವಾರ್ಥ, ಮೋಸ, ಭ್ರಷ್ಟತೆ, ಹಿಂಸೆಗಳಲ್ಲಿ ಮುಳುಗಿಹೋಗಿ ಗಾಂಧಿಯ ಹೆಸರೆತ್ತಲೂ ಅನರ್ಹರಾಗಿ ಹೋಗಿದ್ದೇವೆ ಎಂಬ ಮಾತು ದೇಶದ ಮನಸ್ಸುಗಳು ಭ್ರಷ್ಟಗೊಂಡಿರುವ ರೀತಿಯನ್ನು ತೋರಿಸುತ್ತದೆ. ಮನುಷ್ಯರ ಉದ್ಧಾರಕ್ಕಾಗಿ ನಿರಂತರವಾಗಿ ಚಡಪಡಿಸಿದ ಜೀವವಾದ ಗಾಂಧಿ ಪ್ರಯತ್ನಗಳು ನಿರಂತರವಾಗಿ ವಿಫಲತೆಯನ್ನು ಕಂಡಿವೆ. ಏಕೆಂದರೆ ಸರಿಪಡಿಸಲಾಗದಷ್ಟು ಮನುಷ್ಯನ ಮನಸ್ಸು ಮತ್ತು ವ್ಯವಸ್ಥೆ ಹಾಳಾಗಿ ಹೋಗಿವೆ.

ನೀನು ಗುರುವಾದೆ, ನಮ್ಮ ಗುರಿಯಾದೆ, ಬಿಲ್ಲ ಕಣೆಯಾದೆ
ನಾವೋ ಹೇಡಿಗಳು ಹಿನ್ನಡೆದು ಮುಳುಗಿದೆವು
ವೈಶಂಪಾಯನದ ಮಡುವಲ್ಲಿ
ಗುಡುಗಿದಷ್ಟೂ ನೀನು, ಮುದುರಿದೆವು ಆಳ ನೀರೊಳಗೆ
ಇನ್ನೂ ನಮಗೆ ನೆನಪಿದೆ ನೋಡು ಜಲಸ್ತಂಭನದ ವಿದ್ಯೆ
ನೀನು ಹೂವಾದೆ, ಕಾಯಾದೆ, ಹಣ್ಣಾದೆ, ಶ್ರೀಗಂಧವಾದೆ

. . . . . .

ಆದರೂ ಉಳಿದೆವು ನಾವು ನಾವೇ ಆಗಿ ಹೆಣವಾಗಿ
ನೀನು ನೀನೇ ಆಗಿ – ಇತಿಹಾಸವಾಗಿ. [೮೩]

ಗಾಂಧಿ ವ್ಯಕ್ತಿತ್ವ ಬೆಳೆದ ಎತ್ತರ, ಪಡೆದ ವಿಸ್ತಾರದೊಂದಿಗೆ ತಮ್ಮನ್ನು ಹೋಲಿಸಿಕೊಳ್ಳುವ ಮೂಲಕ ತಮ್ಮ ದೌರ್ಬಲ್ಯಗಳನ್ನು ಕಂಡುಕೊಳ್ಳುವ ಮತ್ತು ಅವುಗಳಿಂದ ಹೊರಬರುವ ಪ್ರಾಮಾಣಿಕ ತುಡಿತ ಕವಿತೆಯಲ್ಲಿ ವ್ಯಕ್ತವಾಗಿದೆ. ಗಾಂಧಿ 'ಇತಿಹಾಸವಾಗಿ' ಉಳಿದದ್ದೂ, ನಾವು 'ಹೆಣ'ವಾಗಿ ಉಳಿದಿರುವುದು ವ್ಯಕ್ತಿತ್ವಗಳ ಶಕ್ತಿ ಮತ್ತು ದೌರ್ಬಲ್ಯಗಳನ್ನು ಗುರುತಿಸುತ್ತದೆ.

ಹೀಗೆ ಗಾಂಧಿ ವ್ಯಕ್ತಿತ್ವದೊಂದಿಗೆ ಸಂವಾದಿಸುವ ಕವಿತೆಗಳು ಗಾಂಧಿ ವ್ಯಕ್ತಿತ್ವದ ಶ್ರೇಷ್ಠತೆಯನ್ನು ಹಿಡಿದಿಡುತ್ತಲೇ ಆ ವ್ಯಕ್ತಿತ್ವದೊಂದಿಗೆ ತಮ್ಮನ್ನು ಹೋಲಿಸಿಕೊಳ್ಳುವುದರ ಮೂಲಕ ತಮ್ಮ ದೌರ್ಬಲ್ಯಗಳನ್ನು ಶೋಧಿಸಿಕೊಳ್ಳುವ ಪ್ರಯತ್ನವನ್ನು ಮಾಡಿವೆ. ಗಾಂಧಿಗೆ ಹಾಗೂ ತಮ್ಮ ಆತ್ಮಸಾಕ್ಷಿಗೆ ನಿತ್ಯವೂ ಎಸಗುತ್ತಿರುವ ದ್ರೋಹವನ್ನು, ಸಮಷ್ಠಿಯ ಅಪ್ರಾಮಾಣಿಕ, ಅನೈತಿಕ ನಡೆಯನ್ನು ಗಾಂಧಿ ವ್ಯಕ್ತಿತ್ವದೆದುರಿಗೆ ಹೇಳಿಕೊಳ್ಳುವ, ವಿಡಂಬಿಸುವ ಪ್ರಯತ್ನವನ್ನು ಮಾಡಲಾಗಿದೆ. ಇವು ನಮ್ಮ ಆತ್ಮಸಾಕ್ಷಿಯನ್ನು ಕೆಣಕಬಲ್ಲ ಗಾಂಧಿ ವ್ಯಕ್ತಿತ್ವದ ಶಕ್ತಿಯನ್ನು ಮನವರಿಕೆ ಮಾಡುವ ವಿಶಿಷ್ಟ ಪ್ರಯತ್ನಗಳೂ ಹೌದು. ಶ್ರೇಷ್ಠ ವ್ಯಕ್ತಿತ್ವದ ಮಾದರಿಗಳನ್ನು ನಮ್ಮ ಪರಂಪರೆಯಿಂದ ಶೋಧಿಸಿಕೊಳ್ಳುವ ಮೂಲಕ ಸಮಕಾಲೀನ ಸಾಂಸ್ಕೃತಿಕ ಬದುಕನ್ನು ರೂಪಿಸಿಕೊಳ್ಳುವ ವಿಶಿಷ್ಟ ಪ್ರಯತ್ನವನ್ನು ಕವಿತೆಗಳು ಮಾಡಿವೆ. ಈ ಪ್ರಕ್ರಿಯೆಯ ಭಾಗವಾಗಿ ಸ್ವ ಮತ್ತು ಸಮಷ್ಠಿಯ ಆತ್ಮವಿಮರ್ಶೆಯಲ್ಲಿ ತೊಡಗಿವೆ. ಸೃಜನಶೀಲ ಮನಸ್ಸುಗಳು ಸಮಷ್ಠಿಯ ಪ್ರತಿನಿಧಿಗಳಾಗಿ ಹೀಗೆ ಗಾಂಧಿ ವ್ಯಕ್ತಿತ್ವದೆದುರಿಗೆ ಆತ್ಮವಿಮರ್ಶೆಯಲ್ಲಿ ತೊಡಗಿರುವುದು ಗಾಂಧಿಯನ್ನು ಜೀವಂತವಾಗಿರಿಸಿಕೊಳ್ಳುವ ಪ್ರಯತ್ನವಾಗಿಯೂ, ಪಶ್ಚಾತ್ತಾಪದಿಂದ ಬೆಂದು ತಮ್ಮ ನಡೆಯನ್ನು ಸುಧಾರಿಸಿಕೊಳ್ಳುವ ಪ್ರಯತ್ನವಾಗಿಯೂ ಕಂಡುಬರುತ್ತದೆ. ಈ ಬಗೆಯ ಆತ್ಮವಿಮರ್ಶೆಯ ಪ್ರಯತ್ನಗಳು ಮಾನವತೆಯ ಬಗೆಗೆ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತವೆ. ಮನುಷ್ಯನಲ್ಲಿ ಮತ್ತು ಸಮಾಜದಲ್ಲಿ ನೆಲೆಸಿರುವ ಅಪ್ರಾಮಾಣಿಕತೆ, ಕ್ರೌರ್ಯ, ಅನೈತಿಕತೆ, ಸೋಗಲಾಡಿತನ ಮತ್ತು ಅಮಾನವೀಯ ಮುಖಗಳನ್ನು ಗಾಂಧಿ ಎಂಬ ನೈತಿಕ ಸಂಕೇತದ ಮುಂದೆ ತೆರೆದುಕೊಳ್ಳುವ ಮೂಲಕ ತೀವ್ರವಾಗಿ ವಿಮರ್ಶಿಸಿಕೊಳ್ಳಲಾಗಿದೆ. ಇವು ಗಾಂಧಿ ಪ್ರತಿನಿಧಿಸಿದ ಮೌಲ್ಯಗಳ ಪ್ರಸ್ತುತತೆಯನ್ನು ಸಾರುವ, ವರ್ತಮಾನದ ಮನುಷ್ಯ ಸ್ವಭಾವಗಳನ್ನು ತಿದ್ದುವ ವಿಶಿಷ್ಠ ಕಾಳಜಿಯನ್ನು ಹೊಂದಿದ ಅಭಿವ್ಯಕ್ತಿಗಳಾಗಿ ಮಹತ್ವದ ರಚನೆಗಳಾಗಿವೆ.

### ೩ . ರಾಜಕೀಯ ವಿಡಂಬನೆಯ ಪ್ರಜ್ಞೆಯಾಗಿ

ಯಾವುದೇ ಸಾಹಿತ್ಯದ ಶ್ರೇಷ್ಠತೆ ಅದರ ಸಾಮಾಜಿಕ ಬದ್ಧತೆ ಮತ್ತು ಹೊಣೆಗಾರಿಕೆಗಳಿಂದ ನಿರ್ಧಾರಿತವಾಗುತ್ತದೆ. ಹೊಣೆಗಾರಿಕೆಯನ್ನು ಪ್ರಕಟಿಸದ ಸಾಹಿತ್ಯ ಸಾಂಸ್ಕೃತಿಕವಾಗಿ ಮಹತ್ವ ಪಡೆಯಲಾರದು. ಒಂದು ಸಾಂಸ್ಕೃತಿಕ ಬದುಕಿನಲ್ಲಿ ಬಹುದೊಡ್ಡ ಪಲ್ಲಟಗಳನ್ನು ತಂದ, ತರಲು ಪ್ರಯತ್ನಿಸಿದ ಚಾರಿತ್ರಿಕ ಮಹತ್ವವುಳ್ಳ ವ್ಯಕ್ತಿತ್ವಗಳನ್ನು ಚಿತ್ರಿಸುವ ಮತ್ತು ಅವರೊಂದಿಗೆ ಸಂವಾದಿಸುವ ಕವಿತೆಗಳು ಪ್ರಕಟಿಸುತ್ತಿರುವ ಸಾಮಾಜಿಕ ಹೊಣೆಗಾರಿಕೆಗಳು ಯಾವ ಸ್ವರೂಪದವಾಗಿರುತ್ತವೆ ಎಂಬುದು ಕುತೂಹಲದ ವಿಷಯವೇ ಸರಿ. ವ್ಯಕ್ತಿತ್ವಗಳ ಕಾಲ, ದೇಶಾತೀತ ಮಾನವೀಯ ಮುಖಗಳನ್ನು ಅರ್ಥಮಾಡಿಕೊಳ್ಳುತ್ತಲೇ; ಸಮಕಾಲೀನ ಸಮಸ್ಯೆ – ಸವಾಲು, ಬಿಕ್ಕಟ್ಟುಗಳೊಂದಿಗೆ ಮುಖಾಮುಖಿಯಾಗಿಸುವ ಮೂಲಕ ಎತ್ತುವ ಪ್ರಶ್ನೆ, ಹುಡುಕುವ ಪರಿಹಾರ, ಎತ್ತಿ

ತೋರಿಸುವ ವ್ಯವಸ್ಥೆಯ ಹುಳುಕುಗಳು ಯಾವ ಬಗೆಯವು ಎಂಬುದು ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ ಮಹತ್ವ ಪಡೆದಿದೆ. ಈ ಹಿನ್ನೆಲೆಯಲ್ಲಿ ಗಾಂಧಿ ವ್ಯಕ್ತಿತ್ವ ಶೋಧ ಕ್ರಿಯೆಯಲ್ಲಿ ತೊಡಗಿರುವ ಕವಿತೆಗಳು ಪ್ರಕಟಿಸುತ್ತಿರುವ ಸಾಮಾಜಿಕ ಹೊಣೆಗಾರಿಕೆಗಳಾವುವು ಹಾಗೂ ಅವು ಅನಾವರಣ ಮಾಡುತ್ತಿರುವ ಸಾಂಸ್ಕೃತಿಕ ಬದುಕಿನ ವಿಛಿದ್ರಕಾರೀ ಶಕ್ತಿಗಳ ಕಾರ್ಯಮಾದರಿಗಳಾವುವು ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕನ್ನಡ ಕವಿಗಳು ಗಾಂಧಿಯನ್ನು ಚರ್ಚಿಸುವ ಸಂದರ್ಭದಲ್ಲಿ ಸಮಕಾಲೀನ ತವಕ ತಲ್ಲಣಗಳಿಗೆ ಗಾಂಧಿ ವ್ಯಕ್ತಿತ್ವವನ್ನು ನಿರಂತರವಾಗಿ ಮುಖಾಮುಖಿಯಾಗಿಸಲು ಪ್ರಯತ್ನಿಸಿದ್ದಾರೆ. ಜೊತೆಗೆ ಸಮಕಾಲೀನ ರಾಜಕೀಯ ಸ್ಥಿತಿಗತಿಗಳನ್ನು ಕುರಿತಂತೆ ತಮಗಿರುವ ದ್ವಂದ್ವ, ಗೊಂದಲ, ಸಿಟ್ಟು, ಅಸಮಾಧಾನಗಳನ್ನು ಹೊರಹಾಕುವ ಸಾಧನವಾಗಿ ಗಾಂಧಿಯನ್ನು ಮತ್ತೆ ಮತ್ತೆ ಚರ್ಚೆಗೊಳಪಡಿಸಿದ್ದಾರೆ. ಇಂದಿನ ರಾಜಕಾರಣ 'ಪ್ರಜಾಪ್ರಭುತ್ವ'ದ ಆಶಯಗಳಾದ 'ಸ್ವಾತಂತ್ರ್ಯ', 'ಸಮಾನತೆ', 'ಭ್ರಾತೃತ್ವ' ಎಂಬ ಪರಿಕಲ್ಪನೆಗಳನ್ನು ಬುಡಮೇಲು ಮಾಡಿದೆ. ಗಾಂಧಿ ಕಂಡ 'ರಾಮ ರಾಜ್ಯ'ದ ಕನಸು ಕನಸಾಗಿಯೇ ಉಳಿದಿದೆ. ಅದು ಎಂದೂ ನನಸಾಗಲಾರದು ಎಂಬ ಗಾಢ ನಿರಾಶೆಯನ್ನೂ ಕವಿತೆಗಳು ವ್ಯಕ್ತಪಡಿಸಿವೆ. ಕವಿಗಳು ಸಮಕಾಲೀನ ರಾಜಕೀಯ ನಡೆಯನ್ನು ಬಹಳ ಸೂಕ್ಷ್ಮವಾಗಿ ಅವಲೋಕಿಸುವ ಮೂಲಕ ವಿಮರ್ಶೆಗೊಳಪಡಿಸಲು ಪ್ರಯತ್ನಿಸಿದ್ದಾರೆ. ಹಾಗಾಗಿ ಸಮಕಾಲೀನ ರಾಜಕಾರಣದ ವಿಕೃತ ಮುಖಗಳನ್ನು ಗುರುತಿಸುವ, ಅದರ ಲೋಪದೋಷಗಳನ್ನು ತಿದ್ದುವ, ಕಟುವಾಗಿ ಟೀಕಿಸುವ, ಪರ್ಯಾಯಗಳನ್ನು ಕಂಡುಕೊಳ್ಳುವ ಮಾರ್ಗಗಳಿಗಾಗಿ ತಡಕಾಡುವ ಸಾಧನಗಳಾಗಿ ಗಾಂಧಿ ಮತ್ತು ಗಾಂಧಿ ತತ್ವಗಳು ಬಳಕೆಯಾಗಿವೆ.

ಭ್ರಷ್ಟಾಚಾರ, ಅನೈತಿಕತೆ, ಸ್ವಜನ ಪಕ್ಷಪಾತ, ಶೋಷಣೆ, ಅಪ್ರಾಮಾಣಿಕತೆ, ಜಾತೀಯತೆ ಮುಂತಾದ ಜ್ವಲಂತ ಸಮಸ್ಯೆಗಳಿಗೆ ಕಾರಣವಾಗಿರುವ ಸಮಕಾಲೀನ ರಾಜಕಾರಣದ ವಿಡಂಬನೆಗಾಗಿ ಗಾಂಧಿಯನ್ನು ಒಂದು ನೈತಿಕ ಅಸ್ತ್ರವಾಗಿ ಕನ್ನಡ ಕವಿಗಳು ಬಳಸಿಕೊಂಡಿದ್ದಾರೆ. 'ಗಾಂಧಿ'ಯನ್ನು ಬಳಸಿಕೊಂಡು ನಡೆಸಲಾಗುತ್ತಿರುವ ಅನೇಕ ಬಗೆಯ ರಾಜಕಾರಣಗಳನ್ನು, ಗಾಂಧಿ ತತ್ವಗಳಿಗೆ ವಿರುದ್ಧವಾಗಿ ಸಾಗಿ ಬಂದಿರುವ ದೇಶದ ರಾಜಕಾರಣವನ್ನು ಟೀಕಿಸುವ ಮತ್ತು ಆ ಮೂಲಕ ಸಮಕಾಲೀನ ರಾಜಕೀಯ ಪರಿಸರವನ್ನು ಸುಧಾರಿಸುವ ಕಾಳಜಿಗಳನ್ನು ಕವಿತೆಗಳ ಮೂಲಕ ಪ್ರಕಟಿಸಿದ್ದಾರೆ.

ಗಾಂಧಿಯನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳ ಅಭಿವ್ಯಕ್ತಿಯಲ್ಲಿ ಬಹುಮುಖ್ಯವಾಗಿ ಮೂರು ಭಾವಗಳು ಕೆಲಸಮಾಡಿವೆ. ಅವುಗಳೆಂದರೆ ಆರಾಧನೆ, ವಿಡಂಬನೆ ಮತ್ತು ತೀವ್ರ ವಿಷಾದ. ಕವಿತೆಗಳಲ್ಲಿ ಈ ಮೂರೂ ಭಾವಗಳು ಒಟ್ಟಾಗಿಯೂ, ಪ್ರತ್ಯೇಕವಾಗಿಯೂ ವ್ಯಕ್ತವಾಗಿವೆ. ಗಾಂಧಿಯ ಶ್ರೇಷ್ಠ ವ್ಯಕ್ತಿತ್ವವನ್ನು ಹೊಗಳುವ, ವರ್ಣಿಸುವ ಪ್ರಯತ್ನ ಮೊದಲನೆಯದ್ದಾದರೆ, ತಾವು ಬದುಕುತ್ತಿರುವ ಸಮಕಾಲೀನ ಸಾಂಸ್ಕೃತಿಕ ವ್ಯವಸ್ಥೆಗಳ ದುರಂತದ ಬಗೆಗೆ ಸಿಟ್ಟು, ಆಕ್ರೋಶ, ಪ್ರತಿರೋಧ ಮತ್ತು ಹತಾಶೆಗಳನ್ನು ಹೊರಹಾಕುವುದು ಎರಡು ಮತ್ತು ಮೂರನೆಯ ಅಭಿವ್ಯಕ್ತಿಗಳಲ್ಲಿ ಕಂಡುಬರುತ್ತದೆ. ಗಾಂಧಿ ವ್ಯಕ್ತಿತ್ವದೊಂದಿಗೆ ಸಂವಾದಿಸುವ ಮೂಲಕ ಸಮಕಾಲೀನ ರಾಜಕಾರಣದ ನಡೆಗಳನ್ನು ವಿಡಂಬಿಸಲಾಗಿದೆ. ವ್ಯಕ್ತಿ, ಸಮಾಜ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ನೈತಿಕ ಮೌಲ್ಯಗಳು ಕುಸಿಯುತ್ತಿರುವುದನ್ನು, 'ಗಾಂಧಿ' ಎಂಬ ಸಂಕೇತದ ಸುತ್ತಾ ನಡೆಸಲಾಗುತ್ತಿರುವ ರಾಜಕಾರಣಗಳನ್ನು, ಗಾಂಧಿಯನ್ನು ರಾಜಕಾರಣದ ದಾಳವಾಗಿ ಬಳಸಿಕೊಳ್ಳುತ್ತಿರುವುನ್ನು ಕವಿತೆಗಳಲ್ಲಿ ತೀವ್ರವಾಗಿ

ವಿಡಂಬಿಸುವ ಪ್ರಯತ್ನ ಮಾಡಿರುವುದನ್ನು ಕಾಣಬಹುದು. ಇಲ್ಲೆಲ್ಲ ಗಾಂಧಿ ವ್ಯಕ್ತಿತ್ವ ಒಂದು ನೈತಿಕ ಅಸ್ತ್ರವಾಗಿ, ತಮ್ಮ ಮೊರೆಯನಾಲಿಸುವ ರಕ್ಷಕನಾಗಿ, ಜಗಳವಾಡಬಹುದಾದ ಸಲಿಗೆಯ ವ್ಯಕ್ತಿಯಾಗಿ ಬಳಕೆಯಾಗಿದೆ. ಗಾಂಧಿಯೊಂದಿಗೆ ಮಾತಿಗಿಳಿಯುವ ಮೂಲಕ ತಮ್ಮ ಮತ್ತು ವ್ಯವಸ್ಥೆಯ ಹುಳುಕುಗಳನ್ನು ಹುಡುಕಿಕೊಳ್ಳುವ ಪ್ರಯತ್ನಮಾಡಲಾಗಿದೆ. ಗಾಂಧಿ ವಿಚಾರಗಳಿಗಿಂತ ಗಾಂಧಿ ಹೆಸರು ಮತ್ತು ಪ್ರತಿಮೆ ಮುಖ್ಯವಾಗುತ್ತಿರುವುದು, ಗಾಂಧಿ ಹತ್ಯೆ ಹಾಗೂ ನಿತ್ಯವೂ ನಡೆಯುತ್ತಿರುವ ಗಾಂಧಿಯ ಕಗ್ಗೊಲೆ, ಗಾಂಧಿ ಪ್ರತಿಪಾದಿಸಿದ ಮೌಲ್ಯಗಳು ಕೇವಲ ಪ್ರಚಾರದ ಸಾಧನಗಳಾಗುತ್ತಿರುವುದು ಮುಂತಾದವುಗಳನ್ನು ತೀವ್ರವಾಗಿ ವಿಡಂಬಿಸುವ ಮತ್ತು ಪ್ರತಿರೋಧಿಸುವ ಪ್ರಯತ್ನ ಮಾಡಲಾಗಿದೆ.

ಕವಿತೆಗಳ ವಿಡಂಬನೆಯ ಅಭಿವ್ಯಕ್ತಿ ಕ್ರಮವೇ ವಿಶಿಷ್ಟವಾದುದು. ಗಾಂಧಿಯನ್ನು ಕೇಂದ್ರವಾಗಿಟ್ಟುಕೊಂಡು, ಅವರ ಸುತ್ತ ಹಲವು ಪ್ರಶ್ನೆಗಳನ್ನು ಎತ್ತುವ ಮೂಲಕ ನಮ್ಮ ನೈತಿಕ ನಡೆಗಳನ್ನು ಮತ್ತು ರಾಜಕೀಯ ನಡೆಗಳನ್ನು ವಿಡಂಬಿಸಲಾಗಿದೆ. ಸಮಕಾಲೀನ ಮನುಷ್ಯನಲ್ಲಿ ಆಗಿರುವ ದೊಡ್ಡ ಮಟ್ಟದ ನೈತಿಕ ಅಧಃಪತನದ ಬಗೆಗೆ ತೀವ್ರವಿಷಾದವನ್ನು ವ್ಯಕ್ತಪಡಿಸುತ್ತಲೆ ಗಾಂಧಿ ವ್ಯಕ್ತಿತ್ವದ ಶ್ರೇಷ್ಠತೆಯನ್ನು ಮುನ್ನೆಲೆಗೆ ತರುವ ಪ್ರಯತ್ನಮಾಡಿವೆ. 'ಇಂದು ಗಾಂಧಿ ಬದುಕಿದ್ದಿದ್ದರೆ', 'ಗಾಂಧಿ ಮತ್ತೆ ಹುಟ್ಟಿ ಬಂದರೆ', 'ಗಾಂಧಿ ಸತ್ತಿದ್ದಾನೋ? ಇಲ್ಲವೋ?', 'ಗಾಂಧಿ ಹತ್ಯೆ ನಡೆದದ್ದು ಅಂದು ಗೋಡ್ಸೆಯಿಂದಲೋ ಅಥವಾ ಇಂದು ನಮ್ಮಿಂದಲೋ?', 'ಗಾಂಧಿಯನ್ನು ಕೊಲ್ಲಲು ಸಾಧ್ಯವೇ, ಇಲ್ಲವೇ?' 'ಗಾಂಧಿ ಸತ್ತದ್ದೇ ಒಳ್ಳೆಯದಾಯಿತು', 'ಗಾಂಧಿ ನೀನು ಮತ್ತೆ ಹುಟ್ಟ ಬೇಡ', 'ಹುಟ್ಟಿ ಬಂದರೂ ಕೈಯಲ್ಲಿ ಕೋವಿ ಹಿಡಿದು ಬಾ', ಮುಂತಾದ ಪ್ರಶ್ನೆ, ಊಹೆ, ಕನಸು, ಪ್ರತಿಕ್ರಿಯೆಗಳ ಮೂಲಕ ಒಂದು ಸಂಕಥನವನ್ನೇ ಸೃಷ್ಟಿಸಿ ಸಮಕಾಲೀನ ರಾಜಕಾರಣಗಳನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಳ್ಳಲಾಗಿದೆ. ಇಲ್ಲಿ ಕವಿಗಳು ತಮ್ಮೆದುರಿಗಿರುವ ವ್ಯವಸ್ಥೆಯ ಬಗೆಗೆ ಅಷ್ಟೇ ಮಾತನಾಡದೆ, ವ್ಯವಸ್ಥೆಯ ಭಾಗವಾಗಿರುವ ತಮ್ಮ ಮೌನ, ಅಸಹಾಯಕ ನೋಟಗಳನ್ನು ತೀವ್ರವಾಗಿ ವಿಡಂಬಿಸಿಕೊಂಡಿರುವುದು ವಿಶೇಷ. ಈ ಹಿನ್ನೆಲೆಯಲ್ಲಿ ಮುಖ್ಯವಾದ ಕೆಲವು ಕವಿತೆಗಳನ್ನು ವಿಶ್ಲೇಷಿಸಲಾಗಿದೆ.

ಚಂದ್ರಶೇಖರ ಪಾಟೀಲರ 'ಗಾಂಧೀಸ್ಮರಣೆ' ಕವಿತೆ ಗಾಂಧಿ ನಂತರದ ಸರ್ವಾಧಿಕಾರೀ ರಾಜಕಾರಣವನ್ನು ಪ್ರತಿರೋಧಿಸುತ್ತದೆ. ಸಮಕಾಲೀನ ಸಂದರ್ಭದಲ್ಲಿ ಗಾಂಧಿ ವ್ಯಕ್ತಿತ್ವ, ಕನಸು ವಿಚಾರಗಳು ಮೂಲೆಗುಂಪಾಗಿ ಗಾಂಧಿ ಕೇವಲ ಪ್ರಚಾರದ ವಸ್ತುವಾಗಿರುವುದನ್ನು ಸಮರ್ಥವಾಗಿ ವಿಡಂಬಿಸುತ್ತದೆ. ಗಾಂಧಿ ಸಮಕಾಲೀನ ರಾಜಕಾರಣದಲ್ಲಿ ಕೇವಲ ಅಧಿಕಾರ ಗಳಿಕೆಯ ಮತ್ತು ಪ್ರಚಾರದ ಸಾಧನವಾಗಿ ಮಾತ್ರ ಬಳಕೆಯಾಗುತ್ತಿದ್ದಾನೆಯೇ ಹೊರತು ಒಂದು ಮೌಲ್ಯವಾಗಿ ಅಲ್ಲ. ಗಾಂಧಿ ಕಂಡ ಕನಸುಗಳು ಗಾಂಧಿ ನಂತರದ ನಾಡಿನ ರಾಜಕಾರಣದಲ್ಲಿ ನುಚ್ಚುನೂರಾಗಿರುವುದನ್ನು ಅತ್ಯಂತ ಮೊನಚು ವ್ಯಂಗ್ಯದೊಂದಿಗೆ ವಿಡಂಬಿಸಲಾಗಿದೆ. ಮಾತು ಮತ್ತು ಕೃತಿಯ ನಡುವೆ ಬಹುದೊಡ್ಡ ಕಂದರ ಬಿದ್ದು ರಾಜಕಾರಣ ತನ್ನ ನೈತಿಕತೆಯನ್ನೇ ಕಳೆದುಕೊಂಡಿರುವ ದುಸ್ಥಿತಿಯನ್ನು ಇದು ವ್ಯಂಗ್ಯವಾಡಿದೆ.

ಖಾಲೀ ಗದ್ದಲದ ಈ ನಾಡಿನ ಉದ್ದಗಲಕ್ಕೂ  
ಈಗ ಶಾಂತಿ ನೆಲೆಸಿದೆ  
ನರನಾಡಿಯೆಲ್ಲ ನಿಂತೇ ಹೋದಂತಾಗಿ  
ನಾವೆಲ್ಲ ಯೋಗಿಗಳಾಗಿದ್ದೇವೆ.

ಹಾದಿ ಮಾತು, ಬೀದಿ ಭಾಷಣಗಳ ಸದ್ದಡಗಿ
ಕಿವಿ ತುಂಬ ಹುಲುಸಾಗಿ ಕೂದಲು ಬೆಳೆಯುತ್ತಿದೆ.
ಅನಾಚಾರ ಅತ್ಯಾಚಾರ ಭ್ರಷ್ಟಾಚಾರಗಳ ಬದಲು
ಪತ್ರಿಕೆಗಳ ತುಂಬ ಶುದ್ಧ ಸಮಾಚಾರ ತುಂಬಿದೆ
ಎಲ್ಲಾ ಸಾಮಾನುಗಳ ಬೆಲೆ ಇಳಿದೂ ಇಳಿದೂ
ಈಗ ಕೈಗೆ ಸಿಗದಂತಾಗಿವೆ. [೮೪]

ಪ್ರಜಾಪ್ರಭುತ್ವದ ಮೌಲ್ಯಗಳನ್ನು ನಾಶಮಾಡಿರುವ ದೇಶದ ರಾಜಕಾರಣವನ್ನು ಕವಿತೆ ಹಿಡಿದಿಟ್ಟಿದೆ. ಗಾಂಧಿ ನಂತರದ ಈ ನಾಡು ಗಾಂಧಿ ಕನಸಿಗೆ ವಿರುದ್ಧವಾಗಿ ಚಲಿಸಿದ್ದರ ಹಿಂದಿನ ರಾಜಕಾರಣಗಳನ್ನು ವ್ಯಂಗ್ಯವಾಡುತ್ತಲೇ ಗಾಂಧಿಯನ್ನು ಮೂಲೆಗುಂಪುಮಾಡಿ 'ಗಾಂಧಿ'ಎಂಬ ಅಡ್ಡ ಹೆಸರಿನವರು ದೇಶದ ರಾಜಕೀಯವನ್ನು ಆವರಿಸಿಕೊಂಡಿದ್ದನ್ನು ವಿಡಂಬಿಸುತ್ತದೆ. ಗಾಂಧಿ ಕಂಡ ರಾಮರಾಜ್ಯದ ಕನಸು ಕನಸಾಗೇ ಉಳಿಯುವಲ್ಲಿ ನಮ್ಮ ರಾಜಕಾರಣದ ಕೊಡುಗೆ ಅಪಾರವಾಗಿದೆ ಎಂಬ ವ್ಯಂಗ್ಯ ಇಲ್ಲಿದೆ.

ಗಾಂಧಿಯನ್ನು ರಾಜಕಾರಣದ ದಾಳವಾಗಿ ಬಳಸಿಕೊಳ್ಳುತ್ತಿರುವ, ಅವರ ಬಗೆಗೆ ಅಪಪ್ರಚಾರ, ಅಪವ್ಯಾಖ್ಯಾನ ಮಾಡುವ, ಅವಮಾನಿಸುವ ಪ್ರವೃತ್ತಿಗಳೂ ಮೇಲಿಂದ ಮೇಲೆ ನಡೆಯುತ್ತಿವೆ. ಅಧಿಕಾರ ಗಳಿಕೆಯ ಏಕ ಉದ್ದೇಶಕ್ಕಾಗಿ ಗಾಂಧಿಯನ್ನು ದೇಶದಲ್ಲಿ ಮನಬಂದಂತೆ ಬಳಸಿಕೊಳ್ಳುವ ರಾಜಕಾರಣಗಳೂ ನಿರಂತರವಾಗಿ ನಡೆಯುತ್ತಿವೆ. ಈ ಪ್ರವೃತ್ತಿಗಳನ್ನು ಹಲವು ಕವಿತೆಗಳು ವಿಡಂಬಿಸುತ್ತವೆ.

ಇವನ ಸಮಾಧಿಯ ಬಗೆದು
ಎಳೆದು ತಂದರು
ಯಾರೋ ದುಶ್ಯಾಸನರು
ಉಟ್ಟಿದ್ದ ತುಂಡು ಲಂಗೋಟಿ
ಹರಿದು ಬತ್ತಲೆಗೊಳಿಸಿದರು
ಅಸ್ಥಿ ಪಂಜರದೊಳಗೆ
ಜೀವ ತಡಕಾಡಿದರು [೮೫]

ಗಾಂಧಿಯನ್ನು 'ಸಮಾಧಿ'ಗೊಳಿಸುವ, ಸಮಾಧಿಗೊಂಡ ಗಾಂಧಿಯನ್ನು ಎಳೆದು ತಂದು ಅವಮಾನಿಸುವ, ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ಯತ್ನಗಳು ರಾಜಕಾರಣದಲ್ಲಿ ಎಗ್ಗಿಲ್ಲದೆ ನಡೆಯುತ್ತಿವೆ. ಗಾಂಧಿ ಸಮಕಾಲೀನ ರಾಜಕಾರಣದಲ್ಲಿ ವ್ಯಂಗ್ಯದ ವಸ್ತುವಾಗಿದ್ದಾನೆ ಎಂಬ ವಿಷಾದ, ವಿಡಂಬನೆ ಇಲ್ಲಿದೆ. ರಾಜಕಾರಣದ ಅತ್ಯಂತ ಹೀನವಾದ ನಡವಳಿಕೆಗಳನ್ನು ಕವಿತೆ ವಿಡಂಬಿಸುತ್ತದೆ.

ಇಂದು ಗಾಂಧಿ ಬದುಕು ಮತ್ತು ಚಿಂತನೆಗಳಿಗಿಂತ ಅವರ ಹೆಸರು ಮತ್ತು ಪ್ರತಿಮೆ ಮುಖ್ಯವಾಗಿದೆ. ಗಾಂಧಿ ಪ್ರತಿನಿಧಿಸಿದ ಮೌಲ್ಯಗಳನ್ನು ಬೇಕೆಂತಲೇ ಮರೆತು ಕೇವಲ ಪ್ರತಿಮೆಗಳಲ್ಲಿ ಮಾತ್ರ ಹಿಡಿದಿಡುವ ಪ್ರಯತ್ನಗಳು ನಡೆಯುತ್ತಿವೆ. ಗಾಂಧಿ ರಾಜಕೀಯ ಲಾಭದ, ಪ್ರಚಾರದ ಅಗ್ಗದ ಸಾಧನವಾಗಿ ಬಳಕೆಯಾಗುತ್ತಿದ್ದಾರೆ. ಗಾಂಧಿಯನ್ನು ನಮ್ಮ ಬದುಕು ವ್ಯವಹಾರಗಳಲ್ಲಿ ಜೀವಂತವಾಗಿಡುವ ಬದಲಾಗಿ ನಮ್ಮ ಹೊರಗೆ 'ಪ್ರತಿಮೆ'ಗೊಳಿಸಲಾಗುತ್ತಿದೆ. ಈ ಬಗೆಯ ರಾಜಕಾರಣಗಳನ್ನು ಅನೇಕ ಕವಿತೆಗಳು ಶಕ್ತವಾಗಿ ವಿಡಂಬಿಸಿವೆ. ಗಾಂಧಿಯನ್ನು ಬದುಕಿನ ಮೌಲ್ಯವಾಗಿ ನಮ್ಮೊಳಗೆ ತಂದುಕೊಳ್ಳಬಲ್ಲ ಯಾವ ಪ್ರಾಮಾಣಿಕ ಪ್ರಯತ್ನಗಳೂ ಇಂದು ನಡೆಯುತ್ತಿಲ್ಲ. ಗಾಂಧಿ 'ಉತ್ಸವ ಮೂರ್ತಿ'ಯ ಹಾಗೆ ಬಳಕೆಯಾಗುತ್ತಿದ್ದಾರೆ. ಆ ಮೂಲಕ ಗಾಂಧಿಯನ್ನು ನಿತ್ಯ ಹತ್ಯೆಗಯ್ಯಲಾಗುತ್ತಿದೆ ಎಂಬ ವಿಷಾದವನ್ನು ಕವಿತೆಗಳು ವ್ಯಕ್ತಪಡಿಸುತ್ತವೆ. 'ನೀನೊಂದು ಸಲ ಮೃತನಾಗದೇ ನಿತ್ಯ ಗುಂಡಿಗೆ ಗುರಿಯಾಗುತ್ತಿರುವೆ' ಎಂಬ ಸಾಲುಗಳು ಗಾಂಧಿಗೆ

ವಿರುದ್ಧವಾಗಿ, ಅಪ್ರಾಮಾಣಿಕವಾಗಿ ನಡೆದುಕೊಳ್ಳುತ್ತಿರುವ ದೇಶದ ಪ್ರತಿಯೊಬ್ಬರ ನಡೆಯನ್ನೂ ತೀವ್ರವಾಗಿ ವಿಡಂಬಿಸುತ್ತವೆ. ಗಾಂಧಿ ಪ್ರತಿನಿಧಿಸುವ ಮೌಲ್ಯಗಳು ಕೇವಲ ಭಾಷಣದ ಸಾಮಗ್ರಿಗಳಾಗುತ್ತಿವೆ. ಗಾಂಧಿ ಹೆಸರು ಮತ್ತು ತತ್ವಗಳನ್ನು ಸಮಕಾಲೀನ ರಾಜಕಾರಣ ಅನಾಚಾರದ ರಾಯಭಾರಿಗಳನ್ನಾಗಿ ಬಳಸಿಕೊಳ್ಳುತ್ತಿರುವುದರ ವಿರುದ್ಧ ವ್ಯಂಗ್ಯವಾಡುತ್ತದೆ.

ನೀನಿದ್ದೆ ಎಂಬುದಕ್ಕೆ ಸ್ಮಾರಕ ನಿರ್ಮಿಸುವುದನ್ನು
ನಾವು ಮರೆತಿಲ್ಲ.
ಇಗೋ ಈ ಚೌಕದಲ್ಲಿ, ಆ ಮಹಲಿನಲ್ಲಿ
ಈ ಪಾರ್ಕಿನಲ್ಲಿ ನಿನ್ನ ವಿಗ್ರಹವನ್ನು ಸ್ಥಾಪಿಸಿ
ವರ್ಷ ವರ್ಷವೂ ನಿನ್ನ ನೆನಪುಗಳಲ್ಲಿ
ಕೈ ತೊಳೆದುಕೊಳ್ಳುತ್ತಿದ್ದೇವೆ.
ಆದರೂ ಕೈಗಂಟಿಕೊಂಡಿರುವ ನಿನ್ನ ರಕ್ತದ ಗುರುತು
ಇನ್ನೂ ಹೋಗಿಲ್ಲ. [೮೬]

ಈ ಕವಿತೆ ವಿಡಂಬನೆ, ವಿಷಾದ, ಪಶ್ಚಾತ್ತಾಪಗಳನ್ನು ಒಟ್ಟಿಗೇ ವ್ಯಕ್ತಪಡಿಸುತ್ತದೆ. ಗಾಂಧಿಯನ್ನು 'ಸ್ಮಾರಕ', 'ವಿಗ್ರಹ'ವಾಗಿಸುವ ಹುನ್ನಾರ, ಎಚ್ಚರಗೇಡಿತನಗಳನ್ನು ವಿಡಂಬಿಸುತ್ತಲೇ ಗಾಂಧಿಯನ್ನು ತಮ್ಮೊಳಗೆ ಜೀವಂತವಾಗಿರಿಸಿಕೊಳ್ಳಲಾಗದ 'ದಡ್ಡತನ'ಕ್ಕೆ ಬೇಸರ ವ್ಯಕ್ತಪಡಿಸುತ್ತಿದೆ. ಹೀಗೆ ಮಾಡುವ ಮೂಲಕ ಗಾಂಧಿಯನ್ನು ಕೊಂದ, ಕೊಲ್ಲುತ್ತಿರುವುದರ ಬಗೆಗೆ ನೋವು, ಪಶ್ಚಾತ್ತಾಪವೂ ಇದೆ. ತಮ್ಮ ನಡವಳಿಕೆಗಳ ಮೂಲಕ ಗಾಂಧಿಯನ್ನು ನಿತ್ಯ ಕೊಲ್ಲುತ್ತಿರುವುದರ ಬಗೆಗೆ ಅರಿವಿದ್ದೂ, ಅದರ ಬಗೆಗೆ ಪಾಪಪ್ರಜ್ಞೆ ಇದ್ದೂ ಎಚ್ಚರಗೇಡಿತನವನ್ನು ಪ್ರದರ್ಶಿಸುವ ಪ್ರವೃತ್ತಿಗಳನ್ನು ವಿಡಂಬಿಸಲಾಗಿದೆ.

ಗಾಂಧಿ ಕಂಡುಕೊಂಡ ಬದುಕಿನ ಸತ್ಯಗಳು ಯಾರಿಗೂ ಬೇಡವಾಗಿವೆ. ಗಾಂಧಿ ಪ್ರತಿಪಾದಿಸಿದ ಮೌಲ್ಯಗಳನ್ನು ಉಲ್ಲಂಘಿಸುವುದನ್ನೇ ಪ್ರವೃತ್ತಿಮಾಡಿಕೊಳ್ಳಲಾಗಿದೆ. ಇನ್ನೊಂದು ಕಡೆ ನಿಧಾನವಾಗಿ ಗಾಂಧಿಯನ್ನು ಇತಿಹಾಸ, ಪುರಾಣ ಮತ್ತು ದಂತಕತೆಯಾಗಿಸುತ್ತಾ ಅವರಿಗೂ ನಮ್ಮ ಬದುಕಿಗೂ ಇರಬಹುದಾದ ಸಂಬಂಧದ ಸೇತುವನ್ನು ಇಲ್ಲವಾಗಿಸುವ ಪ್ರಯತ್ನಗಳು ನಡೆಯುತ್ತಿವೆ ಗಾಂಧಿ ಬದುಕು ಮತ್ತು ತತ್ವಗಳು ಸಮಕಾಲೀನ ವಾತಾವರಣದಲ್ಲಿ ಹೊಸ ರೂಪ, ಅರ್ಥಗಳ ಹಿಂದೆ ತಲೆ ಮರೆಸಿಕೊಂಡು ಸಾಯುತ್ತಿರುವುದನ್ನು ಕವಿತೆಗಳು ವಿಡಂಬಿಸಿವೆ. ಗಾಂಧಿ ಬದುಕು ಮತ್ತು ಚಿಂತನೆಗಳು ಸಮಕಾಲೀನ ರಾಜಕಾರಣದಲ್ಲಿ ಮೌಲ್ಯವನ್ನು ಕಳೆದುಕೊಳ್ಳುತ್ತಿವೆ. ಗಾಂಧಿಯನ್ನು ಅನುಸರಿಸುವುದು ಅವರು ಪ್ರತಿನಿಧಿಸಿದ ಮೌಲ್ಯಗಳನ್ನು ಒಳಗೊಳ್ಳುವುದು ಹಾಸ್ಯಾಸ್ಪದ ಸಂಗತಿಯಾಗುತ್ತಿದೆ. ಇದನ್ನು ರಂಜಾನ್ ದರ್ಗಾರ 'ನನಗೆ ಗಾಂಧಿಯಾಗುವ ಇಚ್ಛೆ' ಕವಿತೆ ಶಕ್ತವಾಗಿ ವಿಡಂಬಿಸಿದೆ. ಗಾಂಧಿಯಾಗುವ ಪ್ರಯತ್ನಗಳು ಎಲ್ಲರ ವ್ಯಂಗ್ಯಕ್ಕೆ ಕಾರಣವಾಗುವುದು ವರ್ತಮಾನದಲ್ಲಿ ಗಾಂಧಿ ವ್ಯಕ್ತಿತ್ವಕ್ಕೆ ದಕ್ಕುತ್ತಿರುವ ಬೆಲೆಯನ್ನು ಸೂಚಿಸುತ್ತದೆ.

ನೀನು ಪ್ಯಾನ್ಸಿ
ಡ್ರೆಸ್ಸಿನಲ್ಲಿ ಹೆಸರು
ಕೊಟ್ಟಿದ್ದರೆ ಚೆನ್ನಾಗಿತ್ತು.
ಎಂದರು
ಅಂದಿನಿಂದಲೂ
ನನಗೆ ನಾನಾಗುವ ಇಚ್ಛೆ [೮೭]

ಗಾಂಧಿಯಾಗಬೇಕೆಂಬ ಬಹಳ ದಿನದ ಆಸೆಯಿಂದ ಗಾಂಧಿಯಂತೆ ವೇಷ ಧರಿಸಿದವನಿಗೆ ಸಿಕ್ಕ ಪ್ರತಿಕ್ರಿಯೆ ವ್ಯಂಗ್ಯ ನಗು ಮತ್ತು ತಿರಸ್ಕಾರ. ಗಾಂಧಿಯಾಗುವುದೆಂದರೆ ಅಪಹಾಸ್ಯಕ್ಕೆ ಗುರಿಯಾಗುವುದು ಎಂಬಷ್ಟರ ಮಟ್ಟಿಗೆ ಗಾಂಧಿ ಸಮಕಾಲೀನ ಬದುಕಿನಲ್ಲಿ ಮಹತ್ವ ಕಳೆದುಕೊಳ್ಳುತ್ತಿದ್ದಾರೆ. ಇನ್ನೊಂದು ಕೇವಲ ವೇಷದಲ್ಲಿ ಮಾತ್ರ ಗಾಂಧಿಯಾಗುವ ಸೋಗಲಾಡಿತನವನ್ನೂ ಕವಿತೆ ವಿಡಂಬಿಸುತ್ತದೆ.

ಗಾಂಧಿ ನಾಡಿನಲ್ಲಿ ಗೋಡ್ಸೆಯ ಸಂತತಿ ಹೆಚ್ಚಾಗುತ್ತಿದೆ. ಗಾಂಧಿ ಹೆಸರು ಹೇಳಿ ಅಧಿಕಾರಕ್ಕೆ ಬಂದವರು ಗಾಂಧಿಗೇ ನಿತ್ಯ ಸಮಾಧಿ ಕಟ್ಟುವ ಕಾಯಕದಲ್ಲಿ ತೊಡಗಿದ್ದಾರೆ. ಈ ಎಲ್ಲಾ ಬೆಳವಣಿಗೆಗಳನ್ನು ಕವಿತೆಗಳು ಸಮರ್ಥವಾಗಿ ವಿಡಂಬಿಸುತ್ತವೆ.

ಅಜ್ಜಾ . . . . . .
ನಿನ್ನ ಕನ್ನಡಿ ಕಟ್ಟಿನ ಪಟದಡಿಯಲ್ಲಿ
ಗೋಡ್ಸೆಗಳು ಕುಳಿತಿದ್ದ ಕಂಡೆಯಾ
ನೀ ಸತ್ತು ಚಿರನಿದ್ದೆಯಲ್ಲೊರಗಿದ
ನಿನ್ನ ಸಮಾಧಿಯಲ್ಲಿ, ನಮ್ಮ ಜನನಾಯಕರು
ಪ್ರಮಾಣ ವಚನ ಸ್ವೀಕರಿಸಿ
ನಿನ್ನನ್ನು ಮತ್ತೆ ಮತ್ತೆ ಕೊಲ್ಲುವುದ ಕಂಡೆಯಾ. . . ![೮೮]

ಗಾಂಧಿ ಫೋಟೋ ಕೆಳಗೇ ಮೋಸ, ವಂಚನೆ, ದಗಲ್ಬಾಜಿತನಗಳನ್ನು ಮೆರೆಯುವ ಖದೀಮ ರಾಜಕಾರಣಿಗಳನ್ನು 'ಗೋಡ್ಸೆ ಸಂತತಿ'ಗಳೆಂದು ಕರೆದು ಅವರ ವರ್ತನೆಗಳನ್ನು ತರಾಟೆಗೆ ತೆಗೆದುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಗೋಡ್ಸೆಗಳು ಎಲ್ಲೆಲ್ಲೂ ಜೀವಂತವಾಗಿರುವಲ್ಲಿ ಗಾಂಧಿ ಉಳಿಯಲು ಸಾಧ್ಯವೇ ಎಂದು ಪ್ರಶ್ನಿಸುತ್ತಿರುವ ಕವಿತೆ ನಾವು ಬದುಕುತ್ತಿರುವ ವ್ಯವಸ್ಥೆಯ ದುರಂತವನ್ನೂ, ನಮ್ಮ ರಾಜಕಾರಣ ತಲುಪಿರುವ ದುಸ್ಥಿತಿಯನ್ನು ಮನದಟ್ಟುಮಾಡಿಕೊಡುತ್ತದೆ. ಇಂದು ಗಾಂಧಿ ಯಾರಿಗೂ ಬೇಡವಾಗಿದ್ದಾರೆ. ಅವರು ಬಯಸುತ್ತಿರುವ ಗಾಂಧಿ ಯಾರು? ಎಂಬುದೂ ಕೂಡ ಆತಂಕದ ವಿಷಯವೇ ಆಗಿದೆ. ಅಧಿಕಾರವನ್ನೂ, ಸಂಪತ್ತನ್ನೂ, ಸ್ವಾರ್ಥ, ಹಿಂಸೆಗಳನ್ನು ತೊರೆದ ಗಾಂಧಿ ಇಂದು ಅಧಿಕಾರದಾಹಿಗಳ ಉಳಿವಿಗಾಗಿ, ಅನೈತಿಕ ರಾಜಕಾರಣಕ್ಕಾಗಿ ಬಳಕೆಯಾಗುತ್ತಿದ್ದಾರೆ ಎಂಬ ಆತಂಕದೊಂದಿಗೇ ಅದನ್ನು ತೀವ್ರವಾಗಿ ವಿಡಂಬಿಸುವ ಪ್ರಯತ್ನವನ್ನು ಮಾಡಲಾಗಿದೆ.

ಗಾದಿ ಏರುವವರಿಗೆ
ಗಾದಿ ಏರುವವರೆಗೆ
ಟೊಪ್ಪಿಗೆ ಹಾಕುವವರಿಗೆ
ಟೊಪ್ಪಿಗೆ ಹಾಕುವವರೆಗೆ
ಬೂಟಿನಿಂದ ತುಳಿಯುವವರಿಗೆ
ಬೂಟಿನಿಂದ ತುಳಿಸುವವರಿಗೆ
ಗಾಂಧಿ ಬೇಕು
. . . .
ಗಾಂಧಿ ನೀನು ಬೇಕು
ನೀನೆಂದರೆ ನೀನಲ್ಲ
ಅರ್ಥವಾಯಿತಲ್ಲ[೮೯]

ಗಾಂಧಿ ಇಂದು ಯಾರ ಮತ್ತು ಯಾವ ಮೌಲ್ಯಗಳ ಪೋಷಕ ಶಕ್ತಿಯಾಗಿ ಬಳಕೆಯಾಗುತ್ತಿದ್ದಾರೆ ಎಂಬುದರ ವಿಡಂಬನೆಯನ್ನು ಕವಿತೆಗಳು ಮಾಡಿವೆ. ಗಾಂಧಿ ಅಧಿಕಾರ ಗಳಿಕೆ ಮತ್ತು ಅಪರಾಧಗಳನ್ನು ಪೋಷಿಸಿಕೊಳ್ಳುವವರ ಕೈದಾಳವಾಗಿ ಬಳಕೆಯಾಗುತ್ತಿರುವ ಹೀನ ರಾಜಕಾರಣದ ನೆಲೆಗಳನ್ನು ಕವಿತೆ

ವ್ಯಂಗ್ಯವಾಡಿದೆ. ರಾಜಕಾರಣಕ್ಕೆ ಬೇಕಾಗಿರುವುದು ಗಾಂಧಿಯೂ ಅಲ್ಲ, ಗಾಂಧಿ ತತ್ವಗಳೂ ಅಲ್ಲ. ಕೇವಲ ಗಾಂಧಿ ಹೆಸರು ಮಾತ್ರ, ಅದೂ ಅಧಿಕಾರ ಗಳಿಕೆಯವರೆಗೆ ಮಾತ್ರ ಎಂಬುದು ಇಂದಿನ ರಾಜಕಾರಣ ಗಾಂಧಿಯನ್ನು ಬಳಸಿಕೊಳ್ಳುತ್ತಿರುವ ರೀತಿಗೆ ಸಾಕ್ಷಿಯಾಗಿದೆ. ಹೀಗೆ ಗಾಂಧಿ ಹೆಸರಲ್ಲಿ ನಡೆಯುತ್ತಿರುವ ರಾಜಕೀಯ ಅನಾಚಾರಗಳು ನಿಜವಾಗಿ ಗಾಂಧಿಯನ್ನು ಕೊಂದಿವೆ ಎಂಬ ಆಕ್ರೋಶ ವ್ಯಕ್ತವಾಗಿದೆ. 'ಗಾಂಧಿಯನ್ನು ಕೊಂದು 'ಗಾಂಧಿ' ಹೆಸರನ್ನು ಮಾತ್ರ ಜೀವಂತವಾಗಿಸಿಕೊಂಡಿರುವ ರಾಜಕಾರಣದ ರಾಕ್ಷಸೀ ಮುಖಗಳನ್ನು ಕವಿತೆಗಳು ತೆರೆದಿಡುತ್ತವೆ.

ಇನ್ನು ಈ ಗಾಂಧಿ ನಾಡಿನಲ್ಲಿ ನಡೆಯುತ್ತಿರುವ ಅತ್ಯಾಚಾರ, ಹಿಂಸೆ ಅನಾಚಾರಗಳಿಗೆ ಲೆಕ್ಕವೇ ಇಲ್ಲ. ಇವನ್ನು ಅತ್ಯಂತ ನೋವು, ಆಕ್ರೋಶಗಳೊಂದಿಗೆ ಪ್ರತಿರೋಧಿಸುವ ಪ್ರಯತ್ನವನ್ನು ಹಲವು ಕವಿತೆಗಳು ಮಾಡಿವೆ.

> ಯಮುನನ ಹೆಂಡತಿಯ ಕುಬುಸಕ್ಕೆ ಕೈ ಹಾಕಿ ಕಿತ್ತ ಮಾವ
> ಬಿಡಿಸಿಕೊಳ್ಳಲಿಲ್ಲ ಯಾರೂ
> ಮಾನಭಂಗದ ಸಭೆಯಲ್ಲಿ ಕೌರವರೇ ಎಲ್ಲ
> ಯಾವ ಕೃಷ್ಣನೂ ಕಾಯಲಿಲ್ಲ ನಿನ್ನ ರಾಮನೂ ಬರಲಿಲ್ಲ
> ಬಂದವರು ಪೋಲೀಸರು. ಯಮುನ ಜೈಲಿನಲ್ಲಿ
> ಅವನ ಹೆಂಡತಿ ಮಾವನ ಸೂಳೆತನದಲ್ಲಿ
> ಎಲ್ಲವೂ ನೀ ಬದುಕಿ ಸತ್ತ ನಾಡಿನಲ್ಲಿ [೬೦]

ಬಡವರು, ಅಸ್ಪೃಶ್ಯರು ಮತ್ತು ಹೆಣ್ಣಿನ ಮೇಲಿನ ಜಮೀನ್ದಾರೀ ವ್ಯವಸ್ಥೆಯ ಕ್ರೌರ್ಯಗಳು ಇಂದಿನ ರಾಜಕಾರಣದಲ್ಲೂ ಮುಂದುವರೆದಿರುವುದರ ಕರಾಳ ಚಿತ್ರಣ ಇದು. ಶೋಷಕ ಶಕ್ತಿಗಳ ಹಿಡಿತದಲ್ಲೆ ಅಧಿಕಾರ ಮತ್ತು ನ್ಯಾಯಗಳು ಕೇಂದ್ರೀಕೃತವಾಗಿರುವುದರ ವಿರುದ್ಧದ ವಿಡಂಬನೆ ಇಲ್ಲಿದೆ. ಮುಂದುವರಿದು ಕವಿತೆಗಳು ಗಾಂಧಿ ಬದುಕಿದ, ಪ್ರತಿಪಾದಿಸಿದ ಸರಳತೆಯ ತತ್ವ ಇಂದು ಲೇವಡಿಗೆ ಒಳಗಾಗುತ್ತಿರುವುದನ್ನು, ಸರಳತೆ ಎಂಬುದು ಕೇವಲ ತೋರಿಕೆಯ ಪ್ಯಾಷನ್ ಮಟ್ಟಕ್ಕೆ ಇಳಿದುಬಿಟ್ಟಿರುವುದನ್ನು ತೀವ್ರವಾಗಿ ವಿಡಂಬಿಸಿದೆ. ಖಾದಿ ತೊಡುವುದೇ ಸರಳತೆ ಎಂಬಷ್ಟರ ಮಟ್ಟಿಗೆ 'ಸರಳತೆ' ತನ್ನ ಅರ್ಥವನ್ನು ಸರಳಗೊಳಿಸಿಕೊಂಡಿದೆ. ಗಾಂಧೀತತ್ವದ ಸರಳತೆ ಅನುಸರಿಸುವ ಕಷ್ಟವಾಗಿಯೂ, ಪ್ರಚಾರದ ಸಾಧನವಾಗಿಯೂ ಕಂಡುಬರುತ್ತಿದೆ. "ಗಾಂಧೀತತ್ವದಲ್ಲಿರುವ ಜೀವನದ ಸರಳತತ್ವ ಮತ್ತು ಅದರ ಸರಳ ಆರ್ಥಿಕತೆ ಇವುಗಳು ಪ್ರಪಂಚದ ಬಹುತೇಕ ಜನರನ್ನು ಆಕರ್ಷಿಸಿಲ್ಲ. ಅಲ್ಪ ಸಂಖ್ಯೆಯಲ್ಲಿರುವ ಪರಿಣತರೆನಿಸಿಕೊಂಡವರೂ ಕೂಡ ಇದನ್ನು ಅರಿಯಲು ಪ್ರಯತ್ನಿಸಿದಂತಿಲ್ಲ. ಹಿಂದುಳಿದ ಜನರ ಪಾಲಿಗೆ ಇದು ಅಣಕವಾಗಿ ಕಂಡರೆ, ಮುಂದುವರಿದವರಿಗೆ ತಮಾಷೆಯಾಗಿ ತೋರುತ್ತದೆ. ಆದಾಗ್ಯೂ ಸರಳವಾಗಿ ಬದುಕುವುದು ತನ್ನಷ್ಟಕ್ಕೆ ತಾನೇ ಒಂದು ಕ್ರಾಂತಿಯಾಗಿದೆ, ಏಕೆಂದರೆ ಇದು ಪ್ರಚಲಿತವಿರುವ ಅಭಿರುಚಿ ಮತ್ತು ಆರ್ಥಿಕ ವ್ಯವಸ್ಥೆಗೆ ವಿರುದ್ಧವಾಗಿದೆ. ಪದಾರ್ಥಗಳ ಹೆಚ್ಚಳ ಮತ್ತು ಬೇಕುಗಳು ಕಡಿಮೆಯಾಗುವ ಸ್ಥಿತಿಯ ಚಿತ್ರವನ್ನು ಕಲ್ಪಿಸಿಕೊಳ್ಳುವುದು ಒಂದು ತರಹದಲ್ಲಿ ಅಸಹಜ ಅನ್ನಿಸಿದರೂ, ಪೂರ್ಣಜೀವನ ನಡೆಸುವವರು ಇವೆರಡರ ನಡುವೆ ಹೊಂದಾಣಿಕೆಯನ್ನು ಸಾಧಿಸಬೇಕಾದದ್ದು ಅನಿವಾರ್ಯವಾಗಿದೆ."[೬೧] ಲೋಹಿಯಾರ ಈ ಅಭಿಪ್ರಾಯಗಳು ಗಾಂಧಿಯ ಸರಳತತ್ವದ ಅನಿವಾರ್ಯತೆ, ಮಹತ್ವ ಮತ್ತು ವರ್ತಮಾನದಲ್ಲಿ ಅದನ್ನು ಪಾಲಿಸಲಾಗದ ಇಕ್ಕಟ್ಟನ್ನು ಚರ್ಚಿಸುತ್ತವೆ. ಮೇಲಿನ ಕವಿತೆ ಇದನ್ನು ಪ್ರಸ್ತಾಪಿಸುತ್ತಿದೆಯಾದರೂ ಅದನ್ನು ಎಲ್ಲಾ ಆಯಾಮಗಳಿಂದ ಚರ್ಚಿಸುವುದಿಲ್ಲ. ವರ್ತಮಾನದಲ್ಲಿ ಸರಳತೆಯೆಂಬುದು ಕೇವಲ ಬಾಯಿಮಾತಿನದಾಗಿರುವುದನ್ನು ಲೇವಡಿ ಮಾಡುತ್ತದೆ. ಇಂದು ಸರಳತೆ

ಪಡೆದುಕೊಳ್ಳುತ್ತಿರುವ ವ್ಯಾಖ್ಯಾನದ ಬಗೆಗಿನ ವ್ಯಂಗ್ಯ ಕವನಗಳಲ್ಲಿ ವ್ಯಕ್ತವಾಗಿದೆ. ಗಾಂಧಿ ಬದುಕಿನ ಮೌಲ್ಯಗಳು ಹೀಗೆ ಸಮಕಾಲೀನ ಬದುಕಿನಲ್ಲಿ ಮತ್ತು ರಾಜಕಾರಣದಲ್ಲಿ ಮಹತ್ವ ಕಳೆದುಕೊಳ್ಳುತ್ತಾ, ಅಪವ್ಯಾಖ್ಯಾನಗಳಿಗೆ ಒಳಗಾಗುತ್ತಾ ಇರುವುದನ್ನು ಕಂಡ ನೈತಿಕ ಮನಸ್ಸುಗಳು ಸಹಜವಾಗಿಯೇ ವ್ಯವಸ್ಥೆಯ ಬಗೆಗೆ ಆಕ್ರೋಶ, ಸಿಟ್ಟನ್ನು ವ್ಯಕ್ತಪಡಿಸುತ್ತವೆ.

ಗಾಂಧಿ ಮತ್ತೊಮ್ಮೆ ಈ ನಾಡಿನಲ್ಲಿ ಹುಟ್ಟಿಬರಬೇಕೆಂಬ ಕೋರಿಕೆ, ಹಂಬಲಗಳು ಕೇಳಿಬರುತ್ತಿವೆ. ಒಂದು ವೇಳೆ ಗಾಂಧಿ ಇಲ್ಲಿ ಹುಟ್ಟಿಬಂದರೆ ಅಥವಾ ರಾಜಘಾಟಿನ ಸಮಾಧಿಯಿಂದ ಎದ್ದು ಬಂದರೆ ದೇಶದ ಜನ ನಡೆಸಿಕೊಳ್ಳಬಹುದಾದ ರೀತಿ, ಗಾಂಧಿ ಅನುಭವಿಸಬಹುದಾದ ಸಂಕಟಗಳು ಹೇಗಿರಬಹುದು ಎಂಬುದರ ವಿಡಂಬನೆಯನ್ನು ಮಾಧವಿ ಭಂಡಾರಿ ಅವರ 'ಗಾಂಧಿ ಜನ್ಮದಿನದಂದು' ಮತ್ತು ಅನ್ನದಾನಿ ಹೀರೇಮಠ ಅವರ 'ಗಾಂಧಿ' ಕವಿತೆಗಳು ಮಾಡುತ್ತವೆ. ಗಾಂಧಿ ಬಗೆಗಿನ ತೋರಿಕೆಯ ಹಂಬಲಗಳನ್ನು ವ್ಯಂಗ್ಯವಾಡಲಾಗಿದೆ. ಗಾಂಧಿ ಹುಟ್ಟಿಬಂದರೆ ಎದುರಿಸಬೇಕಾದ ರಾಜಕಾರಣದ ಒತ್ತಡಗಳನ್ನೂ, ಸಮಾಧಿಯಿಂದ ಎದ್ದು ಬಂದರೆ ಅನುಭವಿಸಬೇಕಾದ ಹಿಂಸೆಯನ್ನೂ ಕವಿತೆ ಊಹಿಸುತ್ತದೆ. ಸಮಾಕಾಲೀನ ರಾಜಕಾರಣ ತಲುಪಿರುವ ಅಮಾನವೀಯ ಹಂತದ ವಿಡಂಬನೆ ಇದು.

ಒಮ್ಮೆ ಹುಟ್ಟಿ ಬಂದಾದರೂ
ನೋಡಿಬಿಡು ಗಾಂಧಿ!
ಗ್ಯಾರಂಟಿ ಮತ್ತೆ
ಗುಂಡೇ ಇಡುವೆವು.
ನಿನ್ನ
ಇದ್ದಾಗ ಸಾಯಿಸಬೇಕೆನಿಸುತ್ತಿತ್ತು
ಈಗ
ಸತ್ತಾಗ ಬದುಕಿಸಬೇಕೆನಿಸುತ್ತದೆ
ಗಾಂಧಿ.[೨]

ಗಾಂಧಿ ಹುಟ್ಟಬೇಕೆಂಬ ಬಯಕೆಯೂ ರಾಜಕೀಯ ಪ್ರೇರಿತ. ಅದು ಮನಸ್ಸಿನಾಳದ ತೀವ್ರ ಬಯಕೆಯಿಂದ ಬಂದ ಹಂಬಲವಲ್ಲ. ಒಂದು ವೇಳೆ ಗಾಂಧಿ ಹುಟ್ಟಿ ಬಂದರೆ ಸಮಕಾಲೀನ ರಾಜಕಾರಣ ತನ್ನ ಉಳಿವಿಗಾಗಿ ಗಾಂಧಿಗೆ ಗುಂಡಿಡುವುದು ಖಂಡಿತ. ಈ ದೇಶದ ರಾಜಕಾರಣ ತಲುಪಿರುವ ದುಸ್ಥಿತಿಯ ವಿಡಂಬನೆ ಇದು.

ಮೂಡ್ನಾಕೂಡು ಚಿನ್ನಸ್ವಾಮಿಯವರ 'ಗಾಂಧಿ ಇದಿದ್ದರೆ' ಕವಿತೆ ಈ ನಾಡಿನಲ್ಲಿ ನಡೆಯುತ್ತಿರುವ ಜಾತಿ ಹಿಂಸೆಯ ಕ್ರೌರ್ಯಗಳನ್ನು, ಅದನ್ನು ಪೋಷಿಸುತ್ತಿರುವ ರಾಜಕಾರಣವನ್ನು ಪ್ರತಿರೋಧಿಸಲು ಗಾಂಧಿಯನ್ನು ಬಳಸಿಕೊಂಡಿದೆ.

ಇಂದು ನೀನಿದ್ದರೆ
ಬೆಂಡಿಗೇರಿಯಲ್ಲಿ ನಿನ್ನ
'ಗುಂಡಿಗೆ'ವಿಲವಿಲ ಒದ್ದಾಡಿ ಚೀತ್ಕರಿಸುತ್ತಿತ್ತು
ತತ್ತೂರಿನಲ್ಲಿ ನಿನ್ನ
ಕಣ್ಣುಗಳು ನೆತ್ತರಕಾರಿ ಸಾವ ಕೂಗುತ್ತಿದ್ದವು
ನಿನ್ನ ಆತ್ಮ
ಈ ನರ ಬೇತಾಳಗಳ ಕರಾಳ ಕ್ರೌರ್ಯಕ್ಕೆ ತತ್ತರಿಸಿ
ತನ್ನ ಅಸಹಾಯಕತೆಗೆ ನೊಂದು ನೇಣು ಹಾಕಿಕೊಳ್ಳುತ್ತಿತ್ತು.
ನೋಡಿದೆಯಾ ಗಾಂಧಿ
ನಿನ್ನ ತಾಯ್ನಾಡ ಸಂಜಾತ ಮಲ ತಿನ್ನಿಸುವ ಮಂದಿ?[೩]

ಜಾತಿ ಶೋಷಣೆ, ಮಲ ತಿನ್ನಿಸುವ, ಮಲ ಹೊರಿಸುವ ಹೀನ ಕೃತ್ಯಗಳು ಇನ್ನೂ ಜೀವಂತವಾಗಿರುವುದನ್ನು, ಒಂದು ವೇಳೆ ಗಾಂಧಿ ಇಂದು ಬದುಕಿದ್ದು ನೋಡಿದ್ದಿದ್ದರೆ ಆ ಜೀವ ಎಷ್ಟು ನೋವಿನಿಂದ ಚೀತ್ಕರಿಸುತ್ತಿತ್ತು ಎಂಬುದನ್ನು ಈ ಕವಿತೆ ಹಿಡಿದಿಟ್ಟಿದೆ. ಇವೆಲ್ಲವೂ 'ಗಾಂಧಿ' ನಾಡಿನಲ್ಲೇ ಗಾಂಧಿ ಹೆಸರು ಹೇಳಿಕೊಂಡು ಅಧಿಕಾರ ಹಿಡಿದವರ ನಡುವೆಯೇ ನಡೆಯುತ್ತಿರುವ ಕೃತ್ಯಗಳಾಗಿವೆ

ಸ್ವಾತಂತ್ರ್ಯಾ ನಂತರದ ಭಾರತದ ಸಾಮಾಜಿಕ, ರಾಜಕೀಯ, ಆರ್ಥಿಕ ಪರಿಸ್ಥಿತಿಗಳು ಅಷ್ಟೇನೂ ಉತ್ತಮವಾಗಿಲ್ಲ. ಗಾಂಧಿಯ ಗಾಢ ಪ್ರಭಾವ ಮಸುಕಾಗಿ ಗಾಂಧಿ ಅನುಯಾಯಿಗಳೇ ಗಾಂಧಿ ತತ್ವಗಳಿಗೆ ವಿರುದ್ಧವಾಗಿ ನಡೆದುಕೊಂಡರು. ರಾಜಕಾರಣ ತನ್ನ ಮೌಲ್ಯವನ್ನು ಕಳೆದುಕೊಂಡು ಅನೈತಿಕತೆ, ಭ್ರಷ್ಟತೆಯಲ್ಲಿ ಮುಳುಗಿಹೋಗಿ ಜನರ ಸ್ಥಿತಿ ಚಿಂತಾಜನಕವಾಗಿಯೇ ಮುಂದುವರಿದಿದೆ. ಇದಕ್ಕೆ ಗಾಂಧಿತತ್ವಗಳ ಹೊಣೆಕಾರಿಕೆ ಎಷ್ಟು ? ಆನಂತರದ ರಾಜಕಾರಣದ ಹೊಣೆ ಎಷ್ಟು? ಗಾಂಧಿವಾದಿಗಳು ಎಷ್ಟು ಕಾರಣ ಎಂಬುದನ್ನು ವಿವೇಚಿಸಬೇಕಿದೆ. "ಸ್ವಾತಂತ್ರ್ಯ ಬಂದ ನಂತರ ದೇಶದ ಜನತೆಗೆ ಒದಗಿರುವ ಪರಿಸ್ಥಿತಿಯ ಕತೆ ಬ್ರಿಟೀಷರು ಭಾರತಕ್ಕೆ ಅಧಿಕಾರ ಹಸ್ತಾಂತರಿಸುವಾಗಿನ ಸಂದರ್ಭದಲ್ಲಿ ನಡೆದ ಸಂಗತಿಗಳಷ್ಟೇ ಕರುಣಾಜನಕ ಕತೆಯಾಗಿದೆ. ಬಹುಜನರ ಮೇಲೆ ಕೆಲವೇ ಜನರು ನಡೆಸುವ ಶೋಷಣೆಯನ್ನು ಪ್ರತಿಭಟಿಸದೆ ಸುಮ್ಮನೆ ಕಾಲಹರಣ ಮಾಡುವ ಮಟ್ಟಕ್ಕೆ ಗಾಂಧೀಜಿಯವರ ಅನುಯಾಯಿಗಳು ಇಳಿದಿದ್ದಾರೆ. ಇದಕ್ಕೆ ಗಾಂಧೀಜಿಯವರ ಕಾರ್ಯಕ್ರಮವಾದಿ ಉದಾರವಾದವೆಷ್ಟು ಕಾರಣ ಅಥವಾ ಒಂದು ರಾಷ್ಟ್ರದ ಜನರ ನಡಾವಳಿಯಲ್ಲಿನ ಪತನ ಎಷ್ಟು ಕಾರಣ ಎಂಬುದರ ಬಗ್ಗೆ ಈ ಯುಗ ಪೂರ್ತಿಯಾಗಿ ಸರಿದು ಹೋದಾಗ ಮಾತ್ರ ಸರಿಯಾಗಿ ವಿವರಿಸಬಹುದು"[೨೪] ಲೋಹಿಯಾರ ಈ ಮಾತುಗಳು ಸ್ವಾತಂತ್ರ್ಯಾ ನಂತರದ ಭಾರತದ ಪರಿಸ್ಥಿತಿಯನ್ನು, ಅದರ ಕಾರಣಗಳನ್ನು ಗಾಂಧಿತತ್ವಗಳ ಹಿನ್ನೆಲೆಯಲ್ಲಿ ಚರ್ಚಿಸಲು ಪ್ರಯತ್ನಿಸಿವೆ. ಹೀಗೆ ಗಾಂಧಿಯ ಮೂಲಕ ಗಾಂಧಿ ನಂತರದ ಭಾರತದ ಸ್ಥಿತಿಯನ್ನು ಅರಿಯುವ ಅನಿವಾರ್ಯತೆ ಇದೆ. ಈ ಪ್ರಯತ್ನಗಳು ಗಾಂಧಿತತ್ವಗಳ ಮಹತ್ವವನ್ನು ಮನವರಿಕೆ ಮಾಡಿಕೊಡುತ್ತವೆ. ಗಾಂಧಿಯನ್ನು ಕುರಿತ ಕವಿತೆಗಳು ಈ ಪ್ರಯತ್ನದಲ್ಲಿ ತೊಡಗಿರುವುದನ್ನು ಕಾಣಬಹುದು. ಗಾಂಧಿ ಬದುಕು ಮತ್ತು ತತ್ವಗಳು ಸಮಕಾಲೀನ ಸಮಾಜ ಮತ್ತು ರಾಜಕೀಯದಲ್ಲಿ ಅರ್ಥ ಕಳೆದುಕೊಂಡಿವೆ. ಸತ್ಯ, ಅಹಿಂಸೆಗಳು ಬೆಲೆ ಕಳೆದುಕೊಂಡು, ಅವುಗಳನ್ನು ಪಾಲಿಸುವವರನ್ನು ಹುಚ್ಚರಂತೆ ಕಾಣಲಾಗುತ್ತಿದೆ. ಮೌಲ್ಯಗಳನ್ನು ನಂಬಿ ಬದುಕುವ ಕಾಲವನ್ನು ಕಳೆದುಕೊಂಡಿದ್ದೇವೆ ಎಂಬ ವಿಷಾದ ಕವಿತೆಗಳಲ್ಲಿ ಮೇಲಿಂದ ಮೇಲೆ ವ್ಯಕ್ತವಾಗಿದೆ. ಸತ್ಯದ ಹಾದಿಯಲ್ಲಿ ಬದುಕುವುದು, ಸತ್ಯಕ್ಕಾಗಿ– ನ್ಯಾಯಕ್ಕಾಗಿ ಹೋರಾಡುವುದು ನಮ್ಮ ನರಕವನ್ನು ನಾವೆ ತಂದುಕೊಂಡಂತೆ ಎಂಬ ಕಾಲಘಟ್ಟದಲ್ಲಿ ಬದುಕುತ್ತಿದ್ದೇವೆ. ರಾಜಕಾರಣ ಅಷ್ಟು ನೀಚ ಮಟ್ಟಕ್ಕೆ ಇಳಿದಿದೆ ಎಂಬುದರ ವಿಡಂಬನೆಯನ್ನು ಎಲ್.ಎನ್. ಮುಕುಂದರಾಜ ಅವರ 'ಪ್ರಿಯ ಗಾಂಧಿ' ಕವಿತೆ ಮಾಡಿದೆ. ಜೊತೆಗೆ ಗಾಂಧಿ ಸಾವನ್ನು ಸಮರ್ಥಿಸುವ, ಸಂಭ್ರಮಿಸುವ, ಗೋಡ್ಸೆಯನ್ನು ಮುನ್ನೆಲೆಗೆ ತರುವ ವಿಚಿತ್ರ ಸನ್ನಿವೇಶ ನಿರ್ಮಾಣವಾಗಿದೆ. ಗಾಂಧಿಯನ್ನು ನಿತ್ಯ ಅವಮಾನಿಸುವ ಪ್ರಯತ್ನಗಳು ಅವರನ್ನು ಮತ್ತೆ ಮತ್ತೆ ಕೊಲ್ಲುತ್ತಿವೆ. ಗಾಂಧಿ ತತ್ವಗಳನ್ನು ಗಾಳಿಗೆ ತೂರಿ ಗಾಂಧಿ 'ಹೆಸರು', 'ಪ್ರತಿಮೆ'ಗಳ ಹಿಂದೆ ಬೀಳಲಾಗುತ್ತಿದೆ. ಜನರ ನೆಮ್ಮದಿಯನ್ನು ಕಿತ್ತುಕೊಂಡು ಯಾವ ಯಾವುದನ್ನೋ ಪ್ರಗತಿ ಎಂದು ಬಿಂಬಿಸಲಾಗುತ್ತಿದೆ. ಅಧಿಕಾರದಾಸೆಗಾಗಿ ಜನರ ಅಜ್ಞಾನ, ಮೌಢ್ಯಗಳನ್ನು ಪೋಷಿಸುವ ಹುನ್ನಾರಗಳು ನಡೆಯುತ್ತಿವೆ. ಇವೆಲ್ಲವನ್ನು ಕವಿತೆಗಳು ವಿಡಂಬಿಸುವ ಪ್ರಯತ್ನ ಮಾಡಿವೆ.

'ಸತ್ತರೆ ಗಾಂಧಿ' ಎಂದತ್ತ ಅಪ್ಪನ ಜೊತೆಯೆ
ಹಂಚಿ ಸಕ್ಕರೆ ಬೂಂದಿ ಸಂತೋಷಪಟ್ಟವರ
ಸಭೆಯಲ್ಲಿ ಕೈ ಕುಲುಕಿ ಸಮಾನತ್ವ ನಟಿಸಿ
ಮನೆಯಲ್ಲಿ ನೀರೆರೆದುಕೊಂಡು ಮಡಿಯಾದವರ
ಹಡಾಸುಬಂಡಿಯಾಚಾರಕ್ಕೆ ಜೆಟ್ ಬುದ್ಧಿ ಹೊಂದಿಸಿ
ಪ್ರಗತಿ ಕನಸುತ್ತಿರುವ ಮಹಾನುಭಾವರ [೫೫]

ಗಾಂಧಿಯನ್ನು ಕೊಂದು ಸಂಭ್ರಮಿಸುವ ರಾಜಕಾರಣಗಳು ನಿತ್ಯವೂ ನಡೆಯುತ್ತಿವೆ. ಗಾಂಧಿ ಕನಸುಗಳನ್ನು ಜನರಿಂದ ಮರೆಸಿ ಜನರಲ್ಲಿ ಬೇರೆಯದೇ ಕನಸು ತುಂಬಿ ನರಕ ಸೃಷ್ಟಿಸಲಾಗುತ್ತಿದೆ. ರಾಜಕಾರಣ ನಟನೆಯ ಮಟ್ಟಕ್ಕೆ ಇಳಿದಿರುವುದನ್ನು ಈ ಕವಿತೆ ವ್ಯಂಗ್ಯವಾಡಿದೆ.

ನೀನು ಅಮರನಾದದ್ದೇ ತಪ್ಪು ಮಹಾತ್ಮ,
ಒಂದೇ ಬಾರಿಗೆ ಸಾಯುತ್ತಿದ್ಯಲ್ಲೋ ಪುಣ್ಯಾತ್ಮ!
ಈಗ ನೋಡಿದೆಯಾ
ನಿನ್ನ ಕೊಲೆಗಾಗಿ ಅನುದಿನವೂ
ಅನುಕ್ಷಣವೂ ನಡೆಸಿದ್ದಾರೆ
ಘೋರ ಹತ್ಯೆಯ ಸಂಚು!
ನೀ ಸಾಯಲಾರೆ; ಅವ ಬಿಡಲಾರ.[೬]

ಗಾಂಧಿಯದು ಕಾಲಾತೀತ ವ್ಯಕ್ತಿತ್ವ ಎಂದು ಹೇಳುತ್ತಲೇ ಆ ವ್ಯಕ್ತಿತ್ವವನ್ನು ಇಲ್ಲವಾಗಿಸುವ ರಾಜಕಾರಣಗಳ ನಡೆಯನ್ನು ವಿಡಂಬಿಸುವ ಪ್ರಯತ್ನವನ್ನು ಕವಿತೆ ಮಾಡಿದೆ. ಗಾಂಧಿ ವ್ಯಕ್ತಿತ್ವಕ್ಕೆ ಚ್ಯುತಿ ತರುವ, ಗಾಂಧಿ ತತ್ವಗಳನ್ನು ಗಾಳಿಗೆ ತೂರುವ, ಗಾಂಧಿಯ ಹೆಸರು–ವಿಚಾರಗಳನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ, ಪ್ರವೃತ್ತಿಗಳನ್ನು ಹಾಗೂ ಸಮಕಾಲೀನ ಸಮಾಜ ಮತ್ತು ರಾಜಕಾರಣದ ನೈತಿಕ ಭ್ರಷ್ಟತೆಯನ್ನು ಪ್ರತಿರೋಧಿಸುವ ದನಿಗಳಾಗಿ ಕವಿತೆಗಳು ಹೊಮ್ಮಿವೆ. ಗಾಂಧಿ ನಂತರದ ಭಾರತದ ಇತಿಹಾಸದಲ್ಲಿ ಗಾಂಧಿ ತತ್ವಗಳಿಗಿರುವ ನೆಲೆ ಬೆಲೆಗಳನ್ನು ಕುರಿತ ಒಂದು ಸುಧೀರ್ಘ ಸಂವಾದವನ್ನು ಕವಿತೆಗಳು ನಡೆಸಿವೆ. ಗಾಂಧಿ ಮುಖಾಂತರ ದೇಶದ ಸಮಸ್ಯೆಗಳ ಸ್ವರೂಪಗಳನ್ನೂ, ಅವುಗಳ ಕಾರಣಗಳನ್ನೂ ಹುಡುಕುವ ಪ್ರಯತ್ನ ಮಾಡಲಾಗಿದೆ. ಭಾರತೀಯರಲ್ಲಿನ ನೈತಿಕ ಭ್ರಷ್ಟತೆ, ಅರಾಜಕತೆ, ಮೌಲ್ಯಗಳ ಬಗೆಗಿನ ನಿರಾಸಕ್ತಿ ಮುಂತಾದ ಸ್ವಭಾವಗಳು ಇಂದಿನ ಸಮಸ್ಯೆಗಳಂತೆ ತೋರಿದರೂ ಅವುಗಳ ಮೂಲಬೇರುಗಳು ಈ ದೇಶದ ಪರಂಪರೆಯಲ್ಲೇ ಅಡಗಿವೆ. ಇದನ್ನು ಲೋಹಿಯಾ ಸಮರ್ಥವಾಗಿ ಗುರುತಿಸುತ್ತಾರೆ. "ಪ್ರಾಯಶಃ ರೋಗದ ಬೇರುಗಳು ಇನ್ನೂ ಆಳಕ್ಕೆ ಇಳಿದಿವೆ. ಅನೇಕ ಶತಮಾನಗಳ ಎರಕ ಇದರಲ್ಲಿದೆ. ಭಾರತೀಯರಷ್ಟು ಧೀರ್ಘಕಾಲ ಯಾವ ದೇಶದ ಜನರೂ ಸಹ ಸ್ವತಂತ್ರ ಪ್ರಭುತ್ವವನ್ನು ಕಳೆದುಕೊಂಡದ್ದಿಲ್ಲ. ಸಾಮೂಹಿಕ ಅನೈತಿಕತೆ ಎನ್ನುವುದು ಭಾರತೀಯರ ನಡವಳಿಕೆಯ ಒಂದು ಭಾಗವಾಗಿದೆ ಮತ್ತು ಇದು ಹೀಗೆ ಶಾಶ್ವತವಾಗಿ ಮುಂದುವರಿದುಬಿಡುತ್ತದೆಯೇನೋ ಎಂದು ದಿಗಿಲೂ ಆಗುತ್ತದೆ. ಭಾರತದ ಆಳುವ ವರ್ಗದವರು ಶತಶತಮಾನಗಳಿಂದ ರಾಜಿಮನೋಭಾವದ ಅನುಪಮ ಕೌಶಲ್ಯವನ್ನು ಆವಿಷ್ಕರಿಸಿಕೊಂಡಿದ್ದಾರೆ. ದೇಶಕ್ಕೆ ಬರುವ ಬಲಶಾಲಿ ಶಕ್ತಿಗಳೊಡನೆಯೂ ಅವರು ರಾಜಿ ಮಾಡಿಕೊಂಡುಬಿಡುತ್ತಾರೆ. ಭಾರತೀಯರ ಹಾಗೆ ಹಾಗೂ ಅವರಷ್ಟು ಕಾಲ ಯಾವ ದೇಶದ ಜನರೂ ಅನಾಸಕ್ತರಾಗಿ ಆಲಸ್ಯಕ್ಕೆ ಒಳಗಾದ ಉದಾಹರಣೆ ಇಲ್ಲ. ಈ ದೇಶದ ಜನರು ಮತ್ತು ದೇಶೀಯ ಆಳುವ ವರ್ಗದವರು ಸಾಮೂಹಿಕ ಗೊಬ್ಬರದ ಗುಂಡಿಯಲ್ಲಿ ಕತ್ತಿನಮಟ್ಟ ಮುಳುಗಿಯೂ ಪೂರ್ತಿ ಮುಳುಗದಿರುವುದನ್ನು ನೋಡಿದರೆ ಇದೊಂದು ಪವಾಡದಂತೆಯೇ ತೋರುತ್ತದೆ........ ಪ್ರಸ್ತುತ ಚರ್ಚೆಗೆ ಮುಖ್ಯವಾದದ್ದು ಭಾರತೀಯರ ಹೊಂದಾಣಿಕೆ ಮತ್ತು ಆಲಸ್ಯಪ್ರವೃತ್ತಿ, ಗಾಂಧೀಜಿಯವರ ಕ್ರಾತಿಕಾರೀ ಆಲೋಚನೆಗಳು ಮತ್ತು

ವಿಧಾನಗಳು ಈ ಹೊಂದಾಣಿಕೆ ಮತ್ತು ಆಲಸ್ಯದ ಕೂಪದಲ್ಲಿ ಕಾರ್ಯಪ್ರವೃತ್ತವಾಗಬೇಕಾಯಿತು. ಈ ದೇಶದ ಹಾಗೂ ವಿದೇಶದ ಕೆಲ ಉದಾರಮನಸ್ಕರು ಹಾಗೂ ಅಜ್ಞಾನಿಗಳು ಈ ದಾಸ್ಯಮನೋಭಾವ ಹಾಗೂ ಜಡತೆಯನ್ನು 'ಸಮನ್ವಯ ಸಾಧಿಸುವ ಪ್ರತಿಭೆ' ಎಂದು ಕರೆದಿದ್ದಾರೆ. ಆಕ್ರಮಣಕಾರನಿಗೆ ಹತ್ತಿರವಾಗುವ ಸಲುವಾಗಿ ನವೀನವಾದ ಅಂಶಗಳನ್ನು ಹಾಗೂ ವಿದೇಶಿ ತತ್ವಗಳನ್ನು ಸ್ವೀಕರಿಸುವುದು ಹಾಗೂ ವಿಜೇತರನ್ನು ಕುರುಡಾಗಿ ಅನುಕರಿಸುವುದು ದಾಸ್ಯ ಮನೋಭಾವದ ಅಥವಾ ಹೀನ ಬದುಕಿನ ಸಂಕೇತಗಳಾಗಿವೆ.........ಶರಣಾಗತಿ ಮತ್ತು ಸಮನ್ವಯದ ನಡುವಿನ ವ್ಯತ್ಯಾಸವನ್ನು ತಿಳಿಯಲು ಸಾಧ್ಯವಾದಾಗ ಗಾಂಧೀತತ್ವದ ನಿಜವಾದ ಅರಳುವಿಕೆ ಸಾಧ್ಯವಾಗಬಹುದು".[೬೭] ಗಾಂಧಿ ತತ್ವಗಳನ್ನು ಮರೆತಿರುವ ಮತ್ತು ಅನುಸರಿಸುವಲ್ಲಿ ತೋರುತ್ತಿರುವ ಆಲಸ್ಯ ಹಾಗೂ ಈ ದೇಶದ ಸಾಮೂಹಿಕ ಅನೈತಿಕತೆಯ ಮೂಲವನ್ನು ಲೋಹಿಯಾ ಗುರುತಿಸಿದ್ದಾರೆ. ಈ ದೇಶದ ಜನರ ನಿಜವಾದ ಸಮಸ್ಯೆಗಳನ್ನು ಚರ್ಚೆಗೊಳಪಡಿಸುವ ಮೂಲಕ ಗಾಂಧಿತತ್ವಗಳು ಹೇಗೆ ವಿಕೃತ ರಾಜಕಾರಣಕ್ಕೆ ಒಳಗಾಗಿ ಮಹತ್ವಕಳೆದುಕೊಂಡಿವೆ ಎಂಬುದನ್ನು ಲೋಹಿಯಾ ಸರಿಯಾಗಿಯೇ ಗುರುತಿಸಿದ್ದಾರೆ. ಗಾಂಧಿ ಕುರಿತ ಕವಿತೆಗಳೂ ಕೂಡ ಈ ನೆಲೆಯಲ್ಲಿ ದೇಶದ ರಾಜಕಾರಣದ ನೆಲೆಗಳನ್ನು, ಗಾಂಧಿತತ್ವಗಳನ್ನು ಮೂಲೆಗುಂಪು ಮಾಡುತ್ತಿರುವ ಪ್ರವೃತ್ತಿಗಳನ್ನು, ಜನರ ಪ್ರತಿಗಾಮೀ ಧೋರಣೆಗಳನ್ನು ಚರ್ಚೆಗೊಳಪಡಿಸುವ ಪ್ರಯತ್ನ ಮಾಡಿವೆ.

ಹೊಸಗನ್ನಡ ಕಾವ್ಯ ಗಾಂಧಿ ವ್ಯಕ್ತಿತ್ವವನ್ನೂ, ಸಮಕಾಲೀನ ಸಾಂಸ್ಕೃತಿಕ ಬದುಕನ್ನೂ ಪರಸ್ಪರ ಮುಖಾಮುಖಿಯಾಗಿಸಿ ಎರಡನ್ನೂ ಅರಿಯುವ ವಿಶಿಷ್ಟ ಕ್ರಮವನ್ನು ಅನುಸರಿಸಿದೆ. ಹೀಗೆ ಮುಖಾಮುಖಿಯಾಗಿಸುತ್ತಲೇ ಸಮಕಾಲೀನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟುವ ಕೆಲಸವನ್ನು ಮಾಡಿದೆ. ನಮ್ಮ ಬದುಕು, ಆಲೋಚನೆ, ಕ್ರಿಯೆಗಳು ಭ್ರಷ್ಟಗೊಂಡಿರುವುದನ್ನು ಎತ್ತಿ ತೋರಿಸುವ ಕೆಲಸ ಮಾಡಿದೆ. ಸಮಕಾಲೀನ ರಾಜಕಾರಣದ ನಡೆಗಳನ್ನು ಪ್ರತಿರೋಧಿಸುವ, ತಿದ್ದುವ, ಸರಿದಾರಿಗೆ ತರುವ ಹೊಣೆಗಾರಿಕೆಗಳನ್ನು ಹೊತ್ತಿರುವುದು ಕವಿತೆಗಳ ಅಭಿವ್ಯಕ್ತಿಯಿಂದ ಗೊತ್ತಾಗುತ್ತದೆ. ಗಾಂಧಿಯನ್ನು ನೆಪವಾಗಿಸಿಕೊಂಡು, ನೈತಿಕ ಪ್ರಜ್ಞೆಯಾಗಿಸಿಕೊಂಡು, ಎಲ್ಲ ಬಗೆಯ ವಿದ್ರೋಹದ ರಾಜಕಾರಣಗಳನ್ನು ಪ್ರತಿಭಟಿಸುವ ಹಾಗೂ ಸಮಾನತೆಯ, ಸೋದರತ್ವದ, ಸಹಬಾಳ್ವೆಯ, ಶಾಂತಿಯ ಹಾಗೂ ನೈತಿಕ ಸಮಾಜವನ್ನು ಕಟ್ಟುವ ಕನಸು ಕಾಣುವ ಮಾನವೀಯ ತುಡಿತಗಳಾಗಿ ಕವಿತೆಗಳು ಮೂಡಿಬಂದಿವೆ. ನಮ್ಮ ಪರಂಪರೆಯ ಮಾನವೀಯ ವ್ಯಕ್ತಿತ್ವಗಳನ್ನು ಹೀಗೆ ಶೋಧಿಸಿಕೊಳ್ಳುವ ಮೂಲಕ ಸಮಕಾಲೀನ ಸಾಂಸ್ಕೃತಿಕ ಬದುಕಿಗೆ ತಂದುಕೊಳ್ಳುವ, ಆ ವ್ಯಕ್ತಿತ್ವಗಳೆದುರು ತಮ್ಮನ್ನು, ತಾವು ಬದುಕುತ್ತಿರುವ ಸಾಂಸ್ಕೃತಿಕ ವಾತಾವರಣವನ್ನು ವಿಮರ್ಶೆಗೆ ಒಡ್ಡಿಕೊಳ್ಳುವ ಪ್ರಯತ್ನಗಳು ಸಾಹಿತ್ಯದ ಸೃಜನಶೀಲತೆಯನ್ನೂ, ಸಾಮಾಜಿಕ ಹೊಣೆಗಾರಿಕೆಯನ್ನೂ, ಅದರ ಜೀವಪರ ಕಾಳಜಿಗಳನ್ನು ಪ್ರತಿಬಿಂಬಿಸುತ್ತವೆ. ಹಾಗಾಗಿ ಗಾಂಧಿ ಕುರಿತ ಕವಿತೆಗಳಿಗೆ ಸಾಹಿತ್ಯಿಕವಾದ ಮಹತ್ವ ಅಷ್ಟೇ ಅಲ್ಲದೆ ಸಾಂಸ್ಕೃತಿಕ ಮಹತ್ವವೂ ಇದೆ.

ಗಾಂಧಿ ವ್ಯಕ್ತಿತ್ವದೊಂದಿಗೆ ದೊಡ್ಡ ಮಟ್ಟದಲ್ಲಿ ಸಂವಾದಿಸಿರುವ ಕವಿತೆಗಳು ಆ ವ್ಯಕ್ತಿತ್ವವನ್ನು ಅತ್ಯಂತ ಪ್ರಸ್ತುತವೆಂದು ಪ್ರತಿಪಾದಿಸುತ್ತಿವೆ. ಸಮಕಾಲೀನ ಸಮಸ್ಯೆಗಳ ವಿರುದ್ಧದ ಹೋರಾಟಗಳಿಗೆ ಶಕ್ತಿಯ ಮೂಲವನ್ನು ಗಾಂಧಿ ವ್ಯಕ್ತಿತ್ವದಿಂದ ಪಡೆದುಕೊಳ್ಳುವ ಪ್ರಯತ್ನಗಳಾಗಿಯೂ ಇವು ಕಂಡುಬರುತ್ತವೆ. ಗಾಂಧಿ ವ್ಯಕ್ತಿತ್ವವನ್ನು ಪಾವಿತ್ರೀಕರಿಸಿ ನೋಡುವ ಬಗೆಗಿರುವ ಆಸಕ್ತಿಗಳು ಆ ವ್ಯಕ್ತಿತ್ವವನ್ನು ನೈಜವಾಗಿ ಅರಿಯುವ ಹಾಗೂ ಅದರ

ಸ್ಫೂರ್ತಿಯಿಂದ ಹೋರಾಟಗಳನ್ನು ರೂಪಿಸುವ ಕಡೆಗೆ ಇಲ್ಲವಾಗಿದೆ. ಇದಕ್ಕೆ ಕಾರಣ ಗಾಂಧಿ ವ್ಯಕ್ತಿತ್ವವನ್ನು ಅರಿಯುವಲ್ಲಿ ನಾವು ಸೋತಿರುವುದೇ ಕಾರಣವಾಗಿದೆ. "ಒಂದೆಡೆ ನಾವು ಗಾಂಧಿಯನ್ನು ಪವಿತ್ರ ಪುತ್ಥಳಿಯನ್ನಾಗಿಸಿ ಅವರ ಪ್ರಾಣಹರಣ ಮಾಡಿದ್ದೇವೆ. ಇನ್ನೊಂದೆಡೆ ಅವರ ಜೀವನ ಪ್ರಯೋಗದ ನಿಜ ಪವಾಡಗಳಿಗೆ ಕುರುಡಾಗಿ ಮಾರುಕಟ್ಟೆಯ ಹಾವಾಡಿಗರಿಗೆ ನಮ್ಮನ್ನು ಮಾರಿಕೊಂಡಿದ್ದೇವೆ."[೮] ಅನಂತಮೂರ್ತಿಯವರ ಈ ಅಭಿಪ್ರಾಯ ಗಾಂಧಿಯನ್ನು ಗ್ರಹಿಸುವಲ್ಲಿ ನಾವು ತಪ್ಪಿರುವುದೆಲ್ಲಿ ಎಂಬುದನ್ನು ನಿಖರವಾಗಿ ಗುರುತಿಸುತ್ತದೆ. ಆ ವ್ಯಕ್ತಿತ್ವವನ್ನು ನಮ್ಮ ಸಂದರ್ಭದ ತುರ್ತುಗಳೊಂದಿಗೆ, ಮುಕ್ತವಾಗಿ ಗ್ರಹಿಸುವಲ್ಲಿ ವಿಫಲರಾಗಿದ್ದೇವೆ. ಆ ಚೈತನ್ಯವನ್ನು ಸಮಕಾಲೀನ ಅಗತ್ಯಗಳಿಗೆ ಹೇಗೆ ಬಳಸಿಕೊಳ್ಳಬೇಕು ಎಂಬ ವಿವೇಕವನ್ನು ಕಳೆದುಕೊಂಡಿದ್ದೇವೆ. ಇಲ್ಲವಾದರೆ ಈ ದೇಶದ ದೊಡ್ಡ ಚಿಂತಕನೊಬ್ಬನ ಬದುಕಿನ ಪ್ರಯೋಗಗಳು, ಚಿಂತನೆಗಳು ಕೇವಲ ಪುಸ್ತಕಗಳಲ್ಲಿ ಹಾಗೂ ಹೊಗಳಿಕೆಗೆ ಸೀಮಿತವಾಗಿ ಇರಬೇಕಾಗಿರಲಿಲ್ಲ.

ನವ್ಯ ಮತ್ತು ನವ್ಯೋತ್ತರ ಸಂದರ್ಭದ ಕೆಲವು ಕವಿತೆಗಳು ಗಾಂಧಿ ವ್ಯಕ್ತಿತ್ವದೊಂದಿಗೆ ಸಂಘರ್ಷಕ್ಕಿಳಿಯುವ ಮೂಲಕ ಆ ವ್ಯಕ್ತಿತ್ವವನ್ನು ಗ್ರಹಿಸುವ ಪ್ರಯತ್ನ ಮಾಡಿವೆ. ಆ ವ್ಯಕ್ತಿತ್ವದ ನೈತಿಕ ಶಕ್ತಿಯೊಂದಿಗೆ ಸಮಕಾಲೀನ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವ, ಕೇಡುಗಳನ್ನು ಎದುರಿಸುವ ಪ್ರಯತ್ನವನ್ನು ಮಾಡಿವೆ. ಸ್ವ ಮತ್ತು ಸಮಷ್ಟಿಯ ಅಂತರ್‌ಪ್ರಜ್ಞೆಯನ್ನು ರೂಪಿಸಿಕೊಳ್ಳುವ ಹಾಗೂ ಸಾಮಾಜಿಕ, ರಾಜಕೀಯ ವಿಡಂಬನೆ ಮಾಡುವಲ್ಲಿ ಗಾಂಧಿ ಎಂಬ ನೈತಿಕ ಶಕ್ತಿಯನ್ನು ಬಳಸಿಕೊಂಡಿವೆ. ಗಾಂಧಿ ಬದುಕಿನ ಪ್ರಯೋಗಗಳ ಮಹತ್ವವನ್ನು ಅವುಗಳ ಹಿಂದಿನ ಕಾಳಜಿಗಳನ್ನು, ಅವುಗಳನ್ನು ಅನುಸರಿಸುವಲ್ಲಿನ ಇಕ್ಕಟ್ಟುಗಳನ್ನು ಗಂಭೀರವಾಗಿ ವಿವೇಚಿಸಿವೆ. ಹಾಗೆಯೇ ಗಾಂಧಿಯನ್ನು ವಿಡಂಬಿಸುವ ಪ್ರಯತ್ನವನ್ನು ಮಾಡಿವೆ. ಒಟ್ಟಿನಲ್ಲಿ ಗಾಂಧಿ ಎಂಬ ಪ್ರಜ್ಞೆಯ ಮೂಲಕ ಸಮಕಾಲೀನ ಚರಿತ್ರೆಯ ನಡೆಯನ್ನು ಗುರುತಿಸುವ, ಪ್ರತಿರೋಧಿಸುವ, ಕೆಲಸವನ್ನು ಪ್ರಾಮಾಣಿಕವಾಗಿ ಮಾಡಿವೆ. ಈ ಬಗೆಯ ರಚನೆಗಳಿಗೆ ಸಾಂಸ್ಕೃತಿಕ ಮಹತ್ವವಿರುತ್ತದೆ. ಇವು ವ್ಯಕ್ತಿತ್ವವನ್ನು ಕೇವಲ ಹೊಗಳಿಕೆಯ ನೆಲೆಯಲ್ಲಿಯೇ ನೋಡದೆ ಸೂಕ್ಷ್ಮ ವಿಮರ್ಶೆಯನ್ನೂ ಮಾಡಿವೆ. "ಗಾಂಧಿಯನ್ನು ಪವಿತ್ರ ವಸ್ತುವೆಂಬಂತೆಯೋ, ಇಲ್ಲ ಗೊಡ್ಡು ಫಕೀರನಂತೆಯೋ ಕಾಣದೆ ನಮ್ಮೆಲ್ಲ ಭಿನ್ನಾಭಿಪ್ರಾಯಗಳನ್ನು ಅವರೆದುರು ಮುಕ್ತವಾಗಿ ಹೇಳಿಕೊಂಡು ಅವರೊಡನೆ ಸ್ನೇಹ ಸಂವಾದದಲ್ಲೋ, ಇಲ್ಲ ಉಗ್ರ ವಾಗ್ವದದಲ್ಲೋ ತೊಡಗುವುದರ ಮೂಲಕ ಮಾತ್ರ ನಾವು ಅವರ ಮಹತ್ವವನ್ನು ಮನಗಾಣಬಹುದು. ಅವರ ಸಾರ್ವಕಾಲಿಕ ಪ್ರಸ್ತುತತೆಯನ್ನು ಅರಿತುಕೊಳ್ಳಬಹುದು. ಇದುವೆ ನನ್ನ ದೃಷ್ಟಿಯಲ್ಲಿ ಗಾಂಧಿಯನ್ನು ಸಂಧಿಸುವ, ಅವರಿಗೆ ಸ್ಪಂದಿಸುವ, ಪ್ರಾಮಾಣಿಕವೂ, ಸೃಜನಶೀಲವೂ ಅರ್ಥಪೂರ್ಣವೂ ಆದ ಮಾರ್ಗ."[೯] ಅನಂತಮೂರ್ತಿಯವರ ಈ ಮಾತುಗಳು ಗಾಂಧಿ ವ್ಯಕ್ತಿತ್ವವನ್ನು ಗ್ರಹಿಸಬಹುದಾದ ನಿಜವಾದ ಮಾರ್ಗಗಳನ್ನು ತೋರಿಸುತ್ತವೆ. ಇವು ಗಾಂಧಿ ವ್ಯಕ್ತಿತ್ವ ಗ್ರಹಿಕೆಯಲ್ಲಾಗಿರುವ ತಪ್ಪುಗಳನ್ನು ಗುರುತಿಸುತ್ತಲೇ ನಿಜವಾದ ಗ್ರಹಿಕೆಯ ಕ್ರಮ ಯಾವುದು ಎಂಬುದರ ಕಡೆಗೆ ಗಮನವನ್ನು ಸೆಳೆಯುತ್ತವೆ. ಗಾಂಧಿ ಕುರಿತ ಕೆಲವಾದರೂ ಕವಿತೆಗಳು ಈ ಮಾರ್ಗವನ್ನು ಅನುಸರಿಸಿ ಗಾಂಧಿ ವ್ಯಕ್ತಿತ್ವದೊಂದಿಗೆ ಅನುಸಂಧಾನ ನಡೆಸಿವೆ ಎಂಬುದು ಆಶಾದಾಯಕ ವಿಚಾರ.

## ಕೊನೆ ಟಿಪ್ಪಣಿ

೧. ನನ್ನ ಸತ್ಯಾನ್ವೇಷಣೆ, ಮೋ. ಕ. ಗಾಂಧಿ, ಅನು. ಗೋರೂರು ರಾಮಸ್ವಾಮಿ ಅಯ್ಯಂಗಾರ್, ಪು. ಸಂ. ೨೧೭
೨. ಎದೆಗೆ ಬಿದ್ದ ಅಕ್ಷರ, ದೇವನೂರು ಮಹಾದೇವ, ಪು. ಸಂ. ೩೦೨
೩. ಅದೇ, ಪು. ಸಂ. ೩೦೦
೪. ಬರ್ಕವೈಟ್ ಕಂಡ ಗಾಂಧಿ, ಸಂಧ್ಯಾರೆಡ್ಡಿ, ಪು. ಸಂ. ೧೮
೫. ಅದೇ, ಪು. ಸಂ. ೧೮
೬. ಎದೆಗೆ ಬಿದ್ದ ಅಕ್ಷರ, ದೇವನೂರು ಮಹಾದೇವ, ಪು. ಸಂ. ೩೦೨
೭. ಅದೇ, ಪು. ಸಂ. ೩೦೫
೮. ಬರ್ಕ್‌ವೈಟ್ ಕಂಡ ಗಾಂಧಿ, ಸಂಧ್ಯಾ ರೆಡ್ಡಿ, ಪು. ಸಂ. ೫೫
೯. ಗಾಂಧಿ ಕಗ್ಗೊಲೆ ಕಾರಣ-ಪರಿಣಾಮ, ಕೋ. ಚನ್ನಬಸಪ್ಪ, ಪು .ಸಂ. ೧೧
೧೦. ಉದೃತ, ಭಾರತೀಯ ಸಾಹಿತ್ಯದಲ್ಲಿ ಗಾಂಧಿ, ಸಂ. ಹಾ. ಮಾ. ನಾಯಕ. ಪು. ಸಂ. ೭
೧೧. ಎದೆಗೆಬಿದ್ದ ಅಕ್ಷರ- ದೇವನೂರು ಮಹಾದೇವ, ಪು. ಸಂ. ೩೦೮
೧೨. ಬರ್ಕ್‌ವೈಟ್ ಕಂಡ ಗಾಂಧಿ, ಸಂಧ್ಯಾ ರೆಡ್ಡಿ, ಪು. ಸಂ. ೫೫
೧೩. ಅದೇ, ಪು. ಸಂ. ೫೫
೧೪. ಎದೆಗೆ ಬಿದ್ದ ಅಕ್ಷರ, ದೇವನೂರು ಮಹಾದೇವ, ಪು. ಸಂ. ೩೦೨
೧೫. ಗಾಂಧಿ ಎಂಬುವ ಹೆಸರು (ಸಂ.) ಚಂದ್ರಶೇಖರ ಪಾಟೀಲ, ಶಶಿಕಲಾ ವೀರಯ್ಯಸ್ವಾಮಿ, ಮುನ್ನುಡಿ, ಪು. ಸಂ. ೯
೧೬. ದಲಿತ ಬಂಡಾಯ ಕಾವ್ಯ ಮತ್ತು ವಿಚಾರವಾದಗಳು, ಪ್ರಹ್ಲಾದ್ ಅಗಸನಕಟ್ಟೆ, ಪು. ಸಂ. ೩೪೨
೧೭. ಗಾಂಧಿ ಎಂಬುವ ಹೆಸರು (ಸಂ.) ಚಂದ್ರಶೇಖರ ಪಾಟೀಲ, ಶಶಿಕಲಾ ವೀರಯ್ಯಸ್ವಾಮಿ, ಮುನ್ನುಡಿ, ಪು. ಸಂ. ೮
೧೮. ಯುಗಪಲ್ಲಟ, ಯು.ಆರ್. ಅನಂತಮೂರ್ತಿ, ಪು. ಸಂ. ೩೫
೧೯. ಗಾಂಧಿ ಎಂಬುವ ಹೆಸರು, (ಸಂ). ಶಶಿಕಲಾ ವೀರಯ್ಯಸ್ವಾಮಿ, ಚಂದ್ರಶೇಖರ ಪಾಟೀಲ, ಮಹಾತ್ಮನಿಗೆ, ಆನಂದಕಂದ, ಪು. ಸಂ. ೧೫
೨೦. ಅದೇ, ಇನ್ನಿನಿಸು ನೀ ಮಹಾತ್ಮ ಬದುಕಬೇಕಿತ್ತು!, ಎಂ ಗೋವಿಂದ ಪೈ. ಪು. ಸಂ. ೫
೨೧. ಅದೇ, ಗಾಂಧಿಯವರ ದರ್ಶನ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪು. ಸಂ. ೭
೨೨. ಅದೇ, ಪು. ಸಂ. ೮
೨೩. ಅದೇ, ಗಾಂಧೀಸ್ತವ, ಪು.ತಿ.ನ ಪು. ಸಂ. ೧೦
೨೪. ಅದೇ, ಆಶ್ಚರ್ಯದದ್ಭುತವು !, ಸಾಲಿ ರಾಮಚಂದ್ರರಾಯ, ಪು. ಸಂ. ೧೨
೨೫. ಅದೇ, ಮಹಾತ್ಮನಿಗೆ, ಆನಂದಕಂದ, ಪು. ಸಂ. ೧೫
೨೬. ಕುವೆಂಪು ಸಮಗ್ರ ಕಾವ್ಯ, ಸಂಪುಟ ೧, (ಸಂ) ಕೆ. ಸಿ. ಶಿವಾರೆಡ್ಡಿ, ಪು. ಸಂ. ೬೦೪
೨೭. ಅದೇ, ಪು.ಸಂ. ೬೦೪
೨೮. ಗಾಂಧಿ ಎಂಬುವ ಹೆಸರು, (ಸಂ). ಶಶಿಕಲಾ ವೀರಯ್ಯಸ್ವಾಮಿ, ಚಂದ್ರಶೇಖರ ಪಾಟೀಲ, ಸ್ವಾತಂತ್ರ್ಯ ಶಿಲ್ಪಿ, ಕುವೆಂಪು, ಪು. ಸಂ. ೨೧
೨೯. ಕವಿ ಮನದಲ್ಲಿ ಗಾಂಧಿ, ನಿಂತಿರುವರು ಗಾಂಧೀಜಿ, ಡಿ. ಎಸ್. ಕರ್ಕಿ, ಪು. ಸಂ. ೩೭
೩೦. ಗಾಂಧಿ ಎಂಬುವ ಹೆಸರು, (ಸಂ.) ಶಶಿಕಲಾ ವೀರಯ್ಯಸ್ವಾಮಿ, ಚಂದ್ರಶೇಖರ ಪಾಟೀಲ, ಕರ್ಮಯೋಗಿ ಗಾಂಧೀಜಿ, ಬೆಳಗೆರೆ ಜಾನಕಮ್ಮ, ಪು. ಸಂ. ೨೭
೩೧. ಅದೇ, ಗಾಂಧೀಜಿ- ವಿನಾಯಕ ಪು. ಸಂ. ೪೯
೩೨. ಅದೇ, ಗಾಂಧಿ, ಗೋಪಾಲಕೃಷ್ಣ ಅಡಿಗ, ಪು. ಸಂ. ೫೧
೩೩. ಅದೇ, ಗಾಂಧೀಸ್ತವನ, ಕೆ. ಎಸ್. ನರಸಿಂಹಸ್ವಾಮಿ, ಪು. ಸಂ. ೫೯
೩೪. ಅದೇ, ಪು.ಸಂ. ೫೯
೩೫. ಅದೇ, ಗಾಂಧಿ, ಜಿ.ಎಸ್.ಶಿವರುದ್ರಪ್ಪ, ಪು. ಸಂ. ೬೩
೩೬. ಅದೇ, ಗಾಂಧಿ, ಜಿ.ಎಸ್.ಶಿವರುದ್ರಪ್ಪ, ಪು. ಸಂ. ೬೩
೩೭. ಅದೇ, ಆದರೂ ಅವನ ನೆನಪು, ಚೆನ್ನವೀರ ಕಣವಿ, ಪು. ಸಂ. ೬೭

೩೮. ಅದೇ, ಗಾಂಧಿ ಎಂಬುವ ಹೆಸರು, ಶಾಂತರಸ, ಪು. ಸಂ. ೬೯
೩೯. ಅದೇ, ಗಾಂಧಿ, ಸುಜನಾ, ಪು. ಸಂ. ೭೮
೪೦. ಅದೇ, ಗಾಂಧಿಗೆ – ಪಾ.ವೆಂ. ಆಚಾರ್ಯ, ಪು. ಸಂ. ೮೪
೪೧. ಅದೇ, ಗಾಂಧಿ – ಸಾ.ಶಿ. ಮರುಳಯ್ಯ, ಪು. ಸಂ. ೮೯
೪೨. ಅದೇ, ಪು. ಸಂ. ೯೧
೪೩. ಅದೇ, ನಾಲ್ಕು ಧ್ವನಿ, ಜೀವಿ ಕುಲಕರ್ಣಿ, ಪು. ಸಂ. ೧೦೨
೪೪. ಅದೇ, ಪು. ಸಂ. ೧೦೩
೪೫. ಅದೇ, ಬಾಪೂ, ಕೆ.ಎಸ್. ನಿಸಾರ್ ಅಹಮದ್, ಪು. ಸಂ. ೧೧೭
೪೬. ಅದೇ, ಗಾಂಧೀಜಿಯ ನೆನಪು. ಗಿರಡ್ಡಿ ಗೋವಿಂದರಾಜು, ಪು. ಸಂ. ೧೨೮
೪೭. ಅದೇ, ಅಪರೂಪದವನು, ಎನ್.ಎಸ್.ಲಕ್ಷ್ಮಿನಾರಾಯಣಭಟ್ಟ, ಪು. ಸಂ. ೧೪೫
೪೮. ಅದೇ, ಬಾಪೂವಿಗೆ, ಪ್ರಭುಸ್ವಾಮಿ ಮಠ, ಪು. ಸಂ. ೧೬೨
೪೯. ಕುದಿವ ನೀಲಿಯ ಕಡಲು, ಸಿದ್ಧಲಿಂಗಯ್ಯ, ಪು. ಸಂ. ೩೨
೫೦. ಗಾಂಧಿ ಎಂಬುವ ಹೆಸರು, (ಸಂ). ಶಶಿಕಲಾ ವೀರಯ್ಯಸ್ವಾಮಿ, ಚಂದ್ರಶೇಖರ ಪಾಟೀಲ, ಲೆನಿನ್ – ಗಾಂಧಿ, ಬಸವರಾಜ ವಕ್ಕುಂದ, ಪು. ಸಂ.೨೨೫
೫೧. ಅದೇ, ಗಾಂಧಿ ಮತ್ತು ನಿರಾವರಣ, ಎಚ್. ಎಸ್. ವೆಂಕಟೇಶಮೂರ್ತಿ, ಪು. ಸಂ. ೩೦೭
೫೨. ಅದೇ, ನಾವು ಮತ್ತು ನೀನು, ವೇಣುಗೋಪಾಲ ಕಾಸರಗೋಡು, ಪು. ಸಂ ೩೧೦
೫೩. ಅದೇ, ನಾಲ್ಕು ಧ್ವನಿ, ಜಿವಿ ಕುಲಕರ್ಣಿ, ಪು. ಸಂ ೧೦೦
೫೪. ಅದೇ, ಪು. ಸಂ. ೧೦೦
೫೫. ಅದೇ, ಬಾಪೂ – ಕೆ.ಎಸ್.ನಿಸಾರ್ ಅಹಮದ್, ಪು. ಸಂ. ೧೧೮
೫೬. ಅದೇ, ಕಸ್ತೂರಿಯ ಕಂಪು, ಶಶಿಕಲಾ ವೀರಯ್ಯಸ್ವಾಮಿ, ಪು. ಸಂ. ೨೦೦
೫೭. ಅದೇ, ಪು. ಸಂ.೨೦೦
೫೮. ಅದೇ, ಹರಿಜನ ಮೋಹನದಾಸರಿಗೆ, ಎಂ.ಲೋಕೇಶ್. ಪು. ಸಂ. ೨೧೮
೫೯. ಅದೇ, ಶರಣು ಶರಣಾರ್ಥಿ, ಶಿವಾನಂದ ಬೆಳಕೂಡ, ಪು. ಸಂ. ೨೩೨
೬೦. ಅದೇ, ಗಾಂಧೀಸ್ತವ, ಪು.ತಿ.ನ., ಪು. ಸಂ. ೧೦.
೬೧. ಅದೇ, ಇನ್ನಿನಿಸು ಮಹಾತ್ಮ ನೀ ಬದುಕಬೇಕಿತ್ತು, ಗೋವಿಂದ ಪೈ. ಪು. ಸಂ. ೫
೬೨. ಹೊಸತು, ಸಂಪುಟ–೧೩, ಸಂಚಿಕೆ–೭, ಫೆಬ್ರವರಿ ೨೦೧೨, ಪು. ಸಂ. ೩೦
೬೩. ಕವಿ ಮನದಲ್ಲಿ ಗಾಂಧಿ, ಶ್ರದ್ಧಾಂಜಲಿ, ಬೇಂದ್ರೆ, ಪು. ಸಂ. ೨೫
೬೪. ಅಂಬಿಕಾತನಯದತ್ತರ ಸಮಗ್ರ ಕಾವ್ಯ, ಸಂಪುಟ ೧, (ಸಂ) ವಾಮನ ಬೇಂದ್ರೆ, ಪು. ಸಂ. ೪೫೩
೬೫. ಹೊಸತು, ಸಂಪುಟ–೧೩, ಸಂಚಿಕೆ–೭, ಫೆಬ್ರವರಿ ೨೦೧೨, ಪು. ಸಂ. ೩೧
೬೬. ಗಾಂಧಿ ಎಂಬುವ ಹೆಸರು, (ಸಂ). ಶಶಿಕಲಾ ವೀರಯ್ಯಸ್ವಾಮಿ, ಚಂದ್ರಶೇಖರ ಪಾಟೀಲ, ದಿವ್ಯಜ್ಯೋತಿ, ಡಿ. ಎಸ್. ಕರ್ಕಿ ಪು. ಸಂ. ೩೫
೬೭. ಅದೇ, ಪ್ರಿಯಗಾಂಧಿ, ಎಲ್.ಎನ್. ಮುಕುಂದರಾಜ, ಪು. ಸಂ. ೩೦೩
೬೮. ಅದೇ, ಗೋಡ್ಸೆ ಗಾಂಧೀಜಿ ಮತ್ತು ನಾವು, ಚಿಂತಾಮಣಿ ಕೊಡ್ಲಕೆರೆ, ಪು. ಸಂ. ೨೮೧
೬೯. ಅದೇ, ಗಾಂಧಿ ತಾತ, ನಾನೂ ಮತ್ತು ನನ್ನ ಮಗಳು, ಕೃಷ್ಣಮೂರ್ತಿ ಬಿಳಿಗೆರೆ, ಪು. ಸಂ. ೨೭೮
೭೦. ಅದೇ, ಗಾಂಧಿ ಅಮರವಾಗಲಿ, ಹರೀಶಕುಮಾರ್. ಕೆ. ಪು. ಸಂ. ೨೫೭
೭೧. ಅದೇ, ಸತ್ತಾವ–ಗೆದ್ದಾವಾ, ವ್ಹಿ. ಎಂ. ಮೇಟಿ, ಪು. ಸಂ. ೨೪೩
೭೨. ಅದೇ, ಬಾಪೂ, ಅಬ್ದುಲ್ ಮಜೀದ್ ಖಾನ್, ಪು. ಸಂ. ೧೨೬
೭೩. ಅದೇ, ಇನ್ನಿನಿಸು ನೀ ಮಹಾತ್ಮ ಬದುಕಬೇಕಿತ್ತು, ಎಂ. ಗೋವಿಂದ ಪೈ, ಪು. ಸಂ. ೫
೭೪. ಅದೇ, ಗಾಂಧಿ, ಎಂ. ಗೋಪಾಲಕೃಷ್ಣ ಅಡಿಗ, ಪು. ಸಂ. ೫೮
೭೫. ಅದೇ, ಗಾಂಧಿ, ಜಿ.ಎಸ್. ಶಿವರುದ್ರಪ್ಪ, ಪು. ಸಂ. ೬೩
೭೬. ಅದೇ, ಅಪರೂಪದವನು, ಎನ್.ಎಸ್.ಲಕ್ಷ್ಮೀ ನಾರಾಯಣಭಟ್ಟ, ಪು. ಸಂ. ೧೪೪

೭೭. ಅದೇ, ಪು. ಸಂ. ೧೪೫
೭೮. ಅದೇ, ಮೂರಿಂಚು ಆರಿಂಚು ಮಾನವರ ಪ್ರಾರ್ಥನೆ, ಬುದ್ಧಣ್ಣ ಹಿಂಗಮಿರೆ, ಪು. ಸಂ. ೧೫೨
೭೯. ಅದೇ, ನೀನುಂಟು ನಾವುಂಟು, ಶಿವಶರಣ ಪಾಟೀಲ ಜಾವಳಿ, ಪು. ಸಂ. ೧೫೭
೮೦. ಅದೇ, ಬಾಪೂಜಿ – ಗವಿಸಿದ್ಧ ಎನ್. ಬಳ್ಳಾರಿ, ಪು. ಸಂ. ೧೮೮
೮೧. ಅದೇ, ಗಾಂಧಿ. ಸಿದ್ಧಲಿಂಗಯ್ಯ, ಪು. ಸಂ. ೨೧೯
೮೨. ಅದೇ, ಗಾಂಧಿ ತಾತ, ನಾನು ಮತ್ತು ನನ್ನ ಮಗಳು, ಕೃಷ್ಣಮೂರ್ತಿ ಬಿಳಿಗೆರೆ ಪು. ಸಂ. ೨೭೮
೮೩. ಅದೇ, ನಾವು ಮತ್ತು ನೀನು , ವೇಣುಗೋಪಾಲ ಕಾಸರಗೋಡು, ಪು. ಸಂ. ೩೧೦
೮೪. ಅದೇ, ಗಾಂಧಿ ಸ್ಮರಣೆ – ಚಂದ್ರಶೇಖರ ಪಾಟೀಲ, ಪು. ಸಂ. ೧೧೫
೮೫. ಅದೇ, ಗಾಂಧಿ ಇದ್ದನೇ? ಎಂ. ಗಂಗಾಧರ ಭಟ್ಟ ಪು. ಸಂ. ೮೫
೮೬. ಅದೇ, ಗಾಂಧಿ ಜಿ.ಎಸ್.ಶಿವರುದ್ರಪ್ಪ, ಪು. ಸಂ. ೬೪
೮೭. ಅದೇ, ನನಗೆ ಗಾಂಧಿ ಆಗುವ ಇಚ್ಛೆ, ರಂಜಾನ್ ದರ್ಗಾ, ಪು. ಸಂ. ೧೭೦
೮೮. ಅದೇ, ಅಜ್ಜಾ ಕಂಡೆಯಾ, ಶ್ರೀಪಾದ ಶೆಟ್ಟಿ, ಪು. ಸಂ. ೧೭೩
೮೯. ಅದೇ, ಗಾಂಧಿ, ಅಲ್ಲಮಪ್ರಭು ಬೆಟ್ಟದೂರು, ಪು. ಸಂ. ೧೭೯
೯೦. ಅದೇ, ದೀಪ ನಂದಿದೆ, ಜಗದೀಶ ಮಂಗಳೂರು ಮಠ, ಪು. ಸಂ. ೧೯೫
೯೧. ಮಾರ್ಕ್ಸ್, ಗಾಂಧಿ ಸಮಾಜವಾದ, ರಾಮಮನೋಹರ ಲೋಹಿಯಾ, ಪು. ಸಂ. ೧೯
೯೨. ಗಾಂಧಿ ಎಂಬುವ ಹೆಸರು, (ಸಂ). ಶಶಿಕಲಾ ವೀರಯ್ಯಸ್ವಾಮಿ, ಚಂದ್ರಶೇಖರ ಪಾಟೀಲ, ಗಾಂಧಿ, ಅನ್ನದಾನಿ ಹೀರೇಮಠ, ಪು. ಸಂ. ೩೧೨
೯೩. ಅದೇ, ಗಾಂಧಿ ಇದ್ದಿದ್ದರೆ, ಮೂಡ್ನಾಕೂಡು ಚಿನ್ನಸ್ವಾಮಿ, ಪು. ಸಂ. ೨೨೨
೯೪. ಮಾರ್ಕ್ಸ್, ಗಾಂಧಿ ಸಮಾಜವಾದ, ರಾಮಮನೋಹರ ಲೋಹಿಯಾ, ಪು. ಸಂ. ೧೯
೯೫. ಗಾಂಧಿ ಎಂಬುವ ಹೆಸರು, (ಸಂ). ಶಶಿಕಲಾ ವೀರಯ್ಯಸ್ವಾಮಿ, ಚಂದ್ರಶೇಖರ ಪಾಟೀಲ, ಬಾಪೂ, ಕೆ.ಎಸ್.ನಿಸಾರ್ ಅಹಮದ್, ಪು. ಸಂ ೧೧೯
೯೬. ಅದೇ, ಗಾಂಧೀಜಿ, ಪುಟ್ಟಪ್ಪ ಕುಲಕರ್ಣಿ, ಪು. ಸಂ. ೨೨೯
೯೭. ಮಾರ್ಕ್ಸ್, ಗಾಂಧಿ, ಸಮಾಜವಾದ, ರಾಮಮನೋಹರ ಲೋಹಿಯಾ, ಪು. ಸಂ. ೨೬
೯೮. ಯುಗಪಲ್ಲಟ, ಯು. ಆರ್.ಅನಂತಮೂರ್ತಿ, ಪು. ಸಂ. ೩೬
೯೯. ಅದೇ, ಪು. ಸಂ. ೪೦

# ಅಧ್ಯಾಯ ೭

## ಅಂಬೇಡ್ಕರ್ ವ್ಯಕ್ತಿತ್ವ ಶೋಧ : ಕಪ್ಪು ಯುಗಗಳ ಕೆಂಪು ಧ್ವನಿ

೭.೧ ಅಂಬೇಡ್ಕರ್ ವ್ಯಕ್ತಿತ್ವ : ತಾತ್ವಿಕ ಗ್ರಹಿಕೆ

೭.೨ ಆಧುನಿಕ ಕನ್ನಡ ಕಾವ್ಯ ಕಂಡ ಅಂಬೇಡ್ಕರ್:ಅಸಮಾನತೆಯ ಆಕಾಶದಲ್ಲಿ ಕಂಡ ಸ್ವಾಭಿಮಾನದ ಸೂರ್ಯ

೧ ಅಂಬೇಡ್ಕರ್ ವ್ಯಕ್ತಿತ್ವದ ಅನನ್ಯತೆಯ ಶೋಧ : ಆಪ್ತತೆ ಮತ್ತು ಸಂಘರ್ಷದ ನೆಲೆ

೨. ಸಮುದಾಯದ ನೋವು ಅಪಮಾನಗಳನ್ನು ನಿವೇದಿಸಿಕೊಳ್ಳುವ ತಾಯಿಯಾಗಿ

೩. ರಾಜಕೀಯ ವಿಮರ್ಶೆ, ಪ್ರತಿಭಟನೆಯ ಚೈತನ್ಯವಾಗಿ

೪. ಸಮಾನತೆಯ ಕನಸುಗಾರಿಕೆಯ ಹಿಂದಿನ ಕಣ್ಣಾಗಿ

# ಅಧ್ಯಾಯ : ೭

## ಅಂಬೇಡ್ಕರ್ ವ್ಯಕ್ತಿತ್ವ ಶೋಧ : ಕಪ್ಪು ಯುಗಗಳ ಕೆಂಪು ಧ್ವನಿ

### ೭.೧ ಅಂಬೇಡ್ಕರ್ ವ್ಯಕ್ತಿತ್ವ : ತಾತ್ವಿಕ ಗ್ರಹಿಕೆ

ಆಧುನಿಕ ಭಾರತ ಕಂಡ ಧೀಮಂತ ಮತ್ತು ಉದಾತ್ತ ನಾಯಕರಲ್ಲಿ ಅಂಬೇಡ್ಕರ್ ಅಗ್ರಗಣ್ಯರಾಗಿದ್ದಾರೆ. ಅವರು ಆಧುನಿಕ ಭಾರತದ ರಾಜಕೀಯ, ಸಾಮಾಜಿಕ ವಾತಾವರಣದ ಅಸಾಧಾರಣ ಸಮಷ್ಠಿಪ್ರಜ್ಞೆಯ ಸಂಕೇತವಾಗಿದ್ದಂತವರು. ಅಸ್ಪೃಶ್ಯರೆಂದು ಕರೆಯಲಾದ ವರ್ಗದವರ ಘನತೆ, ಸ್ವಾಭಿಮಾನ, ಸಮಾನತೆಗಾಗಿ ಮತ್ತು ಜಾತೀಯತೆಯನ್ನು ತೊಡೆದು ಹಾಕಲು ಹೋರಾಡಿದ ಕ್ರಾಂತಿಕಾರಿ ವ್ಯಕ್ತಿತ್ವ ಅವರದ್ದು. ಇಂದಿಗೂ ಭಾರತವೂ ಒಳಗೊಂಡಂತೆ ಜಗತ್ತಿನ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಎಲ್ಲ ಆಗುಹೋಗುಗಳ ಮೇಲೆ ಅಂಬೇಡ್ಕರ್ ವ್ಯಕ್ತಿತ್ವ ಮತ್ತು ಚಿಂತನೆಗಳು ಪ್ರಭಾವ ಬೀರುತ್ತಲೇ ಇವೆ.

ಇಂದಿಗೂ ಜೀವಂತವಾಗಿರುವ ಅಸ್ಪೃಶ್ಯತೆಯ ಆಚರಣೆ, ಶೋಷಣೆ, ರಾಜಕೀಯ ಭ್ರಷ್ಟತೆ, ಅಸಮಾನತೆ, ಆರ್ಥಿಕ ಮತ್ತು ಸಾಮಾಜಿಕ ಬಿಕ್ಕಟ್ಟುಗಳ ನಡುವೆ ಅಂಬೇಡ್ಕರರನ್ನು ಅರ್ಥ ಮಾಡಿಕೊಳ್ಳುವ ಬಗೆ, ಸಮಕಾಲೀನ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಗಳು ಅಂಬೇಡ್ಕರ್ ಅವರನ್ನು ಬಿಂಬಿಸುತ್ತಿರುವ ವಿಧಾನ, ದಲಿತ ಮತ್ತು ಶೋಷಿತ ಸಮುದಾಯದ ಹೋರಾಟಗಳು ಅಂಬೇಡ್ಕರರಿಂದ ಪಡೆದುಕೊಳ್ಳುತ್ತಿರುವ ಶಕ್ತಿಯ ಸ್ವರೂಪವನ್ನು ಕುರಿತಂತೆ ಚರ್ಚಿಸಲು ಅಂಬೇಡ್ಕರ್ ವ್ಯಕ್ತಿತ್ವದ ಗ್ರಹಿಕೆ ಸಹಾಯಕವಾಗಬಲ್ಲದು. ಈ ಹಿನ್ನೆಲೆಯಲ್ಲಿ ಅಂಬೇಡ್ಕರರ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿದ ಹಾಗೂ ವ್ಯಕ್ತಿತ್ವವನ್ನು ರೂಪಿಸಿದ ಸಂಗತಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಸಂಕ್ಷಿಪ್ತವಾಗಿ ಚರ್ಚೆಗೆ ಒಳಪಡಿಸಲು ಪ್ರಯತ್ನಿಸಲಾಗಿದೆ. ಅಂಬೇಡ್ಕರರ ಕುಟುಂಬ ಕಬೀರ್ ಪಂಥದವರಾಗಿದ್ದರು. ಅವರು ಆಗಾಗ ಕಬೀರರ ದೋಹೆಗಳನ್ನು ಗುನುಗಿಕೊಳ್ಳುತ್ತಿದ್ದರು. ಹಾಗಾಗಿ ಅಂಬೇಡ್ಕರ್ ಮೇಲೆ ಕಬೀರ್ ಚಿಂತನೆಗಳ ಪ್ರಭಾವ ಗಾಢವಾಗಿದೆ. ಅದರೊಂದಿಗೆ ಜ್ಯೋತಿಬಾಪುಲೆ ಮತ್ತು ಬುದ್ಧನಂತ ಉನ್ನತ ವ್ಯಕ್ತಿತ್ವಗಳು ಮತ್ತು ಪಾಶ್ಚಾತ್ಯ ವಿದ್ವಾಂಸರುಗಳ ಚಿಂತನೆಗಳು ಅಂಬೇಡ್ಕರ್ ವ್ಯಕ್ತಿತ್ವವನ್ನು ಗಾಢವಾಗಿ ಪ್ರಭಾವಿಸಿವೆ. ಇವುಗಳೊಂದಿಗೆ ಅಂಬೇಡ್ಕರ್ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿದ ಕೌಟುಂಬಿಕ ಪರಿಸರ, ತಂದೆಯ ಶಿಸ್ತು, ತಾಯಿಯ ಭಕ್ತಿ, ಬದುಕಿನುದ್ದಕ್ಕೂ ಪಡೆದ ಅಸ್ಪೃಶ್ಯತಾನುಭವ, ಅವಮಾನ ಹಾಗೂ ಪಾಶ್ಚಿಮಾತ್ಯ ಜಾತಿಮುಕ್ತ ಸಾಮಾಜಿಕ ಅನುಭವಗಳು, ಉದಾರವಾದಿ ಪ್ರಜಾಪ್ರಭುತ್ವದ ಮಾದರಿಗಳು ಅವರ ವ್ಯಕ್ತಿತ್ವವನ್ನು ರೂಪಿಸಿವೆ.

ನಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರದಲ್ಲಿ ಅಂಬೇಡ್ಕರರ ವ್ಯಕ್ತಿತ್ವವನ್ನು ಎರಡು ನೆಲೆಯಲ್ಲಿ ಗ್ರಹಿಸುತ್ತಾ ಬರಲಾಗಿದೆ. ಒಂದು ಸಂವಿಧಾನ ಶಿಲ್ಪಿಯಾಗಿ, ಇನ್ನೊಂದು ಜಾತಿ ವ್ಯವಸ್ಥೆಯ ಜೊತೆಗೆ ಅಂಟಿಕೊಂಡಿರುವ ಅಸ್ಪೃಶ್ಯತೆಯ ಅಮಾನವೀಯ ಸಾಮಾಜಿಕ ವ್ಯವಸ್ಥೆಯನ್ನು ತೊಡೆದುಹಾಕಲು ಪ್ರಯತ್ನಿಸಿದ ಕ್ರಾಂತಿಕಾರಿ ಶಕ್ತಿಯಾಗಿ. ಈ ಎರಡೂ ಬಗೆಯ ಗ್ರಹಿಕೆಗಳು ಅಂಬೇಡ್ಕರ್ ವ್ಯಕ್ತಿತ್ವವನ್ನು ಸಾಮಾನ್ಯವಾದ ನೆಲೆಯಲ್ಲಿಯೇ ಗ್ರಹಿಸುತ್ತಿವೆ. ಅಂದರೆ ಇವು ಅಂಬೇಡ್ಕರರನ್ನು ಆಳವಾಗಿ ಗ್ರಹಿಸುವಲ್ಲಿ ವಿಫಲವಾಗಿವೆ ಎಂದೆನಿಸುತ್ತದೆ.

ಅಂಬೇಡ್ಕರ್ ವ್ಯಕ್ತಿತ್ವ ಕಾಲಪ್ರವಾಹದಲ್ಲಿ ಕಳೆದುಹೋಗದೆ ದಿನೇ ದಿನೇ ವಿಸ್ತಾರವಾಗುತ್ತಾ, ಭಿನ್ನ ಭಿನ್ನ ಅರ್ಥಸಾಧ್ಯತೆಗಳೊಂದಿಗೆ, ವರ್ತಮಾನದ ಹಲವು ವಿದ್ಯಮಾನಗಳೊಂದಿಗೆ ಮುಖಾಮುಖಿಯಾಗುತ್ತಿದೆ. ವರ್ತಮಾನದ ಎಲ್ಲ ಬಗೆಯ ಆರ್ಥಿಕ, ಸಾಮಾಜಿಕ, ರಾಜಕೀಯ, ವಿದ್ಯಮಾನಗಳಲ್ಲಿ ಮುಖ್ಯವಾಗಿ ಪರಿಗಣಿಸಲೇಬೇಕಾದ ಚಿಂತನೆಗಳು ಅವರವು. ಹಾಗಾಗಿ ಅಂಬೇಡ್ಕರ್ ಅವರನ್ನು ಕೇವಲ ಒಬ್ಬ ವ್ಯಕ್ತಿಯಾಗಿ, ಒಂದು ಸಿದ್ಧಾಂತದ ಹರಿಕಾರನಾಗಿ, ಒಂದು ಪಂಥದ ನೇತಾರನಾಗಿ ಮಾತ್ರ ಗ್ರಹಿಸುವುದು ಅವರ ವ್ಯಕ್ತಿತ್ವವನ್ನು ಸೀಮಿತ ಚೌಕಟ್ಟಿಗೆ ಒಳಪಡಿಸಿದಂತಾಗಿಬಿಡುತ್ತದೆ.

ಸಾಮಾಜಿಕ ಕಳಕಳಿಯುಳ್ಳ ಪ್ರತಿಭಾನ್ವಿತ ಹಾಗೂ ಬಹುಮುಖ ವ್ಯಕ್ತಿತ್ವ ಅಂಬೇಡ್ಕರರದು. ಅಂಬೇಡ್ಕರರ ಬದುಕು, ಹೋರಾಟ, ಚಿಂತನೆ, ಬರವಣಿಗೆ, ವೃತ್ತಿ, ಪ್ರವೃತ್ತಿ, ಇವುಗಳ ಹಿಂದೆ ಕೆಲಸ ಮಾಡಿದ ಅವರ ಮಾನವೀಯ ಮುಖಗಳ ಮುಖಾಂತರ ವ್ಯಕ್ತಿತ್ವವನ್ನು ವಿವೇಚಿಸಿದಾಗ ಅವರ ವ್ಯಕ್ತಿತ್ವದ ಹರವು–ಆಳಗಳು ಗೋಚರವಾಗುತ್ತವೆ. ಈ ನಿಟ್ಟಿನಲ್ಲಿ ನೋಡಿದಾಗ ಅಂಬೇಡ್ಕರರ ವ್ಯಕ್ತಿತ್ವ ಬಹುಮುಖವಾದದು. ಅವರು ಒಬ್ಬ ಆರ್ಥಿಕ ತಜ್ಞ, ರಾಜಕೀಯ ಚಿಂತಕ, ತತ್ವಶಾಸ್ತ್ರಜ್ಞ, ಪತ್ರಿಕೋದ್ಯಮಿ, ಶಿಕ್ಷಣತಜ್ಞ, ಸಂವಿಧಾನ ಶಿಲ್ಪಿ, ಹೋರಾಟಗಾರ, ಕಾರ್ಮಿಕ ನಾಯಕ, ದೊಡ್ಡ ವಿದ್ವಾಂಸ, ಹಾಗೂ ಮಾನವೀಯ ಅಂತಃಕರಣವುಳ್ಳ ತಾಯ್ತನದ ವ್ಯಕ್ತಿತ್ವ ಅವರದ್ದು.

ಹೀಗೆ ಹಲವು ಕ್ಷೇತ್ರಗಳಲ್ಲಿ ತೊಡಗಿಸಿಕೊಂಡ, ಈ ದೇಶದ ಸಾಂಸ್ಕೃತಿಕ ಬದುಕಿನ ನಾಡಿಮಿಡಿತವನ್ನು, ಅದರ ಸೂಕ್ಷ್ಮತೆಯಲ್ಲಿ ಅರಿತಂತ ವ್ಯಕ್ತಿತ್ವ ಅಂಬೇಡ್ಕರ್ ಅವರದ್ದು. ಆದರೆ ಇದುವರೆಗೆ ಈ ದೇಶದಲ್ಲಿ ಅಂಬೇಡ್ಕರ್ ವ್ಯಕ್ತಿತ್ವವನ್ನು ಸೀಮಿತ ಚೌಕಟ್ಟಿಗೆ ಒಳಪಡಿಸಿ ಗ್ರಹಿಸುವ ಮತ್ತು ಬಿಂಬಿಸುವ ರಾಜಕಾರಣಗಳು ನಡೆಯುತ್ತಿವೆ. ಅಂಬೇಡ್ಕರರ ಇಡೀ ಬದುಕು, ಚಿಂತನೆ, ಹೋರಾಟಗಳು ಈ ದೇಶದ ಸಾಮಾಜಿಕ, ರಾಜಕೀಯ, ಧಾರ್ಮಿಕ ಪರಿಸರವನ್ನು ಸಮಾನತೆ, ಭ್ರಾತೃತ್ವದ ಆಧಾರದ ಮೇಲೆ ರೂಪಿಸಲು ಪ್ರಯತ್ನಿಸಿದವುಗಳಾಗಿವೆ. ಈ ದೇಶದ ಸಾಮಾಜಿಕ, ಧಾರ್ಮಿಕ ವ್ಯವಸ್ಥೆಯ ನಿಜವಾದ ಸಮಸ್ಯೆಗಳ ಮೂಲವನ್ನು ಖಚಿತವಾಗಿ ಗುರುತಿಸಿದ ಮತ್ತು ಅವುಗಳಿಗೆ ಶಾಶ್ವತವೆನ್ನಬಹುದಾದ ಪರಿಹಾರಗಳನ್ನು ಹುಡುಕಿಕೊಡಲು ಚಿಂತಿಸಿದವರು ಅಂಬೇಡ್ಕರ್. ಈ ದೇಶ ಸ್ವತಂತ್ರ್ಯಗಳಿಸಿ ಏಳು ದಶಕಗಳು ಪೂರೈಸುತ್ತಿದ್ದರೂ ಅಂಬೇಡ್ಕರ್ ಹೋರಾಟಗಳ ಉದ್ದೇಶ ಮತ್ತು ಅವರು ಕಂಡ ಕನಸುಗಳು ಕನಸಾಗೇ ಉಳಿದುರುವುದಕ್ಕೆ ಕಾರಣ ಅವರನ್ನು, ಅವರ ಚಿಂತನೆಗಳ ಮೂಲ ಆಶಯಗಳನ್ನು ಸಮಗ್ರವಾಗಿ ಮತ್ತು ಸೂಕ್ಷ್ಮವಾಗಿ ಗ್ರಹಿಸದೆ ಇರುವುದೇ ಆಗಿದೆ. ಭಾರತದ ಅಭಿವೃದ್ಧಿಯ ಮತ್ತು

ಪುನರ್ ರೂಪಿಸುವ ಪ್ರಕ್ರಿಯೆಯಲ್ಲಿ ಅಂಬೇಡ್ಕರರ ವಿಚಾರಗಳನ್ನು ಗಂಭೀರವಾಗಿ ಪರಿಗಣಿಸದೆ ಇರುವುದೇ ಈ ದೇಶದಲ್ಲಿ ಇನ್ನು ಅಸಮಾನತೆ, ಶೋಷಣೆ, ಜಾತಿಯತೆಗಳು ಜೀವಂತವಾಗಿರಲು ಸಾಧ್ಯವಾಗಿರುವುದು. ಅಸಮಾನತೆ ಮತ್ತು ಜಾತೀಯತೆಗಳನ್ನು ರಕ್ಷಿಸಿಕೊಳ್ಳುವ ಪ್ರಭುತ್ವ ಹಾಗೂ ಮೇಲ್ವರ್ಗಗಳ ಹುನ್ನಾರಗಳು ಅಂಬೇಡ್ಕರ್ ವ್ಯಕ್ತಿತ್ವವನ್ನು ಸೀಮಿತ ಚೌಕಟ್ಟಿಗೆ ಒಳಪಡಿಸುವ, ಕೇವಲ ಗೌರವದ ಸರಕಾಗಿಸುವ ಕೆಲಸದಲ್ಲಿ ನಿರತವಾಗಿವೆ.

ಅಂಬೇಡ್ಕರ್ ಇಂದು ಈ ದೇಶಕ್ಕೆ ಕೇವಲ ಆರಾಧಿಸಲ್ಪಡುವ ಮೂರ್ತಿಯಾಗಿ ಬೇಕಾಗಿಲ್ಲ. ಬದಲಾಗಿ ದೇಶದ ಸಮಾಜ, ರಾಜಕೀಯ ವ್ಯವಸ್ಥೆಗಳನ್ನು ಪುನರ್‌ರೂಪಿಸಿಕೊಳ್ಳುವ ವೈಚಾರಿಕ ಮತ್ತು ತಾತ್ವಿಕ ತಳಹದಿಯಾಗಿ ಮುಖ್ಯವಾಗಿದ್ದಾರೆ. ಅಂಬೇಡ್ಕರರ ಆರ್ಥಿಕ ವಿಚಾರಗಳು ಸಾಮಾಜಿಕ ಚಿಂತನೆಗಳು, ರಾಜಕೀಯ ವಿಚಾರಧಾರೆಗಳು, ಸಂವಿಧಾನದ ರೂಪುರೇಶೆಯ ಆಶಯಗಳು, ಧಾರ್ಮಿಕ ನಿಲುವುಗಳು ಮುನ್ನಲೆಗೆ ಬರಬೇಕಾಗಿವೆ. ಆಗ ಮಾತ್ರ ನಿಜವಾದ ಅಂಬೇಡ್ಕರ್ ವ್ಯಕ್ತಿತ್ವ ಗ್ರಹಿಕೆಗೆ ಸಿಗಲು ಸಾಧ್ಯ. ಆಗ ಮಾತ್ರ ಅಂಬೇಡ್ಕರ್ ಈ ದೇಶದ ಸಾಂಸ್ಕೃತಿಕ ಬದುಕಿಗೆ ನೀಡಿದ ಕೊಡುಗೆ ಮತ್ತು ತ್ಯಾಗ ಏನು ಎಂಬುದು ಅರ್ಥವಾಗಲು ಸಾಧ್ಯವಾಗುತ್ತದೆ.

ಭಾರತ ಇಂದು ದೊಡ್ಡ ದ್ವಂದ್ವಗಳಲ್ಲಿ ಸಿಲುಕಿಕೊಂಡು ನರಳುತ್ತಿದೆ. ಒಂದು ಕಡೆ ಅದು ಅಭಿವೃದ್ಧಿಯತ್ತ ಮುಖಮಾಡುತ್ತಾ ಜಗತ್ತಿನ ದೊಡ್ಡ ರಾಷ್ಟ್ರಗಳ ಸಾಲಿನಲ್ಲಿ ನಿಲ್ಲುವ ಪ್ರಯತ್ನ ಮಾಡುತ್ತಿದ್ದರೆ, ಅದರ ಸಾಮಾಜಿಕ, ಧಾರ್ಮಿಕ ಪರಿಸರದಲ್ಲಿ ಇನ್ನೂ ಬೇರೂರಿರುವ ಜಾತೀಯತೆ, ಅಸ್ಪೃಶ್ಯತೆಯ ಆಚರಣೆ, ಅಸಮಾನತೆಗಳು ಅದನ್ನು ದೊಡ್ಡ ಸಂದಿಗ್ಧತೆಯಲ್ಲಿ ಸಿಲುಕಿಸಿವೆ. ಭಾರತದ ನಿಜವಾದ ಅಭಿವೃದ್ಧಿ ಎಂಬುದು ಅದರ ಸಾಮಾಜಿಕ, ಧಾರ್ಮಿಕ, ರಾಜಕೀಯ ಪರಿಸರದ ಪುನರ್‌ರಚನೆ ಮತ್ತು ಸುಧಾರಣೆಯನ್ನು ಅವಲಂಬಿಸಿದೆ. ಹಾಗಾಗಿ ಭಾರತದ ಅಭಿವೃದ್ಧಿಯ ಬಗೆಗೆ ಅದರ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ರಚನೆಗಳು ಮತ್ತು ಅವುಗಳ ಬಿಕ್ಕಟ್ಟುಗಳನ್ನು ಪರಿಹರಿಸಿಕೊಳ್ಳುವ ಮಾರ್ಗಗಳ ಬಗ್ಗೆ ಗಾಢವಾಗಿ ಚಿಂತಿಸಿದ, ಅನುಷ್ಠಾನಕ್ಕಾಗಿ ಹೋರಾಡಿದ ಅಂಬೇಡ್ಕರ್ ಚಿಂತನೆ-ಬರಹ – ಹೋರಾಟಗಳು ಮುನ್ನೆಲೆಗೆ ಬರಬೇಕಾದ ತುರ್ತು ಇದೆ. ಈ ನಿಟ್ಟಿನಲ್ಲಿ ಅಂಬೇಡ್ಕರರ ವ್ಯಕ್ತಿತ್ವದ ಬಹುಮುಖತೆಯನ್ನು, ಅನನ್ಯತೆಯನ್ನು ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

ಅಂಬೇಡ್ಕರ್ ದೊಡ್ಡ ವಿದ್ವಾಂಸರಾಗಿದ್ದರು. ಅವರದು ಸಾಟಿಯಿಲ್ಲದ ಪಾಂಡಿತ್ಯದ ಪ್ರಖರತೆ. ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ತತ್ವಶಾಸ್ತ್ರ, ಸಮಾಜಶಾಸ್ತ್ರ, ಇತಿಹಾಸ, ಕಾನೂನು, ಸಂವಿಧಾನ, ಶಾಸ್ತ್ರ, ಧರ್ಮ, ಪುರಾಣ ಹೀಗೆ ಹಲವು ಕ್ಷೇತ್ರಗಳಲ್ಲಿ ಆಳವಾದ ವಿದ್ವತ್ತು ಅವರಿಗಿತ್ತು. ಅವರ ಪ್ರತಿಯೊಂದು ವಾದವೂ, ವಿರೋಧವೂ ಸ್ಪಷ್ಟತೆಯಿಂದ ಮತ್ತು ಸೂಕ್ತ ಆಧಾರಗಳಿಂದ ಕೂಡಿರುತ್ತಿದ್ದವು. ಸಾಕ್ಷ್ಯ, ಸಮರ್ಥನೆಗಳಿಲ್ಲದೆ ಮಾತನಾಡಿದವರಲ್ಲ ಎಂಬುದನ್ನು ತಿಳಿದರೆ ಅವರ ಪಾಂಡಿತ್ಯದ ಹಿರಿಮೆ ಅರಿವಿಗೆ ಬರುತ್ತದೆ. ಅವರು ಇಂಗ್ಲೀಷ್, ಸಂಸ್ಕೃತ, ಹಿಂದಿ, ಪ್ರಾಕೃತ ಭಾಷೆಗಳ ಮೇಲೆ ಅಪಾರವಾದ ಪ್ರಭುತ್ವ ಹೊಂದಿದ್ದರು. "ಅವರ ಬೌದ್ಧಿಕ ಪ್ರಮಾಣಿಕತೆ, ವಸ್ತುನಿಷ್ಠತೆ, ಗಾಢವಾದ ಅಧ್ಯಯನದಿಂದ ರೂಪಿತವಾದ ತಾರ್ಕಿಕತೆ, ವಿಷಯದ ಮಂಡನೆಯಲ್ಲಿರುವ ಸ್ಪಷ್ಟತೆಯಿಂದಾಗಿ ಅವರ ಬರೆಹಗಳು ಭಾರತದ ಚರಿತ್ರೆ ಮತ್ತು ಸಂಸ್ಕೃತಿಗೊಂದು ಹೊಸ

ಆಯಾಮವನ್ನು ನೀಡಿವೆ. ೨೦ನೇ ಶತಮಾನದ ಸಾಮಾಜಿಕ ಚಿಂತಕರಲ್ಲೇ ಅತ್ಯಂತ ವಿಶಿಷ್ಟವಾದ ಸ್ಪಷ್ಟವಾದ, ಧೀರ ನಿಲುವನ್ನು ಅವರು ಹೊಂದಿದ್ದರು."[೧] ಎಂಬ ಮಾತುಗಳು ಅಂಬೇಡ್ಕರರ ಪಾಂಡಿತ್ಯಪೂರ್ಣ ವ್ಯಕ್ತಿತ್ವವನ್ನು ಸಮರ್ಥವಾಗಿ ಹಿಡಿದಿಟ್ಟಿವೆ.

ಅಂಬೇಡ್ಕರ್ ತಾವು ಗಳಿಸಿದ ಪದವಿ, ವಿದ್ವತ್ತನ್ನು ದೇಶದ ಉದ್ಧಾರಕ್ಕಾಗಿ, ಅದರ ಅನಿಷ್ಠ ಆಚರಣೆಯಾದ ಅಸ್ಪೃಶ್ಯತೆಯ ನಿವಾರಣೆಗಾಗಿ ಬಳಸಿದರು. ಅಂಬೇಡ್ಕರ್ ಎಂದೂ ಸ್ವಾರ್ಥಕ್ಕಾಗಿ, ಸ್ವಂತ ಪರಿವಾರದ ಹಿತಕ್ಕಾಗಿ ಹೋರಾಡಿದವರಲ್ಲ. ಇಡೀ ಬದುಕಿನುದ್ದಕ್ಕೂ ನಿಸ್ವಾರ್ಥವಾಗಿ ಬದುಕಿದ, ಹೋರಾಡಿದ ವ್ಯಕ್ತಿತ್ವ ಅವರದ್ದು. "ನಾನು ಇಷ್ಟೊಂದು ಪದವಿಗಳಿಸಿದೆ, ಅದರಿಂದ ದೊರೆತ ಜ್ಞಾನವನ್ನು ಸ್ವಂತದ ಪರಿವಾರದ ಅಥವಾ ನಮ್ಮದೇ ಜಾತಿಯ ಹಿತಕ್ಕಾಗಿ ಮಾತ್ರ ಬಳಸುವ ಯೋಚನೆ ಸಹ ಮಾಡಲಿಲ್ಲ. ನಾನು ಮಾಡುತ್ತಿರುವುದೆಲ್ಲವೂ ಸಂಪೂರ್ಣವಾಗಿ ಅಸ್ಪೃಶ್ಯ ಸಮಾಜದ ಸಲುವಾಗಿ. ನಿಜ, ಅಸ್ಪೃಶ್ಯತೆಯ ಸಮಸ್ಯೆ ಒಂದು ಪ್ರಚಂಡ ಹಿಮಾಲಯವೆ. ಅದಕ್ಕೆ ಡಿಕ್ಕಿ ಹೊಡೆದು ನನ್ನ ತಲೆಯನ್ನು ಹೋಳಾಗಿಸಲು ಹೊರಟಿರುವೆ. ಅದರಿಂದ ಈ ಹಿಮಾಲಯಕ್ಕೇನೂ ಆಗದೆಯೂ ಹೋಗಲೂಬಹುದು. ಆದರೆ ರಕ್ತರಂಜಿತವಾದ ನನ್ನ ತಲೆಯನ್ನು ಕಂಡ ಮೇಲಾದರೂ ನನ್ನ ಏಳು ಕೋಟಿ ಅಸ್ಪೃಶ್ಯ ಬಾಂಧವರು ಆ ಹಿಮಾಲಯವನ್ನು ನೆಲಸಮಗೊಳಿಸಲು ಮುಂದೆ ಬಂದಾರು ಎಂಬ ವಿಶ್ವಾಸ ನನ್ನದು. ಅದಕ್ಕಾಗಿ ಪ್ರಾಣಾರ್ಪಣೆ ಮಾಡಲು ಸಹ ಆಗ ಅವರು ತಯಾರಾಗುವುದು ನಿಶ್ಚಿತ"[೨] ಅಂಬೇಡ್ಕರರ ಈ ಮಾತುಗಳು ಅವರ ನಿಸ್ವಾರ್ಥ ವ್ಯಕ್ತಿತ್ವ, ಅಸ್ಪೃಶ್ಯತೆಯನ್ನು ನಾಶಮಾಡುವ ಅವರ ಹಂಬಲ, ಅದಕ್ಕಾಗಿ ಪ್ರಾಣಾರ್ಪಣೆಯನ್ನು ಮಾಡಲು ಸಿದ್ಧವಿರುವ ತ್ಯಾಗ, ಹೋರಾಟದ ಮನೋಭಾವವನ್ನೂ, ಅಪಾರವಾದ ದಲಿತಪರ ಕಾಳಜಿಯನ್ನೂ ಹಿಡಿದಿಡುತ್ತವೆ. ಅವರು ಭಾರತದ ಉದ್ದಗಲಕ್ಕೂ ವ್ಯಾಪಿಸಿರುವಂಥ ಹೋರಾಟವನ್ನು ಅತ್ಯಂತ ಶಕ್ತಿಯುತವಾಗಿ ಹಾಗೂ ವ್ಯವಸ್ಥಿತವಾಗಿ ಸಂಘಟಿಸಿ ಅಸ್ಪೃಶ್ಯರನ್ನು ಉದ್ಧರಿಸುವ ಮೂಲಕ ಸಮಾನತೆಯ ಸಮಾಜ ನಿರ್ಮಾಣ ಮಾಡಲು ಅವಿರತವಾಗಿ ಶ್ರಮಿಸಿದ ಅಸಮಾನ್ಯ ವ್ಯಕ್ತಿಯಾಗಿ ಉಳಿದಿದ್ದಾರೆ.

ಶಿಕ್ಷಣ, ಸಂಘಟನೆ, ಹೋರಾಟ ಇವು ಅಂಬೇಡ್ಕರ್‌ವಾದದ ಬಹುಮುಖ್ಯ ಅಂಗಗಳಾಗಿದ್ದವು. ಇವು ಅಸ್ಪೃಶ್ಯತೆಯ ನಿವಾರಣೆಗೆ ಅಂಬೇಡ್ಕರ್ ಕಂಡುಕೊಂಡ ಮಾರ್ಗಗಳಾಗಿದ್ದವು. ನಿಮ್ನ ವರ್ಗದವರ ಉದ್ಧಾರ ಕೇವಲ ಶಿಕ್ಷಣದಿಂದ ಮಾತ್ರ ಸಾಧ್ಯ ಎಂದು ಅವರಿಗಾಗಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲಾರಂಭಿಸಿದರು. ಅಸ್ಪೃಶ್ಯತೆಯ ನಾಶಕ್ಕಾಗಿ ಹೋರಾಟವನ್ನು ರೂಪಿಸಲು ಅಸ್ಪೃಶ್ಯವರ್ಗದವರ ಹಾಗೂ ಅಸ್ಪೃಶ್ಯತೆಯ ವಿರುದ್ಧವಾಗಿ ನಿಲ್ಲುವ ಸವರ್ಣೀಯರ ಸಂಘಟನೆಯಲ್ಲಿ ತೊಡಗಿದ್ದರು. ಕ್ರಾಂತಿಕಾರಕ ಹೋರಾಟಗಳನ್ನು ರೂಪಿಸಲು ಸಂಘಟನೆ ಬಹುಮುಖ್ಯ ಎಂದು ಅರಿತ ಅಂಬೇಡ್ಕರ್ ಶೋಷಿತ ಸಮುದಾಯಗಳು ಸಂಘಟನೆಗೊಳ್ಳಬೇಕು ಎಂದು ಒತ್ತಿ ಹೇಳುತ್ತಿದ್ದರು. ಅದಕ್ಕಾಗಿ 'ಸಮಾಜ್ ಸಮತಾ ಸಂಘ', 'ಸಮತಾ ಸೈನಿಕ ದಳ' ಎಂಬ ಎರಡು ಸಂಘಗಳನ್ನು ಸ್ಥಾಪಿಸಿ, ಅಸ್ಪೃಶ್ಯತೆಯ ಆಚರಣೆಯನ್ನು ನಾಶಪಡಿಸಲು ನಾಸಿಕ್‌ನ ಕಾಳಾರಾಮ ದೇವಾಲಯ ಪ್ರವೇಶ, ಮಹಾಡ್ ಚಳುವಳಿ, ಮನುಧರ್ಮಶಾಸ್ತ್ರವನ್ನು ಸುಡುವುದು ಹೀಗೆ ಹಲವು ಹೋರಾಟಗಳನ್ನು ಮಾಡುತ್ತಾರೆ. ಬ್ರಿಟೀಷರ ದುಂಡು ಮೇಜಿನ ಪರಿಷತ್ತಿನಲ್ಲಿ ನಿಮ್ನ ವರ್ಗಗಳ ದನಿಯಾಗಿ ಅವರ ಆಶೋತ್ತರಗಳನ್ನು ರಕ್ಷಿಸುವ ಸಲುವಾಗಿ ವಾದಮಂಡಿಸುತ್ತಾರೆ. ಇಲ್ಲಿ ಅವರು ಮಾಡಿದ ಸಾಧನೆಯೆಂದರೆ ನಿಮ್ನ

ವರ್ಗದವರ ಸಾಂಸ್ಕೃತಿಕ, ಧಾರ್ಮಿಕ, ಮತ್ತು ಆರ್ಥಿಕ ಹಕ್ಕುಗಳನ್ನು ರಕ್ಷಿಸುವುದಕ್ಕಾಗಿ ಹೊಸ ಸಂವಿಧಾನದ ಮೂಲಭೂತ ಹಕ್ಕುಗಳ ಘೋಷಣೆಯನ್ನು ಸಿದ್ಧಪಡಿಸಿದ್ದು. ಇದಕ್ಕಾಗಿ ಗಾಂಧಿಯನ್ನು ಸಹ ಮುಖಾಮುಖಿಯಾಗುತ್ತಾರೆ.

ನಿಮ್ನವರ್ಗದವರ ಬಗೆಗಿನ ಮೇಲ್ವರ್ಗದ ಸವರ್ಣೀಯ ಸುಧಾರಣಾವಾದಿಗಳ ಅನುಕಂಪ, ದಯೆಗಳನ್ನು ಅಂಬೇಡ್ಕರ್ ನಿರಾಕರಿಸುತ್ತಾರೆ. ಸಾಮಾಜಿಕ, ಧಾರ್ಮಿಕ, ರಾಜಕೀಯ ಅವಕಾಶಗಳು ಬಿಕ್ಷೆಗಳಲ್ಲ ಅವು ಅಸ್ಪೃಶ್ಯರ ಸಾಂವಿಧಾನಿಕ ಮೂಲಭೂತ ಹಕ್ಕುಗಳು ಎಂದು ನಿಮ್ನವರ್ಗದವರ ಘನತೆ, ಸ್ವಾಭಿಮಾನವನ್ನು ಎತ್ತಿಹಿಡಿಯುತ್ತಾರೆ. ಅಂಬೇಡ್ಕರ್ ವ್ಯಕ್ತಿತ್ವದ ಬಹುಮುಖ್ಯ ಗುಣ ಸ್ವಾಭಿಮಾನ. ತಮ್ಮ ಘನತೆ ಮತ್ತು ಹಕ್ಕುಗಳಿಗೆ ಚ್ಯುತಿ ಬರುವುದನ್ನು ಸಹಿಸದ ಧೀರ ವ್ಯಕ್ತಿತ್ವ ಅವರದ್ದು. ಹಾಗೆಯೇ ಅಸ್ಪೃಶ್ಯ ಸಮುದಾಯದಲ್ಲಿ ಸ್ವಾಭಿಮಾನವನ್ನು ಜಾಗೃತಗೊಳಿಸಿದ ಕ್ರಾಂತಿಕಾರಿಯೂ ಹೌದು. ಹಾಗಾಗಿಯೇ ಗಾಂಧಿ ನಿಮ್ನ ವರ್ಗದವರನ್ನು 'ಹರಿಜನರು' ಎಂದು ಕರೆದುದಕ್ಕೆ ಅಂಬೇಡ್ಕರರ ವಿರೋಧವಿತ್ತು. 'ದಯೆ'ಯಿಂದ ಹೆಸರು ಬದಲಾಯಿಸುವುದಕ್ಕಿಂತ ಅವರ ಸಾಮಾಜಿಕ ಸ್ಥಿತಿಯನ್ನು ಬದಲಾಯಿಸುವುದು ಮುಖ್ಯ ಎಂದು ಹೇಳಿ 'ಹರಿಜನ' ಎಂಬ ಪದವನ್ನು ಬಳಸಬಾರದೆಂದು ಮನವಿ ಮಾಡಿಕೊಂಡಿದ್ದರು. ಪರಿಶಿಷ್ಟ ಜಾತಿಗಳು ಹಿಂದೂಗಳ ಹಿಡಿತಕ್ಕೆ ಸಿಲುಕದೆ ಆತ್ಮವಿಶ್ವಾಸದಿಂದ ಬದುಕುವಂತೆ ಮಾಡಲು ಎಷ್ಟು ರೀತಿಯಲ್ಲಿ ಪ್ರಯತ್ನಿಸಬಹುದೋ ಅಷ್ಟೂ ರೀತಿಯಲ್ಲಿ ಅಂಬೇಡ್ಕರ್ ಪ್ರಯತ್ನಿಸುತ್ತಿದ್ದರು. ಅಸ್ಪೃಶ್ಯ ಸಮುದಾಯಗಳಿಗೆ ಘನತೆಯನ್ನು ತಂದುಕೊಡಲು ಅವಿರತವಾಗಿ ಶ್ರಮಿಸಿದ ಅವರು ಅದಕ್ಕಾಗಿ ಪರಂಪರೆಯ ಶೋಧದಲ್ಲಿ ತೊಡಗುತ್ತಾರೆ. ಅವರ 'ಶೂದ್ರರು ಯಾರು'? ಕೃತಿಯಲ್ಲಿ ಶೂದ್ರರಿಗೆ ಚಾರಿತ್ರಿಕ ಅಧಿಕೃತತೆಯನ್ನು ಕಟ್ಟಿಕೊಡುವುದರ ಜೊತೆಗೆ ಹಿಂದೂ ಧರ್ಮದಲ್ಲೇ ಇದ್ದ ಸಂದಿಗ್ಧಗಳನ್ನು ಎತ್ತಿ ತೋರಿಸುವ ಕೆಲಸ ಮಾಡುತ್ತಾರೆ. ಅನೇಕ ಮಹತ್ವಪೂರ್ಣ ಚಾರಿತ್ರಿಕ ವಿವರಗಳ ಮೂಲಕ ಶೂದ್ರರು ಮೂಲತಹ ಕ್ಷತ್ರಿಯರಾಗಿದ್ದರು ಎಂದು ತಾರ್ಕಿಕವಾಗಿ ವಾದಮಂಡಿಸುತ್ತಾರೆ. ಅಸ್ಪೃಶ್ಯತೆಯ ನಿವಾರಣೆಗೆ ಉಪದೇಶಗಳಿಗಿಂತ ಮುಖ್ಯವಾಗಿ ಆ ಸಮುದಾಯಗಳಿಗೆ ಶಿಕ್ಷಣ, ಸರ್ಕಾರಿ ಉದ್ಯೋಗ ಮತ್ತು ರಾಜಕೀಯ ಅಧಿಕಾರಗಳು ಸಿಗಬೇಕು ಎಂದು ಆ ನಿಟ್ಟಿನಲ್ಲಿ ಅಸ್ಪೃಶ್ಯರಿಗೆ ಸಾಂವಿಧಾನಿಕ ಕಾನೂನುಗಳನ್ನು ರೂಪಿಸಿಕೊಡುವ ಕೆಲಸ ಮಾಡುತ್ತಾರೆ.

ಅಸ್ಪೃಶ್ಯತೆಯ ನಿವಾರಣೆಗೆ ಅಂಬೇಡ್ಕರ್ ಇಷ್ಟೆಲ್ಲಾ ಹೋರಾಟ, ವಿರೋಧಗಳನ್ನು ಮಾಡುತ್ತಿದ್ದರೂ ಅವರು ಎಂದೂ ಸವರ್ಣೀಯರ ದ್ವೇಷಿಯಾಗಿರಲಿಲ್ಲ. ಅವರ ವಿರೋಧವಿದ್ದದ್ದು ಬ್ರಾಹ್ಮಣಿಕೆಗೆ ಹೊರತು ಬ್ರಾಹ್ಮಣರ ಬಗೆಗಲ್ಲ. ಬ್ರಾಹ್ಮಣಿಕೆ ಎಂಬುದು ಸಾಮಾಜಿಕ ಮನಸ್ಥಿತಿ. ಅದು ನಾಶವಾಗಬೇಕೆಂಬುದು ಅಂಬೇಡ್ಕರರ ನಿಲುವಾಗಿತ್ತು. ಅದಕ್ಕಾಗಿಯೇ ಅಸ್ಪೃಶ್ಯತೆಯ ನಿವಾರಣೆಯಲ್ಲಿ ಸವರ್ಣೀಯ ಹಿಂದೂ ಸುಧಾರಣಾವಾದಿಗಳು ಕೈಜೋಡಿಸಬೇಕೆಂದು ಕರೆನೀಡುತ್ತಾರೆ. ಮುಖ್ಯವಾಹಿನಿಯಲ್ಲಿದ್ದ ಸವರ್ಣೀಯ ಹಿಂದೂಗಳ ಜೊತೆಯಲ್ಲಿ ಯಾವುದೋ ಒಂದು ರೀತಿಯ ಒಪ್ಪಂದದ ಮೂಲಕವೇ ಹಿಂದುಳಿದ ವರ್ಗ ಮತ್ತು ಪರಿಶಿಷ್ಟ ಜಾತಿಗಳು ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಬೇಕು ಎಂದು ಅಂಬೇಡ್ಕರ್‌ಗೆ ಖಚಿತವಾಗಿ ಮನವರಿಕೆಯಾಗಿತ್ತು. ಅವರ ರಾಜಕೀಯ ತಾತ್ವಿಕತೆಯಲ್ಲಿ ಉಂಟಾದ ಮಹತ್ವದ ಬದಲಾವಣೆ ಇದು.

ಅಸ್ಪೃಶ್ಯರು ಮತ್ತು ದಮನಿತರಿಗೆ ಸಾಮಾಜಿಕ ಮನ್ನಣೆ ಮತ್ತು ಸವಲತ್ತುಗಳನ್ನು ತಂದುಕೊಡುವುದಷ್ಟಕ್ಕೇ ಅಂಬೇಡ್ಕರ್‌ರ ಹೋರಾಟ ಚಿಂತನೆಗಳು ಸೀಮಿತವಾಗಿರದೆ ಅವರನ್ನು ಎಲ್ಲ ಮನುಷ್ಯರಂತೆ ಬದುಕುವ ನೆಲೆಗೆ ಒಯ್ಯುವುದಾಗಿತ್ತು. ಹಾಗಾಗಿಯೇ ಗಾಂಧಿ ಮತ್ತು ಕಾಂಗ್ರೆಸ್ ಅಸ್ಪೃಶ್ಯರನ್ನು 'ಹರಿಜನ' ಎಂದು ಕರೆಯುವ ಮೂಲಕ ಅನುಕಂಪವನ್ನು ತೋರಲು ಪ್ರಯತ್ನಿಸಿದರೆ, ಅಂಬೇಡ್ಕರ್ ಅದನ್ನು ವಿರೋಧಿಸಿ ಆ ಸಮುದಾಯಕ್ಕೆ ಸಾಂವಿಧಾನಿಕ ಹಕ್ಕುಗಳನ್ನು, ರಾಜಕೀಯ ಅವಕಾಶಗಳನ್ನು ದೊರಕಿಸಿಕೊಡುವುದರ ಮೂಲಕ ಅವರಿಗೆ ಘನತೆಯನ್ನು ತಂದುಕೊಡಲು ಪ್ರಯತ್ನಿಸಿದರು.

ಅಂಬೇಡ್ಕರರ ಕಳಕಳಿ ಅಸ್ಪೃಶ್ಯ ಸಮುದಾಯಕ್ಕೆ ಸಮಾನತೆ, ರಾಜಕೀಯ ಅಧಿಕಾರಗಳನ್ನು ದೊರಕಿಸಿಕೊಟ್ಟು ಅವರನ್ನು ಅಮಾನವೀಯ ಸಾಮಾಜಿಕ ವಾತಾವರಣದಿಂದ ಮೇಲೆತ್ತುವುದಾಗಿತ್ತು. ಹಾಗಾಗಿ ಅವರು ನಿಧಾನಗತಿಯ, ಅನುಕಂಪದ ಆಧಾರದ ಪ್ರಯತ್ನಗಳನ್ನು ವಿರೋಧಿಸುತ್ತಿದ್ದರು. ಹಾಗಾಗಿ ದುಂಡು ಮೇಜಿನ ಸಮ್ಮೇಳನಗಳಲ್ಲಿ ಈ ಬಗೆಗೆ ಒತ್ತಡಗಳನ್ನು ಹಾಕುತ್ತಾರೆ. ಗಾಂಧೀಜಿ ಹಾಗೂ ಕಾಂಗ್ರೆಸ್ ಜೊತೆ ವಿರೋಧ ಕಟ್ಟಿಕೊಳ್ಳುತ್ತಾರೆ. ಅಸ್ಪೃಶ್ಯರಿಗೆ ಸಾಂವಿಧಾನಿಕವಾಗಿ ರಾಜಕೀಯ ಹಕ್ಕುಗಳನ್ನು ದೊರಕಿಸಿಕೊಡುವ ಕಡೆಗೆ ಪ್ರಯತ್ನಿಸುತ್ತಾರೆ. ಕೊನೆಗೆ ಹಿಂದೂ ಧರ್ಮ, ಸಮಾಜದ ಸುಧಾರಣೆ ಅಸಾಧ್ಯ ಎಂದಾದಾಗ ಅಸ್ಪೃಶ್ಯ ಸಮುದಾಯಕ್ಕೆ ಹೊಸ ಧಾರ್ಮಿಕ ಅವಕಾಶಗಳನ್ನು ತೋರಿಸಿಕೊಡುತ್ತಾರೆ. ಬೌದ್ಧ ಧರ್ಮ ಸ್ವೀಕಾರ ದಲಿತರ ವಿಮೋಚನೆಯ ದಾರಿಯಾಗಿ ಅವರಿಗೆ ಗೋಚರವಾಗುತ್ತದೆ.

ಅಂಬೇಡ್ಕರ್ ನಾಸ್ತಿಕರೇನಲ್ಲ. ಹಾಗೆಂದ ಮಾತ್ರಕ್ಕೆ ಕುರುಡು ಆಸ್ತಿಕರೇನೂ ಆಗಿರಲಿಲ್ಲ. ಧರ್ಮಗಳ ಜೀವವಿರೋಧಿ ನಿಲುವುಗಳನ್ನು ಮೂಢ ಆಚರಣೆಗಳನ್ನು ಕಟುವಾಗಿ ವಿರೋಧಿಸುತ್ತಿದ್ದರು. ಧರ್ಮವನ್ನು ಅವರು ಬದುಕಿನ ಮೌಲ್ಯಗಳ ರೂಪದಲ್ಲಿ ಗ್ರಹಿಸುತ್ತಿದ್ದರು. ಬದುಕಿನಲ್ಲಿ ಸಂಸ್ಕಾರವಂತರಾಗಿ ಬದುಕಲು ಧರ್ಮ ಬೇಕೇಬೇಕು ಎಂದು ನಂಬಿದ್ದರು. ಮನುಷ್ಯನಲ್ಲಿ ನೈತಿಕತೆ, ಶೀಲಗಳನ್ನು ಬೆಳೆಸಲು ಧರ್ಮ ಅವಶ್ಯಕ ಎಂದು ಪ್ರತಿಪಾದಿಸಿದರು. "ನನ್ನ ಇಬ್ಬರು ಅಕ್ಕಂದಿರು ತಮ್ಮ ಮಧುರವಾದ ಧ್ವನಿಯಲ್ಲಿ ಭಜನೆ ಹೇಳುತ್ತಿದ್ದಾಗ ನನಗನಿಸುತ್ತಿದ್ದುದು ಮಾನವರಾಗಿ ಬದುಕಲು ಧರ್ಮ ಮತ್ತು ಧಾರ್ಮಿಕ ಶಿಕ್ಷಣ ನಮಗೆ ಅಗತ್ಯವೆಂದು. ನನ್ನನ್ನು ಅನೇಕರು 'ಧರ್ಮಹೀನ' ಎಂದು ತಿಳಿಯುತ್ತಾರೆ. ಅದು ಸರಿಯಲ್ಲ. ಧರ್ಮದ ವಿಷಯದಲ್ಲಿ ನನಗಿರುವ ಶ್ರದ್ಧೆ ಮತ್ತು ಪ್ರೀತಿ ಏನೆಂಬುದನ್ನು ನನ್ನ ಸಂಪರ್ಕಕ್ಕೆ ಬಂದವರಿಗೆ ಚೆನ್ನಾಗಿ ಗೊತ್ತಿದೆ."[3] ಅಂಬೇಡ್ಕರರ ಈ ಮಾತುಗಳಲ್ಲಿ ಬಾಲ್ಯದಿಂದಲೂ ಅವರ ಮೇಲೆ ಪ್ರಭಾವ ಬೀರಿದ ಧರ್ಮದ ಸ್ವರೂಪವನ್ನು ಕಾಣಬಹುದು. ಅಂಬೇಡ್ಕರರ ವ್ಯಕ್ತಿತ್ವದ ಬಹುಮುಖ್ಯ ಗುಣಗಳಾದ ಮಾನವೀಯ ಅಂತಃಕರಣ, ಸ್ವಾಭಿಮಾನ, ದಿಟ್ಟತನ, ಪ್ರತಿಭಟಿಸುವ ಗುಣ, ಮುಂತಾದವುಗಳು ಬಂದದ್ದು ಕಬೀರ್ ಪಂಥದಿಂದಲೇ. ಹಾಗಾಗಿ ಮನುಷ್ಯನಲ್ಲಿ ಸಂಸ್ಕಾರಗಳನ್ನು, ವೈಚಾರಿಕತೆಯನ್ನು ಬೆಳೆಸುವ ಧರ್ಮವನ್ನು ಅವರು ಒಪ್ಪುತ್ತಿದ್ದರು.

ಅಂಬೇಡ್ಕರ್ ಹಿಂದೂ ಧರ್ಮವನ್ನು ತಿರಸ್ಕರಿಸಿ ಬೌದ್ಧಧರ್ಮವನ್ನು ಸ್ವೀಕರಿಸಿದ ಸಂದರ್ಭದಲ್ಲಿ ಅನೇಕ ಟೀಕೆಗಳು ವ್ಯಕ್ತವಾಗುತ್ತವೆ. ಪಂಡಿತ ಸಾತವಾಲೇಕರರು 'ಅಂಬೇಡ್ಕರರು ಮತಾಂತರಗೊಳ್ಳುವ ಮೂಲಕ ತಮ್ಮ ಸ್ವಂತದ ಹಿರಿಮೆಯನ್ನೇ ಕಳೆದುಕೊಳ್ಳುವರು' ಎಂದು ಟೀಕಿಸುತ್ತಾರೆ. ಇದಕ್ಕೆ ಉತ್ತರ ರೂಪದಲ್ಲಿ ಅಂಬೇಡ್ಕರ್

ಹೇಳುವ ಮಾತುಗಳು ಧರ್ಮದ ಬಗೆಗೆ ಅವರ ನಿಲುವುಗಳನ್ನು ಸ್ಪಷ್ಟಪಡಿಸುತ್ತದೆ. "ಬುದ್ಧಿವಂತಿಕೆ ಮತ್ತು ವಿದ್ವತ್ತಿನ ಕಾರಣಕ್ಕಾಗಿ ನನ್ನ ಹಿರಿಮೆಗೆ ಏನೂ ತೊಂದರೆಯಾಗದು. ಆದರೆ ಅಸ್ಪೃಶ್ಯನಾಗಿ ಉಳಿಯುವುದರಲ್ಲೇ ನನ್ನ ಹಿರಿಮೆ ಇದೆ ಎಂದಾದಲ್ಲಿ ತಮ್ಮ ಹಿರಿಮೆಯನ್ನು ಶಾಶ್ವತವಾಗಿ ಉಳಿಸುವ ಸಲುವಾಗಿ ಅಸ್ಪೃಶ್ಯರೆನಿಸುವವರು ಸದಾ ಕಾಲಕ್ಕೂ ಅಸ್ಪೃಶ್ಯರಾಗಿಯೇ ಉಳಿಯಬೇಕೆನ್ನುವುದು ವಿಚಿತ್ರವಷ್ಟೇ ಅಲ್ಲ, ಹುಚ್ಚೆನ್ನಬೇಕಾಗುತ್ತದೆ. ನನ್ನ ಅನಿಸಿಕೆಯೆಂದರೆ, ನನ್ನ ಹಿರಿಮೆ ಹೋಗುವುದಾದರೆ ಹೋಗಲಿ, ಆದರೆ ನಮ್ಮವರ ಏಳ್ಗೆ ಆಗಬೇಕು. ಅದೊಂದು ನನಗೆ ಬೇಕಾದುದು."[9] ಅವರ ಈ ಮಾತುಗಳು ಧರ್ಮ ಶೋಷಣೆಯ ಅಸ್ತ್ರವಾಗದೆ ಮನುಷ್ಯನ ಘನತೆಯನ್ನೂ, ಸಮಾನತೆಯನ್ನು ಪ್ರತಿಪಾದಿಸುವಂತಿರಬೇಕು. ಅದಲ್ಲದ ಧರ್ಮ ಧರ್ಮವೇ ಅಲ್ಲ. ಅಂಥ ಧರ್ಮದಿಂದ ಹೊರನಡೆದಾಗ ಹಿರಿಮೆಗೆ ಚ್ಯುತಿ ಬಂದರೆ ಬರಲಿ. ಅಸ್ಪೃಶ್ಯರ ಏಳ್ಗೆ ತಮಗೆ ಮುಖ್ಯ ಎಂಬ ಅವರ ನಿಲುವಿನ ಹಿಂದಿನ ಕಾಳಜಿ ಮತ್ತು ದಿಟ್ಟತನಗಳನ್ನು ಗಮನಿಸಬೇಕು. ಮುಂದುವರಿದು ಧರ್ಮ ತಮ್ಮ ವ್ಯಕ್ತಿತ್ವದ ಮೇಲೆ ಬೀರಿದ ಸಕಾರಾತ್ಮಕ ಪರಿಣಾಮಗಳ ಬಗೆಗೆ ಹೀಗೆ ಹೇಳುತ್ತಾರೆ. "ಧರ್ಮವು ಅಫೀಮಿನ ಮಾತ್ರೆಯೆಂದು ಕೆಲವರು ಹೇಳುವುದಿದೆ. ಆದರೆ ಅದು ಸರಿಯಲ್ಲ. ನನ್ನಲ್ಲಿರುವ ಒಳ್ಳೆಯ ಗುಣಗಳು ಅಥವಾ ನನ್ನ ಶಿಕ್ಷಣದಿಂದಾಗಿ ಸಮಾಜಕ್ಕೇನಾದರೂ ಒಳ್ಳೆಯದಾಗಿದ್ದಲ್ಲಿ ಅದಕ್ಕೆ ಕಾರಣ ನನ್ನ ಅಂತರ್ಮನದಲ್ಲಿನ ಧಾರ್ಮಿಕತೆಯೇ ವಿನಃ ಬೇರೇನೂ ಅಲ್ಲ. ನನಗೆ ಧರ್ಮಬೇಕು. ಆದರೆ ಧರ್ಮದ ಹೆಸರಿನಲ್ಲಿ ನಡೆಯುವ ವಿವಂಚನೆಯಲ್ಲ."[10] ಧರ್ಮ ಮತ್ತು ಧರ್ಮ ಕೊಡುವ ಶಿಕ್ಷಣ ಹೇಗಿರಬೇಕು ಎಂಬುದಕ್ಕೆ ಸಂಬಂಧಿಸಿದಂತೆ ಅವರ ಈ ಮಾತುಗಳು ಸಮಾಜ ವಿರೋಧಿ ಧೋರಣೆಗಳನ್ನು ಬೆಳೆಸುವ ಧರ್ಮಗಳ ಬಗೆಗಿನ ಟೀಕೆಯೂ ಹೌದು.

ಅಂಬೇಡ್ಕರ್ ಶಿಕ್ಷಣ ತಜ್ಞರಾಗಿದ್ದರು. ಸ್ವತಹ ಅದ್ಭುತ ಜ್ಞಾನದಾಹಿಯಾದ ಅವರು ಅಸ್ಪೃಶ್ಯರಿಗೆ ತಾವು ಬದುಕುತ್ತಿರುವ ಅಮಾನವೀಯ ಸ್ಥಿತಿಯ ಅರಿವನ್ನು ಮತ್ತು ಪರಂಪರೆಯ ತಿಳುವಳಿಕೆಯನ್ನು ಪಡೆಯಲು ಶಿಕ್ಷಣ ಅಗತ್ಯ ಎಂದು ಪ್ರತಿಪಾದಿಸುತ್ತಾರೆ. ಅಸ್ಪೃಶ್ಯ ಸಮಾಜದ ನಾಯಕರಾದ ಅವರು ತಮ್ಮ ಹೋರಾಟದ ಮೊದಲ ಹಂತದ ಸಮಾಜಕಾರ್ಯವಾಗಿ ಅಸ್ಪೃಶ್ಯರಿಗೆ ಶಿಕ್ಷಣ ಮತ್ತು ಸರ್ಕಾರಿ ನೌಕರಿಗಳನ್ನು ಕೊಡಿಸುವ ಕೆಲಸದಲ್ಲಿ ತೊಡಗಿಕೊಳ್ಳುತ್ತಾರೆ. ಅಂಬೇಡ್ಕರ್ ಅವರು ಶಿಕ್ಷಣಕ್ಕೆ ಒತ್ತುಕೊಟ್ಟಿದ್ದರ ಹಿಂದಿನ ಉದ್ದೇಶ ಹಿಂದೂ ಸಮಾಜದ ಸುಧಾರಣೆಯಾಗಿತ್ತು. ಹಿಂದೂ ಸಮಾಜವನ್ನು ಉಳಿಸಲು ಮತ್ತು ಹಿಂದೂ ರಾಷ್ಟ್ರವನ್ನು ಸ್ವತಂತ್ರಗೊಳಿಸಲು ಅಸ್ಪೃಶ್ಯರೆನ್ನಲಾಗುವ ದೇಶದ ಮೂರನೇ ಒಂದು ಭಾಗದ ಜನರನ್ನು ಶಿಕ್ಷಿತರನ್ನಾಗಿ ಮಾಡಬೇಕಾಗಿದೆ ಎಂಬ ಅಭಿಪ್ರಾಯ ಹೊಂದಿದ್ದರು. ಸ್ವತಹ ತಮ್ಮ ಉನ್ನತ ವಿದ್ಯಾಭ್ಯಾಸಕ್ಕಾಗಿ ಅಂಬೇಡ್ಕರ್ ಪಟ್ಟಂತ ಪಾಡು ಅತ್ಯಂತ ಶೋಚನೀಯ ಮತ್ತು ಪರಿಶ್ರಮದ್ದಾಗಿತ್ತು. ಓದಿನ ಸಲುವಾಗಿ ಹೊಟ್ಟೆ ಖಾಲಿಯಿರಿಸಬೇಕಾಗಿ ಬಂದರೂ ನಡೆದೀತು, ಆದರೆ ಶಿಕ್ಷಣದ ಮಹತ್ವವನ್ನು ಅಲಕ್ಷಿಸಲೇಬಾರದು ಎಂಬ ಕಠಿಣ ನಿಲುವು ಅವರದು. ಶಿಕ್ಷಣದಿಂದ ಎಂತಹ ವ್ಯಕ್ತಿಗಳನ್ನು ರೂಪಿಸಿ ಸಮಾಜಕ್ಕೆ ನೀಡಬೇಕು ಎಂಬುದರ ಬಗೆಗೆ ಅವರಿಗೆ ಸ್ಪಷ್ಟತೆಯಿತ್ತು. ಸ್ವಾಭಿಮಾನೀ, ಸಾಹಸೀ ವ್ಯಕ್ತಿತ್ವಗಳು ಶಿಕ್ಷಣದಿಂದ ರೂಪುಗೊಳ್ಳಬೇಕು ಎಂಬುದನ್ನು ಹೇಳಲು ಸ್ವತಹ ತಮ್ಮದೇ ಉದಾಹರಣೆ ನೀಡುತ್ತಾರೆ. "ನಾನೀಗ ಪಡೆದಿರುವ ಯೋಗ್ಯತೆಯಿಂದಾಗಿ ಯಾವುದೇ ಸರಕಾರಿ ಹುದ್ದೆಯನ್ನು ಸಮರ್ಥವಾಗಿ ನಿಭಾಯಿಸಬಲ್ಲೆ. ನಮ್ಮ ಸಮಾಜದ ಏಳ್ಗೆಗಾಗಿ ನಮಗೀಗ ಅಂತಹವರ ಅಗತ್ಯವಿದೆ. ಆಡಳಿತದ ಈ ಕೋಟೆಯಲ್ಲಿ

ಯಾವುದೇ ಸಾರ್ವಜನಿಕ ಮಹತ್ವದ ಸ್ಥಾನದಲ್ಲಿದ್ದು ವೈರಿಗಳನ್ನು ಸೋಲಿಸಬಲ್ಲ ಮತ್ತು ನಮ್ಮ ಬಡಜನರ ಕಷ್ಟ ಸುಖಗಳನ್ನು ವಿಚಾರಿಸಿಕೊಳ್ಳಬಲ್ಲ ಜನಗಳು ನಮಗೆ ಬೇಕು"[6] ಶಿಕ್ಷಣ ಸಮಾಜದ, ಸಮುದಾಯದ ಏಳ್ಗೆಗಾಗಿ ಅರ್ಪಣಾ ಮನೋಭಾವದಿಂದ ದುಡಿಯುವ ಮನಸ್ಥಿತಿಯನ್ನು ಬೆಳೆಸಬೇಕೆಂಬ ಅಂಬೇಡ್ಕರರ ನಿಲುವು ಅವರ ಮಾತುಗಳಲ್ಲಿ ವ್ಯಕ್ತವಾಗುತ್ತದೆ.

ಅಂಬೇಡ್ಕರ್ ಹೇಳುತ್ತಿದ್ದ ಶಿಕ್ಷಣ, ಸಂಘಟನೆ, ಹೋರಾಟ ಈ ಮೂರು ಸೂತ್ರಗಳಲ್ಲಿ ಶಿಕ್ಷಣಕ್ಕೆ ಮೊದಲ ಆದ್ಯತೆ ನೀಡಿದ್ದರು. ಶಿಕ್ಷಣದಲ್ಲಿ ಶೀಲಕ್ಕೆ ಹೆಚ್ಚು ಮಹತ್ವ ನೀಡುತ್ತಿದ್ದರು. ವಿದ್ಯೆ, ಪ್ರಜ್ಞೆ, ಕರುಣೆ, ಶೀಲ ಮತ್ತು ಸ್ನೇಹ ಈ ಪಂಚತತ್ವಗಳನ್ನು ಆಧರಿಸಿ ಪ್ರತಿಯೊಬ್ಬರು ತಮ್ಮ ಜೀವನವನ್ನು ರೂಪಿಸಿಕೊಳ್ಳಬೇಕು ಎನ್ನುತ್ತಿದ್ದರು. ಜ್ಞಾನವನ್ನು ಕರುಣೆ ಮತ್ತು ಸ್ನೇಹದ ಜೊತೆ ಬೆಸೆಯಬೇಕು ಎನ್ನುತ್ತಿದ್ದರು. "ಶಿಕ್ಷಣಕ್ಕೆ ಹೆಚ್ಚಿನ ಮಹತ್ವವಿರುವುದು ನಿಜವೇ ಆದರೆ, ಶಿಕ್ಷಣದ ಜತೆಯಲ್ಲಿ ವ್ಯಕ್ತಿಯ ಶೀಲವೂ ಬೆಳೆಯಬೇಕು. ಶೀಲವಿಲ್ಲದೆ ಶಿಕ್ಷಣ ಬರಿಯ ಸೊನ್ನೆ. ಜ್ಞಾನವು ಖಡ್ಗದ ಅಲಗಿನಂತೆ, ಖಡ್ಗದ ಸದುಪಯೋಗವಾಗಬಹುದು ಅಥವಾ ದುರುಪಯೋಗವಾಗಬಹುದು. ಅದು ಅವಲಂಬಿತವಾಗಿರುವುದು ಅದನ್ನು ಧರಿಸಿದವನ ಶೀಲದ ಮೇಲೆ. ಅದರಿಂದ ಯಾರದೇ ಕೊಲೆ ಮಾಡಬಹುದು ಅಥವಾ ರಕ್ಷಣೆಯನ್ನು ಮಾಡಬಹುದು. ಓದು ಬರೆಹ ಬಲ್ಲವನು ಶೀಲವಂತನೂ ಆಗಿದ್ದಲ್ಲಿ ತನ್ನ ಜ್ಞಾನವನ್ನು ಅವನು ಜನಹಿತಕ್ಕಾಗಿ ಬಳಸುತ್ತಾನೆ. ಆದರೆ ಅವನೇನಾದರೂ ದುರ್ಗುಣಿಯಾಗಿದ್ದಲ್ಲಿ ಜನರಿಗೆ ಕೇಡು ಸಹ ಬಗೆಯಬಹುದು"[7] ಈ ಮಾತುಗಳು ಅಂಬೇಡ್ಕರರಿಗಿದ್ದ ಶಿಕ್ಷಣದ ಸ್ವರೂಪ ಮತ್ತು ಅದರ ಹೊಣೆಗಾರಿಕೆಗಳು ಹೇಗಿರಬೇಕೆಂಬುದರ ಸ್ಪಷ್ಟತೆಯನ್ನು ಧ್ವನಿಸುತ್ತವೆ. ಆ ಮೂಲಕ ಒಂದು ಸುಶಿಕ್ಷಿತ, ಸಮಾನತೆಯ ಮತ್ತು ಶೀಲವಂತ ರಾಷ್ಟ್ರವನ್ನು ನಿರ್ಮಿಸುವ ಕನಸು ಕಂಡಿದ್ದರು. ಜಾತಿ ಕೇಂದ್ರಿತ ಮತ್ತು ಜಾತಿಯೇ ತುಂಬಿರುವ, ಜಾತಿ ಮನಸ್ಸುಗಳನ್ನು ಬೆಳೆಸುವ ಶಿಕ್ಷಣ ಜಡವಾದುದು, ಆಧುನಿಕತೆಯಿಂದ ವಿಮುಖವಾದ ಶಿಕ್ಷಣದಿಂದ ಪ್ರಯೋಜನವಿಲ್ಲ, ದಲಿತವರ್ಗದವರಿಗೆ ತಾವು ಗುಲಾಮರಾದುದೇಕೆ? ತಮ್ಮ ಏಳ್ಗೆಗೆ ಅಡ್ಡಿಯಾಗುತ್ತಿರುವುದು ಯಾವುದು ಎಂಬ ಅರಿವನ್ನು ಮೂಡಿಸಿ ಮೊದಲಿಗೆ ಅವರ ಕೀಳರಿಮೆಯನ್ನು, ಅಜ್ಞಾನವನ್ನು ಶಿಕ್ಷಣ ನಿವಾರಿಸುವಂತಾಗಬೇಕು. ಆ ಮೂಲಕ ಸಾಮಾಜಿಕ ವ್ಯವಸ್ಥೆಯಲ್ಲಿ ಅವರಿಗಾಗುತ್ತಿರುವ ಹಾನಿ ಏನು ಎಂಬುದನ್ನು ಅರಿಯವಂತೆ ಮಾಡುವುದು ಅವರ ಸ್ವಂತದ ಹಾಗೂ ರಾಷ್ಟ್ರಹಿತದ ದೃಷ್ಟಿಯಿಂದ ತೀರಾ ಅಗತ್ಯವಾದುದಾಗಿದೆ. ನಮ್ಮೆಲ್ಲ ಸಾಮಾಜಿಕ ನೋವಿಗೆ ಇದೊಂದೇ ಔಷಧಿ ಎನ್ನುತ್ತಿದ್ದರು. ಇವು ಅಂಬೇಡ್ಕರ್‌ರ ಶಿಕ್ಷಣವನ್ನು ಕುರಿತ ಚಿಂತನೆಗಳಾಗಿವೆ. ಇವು ಅಂಬೇಡ್ಕರರ ವ್ಯಕ್ತಿತ್ವದ ಬೇರೆ ಬೇರೆ ಮುಖಗಳನ್ನು ದರ್ಶಿಸುತ್ತವೆ.

ಅಂಬೇಡ್ಕರ್ ವ್ಯಕ್ತಿತ್ವವನ್ನು ಸೀಮಿತ ಚೌಕಟ್ಟುಗಳಲ್ಲಿ ಬಿಂಬಿಸಿ ಒಟ್ಟು ರಾಷ್ಟ್ರದ ಸಾಂಸ್ಕೃತಿಕ ಬದುಕನ್ನು ರೂಪಿಸಿಕೊಳ್ಳುವ ಕ್ರಿಯೆಯಿಂದ ಅವರ ಚಿಂತನೆಗಳನ್ನು ದೂರವಿರಿಸಲಾಗುತ್ತಿರುವ ರಾಜಕಾರಣಗಳನ್ನು ಗುರುತಿಸಿಕೊಳ್ಳಬೇಕಾದ ಅಗತ್ಯ ಇಂದು ಬಹುಮುಖ್ಯವಾದುದಾಗಿದೆ. ಹಾಗೂ ಆ ಸೀಮಿತ ಪರಿಧಿಯಾಚೆಗೆ ಅಂಬೇಡ್ಕರ್ ಏನು ಎಂಬುದನ್ನು ಅವರ ಬರೆಹ, ಚಿಂತನೆ, ಹೋರಾಟ, ಬದುಕಿನ ಮೂಲಕ ಕಟ್ಟಿಕೊಡಬೇಕಾದ ಅನಿವಾರ್ಯತೆಯಿದೆ. ಇಲ್ಲವಾದಲ್ಲಿ ಅಂಬೇಡ್ಕರರ ಬಹುಮುಖ ವ್ಯಕ್ತಿತ್ವ ಅನಾವರಣಗೊಳ್ಳುವುದೇ ಇಲ್ಲ. ಅವರು ಕೇವಲ ಸಂವಿಧಾನ ಶಿಲ್ಪಿಯಾಗಿ, ದಲಿತ ಸಮುದಾಯದ ನಾಯಕರಾಗಿ ಮಾತ್ರ ಉಳಿದುಬಿಡುತ್ತಾರೆ. ಆಧುನಿಕ

ಭಾರತದ ಮುಂಚೂಣಿಯ ನಾಯಕರಾದ ಅಂಬೇಡ್ಕರ್ ವ್ಯಕ್ತಿತ್ವದಲ್ಲಿನ ತಾಯ್ತನದ ಗುಣಗಳನ್ನು, ಹಂಬಲಗಳನ್ನು ಗುರುತಿಸಿಕೊಳ್ಳಬೇಕಾದ ತುರ್ತು ಇದೆ. ಆಧುನಿಕ ಕನ್ನಡ ಕಾವ್ಯದಲ್ಲಿ ವಿಪುಲವಾಗಿ ರಚನೆಯಾಗಿರುವ ಅಂಬೇಡ್ಕರ್ ಕುರಿತ ವ್ಯಕ್ತಿಚಿತ್ರ ಕವಿತೆಗಳು ಅಂಬೇಡ್ಕರ್ ವ್ಯಕ್ತಿತ್ವದಲ್ಲಿನ ಉನ್ನತ ಗುಣಗಳನ್ನು ಸಮರ್ಥವಾಗಿ ಗುರುತಿಸುವ ಪ್ರಯತ್ನ ಮಾಡಿವೆ. ಅವುಗಳ ವಿಶ್ಲೇಷಣೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

## ೭.೨ ಆಧುನಿಕ ಕನ್ನಡ ಕಾವ್ಯ ಕಂಡ ಅಂಬೇಡ್ಕರ್ : ಅಸಮಾನತೆಯ ಆಕಾಶದಲ್ಲಿ ಕಂಡ ಸ್ವಾಭಿಮಾನದ ಸೂರ್ಯ

ಇಪ್ಪತ್ತನೆಯ ಶತಮಾನ ಕಂಡ ಬಹುದೊಡ್ಡ ಬೌದ್ಧಿಕ ಪ್ರತಿಭೆ ಅಂಬೇಡ್ಕರ್. ಹೋರಾಟಗಾರರಾಗಿ, ಜ್ಞಾನಿಯಾಗಿ, ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಚಿಂತಕರಾಗಿ, ಮಾನವೀಯ ಮಿಡತವುಳ್ಳ ವ್ಯಕ್ತಿಯಾಗಿ ತಮ್ಮ ವ್ಯಕ್ತಿತ್ವಕ್ಕೆ ಬಹುಮುಖತೆಯನ್ನು ತಂದುಕೊಂಡವರು. ಇಪ್ಪತ್ತನೆ ಶತಮಾನ ಹಾಗೂ ಆ ನಂತರದ ಈ ದೇಶದ ಚರಿತ್ರೆಯ ಎಲ್ಲಾ ಕ್ಷೇತ್ರಗಳನ್ನೂ ಆವರಿಸಿಕೊಂಡಿರುವ ವ್ಯಕ್ತಿತ್ವ ಅವರದು. ಭಾರತೀಯ ಸಮಾಜದ ಅನಿಷ್ಟ ಪದ್ಧತಿಯಾದ ಜಾತಿವ್ಯವಸ್ಥೆ ಹಾಗೂ ಅಸ್ಪೃಶ್ಯತಾಚರಣೆಯ ವಿರುದ್ಧ ಸಿಡಿದೆದ್ದು, ಹೋರಾಟವನ್ನು ರೂಪಿಸಿದವರು. ಜಾತಿರಹಿತ, ಶೋಷಣೆರಹಿತ, ಸಮಾನತೆ, ಸೋದರತೆಯ ಸಮಾಜ ರಚನೆಯ ಕನಸು ಕಂಡವರು. ಈ ದೇಶದ ಸಮಾಜ ರಚನೆಯ ಆಳ-ಹರವುಗಳನ್ನು ಅರಿತು ಅದರ ದೋಷ - ದೌರ್ಬಲ್ಯಗಳನ್ನು ಮೊದಲಿಗೆ ಗುರುತಿಸಿ ಬದಲಾಯಿಸಹೊರಟವರು. ಹೀಗೆ ಬಹುಮುಖ ವ್ಯಕ್ತಿತ್ವವುಳ್ಳ ಚಿಂತಕ ಅಂಬೇಡ್ಕರ್. ಅವರು ಜಾಗತಿಕ ಪ್ರತಿಭೆಯಾಗಿ, ಎಲ್ಲಾ ಜೀವನ ಕ್ಷೇತ್ರಗಳನ್ನೂ ಪ್ರಭಾವಿಸಿದ್ದಾರೆ. ಈ ಹೊತ್ತಿನ ಎಲ್ಲಾ ಜ್ಞಾನಶಿಸ್ತುಗಳೂ ಬಹುಮುಖ್ಯವಾಗಿ ಅಂಬೇಡ್ಕರ್‌ರ ಚಿಂತನೆ, ತಾತ್ವಿಕತೆಗಳನ್ನು ಚರ್ಚಿಸುತ್ತಿವೆ. ಮತ್ತೆ ಮತ್ತೆ ಮುಖಾಮುಖಿಯಾಗುತ್ತಿವೆ. ಅವರ ಚಿಂತನೆಗಳ ಸತ್ವವನ್ನು ಮತ್ತು ಮಿತಿಗಳನ್ನು ಸಮಕಾಲೀನ ದೃಷ್ಟಿಕೋನಗಳಿಂದ ಪರಿಶೀಲಿಸುವ ಪ್ರಯತ್ನಗಳು ನಡೆಯುತ್ತಿವೆ. ಅಂಬೇಡ್ಕರ್ ಇಡೀ ನಮ್ಮ ಆಲೋಚನೆಯನ್ನೂ, ಬದುಕಿನ ಗತಿಯನ್ನು ಒಂದಲ್ಲಾ ಒಂದು ರೀತಿಯಲ್ಲಿ ಪ್ರಭಾವಿಸುತ್ತಾ ಬರುತ್ತಿದ್ದಾರೆ. ಉಳಿದ ಜ್ಞಾನಶಿಸ್ತುಗಳಂತೆಯೇ ಸಾಹಿತ್ಯದಂತ ಸೃಜನಶೀಲ ರಚನೆಗಳೂ ಕೂಡ ಅಂಬೇಡ್ಕರ್ ತಾತ್ವಿಕತೆಯಿಂದ ಹೊರತಾಗಿಲ್ಲ. ಇಪ್ಪತ್ತನೆ ಶತಮಾನದ ನಂತರದ ಭಾರತೀಯ ಎಲ್ಲಾ ಭಾಷೆಗಳ ಸಾಹಿತ್ಯ ರಚನೆಗಳೂ ಕೂಡ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಅಂಬೇಡ್ಕರ್ ತಾತ್ವಿಕತೆಯ ಪ್ರಭಾವಕ್ಕೆ ಒಳಗಾಗಿವೆ ಹಾಗೂ ಮುಖಾಮುಖಿಯಾಗಿವೆ. ಸಾಹಿತ್ಯಿಕ ಚಳುವಳಿಗಳ ಹಾಗೂ ಸಾಮಾಜಿಕ, ರಾಜಕೀಯ ಹೋರಾಟಗಳ ಹುಟ್ಟಿಗೆ ಕಾರಣವಾಗಿದೆ. ಆ ಮೂಲಕ ಸಾಮಾಜಿಕ ಜಾಗೃತಿಯನ್ನು ಮೂಡಿಸುತ್ತಾ ಬಂದಿದೆ.

ಆಧುನಿಕ ಕನ್ನಡ ಸಾಹಿತ್ಯವೂ ಕೂಡ ಅಂಬೇಡ್ಕರ್ ತಾತ್ವಿಕತೆಯಿಂದ ಪ್ರಭಾವಿತವಾಗಿದೆ. ಇಪ್ಪತ್ತನೆ ಶತಮಾನದ ಆರಂಭದಿಂದ ಇಂದಿನವರೆಗೆ ರಚನೆಗೊಂಡಿರುವ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ಅಂಬೇಡ್ಕರ್‌ರವರ ದಲಿತೋದ್ಧಾರದ ಚಿಂತನೆಗಳು ಮತ್ತು ಸಾಮಾಜಿಕ ನ್ಯಾಯದ ಆಲೋಚನೆಗಳು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಾಹಿತ್ಯವನ್ನು ಪ್ರಭಾವಿಸಿರುವುದನ್ನು ಕಾಣಬಹುದು. ಎಪ್ಪತ್ತು-ಎಂಭತ್ತರ ದಶಕದಲ್ಲಿ ಆರಂಭವಾದ ದಲಿತ - ಬಂಡಾಯ ಸಾಹಿತ್ಯ ಚಳುವಳಿಯಂತೂ ನೇರವಾಗಿ ಅಂಬೇಡ್ಕರ್ ಚಿಂತನೆ

ಹೋರಾಟಗಳ ಪ್ರಭಾವದಿಂದ ರೂಪುಗೊಂಡಂತವುಗಳಾಗಿವೆ. ಅಲ್ಲದೆ ದಲಿತ ಸಂಘರ್ಷ ಸಮಿತಿಯು ಸೇರಿದಂತೆ ಅನೇಕ ಪ್ರಗತಿಪರ ಸಂಘಟನೆಗಳು ಹಾಗೂ ಹೋರಾಟಗಳ ಹುಟ್ಟಿಗೆ ನೇರವಾಗಿಯೇ ಕಾರಣವಾಗಿದೆ. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ಅಂಬೇಡ್ಕರ್ 'ಅರಿವು' ಅಂತರ್ಗಾಮಿಯಾಗಿ ಜಾಗೃತಿಯನ್ನು ಮೂಡಿಸುತ್ತಾ ಬಂದಿದೆ. ಇಲ್ಲೆಲ್ಲಾ ಅಂಬೇಡ್ಕರ್‌ರವರ ವ್ಯಕ್ತಿತ್ವವನ್ನು, ಚಿಂತನೆ – ತಾತ್ವಿಕತೆಗಳನ್ನು ಅರಿಯುವ, ಬದಲಾದ ಕಾಲ ಮತ್ತು ಸಂದರ್ಭಗಳಲ್ಲಿ ಮರು ಅರ್ಥೈಸುವಿಕೆಗೆ ಒಳಪಡಿಸುವ, ಮುಖಾಮುಖಿಯಾಗುವ ಪ್ರಕ್ರಿಯೆಯನ್ನು ಕಾಣಬಹುದು. ಕನ್ನಡ ಸಾಹಿತ್ಯ ಪ್ರಕಾರಗಳಾದ ಕಥೆ, ಕಾದಂಬರಿ, ನಾಟಕ, ಪ್ರಬಂಧ, ಕವನ, ಆತ್ಮಕತೆ, ಮುಂತಾದ ಪ್ರಕಾರಗಳಲ್ಲಿ ಅಂಬೇಡ್ಕರ್ ತಾತ್ವಿಕತೆ ಮರುವ್ಯಾಖ್ಯಾನಕ್ಕೆ ಒಳಗಾಗುತ್ತಾ ಬಂದಿದೆ. ಅಂಬೇಡ್ಕರ್ ಚಿಂತನೆಗಳನ್ನು, ಅವುಗಳ ಪ್ರಾಯೋಗಿಕ ಸಾಧಕ – ಬಾಧಕಗಳನ್ನು ವಿಮರ್ಶಿಸುತ್ತಾ ಬರಲಾಗಿದೆ. ಕವನದಂತಹ ಸೂಕ್ಷ್ಮ, ಸಂಕೀರ್ಣ, ಸಂಗ್ರಹ, ಸಾಂಕೇತಿಕ ರೂಪದ ಸಾಹಿತ್ಯ ಪ್ರಕಾರವೊಂದು ಅಂಬೇಡ್ಕರ್ ವ್ಯಕ್ತಿತ್ವವನ್ನೂ, ತಾತ್ವಿಕತೆಯನ್ನೂ ನಿರ್ವಚಿಸುವ ಬಗೆ ವಿಶಿಷ್ಟವಾದುದಾಗಿರುತ್ತದೆ. ಹೊಸಗನ್ನಡ ಕಾವ್ಯ ತನ್ನ ಎಲ್ಲಾ ಚಾರಿತ್ರಿಕ ಸಂದರ್ಭದಲ್ಲಿ ಒಂದಿಲ್ಲೊಂದು ರೂಪದಲ್ಲಿ ಅಂಬೇಡ್ಕರ್ ಚಿಂತನೆಯೊಂದಿಗೆ ತನ್ನ ಸಂವಾದ ಸಂಘರ್ಷವನ್ನಿರಿಸಿಕೊಂಡು ಬಂದಿದೆ. ತನ್ನ ಸಹಮತವನ್ನೂ ತಾತ್ವಿಕ ಭಿನ್ನಾಭಿಪ್ರಾಯಗಳನ್ನೂ ವ್ಯಕ್ತಪಡಿಸುತ್ತಾ ಬಂದಿದೆ. ಅಂಬೇಡ್ಕರ್ ತಾತ್ವಿಕತೆಯನ್ನೇ ತನ್ನ ಪ್ರಣಾಳಿಕೆಯನ್ನಾಗಿ ಒಪ್ಪಿ ರಚನೆಗೊಂಡಿರುವ ದಲಿತ ಸಾಹಿತ್ಯವಿರಬಹುದು ಅಥವಾ ಉಳಿದ ಯಾವುದೇ ಸಾಹಿತ್ಯ ಚಳುವಳಿಗಳಿರಬಹುದು, ಇವೆಲ್ಲಾ ಅಂಬೇಡ್ಕರ್ ವ್ಯಕ್ತಿತ್ವ ಹಾಗೂ ತಾತ್ವಿಕತೆಗಳನ್ನು ಅರಿಯುವ, ನಿರ್ವಚಿಸುವ, ಮುಖಾಮುಖಿಯಾಗುವ ವಿಭಿನ್ನ ಪ್ರಯತ್ನಗಳಾಗಿ ರೂಪುಗೊಂಡಿವೆ.

ಆಧುನಿಕ ಕನ್ನಡ ಕಾವ್ಯದ ಎಲ್ಲಾ ಘಟ್ಟಗಳಲ್ಲೂ ಅಂಬೇಡ್ಕರ್ ಕುರಿತ 'ವ್ಯಕ್ತಿಚಿತ್ರ ಕವಿತೆಗಳು' ರಚನೆಗೊಂಡಿವೆ. ಈ ಸ್ವರೂಪದ ಕವಿತೆಗಳು ಅವರ ವ್ಯಕ್ತಿತ್ವ – ತಾತ್ವಿಕತೆಗಳನ್ನು ಕುರಿತ ಚರ್ಚೆಯನ್ನು ನೇರವಾಗಿಯೇ ಪ್ರಸ್ತಾಪಿಸಿ ಮಾತನಾಡುತ್ತವೆ. ವ್ಯಕ್ತಿತ್ವದ ಮೌಲಿಕ ಗುಣಗಳನ್ನು, ಮಿತಿಗಳನ್ನು, ತಾತ್ವಿಕತೆಯ ಸಾರ್ವಕಾಲಿಕತೆ, ಸಾರ್ವತ್ರಿಕತೆಯನ್ನೂ ಒರೆಗೆ ಹಚ್ಚಿ ನೋಡುವ ಜವಾಬ್ದಾರಿಯನ್ನು ತನ್ನ ಮೇಲೆ ಎಳೆದುಕೊಂಡಿರುವುದರಿಂದ ಸಹಜವಾಗಿಯೇ ಇಂಥ ಕವಿತೆಗಳು ಕುತೂಹಲಕಾರಿಯಾಗಿರುತ್ತವೆ. ಹಾಗಾಗಿ ಹೊಸಗನ್ನಡ ಕಾವ್ಯ ಸಂದರ್ಭದಲ್ಲಿ ಅಂಬೇಡ್ಕರ್‌ರವರನ್ನು ಕುರಿತ 'ವ್ಯಕ್ತಿಚಿತ್ರ ಕವಿತೆಗಳು' 'ಅಂಬೇಡ್ಕರ್ ವ್ಯಕ್ತಿತ್ವ'ದೊಂದಿಗೆ ನಡೆಸಿರುವ ಅನುಸಂಧಾನದ ಪ್ರಕ್ರಿಯೆಯನ್ನು ಪರಿಶೀಲಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಅಂಬೇಡ್ಕರ್‌ರವರನ್ನು ಕುರಿತು ರಚನೆಯಾಗಿರುವ ಕವಿತೆಗಳು ಅವರ ವ್ಯಕ್ತಿತ್ವ ಹಾಗೂ ತಾತ್ವಿಕತೆಗಳೊಂದಿಗೆ ನಡೆಸಿರುವ ಅನುಸಂಧಾನದ ಪ್ರಕ್ರಿಯೆಗಳನ್ನು ಬಹುಮುಖ್ಯವಾಗಿ ನಾಲ್ಕು ನೆಲೆಗಳಲ್ಲಿ ಗುರುತಿಸಿಕೊಂಡು ಚರ್ಚಿಸಲಾಗಿದೆ.

## ೧. ಅಂಬೇಡ್ಕರ್ ವ್ಯಕ್ತಿತ್ವದ ಅನನ್ಯತೆಯ ಶೋಧ : ಆಪ್ತತೆ ಮತ್ತು ಸಂಘರ್ಷದ ನೆಲೆ

ಅಂಬೇಡ್ಕರ್ ವ್ಯಕ್ತಿತ್ವವನ್ನು ಗ್ರಹಿಸುವುದೆಂದರೆ ಈ ದೇಶದ ಶೋಷಣೆಯ ಪರಂಪರೆಗಳನ್ನು ಓದಿದಂತೆ. ಶೋಷಿತರ ವಿಮೋಚನೆಗಾಗಿ, ಸಾಮಾಜಿಕ ಪರಿವರ್ತನೆಗಾಗಿ ಹೋರಾಡಿದ ಕ್ರಾಂತಿಕಾರಿ ವ್ಯಕ್ತಿತ್ವ ಅಂಬೇಡ್ಕರರದು. ಇಂತಹ ವ್ಯಕ್ತಿತ್ವದ ಜೊತೆಗೆ ದೊಡ್ಡ ಮಟ್ಟದಲ್ಲಿ ಕನ್ನಡದ ಪ್ರಜ್ಞೆ ಸಂವಾದಿಸಿದೆ. ಎಪ್ಪತ್ತರ ದಶಕದಿಂದೀಚೆಗೆ ಅಂಬೇಡ್ಕರ್ ಚಿಂತನೆ ಮತ್ತು ಹೋರಾಟಗಳಿಂದ ಸ್ಫೂರ್ತಿ ಪಡೆದ ಸಾಹಿತ್ಯ ಮತ್ತು ಚಳುವಳಿಗಳು ಅವರ ವ್ಯಕ್ತಿತ್ವವನ್ನು ಹಾಗೂ ಚಿಂತನೆ, ಹೋರಾಟಗಳ ಆಶಯಗಳನ್ನು ಮುನ್ನೆಲೆಗೆ ತರುವ ಪ್ರಯತ್ನ ಮಾಡಿವೆ. ದಲಿತ, ಬಂಡಾಯ ಸಾಹಿತ್ಯ ಚಳುವಳಿಯಂತೂ ನೇರವಾಗಿ ಅಂಬೇಡ್ಕರ್ ಚಿಂತನೆ, ಹೋರಾಟಗಳಿಂದ ಪ್ರಭಾವಿತವಾಗಿದ್ದು, ಇವುಗಳನ್ನೇ ಮುಖ್ಯವಾಗಿ ತನ್ನ ಹೋರಾಟದ ತಾತ್ವಿಕ ಭಿತ್ತಿಯನ್ನಾಗಿಸಿಕೊಂಡಿದೆ. ಅಂಬೇಡ್ಕರರದು ಸ್ವಾಭಿಮಾನಿ ಮತ್ತು ಮಾನವೀಯ ಕಳಕಳಿಯುಳ್ಳ ವ್ಯಕ್ತಿತ್ವ, ಸ್ವತಹ ಜಾತಿ ಶೋಷಣೆಯ ಹಲವು ಅನುಭವಗಳನ್ನು ಜೀವನದುದ್ದಕ್ಕೂ ಅನುಭವಿಸಿ ಅದರ ವಿರುದ್ಧ ಸಿಡಿದೆದ್ದ ಕ್ರಾಂತಿಕಾರಿ ಹೋರಾಟಗಾರ. ತಮ್ಮ ಇಡೀ ಬದುಕನ್ನು ಶೋಷಿತರ ವಿಮೋಚನೆಗಾಗಿ ವ್ಯಯಿಸಿದ ಕರುಣಾಮಯಿ. ಇಂತಹ ವ್ಯಕ್ತಿತ್ವವನ್ನು ಕನ್ನಡ ಕಾವ್ಯ ಕಟ್ಟಿಕೊಡುವ ವಿಧಾನವನ್ನು ಅರಿಯುವುದು ವಿಶಿಷ್ಟವಾದ ಅಧ್ಯಯನವಾಗುತ್ತದೆ. ಏಕೆಂದರೆ ಕನ್ನಡ ಕಾವ್ಯ ಅಂಬೇಡ್ಕರರ ವ್ಯಕ್ತಿತ್ವವನ್ನು ಅವರ ವ್ಯಕ್ತಿತ್ವದ ನಿಜ ವಿಸ್ತಾರದ ನೆಲೆಯಲ್ಲಿ ಗ್ರಹಿಸುತ್ತಿದೆಯೋ ಅಥವಾ ತನ್ನ ಸಂದರ್ಭದ ಪ್ರಶ್ನೆ, ನಿರೀಕ್ಷೆ, ಒತ್ತಡಗಳ ಹಿನ್ನೆಲೆಯಲ್ಲಿ ತನಗೆ ಬೇಕಾದ ವ್ಯಕ್ತಿತ್ವದ ಚಹರೆಗಳನ್ನು ಮಾತ್ರ ಆ ವ್ಯಕ್ತಿತ್ವದಲ್ಲಿ ಕಂಡುಕೊಳ್ಳುವ ಪ್ರಯತ್ನದಲ್ಲಿ ತೊಡಗಿದೆಯೋ? ಎಂಬ ಪ್ರಶ್ನೆಗಳು ಅತ್ಯಂತ ಮುಖ್ಯ. ಏಕೆಂದರೆ ಎಲ್ಲ ಬಗೆಯ ಶೋಷಿತರ ಪರವಾಗಿ ಹೋರಾಡಿದ, ಸಾಮಾಜಿಕ ಪರಿವರ್ತನೆಗಾಗಿ ಚಿಂತಿಸಿದ, ಬದುಕು, ಚಿಂತನೆ ಹೋರಾಟಗಳ ಮೂಲಕ ತಮ್ಮ ವ್ಯಕ್ತಿತ್ವಕ್ಕೆ ಬಹುದೊಡ್ಡ ವಿಸ್ತಾರವನ್ನು ತಂದುಕೊಂಡಿರುವ ಹಾಗೂ ಚರಿತ್ರೆಯಲ್ಲಿ ಬಹುಮುಖ್ಯ ಸ್ಥಾನವನ್ನು ಗಳಿಸಿಕೊಂಡಿರುವ ಪ್ರಭಾವಿ ವ್ಯಕ್ತಿತ್ವವೊಂದನ್ನು ಹೇಗೆ ಗ್ರಹಿಸಲಾಗುತ್ತಿದೆ ಮತ್ತು ಕಟ್ಟಿಕೊಡಲಾಗುತ್ತಿದೆ ಎಂಬುದು ಕುತೂಹಲಕಾರಿ ಅಷ್ಟೇ ಅಲ್ಲ. ಸಾಂಸ್ಕೃತಿಕ ಮಹತ್ವದ ಪ್ರಶ್ನೆಯೂ ಹೌದು.

ಇಂದಿಗೂ ಇರುವ ಅಸಮಾನತೆ, ಅಸ್ಪೃಶ್ಯತಾಚರಣೆ, ಜಾತಿಹಿಂಸೆಯ ಕ್ರೌರ್ಯಗಳು ಅಂಬೇಡ್ಕರರನ್ನು ಅತ್ಯಂತ ಪ್ರಸ್ತುತ ಮತ್ತು ಅನಿವಾರ್ಯವಾಗಿಸಿವೆ. ಅಸಹಾಯಕತೆ, ಅನಾಥತೆಯಿಂದ ನಲುಗಿಹೋಗುತ್ತಿರುವ ಶೋಷಿತ ಸಮುದಾಯಗಳು, ಸಾಮಾಜಿಕ ಮತ್ತು ರಾಜಕೀಯ ಕ್ರೂರ ವಾಸ್ತವವನ್ನು ಕಂಡು ಮರುಗುವ ಸೃಜನಶೀಲ ಮನಸ್ಸುಗಳು ಅಂಬೇಡ್ಕರ್ ಅವರೊಂದಿಗೆ ಸಂವಾದಿಸುವ ಮುಖಾಂತರ ವ್ಯವಸ್ಥೆಯ ಬಗೆಗಿನ ತಮ್ಮ ಅಸಮಾಧಾನವನ್ನೂ, ವಿರೋಧವನ್ನೂ ವ್ಯಕ್ತಪಡಿಸುತ್ತಿವೆ. ಸಮಕಾಲೀನ ಸಾಂಸ್ಕೃತಿಕ ಸವಾಲು – ಸಮಸ್ಯೆಗಳ ನಡುವೆ ಅಂಬೇಡ್ಕರ್ ವ್ಯಕ್ತಿತ್ವದ ಅನನ್ಯತೆಯನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಿವೆ. ತಮ್ಮ ಕಣ್ಣೆದುರಿನ ಅತ್ಯಂತ ಅಮಾನವೀಯ ನಡವಳಿಕೆಗಳನ್ನು ನಿವೇದಿಸಿಕೊಳ್ಳುವುದರ ಜೊತೆಗೇ ಅಂಬೇಡ್ಕರ್ ವ್ಯಕ್ತಿತ್ವದ ತಾಯ್ತನದ, ಮಾನವೀಯ ಮುಖಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

ಅಂಬೇಡ್ಕರರನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳು ಅವರ ಬಹುಮುಖ ವ್ಯಕ್ತಿತ್ವವನ್ನು ಕಟ್ಟಿಕೊಡುವ ಪ್ರಯತ್ನವನ್ನಷ್ಟೇ ಮಾಡದೆ ಸಮಕಾಲೀನ ಸಾಮಾಜಿಕ, ರಾಜಕೀಯ ಶೋಷಣೆಯ ಹಲವು ನೆಲೆಗಳನ್ನು ಅನಾವರಣ ಮಾಡುವುದರೊಂದಿಗೆ ಅವುಗಳ ವಿರುದ್ಧ ತೀವ್ರ ಪ್ರತಿಭಟನೆಯನ್ನು ಮಾಡುತ್ತಿವೆ. ವ್ಯವಸ್ಥೆಯ ಬಗೆಗಿನ ಅಸಮಧಾನ, ಆಕ್ರೋಶ, ಸಿಟ್ಟು, ನೋವು, ತಳಮಳ, ಆರ್ತತೆಗಳನ್ನು ಅಂಬೇಡ್ಕರ್ ಎಂಬ ಉಜ್ವಲ ವ್ಯಕ್ತಿತ್ವದ ಸ್ಫೂರ್ತಿಶಕ್ತಿಗಳೊಂದಿಗೆ ಹೊರಹಾಕುವ ವಿಶಿಷ್ಟ ಪ್ರಯತ್ನಗಳಾಗಿ ಕವಿತೆಗಳು ಮೂಡಿಬಂದಿವೆ. ಅಂಬೇಡ್ಕರ್ ವ್ಯಕ್ತಿತ್ವದ ಬೆಳಕಿನೊಂದಿಗೆ ಸಮಕಾಲೀನ ಚರಿತ್ರೆಯನ್ನು ಅರಿಯುವ ಹಾಗೂ ಕಟ್ಟುವ ಪ್ರಾಮಾಣಿಕ ಕೆಲಸವನ್ನು ನಿರ್ವಹಿಸುತ್ತಿವೆ. ಸಮಕಾಲೀನ ಶೋಷಿತ ಸಮುದಾಯಗಳ ಧಾರುಣಸ್ಥಿತಿ ಹಾಗೂ ಶೋಷಕ ಶಕ್ತಿಗಳ ರಾಜಕಾರಣಗಳ ನಡುವೆ ಅಂಬೇಡ್ಕರ್ ವ್ಯಕ್ತಿತ್ವದ ಅನನ್ಯತೆಯನ್ನು, ಮಹತ್ವವನ್ನು ಅರಿಯುವ ವಿಶಿಷ್ಟ ವಿಧಾನವನ್ನು ಕವಿತೆಗಳು ಅನುಸರಿಸಿವೆ.

ಎಲ್ಲಾ ಮಹಾನ್ ಚೇತನಗಳ ಹಾಗೆಯೇ ಅಂಬೇಡ್ಕರರ ವ್ಯಕ್ತಿತ್ವವೂ ಕೂಡ ಆರಾಧನೆಗೆ, ವೈಭವೀಕರಣಕ್ಕೆ ಒಳಗಾಗಿದೆ. ಅಂಬೇಡ್ಕರರನ್ನು ಕುರಿತು ಲಾವಣಿ, ಕೀರ್ತನೆ, ಸ್ತುತಿಗೀತೆ, ಹೋರಾಟದ ಹಾಡುಗಳೂ ರಚನೆಗೊಂಡಿವೆ. ಅಂಬೇಡ್ಕರರ ಬದುಕು ಮತ್ತು ಹೋರಾಟಗಳನ್ನು ಚಿತ್ರಿಸುವ, ಹೊಗಳುವ, ಕೀರ್ತಿಸುವ ಕವಿತೆಗಳೂ ಇವೆ. ಇವು ಅಂಬೇಡ್ಕರ್ ವ್ಯಕ್ತಿತ್ವವನ್ನು ಅದರ ನಿಜ ವಿಸ್ತಾರದ ನೆಲೆಯಲ್ಲಿ ಗ್ರಹಿಸುವಲ್ಲಿ ವಿಫಲವಾಗಿವೆ ಎಂದೇ ಹೇಳಬೇಕು. ಇನ್ನು ಕೆಲವು ಕವಿತೆಗಳು ಅಂಬೇಡ್ಕರರ ಸಂಕ್ಷಿಪ್ತ ಜೀವನ ಚರಿತ್ರೆಯ ಕಾವ್ಯಾಭಿವ್ಯಕ್ತಿಗಳ ಹಾಗೆ ಕಂಡುಬರುತ್ತವೆ. ಇವೂ ಕೂಡ ಅವರ ಬದುಕಿನ ವಿವರಗಳನ್ನಷ್ಟೇ ಒದಗಿಸುತ್ತವೆಯಲ್ಲದೆ ಸಾಹಿತ್ಯಿಕ ಮತ್ತು ಸಾಂಸ್ಕೃತಿಕವಾಗಿ ಮಹತ್ವವಲ್ಲದ ರಚನೆಗಳಾಗಿವೆ. ಇಂಥ ರಚನೆಗಳನ್ನು ಹೊರತುಪಡಿಸಿಯೂ ಅಂಬೇಡ್ಕರ್ ವ್ಯಕ್ತಿತ್ವದ ಬಹುಮುಖತೆಯನ್ನು, ಅನನ್ಯತೆಯನ್ನು ಗ್ರಹಿಸುವ, ಕಾವ್ಯಾತ್ಮಕವಾಗಿ ಕಟ್ಟಿಕೊಡುವ ವಿಶಿಷ್ಟ ಪ್ರಯತ್ನಗಳೂ ನಡೆದಿವೆ. ಅಂಬೇಡ್ಕರ್ ವ್ಯಕ್ತಿತ್ವದ ಹಲವು ಮುಖಗಳನ್ನು ಪ್ರತಿಮೆ, ರೂಪಕಗಳಲ್ಲಿ ಹಿಡಿದಿಡುವ ಮೂಲಕ ಆ ವ್ಯಕ್ತಿತ್ವಕ್ಕೆ ವಿಸ್ತಾರತೆಯನ್ನು, ವಿಶಿಷ್ಟ ಅರ್ಥವ್ಯಾಪ್ತಿಯನ್ನು ತಂದುಕೊಟ್ಟಿರುವ ಉತ್ತಮ ಕವಿತೆಗಳೂ ಇವೆ.

ಅಂಬೇಡ್ಕರ್ ಕುರಿತ ಕವಿತೆಗಳು ಅವರ ವ್ಯಕ್ತಿತ್ವವನ್ನು ಗ್ರಹಿಸುವಲ್ಲಿ ಪ್ರಧಾನವಾಗಿ ಎರಡು ನೆಲೆಗಳನ್ನು ಅನುಸರಿಸಿವೆ. ಒಂದು ಆಪ್ತತೆ, ಇನ್ನೊಂದು ಸಂಘರ್ಷದ ನೆಲೆ. ಅಸ್ಪೃಶ್ಯತೆಯ ನಿವಾರಣೆಗಾಗಿ, ಸಾಮಾಜಿಕ ಪರಿವರ್ತನೆಗಾಗಿ ತಮ್ಮ ಜೀವನದುದ್ದಕ್ಕೂ ಹೋರಾಡಿದ, ಅದಕ್ಕಾಗಿ ತಮ್ಮ ಇಡೀ ಜೀವನವನ್ನು ತೆತ್ತುಕೊಂಡ ಮಾನವತಾವಾದಿ ಅಂಬೇಡ್ಕರರನ್ನು ತಮ್ಮವರೆಂಬ ಅತಿಯಾದ ಸಲುಗೆ, ಆಪ್ತತೆ, ಕರುಳಬಳ್ಳಿಯ ಬಂಧುರತೆಯಿಂದ ಕಂಡು ಸಂವಾದಿಸಿರುವುದು ಈ ಕವಿತೆಗಳ ವಿಶೇಷ. ದೈವ– ಭಕ್ತರ, ತಾಯಿ–ಮಕ್ಕಳ, ದೀನ–ರಕ್ಷಕರ ನಡುವಿನ ಸಂಬಂಧದ ಎಳೆಗಳನ್ನು ತಮ್ಮ ನಾಯಕನೊಂದಿಗೆ ಏರ್ಪಡಿಸಿಕೊಂಡಿರುವುದು ಕಂಡುಬರುತ್ತದೆ. ಅಂಬೇಡ್ಕರರೊಂದಿಗೆ ಅತಿಯಾದ ಸಲುಗೆ, ನಿಷ್ಕಲ್ಮಷ ಪ್ರೀತಿ, ಅಪಾರವಾದ ಗೌರವ, ಬಲವಾದ ನಂಬಿಕೆಗಳು ಇಲ್ಲಿ ಪ್ರಕಟಗೊಂಡಿವೆ. ಅಂಬೇಡ್ಕರರಲ್ಲಿ ತಮ್ಮ ಬಂಧುವನ್ನು, ನಾಯಕನನ್ನು, ದೇವರನ್ನು, ರಕ್ಷಕನನ್ನು, ತಾಯಿ, ತಂದೆಯನ್ನು, ಸ್ನೇಹಿತನನ್ನು ಕಾಣುವ ಪ್ರಯತ್ನವನ್ನು ಕವಿತೆಗಳು ಮಾಡಿವೆ. ಅಸ್ಪೃಶ್ಯನಾಗಿ ಹುಟ್ಟಿ, ಶೋಷಣೆ, ಅವಮಾನಗಳನ್ನು ಸಹಿಸಿ, ಅಪಾರವಾದ ಪಾಂಡಿತ್ಯ, ಪ್ರತಿಭೆಯಿಂದ ಎತ್ತರಕ್ಕೆ ಬೆಳೆದು,

ಮಾನವೀಯ ಕಳಕಳಿಯಿಂದ ಎಲ್ಲರನ್ನೂ ತಬ್ಬಿಕೊಂಡ, ಅನ್ಯಾಯ ಅಸಮಾನತೆಯ ವಿರುದ್ಧ ಹೋರಾಡಿದ, ಕತ್ತಲಲ್ಲಿ ಬದುಕುತ್ತಿದ್ದವರಿಗೆ ಬೆಳಕಾಗಿ ಬಂದ, ಧೈನ್ಯತೆಯಲ್ಲಿ ಬದುಕುತ್ತಿದ್ದವರಲ್ಲಿ ಸ್ವಾಭಿಮಾನವನ್ನು ಬಡಿದೆಬ್ಬಿಸಿದ ಅಂಬೇಡ್ಕರ್ ವ್ಯಕ್ತಿತ್ವದಲ್ಲಿ ಮಾನವತೆಯ ಮೂರ್ತರೂಪವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿವೆ. ಬಹುಮುಖ್ಯವಾಗಿ ಅಂಬೇಡ್ಕರ್ ವ್ಯಕ್ತಿತ್ವದಲ್ಲಿ ತಾಯ್ತನದ ಮಮತೆಯನ್ನು ಕಾಣುವುದರೊಂದಿಗೆ ಆ ಮಮತೆಯ ಸಮೃದ್ಧತೆಯಲ್ಲೇ, ಕಣ್ಣ ಬೆಳಕಲ್ಲೇ ಮುಂದೆ ಸಾಗುವ ಪ್ರಾಮಾಣಿಕ ತುಡಿತವನ್ನು ವ್ಯಕ್ತಪಡಿಸುತ್ತವೆ.

ಅಂಬೇಡ್ಕರರ ಬಹುಮುಖ ವ್ಯಕ್ತಿತ್ವವನ್ನು ರೂಪಕಗಳಲ್ಲಿ ಹಿಡಿದಿಡುವ ಕವಿತೆಗಳು ಅವರನ್ನು 'ಸ್ವಾಭಿಮಾನಿ ಸೂರ್ಯ', 'ತಂಪೆರೆವ ಚಂದ್ರ', 'ಕೆಂಪು ಧ್ವನಿ', 'ಗುರು', 'ಅರಿವು', 'ತಾಯಿ', 'ತಂದೆ', 'ಬೆಳಕು', 'ಸ್ವಾಭಿಮಾನಿ ಸಮುದ್ರ', 'ಸಿಡಿಲು', 'ಮಹಾನದಿ' ಎಂದೆಲ್ಲಾ ಕರೆದು ಆ ವ್ಯಕ್ತಿತ್ವದ ಉದಾತ್ತತೆಯನ್ನು, ಗಂಭೀರತೆಯನ್ನೂ ಮಾನವತೆ ಪ್ರಕಟಗೊಳ್ಳಬಹುದಾದ ಉನ್ನತಿಕೆಯಲ್ಲಿ ಹಿಡಿದಿಡಲು ಪ್ರಯತ್ನಿಸಿರುವುದು ಆ ವ್ಯಕ್ತಿತ್ವವನ್ನು ಅದರ ನಿಜ ವಿಸ್ತಾರದಲ್ಲಿ ಗ್ರಹಿಸುವ ವಿಶಿಷ್ಟ ಪ್ರಯತ್ನಗಳಾಗಿವೆ. ಅವರ ವ್ಯಕ್ತಿತ್ವದ ಹಿರಿಮೆಯನ್ನು ಗುರುತಿಸುತ್ತಲೆ ಅದರ ಪ್ರಸ್ತುತತೆಯನ್ನೂ, ಕಾಲಾತೀತತೆಯನ್ನು ಸಾಬೀತುಪಡಿಸುವ ಕೆಲಸವನ್ನು ಮಾಡಿವೆ. ಸಮಕಾಲೀನ ಸಾಂಸ್ಕೃತಿಕ ಬಿಕ್ಕಟ್ಟುಗಳಿಗೆ ಅಂಬೇಡ್ಕರ್ ಚಿಂತನೆ, ಹೋರಾಟಗಳಲ್ಲಿ ಪರಿಹಾರವನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ. ಅಂಬೇಡ್ಕರ್ ವ್ಯಕ್ತಿತ್ವವನ್ನು ಬಿಂಬಿಸುವಿಕೆಯಲ್ಲಾಗುತ್ತಿರುವ ರಾಜಕಾರಣಗಳನ್ನು, ಅವರನ್ನು ಸಮಕಾಲೀನ ಚರಿತ್ರೆಯಲ್ಲಿ ಇಲ್ಲವಾಗಿಸುವ, ಅಪವ್ಯಾಖ್ಯಾನಿಸುವ ಎಲ್ಲಾ ರಾಜಕೀಯಗಳನ್ನು ವಿರೋಧಿಸುತ್ತಲೇ ಅವರ ವ್ಯಕ್ತಿತ್ವದ ನೈಜತೆಯನ್ನು, ಅನನ್ಯತೆಯನ್ನು, ಕಾಲಾತೀತತೆಯನ್ನು, ಸರ್ವವ್ಯಾಪಕತೆಯನ್ನು ಮುನ್ನೆಲೆಗೆ ತರುವ ಕೆಲಸವನ್ನು ಮಾಡಿವೆ. ಇವು ಅಂಬೇಡ್ಕರ್ ವ್ಯಕ್ತಿತ್ವವನ್ನು ಅದರ ನಿಜ ನೆಲೆಯಲ್ಲಿ ಚರಿತ್ರೆಯಲ್ಲಿ ಗಟ್ಟಿಗೊಳಿಸುವ ಪ್ರಯತ್ನಗಳಾಗಿ ಕಂಡುಬರುತ್ತವೆ.

ಅಂಬೇಡ್ಕರ್ ವ್ಯಕ್ತಿತ್ವದ ಜೊತೆ ತಾಯ್ತನದ ಸಲಿಗೆಯೊಂದಿಗೆ ಪ್ರಶ್ನಿಸುವ, ಅನುಮಾನಿಸುವ, ಸಂಘರ್ಷಕ್ಕಿಳಿಯುವ ಪ್ರಯತ್ನವನ್ನೂ ಕವಿತೆಗಳು ಮಾಡಿವೆ. ಇಲ್ಲಿ ಅಂಬೇಡ್ಕರ್ ಚಿಂತನೆ, ಹೋರಾಟ, ನಿಲುವುಗಳನ್ನು ಕುರಿತಂತೆ ನೇರವಾದ ಪ್ರಶ್ನೆ, ಅನುಮಾನಗಳು ವ್ಯಕ್ತವಾಗುವುದು ಒಂದು ಬಗೆಯಾದರೆ, ಅವರ ಮೂಲಕ ವ್ಯವಸ್ಥೆಯ ಕ್ರೌರ್ಯದ ವಿರುದ್ಧ ಸಂಘರ್ಷಕ್ಕಿಳಿಯುವುದು ಇನ್ನೊಂದು ಬಗೆ. ಇವೂ ಕೂಡ ಅಂಬೇಡ್ಕರ್ ವ್ಯಕ್ತಿತ್ವವನ್ನು ಗ್ರಹಿಸುವ ವಿಧಾನಗಳೇ ಆಗಿವೆ.

ಮಾನವೀಯ ಅಂತಃಕರಣವಿಲ್ಲದ, ಸಂವೇದನಾಶೂನ್ಯ ಸಾಮಾಜಿಕ, ರಾಜಕೀಯ ವಾತಾವರಣದಲ್ಲಿ ಜಾತಿ ಶೋಷಣೆ ಮತ್ತು ಹಿಂಸೆಯ ಪ್ರಯತ್ನಗಳು ನಾನಾ ರೂಪಗಳಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿರುವ ಸಂದರ್ಭದಲ್ಲಿ, ಅಂಬೇಡ್ಕರರ ವ್ಯಕ್ತಿತ್ವವನ್ನು ಬೇರೊಂದು ರೀತಿ ಬಿಂಬಿಸಿ ಅಸ್ಪೃಶ್ಯರಿಂದ, ಚರಿತ್ರೆಯಿಂದ ಇಲ್ಲವಾಗಿಸುವ, ಅವರನ್ನು ಒಂದು ಸಮುದಾಯಕ್ಕೆ ಸೀಮಿತಗೊಳಿಸಿ ಮೇಲ್ವರ್ಗದವರನ್ನು ಅಂಬೇಡ್ಕರರ ವಿರುದ್ಧ ಎತ್ತಿಕಟ್ಟುವ ರಾಜಕಾರಣಗಳ ನಡುವೆ ಕನ್ನಡದ ಕವಿತೆಗಳು ಕಟ್ಟಿಕೊಡುತ್ತಿರುವ ಅಂಬೇಡ್ಕರ್ ವ್ಯಕ್ತಿತ್ವದ ಸ್ವರೂಪ ಮತ್ತು ಇವು ಕಟ್ಟಿಕೊಡುತ್ತಿರುವ ಸಾಂಸ್ಕೃತಿಕ ಚರಿತ್ರೆಯ ಸ್ವರೂಪ ಎಂತದ್ದು ಎಂಬುದನ್ನು ಕಂಡುಕೊಳ್ಳಬೇಕಾದ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಕವಿತೆಗಳು ಅಂಬೇಡ್ಕರ್ ವ್ಯಕ್ತಿತ್ವದ ಹಲವು ಮುಖಗಳನ್ನು ಗ್ರಹಿಸಿರುವ ಬಗೆಯನ್ನು, ಗ್ರಹಿಕೆಯ ಪ್ರಯತ್ನಗಳ ಹಿಂದಿನ ಕಾಳಜಿಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಅಂಬೇಡ್ಕರ್‌ರನ್ನು ಕುರಿತು ರಚನೆಯಾಗಿರುವ ಕವಿತೆಗಳು ದಲಿತ ಬಂಡಾಯ ಸಾಹಿತ್ಯ ಚಳುವಳಿಯ ಭಾಗವಾಗಿಯೇ ಬಂದಿರುವುದರಿಂದ ಅಸ್ಪೃಶ್ಯ ಸಮುದಾಯ ಇನ್ನೂ ಅಪಮಾನ, ಶೋಷಣೆಗಳನ್ನು ಅನುಭವಿಸುತ್ತಲೇ ಇರುವ ಸಂದರ್ಭದಲ್ಲಿ ಅಂಬೇಡ್ಕರ್ ಹೋರಾಟ, ಚಿಂತನೆಗಳನ್ನು ಅನುಮಾನಿಸುವ, ಪ್ರಶ್ನಿಸುವ ಸಂಘರ್ಷಕ್ಕಿಳಿಯುವ, ತಮ್ಮ ವಾಸ್ತವ ಬದುಕನ್ನು ಅನಾವರಣ ಮಾಡುವ ನೆಲೆಯಲ್ಲಿಯೇ ಮೂಡಿಬಂದಿರುವುದರಿಂದ ಹೊಗಳಿ ಸಂಭ್ರಮಿಸುವ ಸಂದರ್ಭ ಎದುರಾಗಲಿಲ್ಲ ಹಾಗೂ ವಾಸ್ತವದ ಚಿತ್ರಣಗಳನ್ನು ಮರೆಮಾಚುವ ಅವಶ್ಯಕತೆ ಬೀಳಲಿಲ್ಲ ಎನಿಸುತ್ತದೆ. ಹಾಗಾಗಿಯೇ ಅಂಬೇಡ್ಕರ್ ಕುರಿತ ಉದಾರವಾದಿ ನಿಲುವಿನ ಕವಿತೆಗಳ ಸಂಖ್ಯೆ ಕಡಿಮೆ. ಹಾಗೆಂದ ಮಾತ್ರಕ್ಕೆ ಆರಾಧನಾ ನೆಲೆಯ ರಚನೆಗಳು ಇಲ್ಲವೆಂದಲ್ಲ. ಅಂಬೇಡ್ಕರ್ ವ್ಯಕ್ತಿತ್ವವನ್ನು ಕೀರ್ತಿಸುವ ರಚನೆಗಳೂ ಇವೆ. ಆದರೆ ಇವು ಅವರ ವ್ಯಕ್ತಿತ್ವವನ್ನು ಹೊಗಳುವುದರೊಂದಿಗೆ ಸಮಕಾಲೀನ ಜಾತಿ ಶೋಷಣೆಯ ಅನುಭವಗಳನ್ನು ನಿವೇದಿಸುತ್ತಿರುವ ಮತ್ತು ಪ್ರತಿರೋಧಿಸುತ್ತಿರುವ ಕಾರಣಕ್ಕಾಗಿ ಕೇವಲ ಉತ್ಪ್ರೇಕ್ಷೆಯ, ಹೊಗಳಲೇಬೇಕಾದ ಕಾರಣಕ್ಕೆ ರಚನೆಗೊಂಡವುಗಳ ಮಟ್ಟದಲ್ಲಿಯೇ ನಿಲ್ಲದೆ, ಅದರಾಚೆಗೆ ಸಾಂಸ್ಕೃತಿಕ ಮಹತ್ವವನ್ನು ಪಡೆಯಬಲ್ಲಂತವಾಗಿವೆ.

ಈ ಹಿನ್ನೆಲೆಯಲ್ಲಿ ಕವಿತೆಗಳು ಮಾಡುತ್ತಿರುವ ಅಂಬೇಡ್ಕರ್ ವ್ಯಕ್ತಿತ್ವ ಶೋಧನೆಯ ಹಲವು ಪ್ರಯತ್ನಗಳನ್ನು ವಿಶ್ಲೇಷಿಸಲಾಗಿದೆ. ಅಂಬೇಡ್ಕರ್ ವ್ಯಕ್ತಿತ್ವದ ಹಲವು ಮೌಲಿಕ ಗುಣಗಳನ್ನು, ಆ ವ್ಯಕ್ತಿತ್ವದ ತುಡಿತ-ಮಿಡಿತಗಳನ್ನು ಹಿಡಿದಿಡುವ ಕಾವ್ಯಶಕ್ತಿಯನ್ನು ಹಾಗೂ ಈ ಬಗೆಯ ಅಭಿವ್ಯಕ್ತಿಗಳ ಹಿಂದಿನ ಸಾಂಸ್ಕೃತಿಕ ಕಾಳಜಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಕವಿತೆಗಳು ಪ್ರಧಾನವಾಗಿ ಅಂಬೇಡ್ಕರ್ ವ್ಯಕ್ತಿತ್ವದಲ್ಲಿ 'ತಾಯ್ತನ'ದ ಹಲವು ತುಡಿತಗಳನ್ನು ಕಂಡುಕೊಳ್ಳಲು ತಹತಹಿಸಿವೆ. ಅಂಬೇಡ್ಕರ್ ವ್ಯಕ್ತಿತ್ವವನ್ನು ಕುರಿತ ಎಲ್ಲ ಅಭಿವ್ಯಕ್ತಿಗಳ ಹಿಂದಿನ ಹುಡುಕಾಟ ಇದೇ ಆಗಿದೆ ಎನ್ನಬಹುದು.

ನಾಡ ನಡುವಿನಿಂದ ಸಿಡಿದ
ನೋವಿನ ಕೂಗೆ
ಆಕಾಶದ ಅಗಲಕ್ಕೂ
ನಿಂತ ಆಲವೇ [೮]

ಸಿದ್ಧಲಿಂಗಯ್ಯನವರ ಕವಿತೆಯ ಈ ಸಾಲುಗಳಲ್ಲಿ ಅಂಬೇಡ್ಕರ್ ವ್ಯಕ್ತಿತ್ವದ ವರ್ಣನೆಗೆ ಬಳಸಿರುವ 'ನೋವಿನ ಕೂಗೆ'. 'ಆಕಾಶದ ಅಗಲಕ್ಕೂ ನಿಂತ ಆಲವೇ' ಎಂಬ ರೂಪಕಗಳು ಕೇವಲ ಆರಾಧನೆಗಾಗಿ ಬಳಸಿರದೆ ಆ ವ್ಯಕ್ತಿತ್ವದ ನೈಜ ಸತ್ವವನ್ನು ಗುರುತಿಸುವ ಪ್ರಯತ್ನವಾಗಿದೆ. ಇಡೀ ವಿಶ್ವವನ್ನೇ, ಮನುಕುಲವನ್ನೇ ತನ್ನ ಮಾನವೀಯ ಅಂತಃಕರಣದಿಂದ ನೋಡಲೆತ್ನಿಸಿದ, ಸುಧಾರಣೆಗಾಗಿ ಪ್ರಯತ್ನಿಸಿದ ಮಾನವತಾವಾದಿಯ ವ್ಯಕ್ತಿತ್ವದ ವೈಶಾಲ್ಯತೆಯನ್ನು ಹೇಳುವ ಕಾವ್ಯ ರೂಪಕಶಕ್ತಿಯಾಗಿ ಕಂಡುಬರುತ್ತದೆ. 'ನೋವಿನ ಕೂಗು' ವೈಯಕ್ತಿಕವಾದುದಲ್ಲ. ತನ್ನಂತೆ ನೊಂದವರ, ನೋಯುತ್ತಿರುವವರ ನೋವಿಗೆ ಸ್ಪಂದಿಸುವ ಅವರಿಗೆ ಆಶ್ರಯವಾಗುವ ತಾಯ್ತನದ ಕರುಳ ತುಡಿತದಿಂದ ಬಂದದ್ದು. ಈ ತಾಯ್ತನದ ತುಡಿತ ಎಲ್ಲರಿಗೂ ತನ್ನ ಮಡಿಲಲ್ಲಿ ಆಶ್ರಯ ಕೊಡುತ್ತದೆ. 'ಆಕಾಶದ ಅಗಲಕ್ಕೂ ನಿಂತ ಆಲವೇ' ರೂಪಕ ಅದನ್ನು ಧ್ವನಿಸುತ್ತದೆ.

ಕೋಟಿ ಕೋಟಿ ಕಪ್ಪು ಜನರ
ಮೊಟ್ಟ ಮೊದಲ ಮಾತೇ

ನೀರಿನಾಚೆ ಮೋಡದಾಚೆ
ಮೊಳಗಿದಂಥ ಘೋಷವೇ "

ಅನ್ಯಾಯ, ಅಪಮಾನಗಳನ್ನು ಸಹಿಸಿಕೊಂಡು, ತಾವು ಬದುಕಬೇಕಾದುದೆ ಹೀಗೆ ಎಂದು ನಂಬಿ ಬದುಕುತ್ತಿದ್ದವರ ನಡುವೆ ಸ್ವಾಭಿಮಾನದಿಂದ ಸಿಡಿದೆದ್ದು, ಅವರೆಲ್ಲರ ದನಿಯಾಗಿ ಮೂಡಿಬಂದ ಮೊದಲ 'ಮಾತು', 'ಆಕ್ರೋಶ'ದ ಮೂರ್ತರೂಪ ಅಂಬೇಡ್ಕರ್ ಎಂಬ ಮಾತು ಅವರ ವ್ಯಕ್ತಿತ್ವದಲ್ಲಿನ ಕ್ರಾಂತಿಕಾರಿ ಗುಣವನ್ನು ಧ್ವನಿಸುತ್ತದೆ. ಅಪಮಾನಗಳ ಆಳದಲ್ಲಿ ಹುಟ್ಟುವ ಸ್ವಾಭಿಮಾನದ ಕಿಚ್ಚಿನ ತೀವ್ರತೆಗೆ ಅಂಬೇಡ್ಕರ್ ವ್ಯಕ್ತಿತ್ವ ಸಾಕ್ಷಿ. ಅಂಥ 'ಸ್ವಾಭಿಮಾನಿ ಸಮುದ್ರ' ಅಂಬೇಡ್ಕರ್ ಎಂದು ಸಿದ್ಧಲಿಂಗಯ್ಯನವರು ಕರೆಯುತ್ತಾರೆ.

ಹಗಲಿರುಳು ಪರಿವೆಗಾಣದೆ
ಸಾಗುವವರ ಅಡಿಯ ಅಟ್ಟೆಯಾಗಿ
ವಿಶ್ವವನೆ ನುಂಗುವ ಹೊಟ್ಟೆಗಾಗಿ
ಒಡಲ ಒತ್ತೆಯಿಟ್ಟು
ಕನಸಿನ ದಿಂಬಿಗೆ ತಲೆಕೊಟ್ಟು ಪ್ರಾಣಬಿಟ್ಟ
ಮೂಕ ಪ್ರಜ್ಞೆಯ ನಿನ್ನವರ ಕಂಡು
ಒಳಗೊಳಗೆ ಬೆಂದು
ನೊಂದ ಮನಕೆ ಚೈತನ್ಯ ತುಂಬುವ
ಚಂದ್ರನಾಗಿ ಬಂದೆ ''

ಇಲ್ಲಿ ಅಂಬೇಡ್ಕರ್ ವ್ಯಕ್ತಿತ್ವಕ್ಕೆ ಕರೆಯಲಾದ 'ಚಂದ್ರ'ನ ರೂಪಕ ಸಮರ್ಥವಾಗಿದೆ. ಶತಶತಮಾನಗಳ ಜಾತಿಹಿಂಸೆ, ಶೋಷಣೆಗಳಿಂದ ನಲುಗಿಹೋಗಿದ್ದ ಸಮುದಾಯದ ಪಾಲಿಗೆ ಚೈತನ್ಯಶಕ್ತಿಯಾಗಿ ಅವರ ಬದುಕಿಗೆ ಭರವಸೆಯನ್ನು ನೀಡುವ ತಂಪನೆಯ ಆಸರೆಯಾಗಿ ಅಂಬೇಡ್ಕರ್ ಮೂಡಿಬಂದರು. ಶೋಷಿತ ಸಮುದಾಯದ ಜನರ ಪಾಲಿಗೆ 'ಚಂದ್ರ'ನಾಗಿ ಬಂದ ಅಂಬೇಡ್ಕರ್ ಶೋಷಕರ ಪಾಲಿಗೆ ಹೊತ್ತಿ 'ಉರಿಯುವ ಸೂರ್ಯ'ನಾಗಿ ಕಂಡುಬಂದಿದ್ದಾರೆ.

ಹಸಿರನಿಲ್ಲದ ಭೂಮಿಯ ಮ್ಯಾಲಿ
ರಕ್ತ ಚೆಲ್ಲಿದ ಮಣ್ಣಿನ ಮ್ಯಾಲಿ
ಹುಟ್ಟಿ ಬಂದಿ ನೀ ಸೂರ್ಯನಾಗಿ
ನಿಂತು ಬಿಟ್ಟಿ ನೀ ಬೆಟ್ಟವಾಗಿ ''

ಜಾತಿ ಹಿಂಸೆಯ ಕ್ರೌರ್ಯ ಮತ್ತು ಮಾನವೀಯತೆಯಿಲ್ಲದ ಬರಡು ಸಮಾಜದಲ್ಲಿ ಪ್ರೀತಿಯ ಬೆಳಕಾಗಿ, ಶೋಷಕರ ಪಾಲಿಗೆ ಸಿಟ್ಟಿನಿಂದ ಉರಿಯುವ ಕ್ರಾಂತಿಕಾರಿಯಾಗಿ ಹುಟ್ಟಿ ಬಂದು ಬೆಟ್ಟವಾಗಿ ಬೆಳೆದು ನಿಂತ ಉದಾತ್ತ ವ್ಯಕ್ತಿತ್ವಕ್ಕೆ 'ಸೂರ್ಯ'ನೆಂಬ ರೂಪಕ ಸಹಜವಾದದ್ದೇ. ಅತ್ಯಂತ ಹೀನವಾದ ಸಾಮಾಜಿಕ ವ್ಯವಸ್ಥೆಯಲ್ಲಿ ಹುಟ್ಟಿ ಬಂದು ಬೆಟ್ಟವಾಗಿ ಬೆಳೆದು ನಿಂತದ್ದು ಅಂಬೇಡ್ಕರ್ ವ್ಯಕ್ತಿತ್ವದ ಹಿರಿಮೆಯಾಗಿದೆ. ಅಡಿಗರ 'ಅಂಬೇಡ್ಕರ್ ಭೀಮರಾಯರಿಗೆ' ಕವಿತೆ ಅಂಬೇಡ್ಕರರ ವಿಶಿಷ್ಟ ಹೋರಾಟ, ಸಾಧನೆಗಳನ್ನು ಹೀಗೆ ವರ್ಣಿಸಿದೆ.

ಅಂಬೇಡಕರ ಭೀಮರಾಯರಿಗೆ ಈ ನಮ್ಮ
ತುಂಬು ಹೃದಯದ ಗೌರವಾದರ ಪೂರ್ಣ ಸಾಷ್ಟಾಂಗ ನಮಸ್ಕಾರ ;
ಆಧುನಿಕ ಹಿಂದುತ್ವದ ಅಪ್ರತಿಮ ಮೂಲ ಮಾದರಿಗೆ;
ಕೊಳೆಕಸಗಲೀಜುಗಳ ಮಧ್ಯೆ ಮೇಲೆದ್ದು ಬಂದುದ್ಬುದ್ಧ
ಶುದ್ಧ ಬುದ್ಧಿಯ ಮೃದುಲ ಹೃದಯದುತ್ತುಂಗತೆಗೆ
ಗಲಭೆ ಗೊಂದಲ ಭಷಣ ಭಾಷಣಗಳ ಅಪಸ್ವರದ
ಕೋಲಾಹಲದ ನಡುವೆ ನಡುಗಡ್ಡೆ ನಿಂತಿದ್ದ ಶ್ರುತಿ ಶುದ್ಧ ಮಧ್ಯಮಾಲಾಪಕ್ಕೆ
ನಿಂದೆ ತಾತ್ಸಾರ ಅಪಮಾನಗಳ ಗರಳನುಂಗಿ ಅರಗಿಸಿಕೊಂಡು
ಚಿಂತನದ ಕುಲುಮೆಯಲ್ಲಿ ಚಿದಗ್ನಿ ಕಿಡಿ ಸೂಸುತ್ತಲೇ ಬಂದಿದ್ದ

ಅಪರಂಜಿ ಕಾರಂಜಿಗೆ
ನಮಸ್ಕಾರ [೧೨]

ಈ ಕವಿತೆಯಲ್ಲಿ ಬಂದಿರುವ 'ಆಧುನಿಕ ಹಿಂದುತ್ವದ ಅಪ್ರತಿಮ ಮೂಲ ಮಾದರಿ' ಶುದ್ಧ ಬುದ್ಧಿಯ ಮೃದುಲ ಹೃದಯದುತ್ತುಂಗತೆ', 'ಶೃತಿ ಶುದ್ಧಮಧ್ಯಮಾಲಾಪ', 'ಅಪರಂಜಿ ಕಾರಂಜಿ' ಮುಂತಾದ ರೂಪಕಗಳು ಅಂಬೇಡ್ಕರರ ವಿಶಿಷ್ಟ ಕಾರ್ಯ, ಸ್ವಭಾವಗಳಿಗಾಗಿ ಬಂದಂತವುಗಳು. ಇವು ಹೊಗಳಿಕೆಗಳಾಗಿ ಕಂಡುಬಂದರೂ ಹೊಗಳಿಕೆಗಳಲ್ಲ. ವರ್ಣನೆಗಳಾದರೂ ಉತ್ಪ್ರೇಕ್ಷೆಯಲ್ಲ. ಆ ವ್ಯಕ್ತಿತ್ವದ ಶ್ರೇಷ್ಠತೆಯನ್ನು ಹಿಡಿದಿಡುವ ಉನ್ನತ ಪ್ರಯತ್ನವಾಗಿ ಕಂಡುಬರುತ್ತವೆ. ಹೀನ ಸಾಮಾಜಿಕ ವ್ಯವಸ್ಥೆಯಲ್ಲಿ ಹುಟ್ಟಿ, ಅಪಾರ ಜ್ಞಾನವನ್ನು ಗಳಿಸಿ, ಶುದ್ಧ ಮಾನವೀಯ ಕಳಕಳಿಯಿಂದ ಹಿಂದೂ ಧರ್ಮ ಮತ್ತು ಸಮಾಜವನ್ನು ಸುಧಾರಿಸಲು ಪ್ರಯತ್ನಿಸಿದ ವ್ಯಕ್ತಿತ್ವವನ್ನು ಮೇಲಿನ ರೂಪಕಗಳು ಸರಿಯಾಗಿಯೇ ಹಿಡಿದಿಡುತ್ತವೆ. ಅಡಿಗರ ಇತರ ವ್ಯಕ್ತಿಚಿತ್ರ ಕವಿತೆಗಳಿಗೆ ( ಗಾಂಧಿ, ನೆಹರು ಇತ್ಯಾದಿ) ಹೋಲಿಸಿದಾಗ ಅಂಬೇಡ್ಕರ್ ಕುರಿತ ಈ ಕವಿತೆ ಮೆಚ್ಚುಗೆಯ ನೆಲೆಯಲ್ಲಿಯೇ ಮೂಡಿಬಂದಿದೆ. ಗಾಂಧಿ, ನೆಹರು ಕುರಿತಾದ ಕವಿತೆಗಳಲ್ಲಿ ಕಂಡುಬರುವ ಪ್ರಶ್ನೆ, ವ್ಯಂಗ್ಯದ ಮೊನಚು, ವಿಡಂಬನೆ, ಆತ್ಮವಿಮರ್ಶೆಗಳು ಅಲ್ಲಿಯಷ್ಟು ತೀವ್ರವಾಗಿ ಇಲ್ಲಿ ಕಂಡುಬರುವುದಿಲ್ಲ. ಈ ಕವಿತೆಯಲ್ಲಿ ಗಾಂಧಿಯನ್ನು, ಅಂದಿನ ಕಾಂಗ್ರೆಸ್ ರಾಜಕಾರಣವನ್ನು ವಿಡಂಬನೆಗೆ ಒಳಪಡಿಸುತ್ತಾರಾದರೂ ಅವರದೇ ಆದ 'ಗಾಂಧಿ' ಕುರಿತ ಇತರ ಕವಿತೆಗಳಲ್ಲಿ ಗಾಂಧಿಯ ವ್ಯಕ್ತಿತ್ವ ಪಶ್ನೆಗೆ ಒಳಗಾಗುವುದಿಲ್ಲ.

ಗಾಂಧಿಯುಗದಲ್ಲಿ ಬೀಸಿ ಬೀಸಿ ಬಡಿಯುತ್ತಿರಲು ಭಾವುಕತೆ
ಕಣ್ಣೆಲ್ಲ ಧೂಳು, ಮನಸೆಲ್ಲ ಮಂಕು ;
ಪ್ರತಿಯೊಬ್ಬರೂ ತಮ್ಮ ತಮ್ಮ ಜವುಗಿನಲ್ಲಿ ಜಾರುತ್ತಲಿರೆ ಇಡೀ
ದೇಶವೇ ಆಗಿರೆ ತ್ರಿಶಂಕು;
ಕೆಸರಲ್ಲಿ ಬಿದ್ದು ಕೊಸರಾಡುತ್ತಿದ್ದ ಮಂದಿಗೆ
ಕಾಣಿಸಲೇ ಇಲ್ಲ ಗಟ್ಟಿ ನೆಲದ ಮೇಲೆ
ಅಲ್ಲೊಂದು ಇಲ್ಲೊಂದು ನಿಂತಿದ್ದ ಅಚಲ ಗಂಭೀರ ದಿಕ್ಸೂಚಿ ಶಿಖರಗಳು. [೧೩]

ಗಾಂಧಿ ವ್ಯಕ್ತಿತ್ವದ ಅಲೆ ಇಡೀ ದೇಶವನ್ನು ಭಾವುಕತೆಯಿಂದ ಆವರಿಸಿಕೊಂಡದ್ದನ್ನು, ಅದು ಇತರ ನಾಯಕರನ್ನು ಮುನ್ನೆಲೆಗೆ ಬರದಂತೆ ತಡೆದುದನ್ನು ಈ ಕವಿತೆ ಅಂಬೇಡ್ಕರ್ ಮೂಲಕ ಪ್ರಶ್ನಿಸುತ್ತಿದೆ. ಅಡಿಗರು ಅಂಬೇಡ್ಕರರ ವ್ಯಕ್ತಿತ್ವವನ್ನು ಸಮರ್ಥವಾಗಿ ಗುರುತಿಸಿದ್ದರಾದರೂ ಆ ವ್ಯಕ್ತಿತ್ವವನ್ನು ಅತಿಯಾದ ಮೆಚ್ಚುಗೆ, ಗೌರವ, ಕೃತಜ್ಞತೆಗಳಿಂದ ನೋಡಿದೆ. ಇದು ಅಡಿಗರ ಇತರ ವ್ಯಕ್ತಿಚಿತ್ರ ಕವಿತೆಗಳ ಧೋರಣೆಗೆ ಹೋಲಿಸಿದರೆ ಸ್ವಲ್ಪ ಮಟ್ಟಿಗೆ ಅಸಹಜವೆಂಬಂತೆ ಭಾಸವಾಗುತ್ತದೆ.

ತಮ್ಮ ಬದುಕನ್ನೇ ಕೆತ್ತಿ ಕೆತ್ತಿ ಕಡೆಕಡೆದು ಅನಾಥ ಅಮೂರ್ತ
ಮಾನವತ್ವಕ್ಕೆ ವಿಗ್ರಹವಾಗಿ ಮೇಲೆದ್ದಿದ್ದ ಆ
ತೀರ್ಥರೂಪಸಮಾನರೀಗಿಲ್ಲ. ನಿಮ್ಮಂಥ ಮಹಾರ್ಹರಿಗಾಗಿ ದೇಶವೇ
ಕಾಯುತ್ತಲಿದೆ ಈಗ. [೧೪]

ಅಂಬೇಡ್ಕರರ ವ್ಯಕ್ತಿತ್ವಕ್ಕೆ ಕರೆಯಲಾದ 'ಅನಾಥ ಅಮೂರ್ತ ಮಾನವತ್ವಕ್ಕೆ ವಿಗ್ರಹ', 'ತೀರ್ಥರೂಪಸಮಾನ', 'ಮಹಾರ್ಹ' ಮುಂತಾದ ಶಬ್ದಗಳು ಅಂಬೇಡ್ಕರರ ವ್ಯಕ್ತಿತ್ವದ ಹಿರಿಮೆಯನ್ನು ಸಮರ್ಥವಾಗಿ ಗುರುತಿಸುತ್ತವಾದರೂ ಧೋರಣೆಯ ದೃಷ್ಟಿಯಿಂದ ಕೃತಕವೆಂಬಂತೆ ಭಾಸವಾಗುತ್ತವೆ. "ಅಡಿಗರಿಗೆ ಹಿಂದೂ ಧರ್ಮದಲ್ಲಿ ಸಮಾನತೆ ಮತ್ತು ಸೋದರತೆಗಳಿವೆಯೆಂದು ಅದನ್ನು ಹುಡುಕಲು ಅಂಬೇಡ್ಕರ್ ಪ್ರಯತ್ನಿಸಿದರೆಂದು ನನಗೆ ಸೋಜಿಗವಾದರೂ, ಅಂಬೇಡ್ಕರ್ ಅವರನ್ನು ಮಾಹಾ ಅರ್ಹರೆಂದು, ತಮ್ಮ ಶ್ರಮದಿಂದ ಜೀವನದ

ಉತ್ತುಂಗಕ್ಕೇರಿದವರೆಂದು ಒಪ್ಪಿಕೊಳ್ಳುವ ಅಡಿಗರ ಶಬ್ದ ಸಂಪತ್ತಿನ ಪ್ರಯೋಗದಿಂದಾಗಿ ಅವರ ಯಶಸ್ವೀ ಕವನಗಳ ಸಾಲಿಗೆ ಈ ಕವನವೂ ಸೇರುತ್ತದೆ." [೧೫] ಇದನ್ನು ಯಶಸ್ವೀ ಕವನವೆಂದು ಒಪ್ಪುವುದು ಕಷ್ಟವಾದರೂ, ಅಂಬೇಡ್ಕರ್ ಕುರಿತ ಚಿತ್ರಣದಲ್ಲಿನ ಅಸಹಜತೆಯನ್ನು ಎಲ್. ಹನುಮಂತಯ್ಯ ಅವರು ಗುರುತಿಸುತ್ತಾರೆ. ಈ ಆರೋಪದ ನಡುವೆಯೂ ಈ ಕವಿತೆ ಅಂಬೇಡ್ಕರ್ ವ್ಯಕ್ತಿತ್ವದ ವಿಶಿಷ್ಟತೆಯನ್ನು ಗುರುತಿಸಲು ಪ್ರಯತ್ನಿಸಿದೆ.

ಅಂಬೇಡ್ಕರ್‌ರವರದ್ದು ವಸ್ತುಸ್ಥಿತಿಯನ್ನು ಅರಿತು ಅದಕ್ಕೆ ತಕ್ಕಂತೆ ತತ್ವ ಸಾಂಗತ್ಯವನ್ನು ಸಾಧಿಸಲು ನಿರಂತರವಾಗಿ ತುಡಿದ ವ್ಯಕ್ತಿತ್ವ. ಅವರು ನೋವು ಅಪಮಾನಗಳಿಗೆ ಹೆದರಿ ಜೀವನದಿಂದ ಪಲಾಯನ ಮಾಡಿದವರಲ್ಲ. ಬದಲಾಗಿ ಎಲ್ಲವನ್ನೂ ಎದುರಿಸಿ ನಿಂತು ಬದುಕುವುದು, ಮೆಟ್ಟಿ ನಿಲ್ಲುವುದು, ಅದಕ್ಕಾಗಿ ನಿರಂತರವಾದ ಹೋರಾಟ, ಚಿಂತನೆಗಳಲ್ಲಿ ತೊಡಗಿಸಿಕೊಳ್ಳುವುದರ ಮೂಲಕ ಅಪರಂಜಿ ಕಾರಂಜಿಯಾಗಿ ಹೊಳೆದವರು. ಮಾನವತೆಯ ಪರಾಕಾಷ್ಠೆಯನ್ನು ಏರಿ ನಿಂತವರು ಎಂದು ಅಡಿಗರು ಗುರುತಿಸಿದ್ದಾರೆ.

ಬಾಳಿನುದ್ದ ವಸ್ತು ಸ್ಥಿತಿಗೆ ತತ್ವ ಸಾಂಗತ್ಯ
ಸಾಧಿಸಲು ; ಅಜ್ಞಾತಕ್ಕೆ ಕಟ್ಟು ಬಿದ್ದು
ಬದುಕಲೆಳೆಸಿದರೆ ಅದು ಭಾರೀ ದೊಡ್ಡ
ಕಲ್ಲ ಕತ್ತಿಗೆ ಕಟ್ಟಿಕೊಂಡು ತುಂಬಿದ ಹೊಳೆಗೆ
ಧುಮ್ಮಿಕ್ಕಿದಂತೆ, ಈಸುವುದು, ಸಾಧ್ಯವಾದರೆ
ಜಯಿಸುವುದು ಮುಳುಗಿ ಸಾಯುವುದಲ್ಲ
ಗಮ್ಯ ಹರ್ಮ್ಯದೊಳಗಲ್ಲ ದೈನ್ಯಾವಮಾನಗಳ
ಕಲ್ಮುಳ್ಳುಗಳ ರಕ್ತ ಬಸಿಯುವಿಕ್ಕಟ್ಟಲ್ಲಿ
ಸ್ವಂತ ಕಾಲಿಂದಲೇ
ನಡೆದು ಹತ್ತಿದಿರಿ ಮುಟ್ಟಿದಿರಿ ಮಾನವತ್ವದ ಪರಾಕಾಷ್ಠೆ
ಸಂಸ್ಕೃತಿ ವಿವೇಕಗಳ ನಿಯಮ ನಿಷ್ಠೆ [೧೬]

ಅಂಬೇಡ್ಕರ್ ಸ್ವಾಭಿಮಾನಿ ಹೇಗೋ ಹಾಗೇ ತಮ್ಮ ಶ್ರಮ ಮತ್ತು ಸಾಮರ್ಥ್ಯದ ಬಗೆಗೆ ಆತ್ಮ ವಿಶ್ವಾಸವುಳ್ಳವರಾಗಿದ್ದರು. ಬದುಕಿನ ಬಗೆಗೆ ಭರವಸೆಯುಳ್ಳವರಾಗಿದ್ದರು. ಹೋರಾಟದಿಂದ ಬದುಕನ್ನು ಬದಲಾಯಿಸಿಕೊಳ್ಳಬಹುದೆಂದು ನಂಬಿದ್ದರು. ಸಮಾನತೆ–ಸ್ವಾತಂತ್ರ್ಯಗಳು ತಾನಾಗಿಯೇ ದೊರೆಯುವಂಥವಲ್ಲ, ಹೋರಾಟದಿಂದ ಪಡೆಯುವಂಥವು ಎಂದು ನಂಬಿದ್ದರು. ಅವೆಲ್ಲವನ್ನೂ ಸ್ವಂತ ಬಲದಿಂದಲೇ ಪಡೆದು ಮೇಲಕ್ಕೇರಿದರು. ಈ ದೇಶದ ಧರ್ಮ, ಸಮಾಜ, ಸಂಸ್ಕೃತಿಗಳ ಬಗೆಗೆ ಆಳವಾದ ವಿವೇಕವನ್ನು ಹೊಂದಿದವರಾಗಿದ್ದರು. ಯಾವ ಘಟನೆಯನ್ನೂ, ವಿಚಾರವನ್ನೂ ವಿರೋಧಕ್ಕಾಗಿ ವಿರೋಧಿಸದೆ, ತಾರ್ಕಿಕವಾಗಿ, ಆಧಾರ ಸಹಿತವಾಗಿ ವಾದಿಸಿ ವಿರೋಧಿಸುತ್ತಿದ್ದರು. ಅದಕ್ಕಾಗಿ ಜೀವಿತದ ಕೊನೆಯವರೆಗೂ ಓದಿನ ದಾಹವನ್ನು ಜೀವಂತವಾಗಿರಿಸಿಕೊಂಡಿದ್ದರು. ಇಡೀ ಭಾರತೀಯ ಸಮಾಜದ ಬದಲಾವಣೆಗಾಗಿ ಮಾನವೀಯ ಅಂತಃಕರಣವುಳ್ಳ ಸಮಾಜದ ನಿರ್ಮಾಣಕ್ಕಾಗಿ 'ತಮ್ಮ ಬದುಕನ್ನೇ ಕೆತ್ತಿ ಕೆತ್ತಿ ಕಡೆಕಡೆದು ಅನಾಥ ಅಮೂರ್ತ ಮಾನವತ್ವಕ್ಕೆ ವಿಗ್ರಹವಾಗಿ ಮೇಲೆದ್ದಿದ್ದರು' ಎನ್ನುತ್ತಾರೆ.

ಸವಿತಾ ನಾಗಭೂಷಣರ 'ಅಂಬೇಡ್ಕರ್...' ಕವಿತೆ ಅಂಬೇಡ್ಕರ್ ವ್ಯಕ್ತಿತ್ವವನ್ನು 'ಕರುಣಾ ಸಮುದ್ರ'ವೆಂಬ ರೂಪಕದಲ್ಲಿ ಹಿಡಿದಿಡುತ್ತದೆ. ಅಂಬೇಡ್ಕರ್ ನಮ್ಮ ಅಣ್ಣ, ತಮ್ಮ, ಬಂಧು, ಬಳಗ ಯಾರೂ ಅಲ್ಲದಿದ್ದರೂ ಅವೆಲ್ಲವನ್ನೂ ಮೀರಿದ ಸಂಬಂಧವನ್ನು ಆ ವ್ಯಕ್ತಿತ್ವ ನಮ್ಮೊಂದಿಗೆ ಏರ್ಪಡಿಸಿಕೊಂಡಿದೆ. ಇದಕ್ಕೆ ಅವರ ವ್ಯಕ್ತಿತ್ವದ ಮಾನವೀಯ ಕಳಕಳಿಯೇ ಕಾರಣವಾಗಿದೆ.

ನೋವು ಅಪಮಾನಗಳಲ್ಲಿ
ಬೆಂದು ಗಟ್ಟಿಯಾದ ಜೀವ...
ತಾನೇ ಅರೆಜೀವ... ಆದರೂ...
ಮುಳುಗುತ್ತಿದ್ದವ ತೇಲುತ್ತಿದ್ದ ನನ್ನತ್ತ
ಕೈಚಾಚಿದ... [೧೭]

ಅಂಬೇಡ್ಕರ್ ಕೇವಲ ಅಸ್ಪೃಶ್ಯರ ಪರವಾಗಿ ಮಾತ್ರ ಹೋರಾಡಲಿಲ್ಲ. ಸಾಂವಿಧಾನಿಕ ಅವಕಾಶಗಳನ್ನು ಎಲ್ಲ ಶೋಷಿತರಿಗೂ ಒದಗಿಸಿಕೊಡುವಲ್ಲಿ ಶ್ರಮಿಸಿದ್ದರು. ಆದರೆ ಅಂಬೇಡ್ಕರರನ್ನು ಕೇವಲ ದಲಿತ ನಾಯಕನೆಂದು, ದಲಿತರ ಪರವಾಗಿ ಹೋರಾಡಿದವನೆಂದು ಅವರ ವ್ಯಕ್ತಿತ್ವವನ್ನು ಸೀಮಿತವಾಗಿ ಗ್ರಹಿಸುತ್ತಾ, ಬಿಂಬಿಸುತ್ತಾ ಬರಲಾಗುತ್ತಿದೆ. ಆದರೆ ಅಂಬೇಡ್ಕರ್ ಹೆಣ್ಣು ಗಂಡೆನ್ನದೆ ಎಲ್ಲಾ ಶೋಷಿತರ ಪರವಾಗಿ ಚಿಂತಿಸಿದ್ದರು, ನ್ಯಾಯ ಒದಗಿಸಿದ್ದರು ಎಂಬುದು ಅವರ ವ್ಯಕ್ತಿತ್ವದ ಹಿರಿಮೆಯಾಗಿದೆ. ಹೆಣ್ಣು ಮಕ್ಕಳಿಗೆ ಆಸ್ತಿಯ ಹಕ್ಕುಗಳನ್ನು ನೀಡಿದ್ದು ಅಂಬೇಡ್ಕರರ ಬಹುಮುಖ್ಯ ಕೊಡುಗೆಯಾಗಿದೆ. ಈ ಕವಿತೆ ಅಂಬೇಡ್ಕರರ ವ್ಯಕ್ತಿತ್ವವನ್ನು ವಿಶಾಲ ಭಿತ್ತಿಯಲ್ಲಿ ಗ್ರಹಿಸಲು ಪ್ರಯತ್ನಿಸಿದೆ. ಎಲ್ಲಾ ನೊಂದವರ, ಶೋಷಿತರ ದನಿಯಾಗಿ, ರಕ್ತ ಸಂಬಂಧವನ್ನು ಮೀರಿದ ಬಂಧುವಾಗಿ ಅವರನ್ನು ಕಾಣಲಾಗಿದೆ.

ಕಾಗೆಯ ಬಳಗದಂತೆ ಹಂಚಿಕೊಂಡು ತಿನ್ನು
ಸೋದರಿಗೂ ಪಾಲು ನೀಡಿ ಉಣ್ಣು...
ಇದು ಭಿಕ್ಷೆಯಲ್ಲ ರಕ್ಷೆ ಎಂದ
ಕರುಣಾ ಸಮುದ್ರ...

ಈ ಬಡವಿಯ ಮನೆಯ
ಒಲೆಯೊಳಗಣ ಬೆಂಕಿ...
ಕುದಿಯುವ ಎಸರು...
ಅರಳುವ ಅನ್ನ...
ಶಿರದ ಮೇಲಣ ಪಾದ ಧೂಳಿ[೧೮]

ಅಂಬೇಡ್ಕರ್ ದಲಿತರ ದನಿ ಮಾತ್ರವಲ್ಲ ಹೆಣ್ಣಿನ ಪರವಾದ ದನಿಯೂ ಹೌದು. ಈ ಕವಿತೆ ಅಂಬೇಡ್ಕರರಿಗಿದ್ದ ಸ್ತ್ರೀಪರ ಕಾಳಜಿಯನ್ನು ಗುರುತಿಸುತ್ತದೆ. ಅಂಬೇಡ್ಕರ್ ಎಲ್ಲಾ ಶೋಷಿತರ, ನೊಂದವರ, ತಬ್ಬಲಿಗಳ ದನಿಯಾಗಿ, ಅವರ ಅನ್ನವಾಗಿ, ಆಕ್ರೋಶವಾಗಿ, ಬಿಡುಗಡೆಯ ದಾರಿಯಾಗಿ, ಬದುಕಾಗಿ, ಬಂಧುವಾಗಿ ಇದ್ದಾರೆ. ಇದು ಅಂಬೇಡ್ಕರ್ ವ್ಯಕ್ತಿತ್ವದ ಬಹುಮುಖತೆಯನ್ನು ಗುರುತಿಸುತ್ತದೆ.

ಅಂಬೇಡ್ಕರ್‌ರವರ ಒಟ್ಟು ಚಿಂತನೆ, ಬದುಕು, ಹೋರಾಟಗಳ ಹಿಂದಿನ ಕಾಳಜಿಗಳ ಆಧಾರದ ಮೇಲೆ ಅವರ ವ್ಯಕ್ತಿತ್ವದ ಹಲವು ಮುಖಗಳನ್ನು ಗುರುತಿಸುವ ಪ್ರಯತ್ನವನ್ನು ಕವಿತೆಗಳು ಮಾಡಿವೆ. ನೊಂದವರ ಬಗೆಗಿನ ಅನುಕಂಪ, ಶೋಷಿತರ ಏಳ್ಗೆಗಾಗಿ, ಅವರ ಅಜ್ಞಾನದ ನಿವಾರಣೆಗಾಗಿ ಬದುಕಿನುದ್ದಕ್ಕೂ ನಡೆಸಿದ ಹೋರಾಟ, ವ್ಯವಸ್ಥೆಯ ಸುಧಾರಣೆಗಾಗಿ ತೋರಿದ ದಿಟ್ಟತನ ಇವೆಲ್ಲವೂ ಅಂಬೇಡ್ಕರ್ ವ್ಯಕ್ತಿತ್ವಕ್ಕೆ ವಿಶಿಷ್ಟತೆಯನ್ನೂ, ಅನನ್ಯತೆಯನ್ನೂ ತಂದುಕೊಟ್ಟಿವೆ. ಅಂಬೇಡ್ಕರ್ ಒಬ್ಬ ಮಾನವತಾವಾದಿ. ಅನ್ಯಾಯದ ವಿರುದ್ಧ ಸಿಡಿದೆದ್ದು, ಶೋಷಿತರ ನೋವುಗಳಿಗೆ ಮಾನವೀಯವಾಗಿ ಮಿಡಿದವರು.

ಬುದ್ಧ ಬಸವರ ನಾಡಿನಲ್ಲಿ
ಸೂರ್ಯ ಕಿರಣ ಚೆಲ್ಲಿದ ಮಾನವತಾವಾದಿ
ಇಲ್ಲಿ ಜೀವಂತ
ಸದಾ ದುಡಿಯುವವರ ಕಣ್ಣುಗಳ ದೀಪದ ಕುಡಿಯೀತ [೧೯]

ಬುದ್ಧ ಮತ್ತು ಬಸವರ ಹಾಗೆಯೇ ಈ ನಾಡಿನ ಕತ್ತಲೆಯನ್ನು ಹೋಗಲಾಡಿಸಲು ಪ್ರಯತ್ನಿಸಿದ 'ಸೂರ್ಯಕಿರಣ ಅಂಬೇಡ್ಕರ್'. ಮನುಷ್ಯರನ್ನು ಅಮಾನವೀಯವಾಗಿ ನಡೆಸಿಕೊಳ್ಳುತ್ತಿರುವ 'ಅಜ್ಞಾನಿ'ಗಳಲ್ಲಿ ಅರಿವನ್ನು ಮೂಡಿಸಲು ಪ್ರಯತ್ನಿಸಿದ್ದು, ದಮನಿತರಿಗೆ ತಮ್ಮ ಸ್ಥಿತಿಯ ಅರಿವನ್ನುಂಟುಮಾಡಿ ಜಾಗೃತಗೊಳಿಸಿದ್ದು ಸಾಮಾನ್ಯ ಕೆಲಸವಲ್ಲ. ಪ್ರತಿಯೊಬ್ಬ ದಮನಿತನ ಕಣ್ಣ ಬೆಳಕಾಗಿ, ಎಚ್ಚರದ ಕಿಡಿಯಾಗಿ, ಮಾನವೀಯತೆಯ ಸೆಲೆಯಾಗಿ ಸದಾ ಜೀವಂತವಾಗಿರುವ ವ್ಯಕ್ತಿತ್ವ ಅವರದು ಎಂಬುದನ್ನು ಈ ಕವಿತೆಯ ಸಾಲುಗಳು ಚಿತ್ರಿಸುತ್ತವೆ.

ನಮ್ಮ ನಡುವಣ ಕಟ್ಟಕಡೆಯವನ
ಒಡಲಿನಾಳದ ಬೆಂಕಿ – ಬೇರುಗಳ
ತಳಹುಡುಕಿ ಹೊರಟವನೆ,
ಅರಿವಿನಡವಿಯ ಹಿರಿಯ
ಗುರು ನೀನು ಅಂಬೇಡ್ಕರ್ [೨೦]

ಅಂಬೇಡ್ಕರ್ ಎಂದರೆ 'ಅರಿವು'. ತಾವು ಅನುಭವಿಸಿದ ಜಾತಿಹಿಂಸೆ, ಅವಮಾನಗಳಿಂದ ಬೇಸತ್ತು ಈ ದೇಶದ ಧರ್ಮ ಮತ್ತು ಸಮಾಜಗಳ ತಳಮಟ್ಟದ ಶೋಧನೆಗೆ ತೊಡಗಿದರು. ಜಾತಿ ವ್ಯವಸ್ಥೆಯನ್ನೇ ಬೇರು ಸಹಿತ ಕಿತ್ತೆಸೆದು ಸಮಾನತೆಯ ಸಮಾಜದ ಕನಸು ಕಂಡರು. ನೊಂದವರ, ಶೋಷಿತರ, ಅವಮಾನಿತರ ಒಳಗಿನಾಳದ ನೋವು–ಸಂಕಟಗಳನ್ನೂ, ಸಿಟ್ಟು–ಆಕ್ರೋಶಗಳನ್ನೂ ಕಂಡುಕೊಳ್ಳಲು ಪ್ರಯತ್ನಿಸಿದ್ದು, ಅವುಗಳ ಬಗೆಗೆ ಶೋಷಿತರಲ್ಲಿ ಅರಿವು ಮೂಡಿಸಿದ್ದು ಅಂಬೇಡ್ಕರರ ದೊಡ್ಡ ಸಾಧನೆ. ಬಾಲ್ಯದಲ್ಲಿ ಅವರು ಅನುಭವಿಸಿದ ಹಿಂಸೆ ಅಪಮಾನಗಳೇ ಅವರಲ್ಲಿ ಸಿಡಿದೇಳುವ, ಅರಿವಿನೆತ್ತರಕ್ಕೆ ಬೆಳೆಯುವ, ಎಲ್ಲವನ್ನೂ ಸಕಾರಣವಾಗಿಯೇ ತರ್ಕಿಸಿ, ತಿರಸ್ಕರಿಸುವ ಪ್ರವೃತ್ತಿಯನ್ನು ಬೆಳೆಸಿತು. ಧರ್ಮ, ಶಾಸ್ತ್ರ ಕೃತಿಗಳ ಅಧ್ಯಯನದ ಮೂಲಕವೇ ಸಕಾರಣ ನೀಡಿ ಈ ದೇಶದ ಸಾಮಾಜಿಕ ರಚನೆಯ ದೋಷಗಳನ್ನು ವಿರೋಧಿಸಿದರು. ಸಮಾಜದ ಕಟ್ಟಕಡೆಯ ವ್ಯಕ್ತಿಯ ನೋವಿಗೆ ಸ್ಪಂದಿಸಿ ಅದನ್ನು ನಿವಾರಿಸಲು ಪ್ರಯತ್ನಿಸಿದರು. ಇಡೀ ದೇಶದ ನಾಡಿಮಿಡಿತವನ್ನು ಅರಿತವರಾಗಿದ್ದರು ಎಂಬುದು ಅವರ ಚಿಂತನೆ, ಬರವಣಿಗೆಗಳಿಂದ ಗೊತ್ತಾಗುತ್ತದೆ. 'ಅರಿವಿನಡವಿಯ ಹಿರಿಯ ಗುರು' ಎಂಬ ಹೋಲಿಕೆ ಅಂಬೇಡ್ಕರ್ ಸಂಪಾದಿಸಿದ ಅಪಾರವಾದ ಪಾಂಡಿತ್ಯ ಮತ್ತು ಸಾಮಾಜಿಕ– ಧಾರ್ಮಿಕ ವ್ಯವಸ್ಥೆಗಳ ತಳರಚನೆಯ ಬಗೆಗೆ ಅವರಿಗಿದ್ದ ಅರಿವನ್ನು ಧ್ವನಿಸುತ್ತದೆ.

ಮನುಕುಲದ ಅಪಮಾನದ ಆಳದಲ್ಲಿ
ನಿರಂತರ ಮೊಳೆಯಲೆಳೆಸುವ ಸ್ವಾಭಿಮಾನಕ್ಕೆ,
ಅದು ಹೆಮ್ಮರವಾಗಿ ನಿಲ್ಲುವ ಊರ ಉಸಾಬರಿಗೆ;
ಸುತ್ತಲೆಲ್ಲಡೆ ಹಬ್ಬಲೆಳೆಸುವ ಪ್ರೀತಿಗೆ
ನೇರ ನಡೆ ನಿರ್ಭೀತಿಗೆ,
ಜನ್ಮಾರಭ್ಯ ಟೊಂಕ ಕಟ್ಟಿದ ಧೀರನೆ [೨೧]

ಶೋಷಣೆ, ಅಪಮಾನಗಳ ಅನುಭವಗಳೇ ವ್ಯಕ್ತಿಯನ್ನು ಸ್ವಾಭಿಮಾನಿಯನ್ನಾಗಿ, ಛಲಗಾರನನ್ನಾಗಿ ರೂಪಿಸುತ್ತವೆ. ಅವಮಾನ ವ್ಯಕ್ತಿಯಲ್ಲಿ ಹುಟ್ಟುಹಾಕುವ ಛಲಕ್ಕೆ, ಅದು ಬೆಳೆದು ನಿಲ್ಲುವ ಎತ್ತರಕ್ಕೆ, ಆವರಿಸಿ ನಿಲ್ಲುವ ವಿಸ್ತಾರಕ್ಕೆ ಅಂಬೇಡ್ಕರ್ ದೊಡ್ಡ ಉದಾಹರಣೆ. ಇದು ವೈಯಕ್ತಿಕ ಅಪಮಾನವನ್ನಷ್ಟೇ ಮೀರುವ ಪ್ರಯತ್ನವಲ್ಲ. ಬದಲಾಗಿ ಇಡೀ ಸಮುದಾಯದ ಹೀನಸ್ಥಿತಿಯನ್ನೇ ಬದಲಿಸುವ, ಶೋಷಕರಲ್ಲೂ ಅರಿವನ್ನು ಮೂಡಿಸುವ, ಆ ಮೂಲಕ ಮಾನವತೆಯ ಜಡತೆಗೆ ಚಲನೆಯನ್ನು ತಂದುಕೊಡಲು ಹೋರಾಡಿದ ಧೀರನಾಗಿ ಅಂಬೇಡ್ಕರ್

ಕಂಡುಬರುತ್ತಾರೆ. ಸ್ವಾಭಿಮಾನ, ಅಪಾರವಾದ ಮಾನವ ಪ್ರೀತಿ, ಎಲ್ಲವನ್ನೂ ಎದುರಿಸುವ ನಿರ್ಭೀತಿ ಅಂಬೇಡ್ಕರ್ ವ್ಯಕ್ತಿತ್ವದ ಪ್ರಧಾನ ಗುಣಗಳು ಎಂಬುದನ್ನು ಮೇಲಿನ ಕವಿತೆ ಗುರುತಿಸಿದೆ.

ಗೊಡ್ಡು ಪಂಡಿತರ ನಾಡಿನಲ್ಲಿ
ಮೂಕ ವೇದನೆಯಲಿ
ವೇದಗಳ ಚರ್ಮಸುಲಿದು
ನೋಡಿದಿ ನೀನು!
ಅವರ
ದೇವ ಭಾಷೆಯ ಪಠಿಸಿ
ದೇಶ ಭಾಷೆಯ ಪ್ರೀತಿಸಿ
ನಾಲಿಗೆಯ ಮೇಲೆಲ್ಲ ವಾಗ್ದೇವಿ ಕುಣಿಸಿಕೊಂಡಿ!
ವಿದ್ಯೆ ಯಾರ ಸೊತ್ತೂ ಅಲ್ಲವೆಂದು
ಹಾಡಿದಿ ನೀನು [೨೨]

ಮೇಲ್ವರ್ಗದವರು ಯಾವ ಶಿಕ್ಷಣ, ಅರಿವಿನಿಂದ ಅಸ್ಪೃಶ್ಯರನ್ನು ವಂಚಿಸಿದ್ದರೋ ಅವುಗಳನ್ನು ಪಡೆದುಕೊಳ್ಳುವ ತೀವ್ರ ಹಠ ಅಂಬೇಡ್ಕರ್ ಅವರಲ್ಲಿ ಬಾಲ್ಯದಿಂದಲೂ ಇತ್ತು. ತಮ್ಮ ಮೇಲಾಗುತ್ತಿರುವ ಶೋಷಣೆ, ದೌರ್ಜನ್ಯಗಳಿಗೆ ಆಧಾರವಾದ ಧರ್ಮ, ಧಾರ್ಮಿಕ ಗ್ರಂಥಗಳ ಮೂಲವನ್ನು ಭೇದಿಸುವ, ಅಸ್ಪೃಶ್ಯರಿಗೆ ನಿಷೇಧ ಹೇರಲಾಗಿದ್ದ ಸಂಸ್ಕೃತವನ್ನು ಕಲಿಯುವ, ಆ ಭಾಷೆಯ ಶಾಸ್ತ್ರ ಕೃತಿಗಳನ್ನೇ ಜಾಲಾಡುವ ಮೂಲಕ ಪ್ರತಿಭೆ–ವಿದ್ಯೆ ಯಾರ ಸ್ವತ್ತೂ ಅಲ್ಲವೆಂದು ಸಾಬೀತುಪಡಿಸುವಲ್ಲಿ ಯಶಸ್ವಿಯಾಗುತ್ತಾರೆ. ಆ ಮೂಲಕ ದೊಡ್ಡ ಬೌದ್ಧಿಕ ಪ್ರತಿಭೆಯಾಗಿ ಬೆಳೆದು ನಿಲ್ಲುತ್ತಾರೆ. ಇದು ಅಂಬೇಡ್ಕರರ ಮಹಾನ್ ಸಾಧನೆ ಎಂಬುದನ್ನು ಕವಿತೆ ಗುರುತಿಸಿದೆ.

ಕನಸುಗಳ ಕಡೆದವನೆ
ಮನಸುಗಳ ಮಿಡಿದವನೆ
ಮನೆಮನೆಯ ತುಂಬಿರುವ
ಮೌನಕೆ ಮಾತಾದವನೆ [೨೩]

ಅಂಬೇಡ್ಕರ್ ಒಬ್ಬ ಕನಸುಗಾರ. ವೈಯಕ್ತಿಕ ಏಳ್ಗೆಯ ಕನಸುಗಾರನಲ್ಲ, ನೊಂದ ಸಮುದಾಯದ ಏಳ್ಗೆಯ ಕನಸು ಕಂಡವರು. ಸ್ವಾತಂತ್ರ, ಸಮಾನತೆ, ಸೋದರತೆಯ ತಳಹದಿಯ ಮೇಲೆ ಸಮೃದ್ಧವಾದ ಮಾನವೀಯ ಸಮಾಜ ನಿರ್ಮಿಸುವ ಕನಸು ಕಂಡವರು. ಬದುಕಿನುದ್ದಕ್ಕೂ 'ತಲೆ ತುಂಬ ನಾಳಿನ ಕನಸು'ಗಳನ್ನು ತುಂಬಿಕೊಂಡು ಅವುಗಳನ್ನು ನನಸಾಗಿಸಲು ಹೋರಾಡಿದವರು. ಚರಿತ್ರೆಯ ಕಹಿಸತ್ಯಗಳನ್ನು ನಿರ್ಭಿಡೆಯಿಂದ ತೆಗೆದು ತೋರಿಸಿ ನಿಜವಾದ ಸತ್ಯದ ಹುಡುಕಾಟದಲ್ಲಿ ತೊಡಗಿದ ಸತ್ಯ ಶೋಧಕ ಅಂಬೇಡ್ಕರ್. ಕತ್ತಲನ್ನೇ ಹಿಂಡಿ ಬೆಳ್ದಿಂಗಳನ್ನು ತೆಗೆದು ಪ್ರಸರಿಸಿದವರು. ತಮ್ಮ ಇಡೀ ಬದುಕಿನುದ್ದಕ್ಕೂ ಸಾಮಾಜಿಕ ಸತ್ಯದ ಹುಡುಕಾಟದಲ್ಲಿ ತೊಡಗಿದವರು. ಶತಶತಮಾನಗಳ 'ಮೌನಕ್ಕೆ ಮಾತಾಗಿದ್ದಾರೆ' ಎಂಬುದು ಶೋಷಿತರ ಪರವಾದ ಅಂಬೇಡ್ಕರರ ಕಾಳಜಿಗಳನ್ನು ಧ್ವನಿಸುತ್ತದೆ.

ಮುಚ್ಚು ಮರೆಗಳನು ಬಿಚ್ಚಿ ಚರಿತ್ರೆಯ
ಕುಹಕ ತೋರಿದವರು
ಕತ್ತಲನು ಹುರಿಮಾಡಿ ಹಿಂಡಿ
ಬೆಳ್ದಿಂಗಳ ತೆಗೆದವರು.
ಹೂವಿನ ಹಾಗೆಯೆ ಬೇರಿಗೂ ಬೇರೆಯದೆ
ನಿಜವಿದೆಯೆಂದವರು
ರಸಸಿದ್ಧಿಯ ನಾಗಾರ್ಜುನ ಮರೆತಾ
ಬೇರನು ಕಂಡವರು [೨೪]

ಸಮಾಜ ಮತ್ತು ಚರಿತ್ರೆಯ ಎಲ್ಲಾ ತರತಮ ಹಾಗೂ ವಿದ್ರೋಹದ ಕೃತ್ಯಗಳನ್ನು ಬಯಲಿಗೆಳೆದು ಪ್ರತಿರೋಧಿಸಿದ. ಅಸ್ಪೃಶ್ಯರ ಶಕ್ತಿ–ಸಾಮರ್ಥ್ಯಗಳನ್ನು, ಚರಿತ್ರೆಯಲ್ಲಿ ಅವರ ಮಹತ್ವವನ್ನು ಮನವರಿಕೆ ಮಾಡಿಕೊಟ್ಟ ಅನ್ವೇಷಕ ಅಂಬೇಡ್ಕರ್. ಶೋಷಿತರ ಬದುಕಿನ ಘನತೆಯನ್ನು ಎತ್ತಿ ಹಿಡಿದು 'ಹೂವಿನ ಹಾಗೆಯೇ ಬೇರಿಗೂ ಬೇರೆಯದೆ ನಿಜವಿದೆಯೆಂದು' ಮನವರಿಕೆ ಮಾಡಿಕೊಟ್ಟವರು. ಮನುಷ್ಯರನ್ನು ನೋಡಬೇಕಾದ ಹೊಸ ದೃಷ್ಟಿಯನ್ನು ಕೊಟ್ಟವರು ಅಂಬೇಡ್ಕರ್. ಆ ಮೂಲಕ ಮಾನವ ಚರಿತ್ರೆ ಬೆಳಕಿನೆಡೆಗೆ ಸಾಗಬೇಕಾದುದನ್ನು ತಿಳಿಸಿ ಹೇಳಿದವರು. ಚರಿತ್ರೆ ಸಾಗಿಬಂದ ದಾರಿಯ ದೋಷಗಳನ್ನು ಗುರುತಿಸಿ ಪ್ರತಿರೋಧಿಸಿದ 'ಅರಿವಿನ ಆಸ್ಫೋಟ' ಅಂಬೇಡ್ಕರ್.

ಶತಮಾನದ ಸೇಡಿನ ಕಿಡಿ
ಜಗದೊಲವಿನ ಜ್ಯೋತಿಯೇ
ಒಡಲಿನಾಳದಿಂದ ಬಂದ
ಅರಿವಿನ ಆಸ್ಫೋಟವೇ
ಜಗದ ಕತ್ತಲೆಯಲ್ಲಿ
ಯುಗದ ಬುತ್ತಿಯ ಹಿಡಿದು
ಬತ್ತಿಯ ಬೆಳಕಿನ ಜೊತೆಗೆ
ಕಾರಿರುಳಲಿ ನಡೆದವನೆ [39]

ಇಲ್ಲಿ ಬಳಕೆಯಾಗಿರುವ 'ಸೇಡಿನ ಕಿಡಿ' ರೂಪಕ ದ್ವೇಷದ ಸಂಕೇತವಾಗಿ ಮೂಡಿಬಂದದ್ದಲ್ಲ. ಅಪಾರವಾದ ಆತ್ಮಾಭಿಮಾನದಿಂದ ಶೋಷಣೆಯನ್ನು ಪ್ರತಿಭಟಿಸುವ ಛಲದ ಸಂಕೇತವಾಗಿ ಬಂದದ್ದು. ಶೋಷಕರನ್ನು ಸುಡುವ ಕಿಡಿಯಲ್ಲ ಬದಲಾಗಿ ಅವರನ್ನು ಪರಿವರ್ತಿಸುವ ಬೆಳಕಿನ ಕಿಡಿ ಅದು. ಹಾಗಾಗಿಯೇ ಸೇಡಿನ ಕಿಡಿ ಬೀರುತ್ತಿರುವುದು ಒಲವಿನ ಬೆಳಕನ್ನು. 'ಜಗದೊಲವಿನ ಜ್ಯೋತಿಯೇ' ರೂಪಕ ಅವರಲ್ಲಿನ ಅಪಾರವಾದ ಮಾನವ ಪ್ರೀತಿಯನ್ನು ಶಕ್ತವಾಗಿ ಹಿಡಿದಿಟ್ಟಿದೆ. 'ಅರಿವಿನ ಆಸ್ಫೋಟ' ಎಂಬ ರೂಪಕ ಶತಶತಮಾನಗಳ ಅಜ್ಞಾನ, ಮೌಢ್ಯಗಳನ್ನು ಸಕಾರಣವಾಗಿ ಭೇದಿಸಿದ ಅಂಬೇಡ್ಕರರ ಪ್ರಖರ ಜ್ಞಾನವನ್ನು ಧ್ವನಿಸುತ್ತದೆ. ಚರಿತ್ರೆಯಲ್ಲಾಗಿರುವ ಪ್ರಮಾದಗಳನ್ನು ಸರಿಪಡಿಸುವುದಷ್ಟೇ ಅಲ್ಲ ಭವಿಷ್ಯದ ಬದುಕಿನ ಬಗೆಗೆ ದೂರಾಲೋಚನೆಯುಳ್ಳ ಕನಸುಗಾರನೂ ಆಗಿದ್ದರು ಎಂಬುದನ್ನು ಈ ಕವಿತೆ ಗುರುತಿಸಿದೆ.

ಅಂಬೇಡ್ಕರ್ ವ್ಯಕ್ತಿತ್ವವನ್ನು ವರ್ತಮಾನದ ಹಲವು ಬಿಕ್ಕಟ್ಟುಗಳ ನಡುವೆ ಇಟ್ಟು ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಹಲವು ಕವಿತೆಗಳು ಮಾಡಿವೆ. ಅಂಬೇಡ್ಕರ್ ಹಾಗೂ ಅವರ ಚಿಂತನೆಗಳು ವರ್ತಮಾನದಲ್ಲಿ ಪಡೆದುಕೊಳ್ಳುತ್ತಿರುವ ಮಹತ್ವ ಹಾಗೂ ಪ್ರಭುತ್ವ ಮತ್ತು ಸಾಮಾಜಿಕ ಸಂಘಟನೆಗಳು ಅವರನ್ನು ಅರ್ಥೈಸುತ್ತಿರುವ ರೀತಿ, ದಲಿತ ಸಂಘಟನೆಗಳು ನಡೆಸುತ್ತಿರುವ ಹೋರಾಟಗಳ ವಿಫಲತೆಗೆ ಕಾರಣಗಳು, ಇಂದಿನ ಅಸ್ಪೃಶ್ಯರು ಎದುರಿಸುತ್ತಿರುವ ಸಮಸ್ಯೆಗಳು, ಜಾತಿ ಹಿಂಸೆ, ಕ್ರೌರ್ಯಗಳು ಈ ಎಲ್ಲಾ ಸಮಸ್ಯೆಗಳ ನಡುವೆ ಅಂಬೇಡ್ಕರ್ ಚಿಂತನೆಗಳ ಮೌಲ್ಯಮಾಪನ ಮಾಡುವ ವಿಶಿಷ್ಟ ಪ್ರಯತ್ನವನ್ನು ಹಲವು ಕವಿತೆಗಳು ಮಾಡಿವೆ. ಅಂಬೇಡ್ಕರ್ ಮತ್ತು ಅವರ ಚಿಂತನೆಗಳು ಅಪವ್ಯಾಖ್ಯಾನಗೊಳ್ಳುತ್ತಿರುವುದು, ಅಸ್ಪೃಶ್ಯತೆಯ ಆಚರಣೆ ಹಾಗೂ ಜಾತಿ ಹಿಂಸೆಗಳು ಇನ್ನೂ ಜೀವಂತವಾಗಿರುವುದು, ಈ ಪ್ರಶ್ನೆಗಳ ಜೊತೆಗೆ ಅಸ್ಪೃಶ್ಯತಾ ನಿವಾರಣೆಗೆ ದಾರಿಗಳನ್ನು ಕಂಡುಕೊಳ್ಳುವ ಚಿಂತನ – ಮಂಥನದಲ್ಲಿ ಈ ಕವಿತೆಗಳು ತೊಡಗುತ್ತವೆ. ಅಂಬೇಡ್ಕರ್ ಮತ್ತು ಅಸ್ಪೃಶ್ಯರು ರಾಜಕೀಯ ದಾಳವಾಗಿ ಬಳಕೆಯಾಗುತ್ತಿರುವ ಸಂದರ್ಭದಲ್ಲಿ ದಮನಿತರು ರೂಪಿಸಿಕೊಳ್ಳಬೇಕಾದ ಹೋರಾಟದ ಸ್ವರೂಪ ಹೇಗಿರಬೇಕು? ಎಂಬುದರ ಆತ್ಮಾವಲೋಕನದಲ್ಲಿ ಕವಿತೆಗಳು ತೊಡಗಿವೆ. ಎಲ್ಲಕ್ಕೂ ಮುಖ್ಯವಾಗಿ ಕವಿಗಳಿಗಿರುವ ಸಾಮಾಜಿಕ ಕಳಕಳಿ, ಹೊಣೆಗಾರಿಕೆ, ಮಾನವೀಯ ಮಿಡಿತವನ್ನು ಜೀವಂತವಾಗಿರಿಸಿಕೊಳ್ಳಲು ಹಂಬಲಿಸುತ್ತಿರುವ ಪ್ರಜ್ಞೆ ಇವೆಲ್ಲವೂ ಇಲ್ಲಿ ವಿಶಿಷ್ಟ ಸಾಂಸ್ಕೃತಿಕ ಆಯಾಮವನ್ನು ಪಡೆದುಕೊಳ್ಳುತ್ತವೆ.

ಯಾವ ವ್ಯಕ್ತಿಯ ಬದುಕೂ, ಚಿಂತನೆ ಹೋರಾಟಗಳೂ ಪ್ರಶ್ನಾತೀತವೇನಲ್ಲ. ಎಲ್ಲವೂ ಒಪ್ಪಿತವೇನಲ್ಲ. ಬಹುತಾತ್ವಿಕತೆಗಳು, ಚಿಂತನೆಗಳು ಇರುವ ವಾತಾವರಣದಲ್ಲಿ ಪ್ರಶ್ನೆಗಳು, ಅನುಮಾನಗಳು, ವಿರೋಧಗಳು ಇದ್ದೇ ಇರುತ್ತವೆ. ಇವು ವ್ಯಕ್ತಿತ್ವಗಳನ್ನು ಸರಿಯಾದ ಕ್ರಮದಲ್ಲಿ ಅರಿಯಲು ಹಾಗೂ ಸಮಾಜವನ್ನು, ದೇಶವನ್ನೂ ಸರಿದಾರಿಯಲ್ಲಿ ಕೊಂಡೊಯ್ಯಲು ಸಹಕಾರಿಯಾಗಿರುತ್ತವೆ. ಜಾತಿ ವ್ಯವಸ್ಥೆಯ ತಳಹದಿಯ ಮೇಲೆ ರೂಪುಗೊಂಡ, ವರ್ಣವ್ಯವಸ್ಥೆಯನ್ನು ಬಲವಾಗಿ ಸಮರ್ಥಿಸಿಕೊಳ್ಳುತ್ತಿರುವ ಸಾಮಾಜಿಕ ವ್ಯವಸ್ಥೆಯನ್ನೇ ಸರ್ಜರಿ ಮಾಡಲು ಹೊರಟ, ಜಾತಿಯ ಬೇರುಗಳನ್ನೇ ಕಿತ್ತೆಸೆಯಲು ಪ್ರಯತ್ನಿಸಿದ, ಹಿಂದೂ ಧರ್ಮದ ಆಚರಣೆ-ಮೌಢ್ಯಗಳನ್ನು, ಜಾತಿ ಸಮರ್ಥನೆಯನ್ನು ಅಲ್ಲಗಳೆದ, ಕೊನೆಗೆ ಅಸ್ಪೃಶ್ಯರ ಬಿಡುಗಡೆಗಾಗಿ ಹಿಂದೂ ಧರ್ಮವನ್ನು ತೊರೆದು ಬೌದ್ಧಧರ್ಮ ಸ್ವೀಕರಿಸುವುದೊಂದೇ ಪರಿಹಾರವೆಂದು ಕ್ರಾಂತಿಕಾರಕ ನಿಲುವನ್ನು ತಳೆದ ಅಂಬೇಡ್ಕರ್ ಸಹಜವಾಗಿಯೇ ಹಲವು ಪ್ರಶ್ನೆ, ಅನುಮಾನ, ಸಂಘರ್ಷಗಳಿಗೆ ಒಳಗಾಗಿದ್ದಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸಂಘರ್ಷಕ್ಕಿಳಿಯುತ್ತಿರುವವರು ದಲಿತ ಸಮುದಾಯದ ಕವಿಗಳೇ. ದಲಿತೇತರರು ಅಂಬೇಡ್ಕರ್ ಹೋರಾಟ – ಚಿಂತನೆಗಳನ್ನು ಶ್ಲಾಘನೆಯ ನೆಲೆಯಲ್ಲಿಯೇ ನೋಡಿದರೆ ದಲಿತರು ಮಾತ್ರ ಆಪ್ತವಾದ ಸಲಿಗೆಯೊಂದಿಗೆ ತಮ್ಮ ನಾಯಕನೊಂದಿಗೆ ಜಗಳವಾಡುತ್ತಾರೆ. ಅವರ ಹೋರಾಟದ ಪರಿಣಾಮಗಳನ್ನು ಪ್ರಶ್ನಿಸಿದ್ದಾರೆ. ಅಸ್ಪೃಶ್ಯರ ವಿಮೋಚನೆಗೆ ಬೌದ್ಧಧರ್ಮ ಸ್ವೀಕಾರವೊಂದೇ ಪರಿಹಾರವೆಂದ ಅವರ ನಿಲುವನ್ನು ಅನುಮಾನಿಸುತ್ತಾರೆ. ಹಾಗೆಂದ ಮಾತ್ರಕ್ಕೆ ಇವರು ಅಂಬೇಡ್ಕರ್‌ರವರನ್ನು ವಿರೋಧಿಸುತ್ತಾರೆ ಎಂದು ಅರ್ಥವಲ್ಲ. ಬದಲಾಗಿ ಅಂಬೇಡ್ಕರರ ನಿಲುವುಗಳನ್ನೂ, ವ್ಯಕ್ತಿತ್ವವನ್ನೂ ಅರ್ಥಮಾಡಿಕೊಳ್ಳಲು ಹಾಗೂ ವರ್ತಮಾನದಲ್ಲಿ ಅಸ್ಪೃಶ್ಯವರ್ಗ ಅನುಭವಿಸುತ್ತಿರುವ ಹಲವು ಬಗೆಯ ಸಮಸ್ಯೆಗಳ ಹಿಂದಿನ ಕಾರಣಗಳನ್ನು, ಅವುಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವ ಹಾಗೂ ತಮ್ಮ ಹೋರಾಟಗಳ ಸ್ವರೂಪಗಳನ್ನು ನಿರ್ಧರಿಸಿಕೊಳ್ಳಲು ನಡೆಸುತ್ತಿರುವ ಸೃಜನಶೀಲ ಪ್ರಯತ್ನಗಳಾಗಿ ಕಂಡುಬರುತ್ತವೆ.

ವಿವಿಧ ಸಾಮಾಜಿಕ ಸ್ತರಗಳಲ್ಲಿ ನಿಂತು ಕವಿಗಳು ಅಂಬೇಡ್ಕರ್‌ರನ್ನು ಅರ್ಥ ಮಾಡಿಕೊಳ್ಳಲು ಮಾಡಿರುವ ಪ್ರಯತ್ನಗಳು ಅವರೊಂದಿಗೆ ಮುಖಾಮುಖಿಯಾಗುವಂತೆ ಮಾಡಿವೆ. ವಾಸ್ತವದ ಕ್ರೂರ ಅನುಭವಗಳು ತಮ್ಮ ನಾಯಕನನ್ನು, ಆತ ಹುಟ್ಟುಹಾಕಿದ ಹೋರಾಟಗಳನ್ನು ಅನುಮಾನಿಸುವಂತೆ ಮಾಡಿವೆ. ಆರೋಗ್ಯಕರ ಸಮಾಜಕ್ಕಾಗಿ, ಆರೋಗ್ಯಪೂರ್ಣ ಮನಸ್ಸುಗಳ ಕಟ್ಟುವಿಕೆಗಾಗಿ ತುಡಿಯುತ್ತಿರುವ ಕವಿ ಮನಸ್ಸುಗಳು ತಮ್ಮ ನಾಯಕನ ಜೊತೆ ಸಂಘರ್ಷಕ್ಕಿಳಿದಿದ್ದಾರೆ.

ಮೋಡನಾಗಿ ನೀ ಗುಡಗತಿದ್ದಿ
ನೀರನಾಗಿ ನೀ ಹರಿಯತಿದ್ದಿ
ಬೇಕಾದ್ದು ಜೊತೆಗೆ ಬ್ಯಾಡಾದ್ದು ಬೆಳದಿ
ಬಣ್ಣ ಬಣ್ಣದಾಗ ಬಣ್ಣಾಗಿ ಉಳದಿ [39]

ಅಂಬೇಡ್ಕರ್‌ರ ಜಾತಿವಿನಾಶದ ಹೋರಾಟ, ಅಸ್ಪೃಶ್ಯರಿಗೆ ರಾಜಕೀಯಾಧಿಕಾರ, ಮೀಸಲಾತಿ ಮುಂತಾದ ಅವಕಾಶಗಳ ನೀಡಿಕೆ ಅಸ್ಪೃಶ್ಯರಲ್ಲಿಯೇ ಎರಡು ವರ್ಗಗಳನ್ನು ಸೃಷ್ಟಿಸಿತು. ಶಿಕ್ಷಣ, ಉದ್ಯೋಗದ ಅವಕಾಶಗಳನ್ನು ಪಡೆದು ಮೇಲ್ಚಲನೆಗೊಂಡ ಅಸ್ಪೃಶ್ಯರಿಗೂ, ನಗರ ಹಾಗೂ ಹಳ್ಳಿಗಳಲ್ಲಿ ಶಿಕ್ಷಣದಿಂದ ವಂಚಿತರಾಗಿ ಕೃಷಿ ಕೂಲಿಗಳಾಗಿ, ಕಾರ್ಮಿಕರಾಗಿ ಬದುಕುತ್ತಿರುವವರಿಗೂ ಅಂತರ ಉಂಟಾಯಿತು. ಮೇಲ್ಚಲನೆಗೊಂಡ ದಲಿತರು

ವರ್ಣೀಯರಂತೆ ಗುರುತಿಸಿಕೊಂಡು ಮೇಲ್ಬಲನೆಗೊಳ್ಳದ ದಲಿತರನ್ನು ಕಡೆಗಣಿಸಿರುವುದನ್ನು, ಅಂಬೇಡ್ಕರ್ ಇಂದಿಗೂ ಹಳ್ಳಿಗಾಡಿನ ದಲಿತರಿಗೆ ಅಪರಿಚಿತರಾಗಿಯೇ, ಕೈಗೆಟುಕದ ವರ್ಣದ ವ್ಯಕ್ತಿಯಾಗಿಯೇ ಉಳಿದುಬಿಟ್ಟಿರುವುದನ್ನು ಈ ಕವಿತೆ ಸೂಕ್ಷ್ಮವಾಗಿ ಪ್ರಸ್ತಾಪಿಸುತ್ತದೆ. ಅಂಬೇಡ್ಕರ್ ಹೋರಾಟದ ಫಲವಾಗಿ ಅಸ್ಪೃಶ್ಯರಿಗೆ ದೊರೆತ ಮೀಸಲಾತಿ ಮುಂತಾದ ಅವಕಾಶಗಳು ಹಳ್ಳಿಗಾಡಿನ ಅಸ್ಪೃಶ್ಯರಿಗೆ ಇನ್ನೂ ತಲುಪಿಲ್ಲ. ಅದೆಷ್ಟೋ ಅಸ್ಪೃಶ್ಯ ವರ್ಗದವರಿಗೆ ಅಂಬೇಡ್ಕರ್ 'ಬಣ್ಣದ' ವ್ಯಕ್ತಿಯಾಗಿಯೇ ಉಳಿದುಬಿಟ್ಟಿದ್ದಾರೆ. ಇದು ಅಂಬೇಡ್ಕರ್ ವ್ಯಕ್ತಿತ್ವದ ದೋಷವಲ್ಲ. ಅಂಬೇಡ್ಕರ್ ಎಲ್ಲರಿಗೂ ತಲುಪದಂತೆ ನಿಯಂತ್ರಿಸುತ್ತಿರುವ ವ್ಯವಸ್ಥೆಯ ದೋಷ.

ಅಸ್ಪೃಶ್ಯರ ಏಳ್ಗೆಗಾಗಿ ಅಂಬೇಡ್ಕರ್‌ರವರು ಸಾಂವಿಧಾನಿಕವಾಗಿಯೇ ಮೀಸಲಾತಿಯನ್ನು ಜಾರಿಗೆ ತಂದರು. ಶಿಕ್ಷಣ ಮತ್ತು ಉದ್ಯೋಗಗಳಲ್ಲಿ ಮೀಸಲಾತಿಯನ್ನು ದೊರಕಿಸಿಕೊಡುವುದರ ಮೂಲಕ ಅಸ್ಪೃಶ್ಯರನ್ನು ಮೇಲೆತ್ತುವುದು ಹಾಗೂ ಆ ಮೂಲಕ ಸಾಮಾಜಿಕ ಸಮಾನತೆಯನ್ನು ಸಾಧಿಸುವುದು ಅವರ ಪ್ರಯತ್ನವಾಗಿತ್ತು. ಆದರೆ ಇಂದು ಮೀಸಲಾತಿ ಎಂಬುದನ್ನೇ ರಾಜಕೀಯ ಪಕ್ಷಗಳು ಮತಗಳಿಕೆಯ ತಂತ್ರವಾಗಿ ಮುಂದುವರಿಸುತ್ತಿರುವುದು ಅಸ್ಪೃಶ್ಯತೆಯನ್ನೂ, ಜಾತಿ ವ್ಯವಸ್ಥೆಯನ್ನೂ ಜೀವಂತವಾಗಿಡುವ ಹುನ್ನಾರವಾಗಿದೆ. ಸಮಾನತೆಯ ಆಶಯದೊಂದಿಗೆ ಜಾರಿಗೆ ತಂದ ಮೀಸಲಾತಿ ಕ್ರಮೇಣ ಜಾತಿಯ ಅಸ್ತಿತ್ವವನ್ನು ಜೀವಂತವಾಗಿಟ್ಟು ಈ ನಾಡಿನ ಸೌಹಾರ್ದತೆಯನ್ನೇ ಕದಡುತ್ತಿದೆ. 'ಮೀಸಲಾತಿ ಪರಿಕಲ್ಪನೆ ಅಂಬೇಡ್ಕರ್ ಆಶಯವನ್ನೂ ಮೀರಿ ರಾಜಕಾರಣದ ದಾಳವಾಗಿ ಬಳಕೆಯಾಗುತ್ತಿರುವುದರ ಬಗೆಗೆ ವಿಷಾದವಿದೆ. ಇದು ಅಸ್ಪೃಶ್ಯ ಸಮುದಾಯದ ಸ್ವಾಭಿಮಾನ, ಪ್ರತಿಭೆಗೆ ದಕ್ಕೆತರುತ್ತಿದೆ. ಅಸ್ಪೃಶ್ಯತಾಚರಣೆ, ಜಾತಿಹಿಂಸೆಯ ಕ್ರೌರ್ಯ, ತಮ್ಮ ಹೀನಾಯ ಬದುಕನ್ನು ಚಿತ್ರಿಸುತ್ತಲೇ ತಮ್ಮನ್ನು ಮೇಲಕ್ಕೆತ್ತಲು ಹೋರಾಡಿದ ತಮ್ಮ ನಾಯಕನ ಹೋರಾಟಗಳ ಪರಿಣಾಮಗಳನ್ನು ಒರೆಗೆ ಹಚ್ಚುವ ಪ್ರಯತ್ನ ಮಾಡುತ್ತಾರೆ. ಇದು ತಮ್ಮ ನಾಯಕನ ಹೋರಾಟಗಳ ದೋಷವಲ್ಲ. ವ್ಯವಸ್ಥೆಯ ದುರಂತ ಎಂಬ ನಿಲುವಿಗೆ ಬಂದಿರುವುದನ್ನು ಕಾಣಬಹುದು.

ಮಲ ಹೊರುವ, ಮಲ ತಿನ್ನಿಸುವ, ಜಾತಿ ಹಿಂಸೆಯ ಕ್ರೌರ್ಯಗಳು ಈ ನಾಡಿನಲ್ಲಿ ಇನ್ನೂ ಜೀವಂತವಾಗಿಯೇ ಇರುವಾಗ ಅಷ್ಟೆಲ್ಲಾ ಹೋರಾಟಗಳ ಫಲವಾದರೂ ಏನು? ಅಂಬೇಡ್ಕರ್ ಹೋರಾಟಕ್ಕೆ ಸಿಕ್ಕ ಫಲವಾದರೂ ಏನು? ಎಂದು ಪ್ರಶ್ನಿಸುವಂತಾಗಿದೆ. ಅಂಬೇಡ್ಕರ್ ಹೋರಾಟಗಳು ಅವರು ನಿರೀಕ್ಷಿಸಿದ ಫಲವನ್ನೇನೂ ಕೊಡಲಿಲ್ಲ. ಅಸ್ಪೃಶ್ಯರ ಬದುಕಿನಲ್ಲಿ ಯಾವ ಭರವಸೆಗಳನ್ನು ಬಿತ್ತಲೂ ಸಾಧ್ಯವಾಗಲಿಲ್ಲ. ಇದಕ್ಕೆಲ್ಲ ಕಾರಣವಾದರೂ ಏನು? ಇವಕ್ಕೆಲ್ಲ ಪರಿಹಾರವಾದರೂ ಇದೆಯೇ? ಇವುಗಳ ಕೊನೆ ಎಂದು? ಎಂದು ಪ್ರಶ್ನಿಸುವಂತಾಗಿದೆ.

ಮಹಾರಾಷ್ಟ್ರದ ಮಣ್ಣಿನಲ್ಲಿ
ಮೂಡಿಬಂದ ಗುಡುಗು ಸಿಡಿಲೆ
ಮಳೆಯನೇಕೆ ತಾರಲಿಲ್ಲ
ಮಿಂಚು ಮಾಯೆ ಅಷ್ಟೆಯೆ?
ಅಭಿಮಾನದ ನೇಗಿಲಿಂದ
ಬಂಜರು ನೆಲ ಉತ್ತವನೆ
ಪಾತಿ ಮಾಡಿ ನಾಟಿ ಹಾಕಿ

ಬೆಳೆಯ ಕಾಣದೋದವನೆ [೨೭]

ಅಂಬೇಡ್ಕರ್ ಹೋರಾಟ ಕೇವಲ ಮಿಂಚು ಗುಡುಗು ಮಾತ್ರವಾಗಿದೆ. ಅದು ಯಾವ ಮಳೆಯನ್ನೂ ತರಲಿಲ್ಲ. ಇದು ಅಂಬೇಡ್ಕರ್ ಪ್ರಯತ್ನಗಳ ದೋಷವಲ್ಲ. ಈ ದೇಶದಲ್ಲಿ ಜಾತಿವ್ಯವಸ್ಥೆಯ ಬೇರುಗಳು ಎಷ್ಟು ಆಳವಾಗಿ ಬೇರೂರಿವೆ ಎಂಬುದರ ಸೂಚಕ. ಅದನ್ನು ಬಲವಾಗಿ ನಿಯಂತ್ರಿಸುತ್ತಿರುವ ವ್ಯವಸ್ಥೆಯ ರಾಜಕಾರಣಗಳನ್ನು ಅರಿಯುವ ಪ್ರಯತ್ನ, ಎಂಥ ಹೋರಾಟಗಳಿಗೂ ಜಗ್ಗದ ಜಡಗೊಂಡ ವ್ಯವಸ್ಥೆಯ ದುಸ್ಥಿತಿಯನ್ನು ವಿಡಂಬಿಸುವ ಮಾರ್ಗವಾಗಿ ಈ ಕವಿತೆ ಕಂಡುಬರುತ್ತದೆ.

ಅಂಬೇಡ್ಕರ್ ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ಸುಧಾರಣೆ ತರಲು ಬಯಸಿ, ಹೋರಾಡಿ ಕೊನೆಗೆ ಹಿಂದೂ ಧರ್ಮವನ್ನೇ ತೊರೆದು ಬೌದ್ಧಧರ್ಮ ಸ್ವೀಕರಿಸುತ್ತಾರೆ. ಅಸ್ಪೃಶ್ಯತೆಯ ನಿವಾರಣೆಗೆ, ಅಸ್ಪೃಶ್ಯರ ವಿಮೋಚನೆಗೆ ಬೌದ್ಧಧರ್ಮವೊಂದೇ ಅಂತಿಮ ದಾರಿ ಎಂದು ಪ್ರತಿಪಾದಿಸುತ್ತಾರೆ. ಇದನ್ನು ಅಂಬೇಡ್ಕರ್ ನೈತಿಕತೆಯನ್ನು ಆದರಿಸಿದ ಸಮಾಜ ನಿರ್ಮಾಣಕ್ಕೆ ಧರ್ಮ ಅಗತ್ಯ, ಅಸ್ಪೃಶ್ಯರಿಗೆ ನೈತಿಕತೆ ಎಂಬುದು ಒಂದು ಶಕ್ತಿಯಾಗಿರಬೇಕೆಂಬ ಆಶಯದಿಂದ ಸಮರ್ಥಿಸಿಕೊಂಡರೂ, ಕೆಲವರು ಅಂಬೇಡ್ಕರ್ ಬೌದ್ಧಧರ್ಮಕ್ಕೆ ಮೊರೆ ಹೋದುದನ್ನೇ ಪ್ರಶ್ನಿಸುತ್ತಾರೆ. ಎಲ್ಲಾ ಧರ್ಮಗಳೂ ಆಚರಣೆಯಲ್ಲಿ ಶೋಷಕ ಪ್ರವೃತ್ತಿಯವೇ ಆಗಿಬಿಡುತ್ತವೆ. ಹಾಗಾಗಿ ಅಂಬೇಡ್ಕರ್ ಧರ್ಮಾತೀತವಾಗಿ ನಿಲ್ಲಬೇಕಿತ್ತು ಎಂಬ ಪ್ರಶ್ನೆ ಎತ್ತಲಾಗಿದೆ.

ಕಪ್ಪುಕ್ಕಿನ ಕೋಳಗಳನು
ಕಡಿದು ಎಸೆದ ವಜ್ರವೆ
ಬಂಗಾರದ ಕೋಳವೊಕ್ಕ
ಮಹಾಬೌದ್ಧ ಬಿಕ್ಷುವೆ [೨೮]

ಕಾಗೆ ಗೂಗೆಗಳ ಮಧ್ಯ ಗೂಡು ಕಟ್ಟಿದ ನೀನು
ಕೋಗಿಲೆಯ ದನಿಗೇಕೆ ಹಾರಿ ಹೋದೆ!
ವಸಂತ ಬಂದು ಹೊಸ ಕಳೆಯು ಬರುವಲ್ಲಿ
ಬೋಧಿಯೊಳಗೇಕೆ ಬೂದಿಯಾದೆ! [೨೯]

"ಸಮಾಜಕ್ಕೆ ಧರ್ಮ ಅಗತ್ಯವಿಲ್ಲ ಎಂಬುದು ಕೆಲವರ ಅನಿಸಿಕೆಯಾಗಿದೆ. ನನಗದರಲ್ಲಿ ಸಹಮತವಿಲ್ಲ, ನನ್ನ ಅಭಿಪ್ರಾಯದಂತೆ ಸಮಾಜ ಜೀವನಕ್ಕೆ ತಳಹದಿಯಾಗಿ ಇರಬೇಕಾದುದೇ ಧರ್ಮ. ಆದರೆ ಅದು ಸದ್ಧರ್ಮವಾಗಿರಬೇಕು, ಅಷ್ಟೇ." [೩೦] ಅಂಬೇಡ್ಕರ್ ಅವರದೇ ಆದ ಕಾರಣಕ್ಕೆ ಬೌದ್ಧ ಧರ್ಮವನ್ನು ಸ್ವೀಕರಿಸಿ, ಅಸ್ಪೃಶ್ಯರಿಗೆ ವಿಮೋಚನೆಯ ದಾರಿ ಅದೊಂದೇ ಎಂದು ಅಂತಿಮವಾಗಿ ನಿರ್ಧರಿಸಿದರೆ ದಲಿತವರ್ಗ ತಮ್ಮದೇ ಆದ ಕಾರಣಗಳಿಗೆ ಧರ್ಮವನ್ನು ತಮ್ಮ ವಿಮೋಚನೆಯ ದಾರಿಯಾಗಿ ಸ್ವೀಕರಿಸಲು ಅನುಮಾನಿಸುತ್ತಾರೆ.

ಅಂಬೇಡ್ಕರ್ ಜಾತಿ ವಿನಾಶದ ಹೋರಾಟ ಹಾಗೂ ಅದರ ಪ್ರೇರಣೆಯಿಂದ ಹುಟ್ಟಿಕೊಂಡ ಹಲವು ಹೋರಾಟಗಳ ನಡುವೆಯೂ ಅಸ್ಪೃಶ್ಯತೆಯ ಆಚರಣೆ, ಶೋಷಣೆಗಳು ಇನ್ನೂ ಜೀವಂತ. ಇಂಥ ಸಂದರ್ಭದಲ್ಲಿ ತಮ್ಮ ಸಮುದಾಯವನ್ನು ಆವರಿಸಿಕೊಂಡಿರುವ ಈ ಸಂಕೋಲೆಗಳಿಂದ ಬಿಡಿಸುವುದಕ್ಕಾಗಿ ತಾವು ಯಾವ ಹೋರಾಟದ ದಾರಿ ಹಿಡಿಯಬೇಕು? ಯಾರನ್ನು ಅನುಸರಿಸಬೇಕು? ಎಂಬ ಗೊಂದಲದಲ್ಲಿ ಇಂದಿನ ಹೋರಾಟಗಳು ಮುಳುಗಿಹೋಗಿವೆ. ಇಂಥ ಸಂದರ್ಭದಲ್ಲಿ ಅಸ್ಪೃಶ್ಯ ಸಮುದಾಯ ಸ್ವಾಭಿಮಾನದಿಂದ ತಮ್ಮ ಸಮಸ್ಯೆಗಳಿಗೆ ತಾವೆ ಪರಿಹಾರ ಕಂಡುಕೊಳ್ಳಬೇಕು ಎಂಬ ದಿಟ್ಟ ನಿಲುವಿಗೆ ಬರುತ್ತದೆ.

ನೀನು ಬೇಡ, ನಿನ್ನ ಹಂಗು ಬೇಡ,
ಬೇಡ ಬಿಡು ನಿನ್ನ ಭಾವಣೆಯ ತಂಗು,
ನಾನು ನಾನಾಗಲು ಕಲಿತಿರುವೆ
ನನ್ನ ದಾರಿ ನನಗೆ ಬಿಡಯ್ಯ [೩೧]

ಯಾವ ವ್ಯಕ್ತಿಯನ್ನೂ ಅನುಸರಿಸದೆ, ತಾತ್ವಿಕ ಗೊಂದಲಗಳಲ್ಲಿ ಬೀಳದೆ, ತನ್ನ ದುಸ್ಥಿತಿಯಿಂದ ಮೇಲೇಳುವ ದಿಟ್ಟತನವನ್ನು ಪ್ರದರ್ಶಿಸುವುದನ್ನು ಕಾಣಬಹುದು. ಇಲ್ಲಿ ಅಂಬೇಡ್ಕರ್‌ರನ್ನು ತಿರಸ್ಕರಿಸುವ ಅಥವಾ ಮೀರಿ ನಿಲ್ಲುವ ದಾರ್ಷ್ಟ್ಯತನವಿಲ್ಲ. ನಯವಾಗಿಯೇ ಆಪ್ತತೆಯಿಂದಲೇ ತಮ್ಮ ಸಮಸ್ಯೆಗೆ ತಾವೇ ಪರಿಹಾರ ಕಂಡುಕೊಳ್ಳುವ ಸ್ವಾಭಿಮಾನವನ್ನು ಮೆರೆಯುತ್ತಿರುವುದನ್ನು ಕಾಣಬಹುದು.

ಹೀಗೆ ಅಂಬೇಡ್ಕರ್ ತಾತ್ವಿಕತೆಯನ್ನೂ, ಹೋರಾಟಗಳನ್ನು ಅವುಗಳ ಪರಿಣಾಮಗಳನ್ನು ಆರೋಗ್ಯಕರವಾದ ಮುಖಾಮುಖಿಯೊಂದಿಗೆ ಎದುರುಗೊಳ್ಳುವ ಮೂಲಕ ವರ್ತಮಾನದಲ್ಲಿ ತಮ್ಮ ಹೋರಾಟಗಳ ಸ್ವರೂಪಗಳನ್ನು ನಿರ್ಧರಿಸಿಕೊಳ್ಳುವ, ಅಂಬೇಡ್ಕರ್‌ರವರನ್ನು ಬದಲಾದ ಕಾಲ ಸಂದರ್ಭಗಳಲ್ಲಿ ಮರುನಿರ್ವಚಿಸಿಕೊಳ್ಳುವ ವಿಶಿಷ್ಟ ಪ್ರಯತ್ನಗಳಲ್ಲಿ ತೊಡಗಿರುವುದನ್ನು ಈ ಕವಿತೆಗಳಲ್ಲಿ ಕಾಣಬಹುದು. ಇವೂ ಕೂಡ ಅಂಬೇಡ್ಕರ್ ವ್ಯಕ್ತಿತ್ವವನ್ನು ಗ್ರಹಿಸುವ ವಿಶಿಷ್ಟ ಪ್ರಯತ್ನಗಳಾಗಿ ಕಂಡುಬರುತ್ತವೆ.

**೨. ಸಮುದಾಯದ ನೋವು, ಅಪಮಾನಗಳನ್ನು ನಿವೇದಿಸಿಕೊಳ್ಳುವ ತಾಯಿಯಾಗಿ**

ಅಂಬೇಡ್ಕರ್ ಜಾತಿಶೋಷಣೆ, ಅಪಮಾನಗಳ ನಡುವಿನಿಂದ ಸಿಡಿದುಬಂದ ಸ್ವಾಭಿಮಾನಿ. ಈ ಸ್ವಾಭಿಮಾನವನ್ನು ಶೋಷಿತ ಸಮುದಾಯಗಳಲ್ಲಿ ಬೆಳೆಸಲು ನಿರಂತರವಾಗಿ ಪ್ರಯತ್ನಿಸಿದರು. ಅನ್ಯಾಯ, ಅಪಮಾನಗಳನ್ನು ಪ್ರತಿಭಟಿಸುವ ಮೂಲಕ ಶೋಷಕರಲ್ಲಿ ಅರಿವು ಮೂಡಿಸುವ, ತಮ್ಮೆದುರಿನ ಸಮಾಜವನ್ನು ಬದಲಾಯಿಸುವ ಕ್ರಾಂತಿಕಾರಿ ದಾರಿಯನ್ನು ತುಳಿದರು. ಹೀಗೆ ಅವಿರತ ಪ್ರಯತ್ನಗಳ ನಡುವೆಯೂ ಜಾತಿ ಶೋಷಣೆ, ಅನ್ಯಾಯ, ಅಪಮಾನ, ಕ್ರೌರ್ಯಗಳು ನಿರಂತರವಾಗಿ ನಡೆಯುತ್ತಲೇ ಇವೆ. ನೋವು ಅಪಮಾನಗಳನ್ನು ಅನುಭವಿಸಿದ ಸಮುದಾಯ ತಮ್ಮ ವಿಮೋಚನೆಗಾಗಿ ಹೋರಾಡಿದ, ನಾಯಕನ ಮುಂದೆ ತಮ್ಮ ಗೋಳನ್ನು ನಿವೇದಿಸಿಕೊಳ್ಳುವ ಜೊತೆಗೆ ಆತನಿಂದ ಹೋರಾಟಕ್ಕೆ ಸ್ಫೂರ್ತಿಪಡೆಯುವ ಪ್ರಯತ್ನವನ್ನು ಮಾಡಿವೆ.

ಕನ್ನಡ ಕವಿತೆಗಳು ಅಂಬೇಡ್ಕರರ ವ್ಯಕ್ತಿತ್ವವನ್ನು ಕಟ್ಟಿಕೊಡುವ ಆ ವ್ಯಕ್ತಿತ್ವದ ಹಿರಿಮೆಯನ್ನು ಹಲವು ರೂಪಕಗಳಲ್ಲಿ ಹಿಡಿದಿಡುವ ಕೆಲಸವನ್ನಷ್ಟೇ ಮಾಡುತ್ತಿಲ್ಲ. ಬದಲಾಗಿ ಅವರ ವ್ಯಕ್ತಿತ್ವದ ಜೊತೆಗೆ ಒಂದು ಸಾಂಸ್ಕೃತಿಕ ಸಂಕಥನವನ್ನು ಬೆಳೆಸುವ ಕೆಲಸವನ್ನೂ ಮಾಡಿವೆ. ತಮ್ಮ ಬದುಕಿನ ಕಷ್ಟಗಳ ವಿಮೋಚನೆಗಾಗಿ ಅವಿರತವಾಗಿ ಶ್ರಮಿಸಿದ ನಾಯಕನೆದುರು ತಾವು ಅನುಭವಿಸುತ್ತಿರುವ ನೋವು, ಅಪಮಾನ, ಹಿಂಸೆ, ಶೊಷಣೆಗಳನ್ನು ಹಾಗೂ ತಮ್ಮ ದೌರ್ಬಲ್ಯಗಳನ್ನು ಹೇಳಿಕೊಳ್ಳುವ ಮೂಲಕ ತಮ್ಮ ಬದುಕಿನ ದುಸ್ಥಿತಿಯ ಅನಾವರಣ ಮಾಡುತ್ತಿದ್ದಾರೆ. ಸಂವಿಧಾನಾತ್ಮಕ ಅಧಿಕಾರ, ಸವಲತ್ತು ಕಾನೂನುಗಳ ನಡುವೆಯೂ ಅಸ್ಪೃಶ್ಯರ ಸ್ಥಿತಿ ಬದಲಾಗದೆ ಇರುವುದನ್ನು, ಜಾತಿ ಶೊಷಣೆ ಇನ್ನೂ ಜೀವಂತವಾಗಿರುವುದನ್ನು ಕವಿತೆಗಳು ಬಿಚ್ಚಿಟ್ಟಿವೆ. ಸಮುದಾಯವೊಂದು ಹೀಗೆ ತಮ್ಮ ನೆಚ್ಚಿನ ನಾಯಕನ ಮುಂದೆ ತಮ್ಮ ಶೋಚನೀಯ ಸ್ಥಿತಿಯನ್ನು ಬಿಚ್ಚಿಡುವ ರೀತಿ, ನಾಯಕನ ವ್ಯಕ್ತಿತ್ವವನ್ನೂ, ಸಮಕಾಲೀನ ಸಾಮಾಜಿಕ, ರಾಜಕೀಯ ಪರಿಸರವನ್ನು ಒಟ್ಟಿಗೇ ಒರೆಗೆ ಹಚ್ಚಿ ನೋಡುವ ಪ್ರಯತ್ನವಾಗಿ ಕಂಡುಬರುತ್ತದೆ. ಅಂಬೇಡ್ಕರ್ ಅವರನ್ನು 'ತಾಯಿ' ಸ್ವರೂಪದಲ್ಲಿ ಕಂಡು ಸಮುದಾಯವೊಂದು ಹೀಗೆ ತಮ್ಮ ತಬ್ಬಲಿತನವನ್ನು, ತಮ್ಮೆಲ್ಲಾ ಬದುಕಿನ ಧಾರಣತೆಯನ್ನು ತೋಡಿಕೊಳ್ಳುತ್ತಿರುವ

ರೀತಿ ಸಮಕಾಲೀನ ಸಾಂಸ್ಕೃತಿಕ ಚರಿತ್ರೆಯ ದಾಖಲೀಕರಣದ ಪ್ರಯತ್ನವೂ ಹೌದು. ಹಾಗೂ ಪರಂಪರೆಯ ಜೊತೆಗಿನ ಸಂಘರ್ಷವೂ ಹೌದು. ಹಾಗಾಗಿ ಈ ಬಗೆಯ ಕವಿತೆಗಳಿಗೆ ಸಾಂಸ್ಕೃತಿಕ ಮಹತ್ವವಿದೆ. ಈ ಕವಿತೆಗಳು ಹೇಳುತ್ತಿರುವ ಸಾಮಾಜಿಕ, ರಾಜಕೀಯ, ಧಾರ್ಮಿಕ ವಾಸ್ತವಗಳು ಈ ದೇಶದ ಪರಂಪರೆ, ವರ್ತಮಾನ ಮತ್ತು ಭವಿಷ್ಯವನ್ನು ಧ್ವನಿಸುತ್ತವೆ. ಸಮುದಾಯವೊಂದು ದೊಡ್ಡ ಮಟ್ಟದಲ್ಲಿ ತಮ್ಮ ಬದುಕಿನ ವಾಸ್ತವ ಸ್ಥಿತಿಯನ್ನು ತಮ್ಮ ನಾಯಕನೆದುರಿಗೆ ನಿವೇದಿಸಿಕೊಳ್ಳುತ್ತಿರುವುದು, ತಮ್ಮ ನಾಯಕನ ಮರುಹುಟ್ಟಿಗಾಗಿ, ತಮ್ಮ ಸ್ಥಿತಿಯ ಬದಲಾವಣೆಗಾಗಿ ಹಂಬಲಿಸುತ್ತಿರುವುದು ನಮ್ಮ ಸಾಮಾಜಿಕ ವ್ಯವಸ್ಥೆಯ ಅಸಮಾನತೆಯ ಹಲವು ಮುಖಗಳನ್ನು ತೆರೆದಿಡುತ್ತದೆ. ಆ ಮೂಲಕ ಶೋಷಿತ ಸಮುದಾಯಗಳ ಮೇಲಾಗುತ್ತಿರುವ ನಿರಂತರ ದಬ್ಬಾಳಿಕೆ- ದೌರ್ಜನ್ಯಗಳ ಹಿಂದಿನ ಶೋಷಕ ಶಕ್ತಿಗಳನ್ನು, ಶೊಷಣೆಯ ಬೇರೆ ಬೇರೆ ನೆಲೆಗಳನ್ನು, ಅದರ ನಿಯಂತ್ರಕ ಶಕ್ತಿಗಳನ್ನೂ, ಬಿಡುಗಡೆಯ ದಾರಿಗಳನ್ನೂ ಹುಡುಕುವ ಪ್ರಯತ್ನವನ್ನು ಕವಿತೆಗಳು ಮಾಡುತ್ತಿವೆ. ಈ ಬಗೆಯ ಕವಿತೆಗಳಿಗೆ ಅಂಬೇಡ್ಕರ್ ವ್ಯಕ್ತಿತ್ವಕ್ಕಿಂತ ಆತ ಪ್ರತಿನಿಧಿಸುವ ಸಮುದಾಯದ ಬದುಕು ಮುಖ್ಯವಾಗಿ ಕಂಡಿದೆ. ತಮ್ಮ ನಾಯಕನ ಮುಖಾಂತರವಾಗಿ ತಮ್ಮನ್ನೂ, ತಮ್ಮ ಸಮುದಾಯದ ಬದುಕನ್ನೂ, ಶೋಧಿಸಿಕೊಳ್ಳುತ್ತಿರುವ ಪ್ರಾಮಾಣಿಕ ಪ್ರಯತ್ನಗಳಾಗಿ ಇವು ಕಂಡುಬರುತ್ತವೆ. ಈ ನಿಟ್ಟಿನಲ್ಲಿ ಕನ್ನಡದ ಕವಿತೆಗಳು ಅಂಬೇಡ್ಕರ್ ಎದುರಿಗೆ ಬಿಚ್ಚಿಡುವ ನಮ್ಮ ಸಾಮಾಜಿಕ, ರಾಜಕೀಯ, ವಾಸ್ತವಗಳು ಯಾವುವು ಎಂಬುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ತಮ್ಮ ನಾಯಕನನ್ನು ಸಾಕ್ಷೀ ಪ್ರಜ್ಞೆಯಾಗಿರಿಸಿಕೊಂಡು ತಮ್ಮ ಮತ್ತು ಸಮುದಾಯದ ಎಲ್ಲ ಬಗೆಯ ನೋವು ಅಪಮಾನಗಳನ್ನು ನಿವೇದಿಸಿಕೊಳ್ಳುವುದು ವ್ಯಕ್ತಿತ್ವ ಶೋಧದ ಒಂದು ವಿಭಿನ್ನ ಕ್ರಮವೂ ಹೌದು. ಅಂಬೇಡ್ಕರ್ ಕುರಿತ ಕವಿತೆಗಳು ಅಂಬೇಡ್ಕರ್ ಚಿಂತನೆ, ಹೋರಾಟ, ಮಾನವೀಯ ಕಳಕಳಿಗಳನ್ನು ಗುರುತಿಸುತ್ತಲೇ, ಆ ಮಹಾನ್ ಚೇತನದ ಹೋರಾಟಕ್ಕೆ ಈ ಸಮಾಜದಲ್ಲಿ ಸಿಕ್ಕಿರುವ ಬೆಲೆಯನ್ನು ವಿಮರ್ಶೆಗೆ ಒಡ್ಡುತ್ತಿವೆ. ಇವತ್ತಿಗೂ ಅಸ್ಪೃಶ್ಯ ಸಮುದಾಯ ಅನುಭವಿಸುತ್ತಿರುವ ಅವಮಾನ, ಶೋಷಣೆಗಳ ಬಗೆಗಳನ್ನು ಅದರ ಹಿಂದಿನ ಶೋಷಕ ಶಕ್ತಿಗಳ ರಾಜಕಾರಣಗಳನ್ನು ಗುರುತಿಸುವುದರೊಂದಿಗೆ ವ್ಯಂಗ್ಯ ವಿಡಂಬನೆಗೆ ಒಳಪಡಿಸಿವೆ. ಈ ಬಗೆಯ ನಿವೇದನೆಗಳಲ್ಲಿ ಎರಡು ಬಗೆಗಳನ್ನು ಗುರುತಿಸಲು ಸಾಧ್ಯವಿದೆ. ಶೋಷಿತ ಸಮುದಾಯ ತಮ್ಮ ಒಳಬೇಗುದಿಯನ್ನು ಅನುಭವದ ಭಾಗವಾಗಿ ತೋಡಿಕೊಳ್ಳುತ್ತಿರುವುದು ಒಂದು ಬಗೆಯಾದರೆ, ದಲಿತೇತರ ಸಮುದಾಯದ ಸುಧಾರಣವಾದಿ ಮತ್ತು ಉದಾರವಾದಿ ಅನುಕಂಪಗಳು ಇನ್ನೊಂದು ಬಗೆ. ಮೊದಲನೆಯ ಬಗೆಯ ಕವಿತೆಗಳಲ್ಲಿ ಶೋಷಣೆ, ನೋವು ಅಪಮಾನ ದೌರ್ಜನ್ಯಗಳಿಗೆ ಒಳಗಾದ ಸಮುದಾಯದ ಅಸಹಾಯಕತೆ, ತಳಮಳ, ಆರ್ತತೆಗಳೊಂದಿಗೆ ಅತ್ಯಂತ ಹೀನಾಯವಾದ ಕ್ರೌರ್ಯದ ಅನುಭವಗಳು ಅನಾವರಣಗೊಂಡರೆ, ದಲಿತೇತರರ ಅಭಿವ್ಯಕ್ತಿಯಲ್ಲಿ ಅಸ್ಪೃಶ್ಯ ಸಮುದಾಯದವರ ಸ್ಥಿತಿಯ ಬಗೆಗೆ ಅನುಕಂಪ, ಶೋಷಣೆಯ ನೆಲೆಗಳ ಬಗೆಗೆ ಆಕ್ರೋಶ, ಆತ್ಮವಿಮರ್ಶೆ ಹಾಗೂ ಸುಧಾರಣೆಯ ಹಂಬಲ ಕಂಡುಬರುತ್ತದೆ. ಒಟ್ಟಾರೆಯಾಗಿ ಈ ಎರಡೂ ಬಗೆಯ ಅಭಿವ್ಯಕ್ತಿಗಳು ನಮ್ಮ ಸಮಾಜದ ಅಮಾನವೀಯ ಮುಖಗಳನ್ನು ಹಿಡಿದಿಡುವುದರ ಜೊತೆಗೆ ಅವುಗಳ ವಿರುದ್ಧ ತಮ್ಮ ಸಿಟ್ಟನ್ನೂ, ಪ್ರತಿರೋಧವನ್ನೂ ಹೊರಹಾಕುತ್ತಿವೆ. ಒಂದು ಕ್ರೂರ ಸಾಮಾಜಿಕ ವ್ಯವಸ್ಥೆಯ ವಾಸ್ತವತೆಯನ್ನು ಅನಾವರಣ ಮಾಡುವಲ್ಲಿ ಈ ವ್ಯಕ್ತಿಚಿತ್ರ ಕವಿತೆಗಳು ಯಶಸ್ವಿಯಾಗಿವೆ.

ಅಂಬೇಡ್ಕರ್ ವ್ಯಕ್ತಿತ್ವವನ್ನು ವರ್ತಮಾನದ ಸಾಮಾಜಿಕ, ರಾಜಕೀಯ ವಾಸ್ತವ ಮತ್ತು ತಮ್ಮ ಶೋಚನೀಯ ಸ್ಥಿತಿಯೊಂದಿಗೆ ಮುಖಾಮುಖಿಯಾಗಿಸುವ ಮೂಲಕ ಆ ವ್ಯಕ್ತಿತ್ವವನ್ನೂ, ಸಮಾಜವನ್ನೂ, ತಮ್ಮ ಸ್ಥಿತಿಯನ್ನೂ ಅರ್ಥಮಾಡಿಕೊಳ್ಳುವ ವಿಶಿಷ್ಟ ಪ್ರಯತ್ನವನ್ನು ಈ ಕವಿತೆಗಳು ಮಾಡಿವೆ. ಶೋಷಣೆ, ಅಸಮಾನತೆ, ಜಾತಿಹಿಂಸೆಯ ಕ್ರೌರ್ಯದ ಪರಂಪರೆಗಳನ್ನು ಶೋಧಿಸುತ್ತಲೇ ಅದರ ನಿಯಂತ್ರಕ ಶಕ್ತಿಗಳನ್ನು, ಒಳ ರಾಜಕಾರಣಗಳನ್ನು ಗುರುತಿಸುವ ವಿಧಾನ ಕವಿತೆಗಳಲ್ಲಿ ಕಂಡುಬರುತ್ತದೆ. ಅಂಬೇಡ್ಕರರ ಹೋರಾಟ, ಕನಸು, ಚಿಂತನೆಗಳು ಸಾಕಾರಗೊಳ್ಳದ ಹಾಗೆ, ಶೋಷಿತರನ್ನು ಆತುಕೊಳ್ಳದ ಹಾಗೆ ತಡೆಗಟ್ಟುವ ಮೂಲಕ ಜಾತಿ ಶೋಷಣೆಯನ್ನು ನಿರಂತರವಾಗಿ ಮುಂದುವರಿಸುತ್ತಿರುವ ಸಮಾಜದ ಕ್ರೌರ್ಯದ ಮೂಲವನ್ನು ಭೇದಿಸುವ ವಿಶಿಷ್ಟ ಪ್ರಯತ್ನಗಳಾಗಿ ಕವಿತೆಗಳು ಕಂಡುಬರುತ್ತವೆ.

ಅಸ್ಪೃಶ್ಯ ಸಮುದಾಯ ಇಂದಿಗೂ ಅನುಭವಿಸುತ್ತಿರುವ ಜಾತಿ ಶೋಷಣೆಯ ಹಲವು ನೆಲೆಗಳನ್ನು ತಮ್ಮ ನಾಯಕನೊಂದಿಗೆ ನಿವೇದಿಸಿಕೊಳ್ಳುವ ಬಗೆ ವಿಶಿಷ್ಟವಾದದ್ದು. ಎಂ. ಡಿ. ಗೋಗೇರಿ ಅವರ 'ಕಂಬನಿಯ ಹಾಡು' ಕವಿತೆ ನಮ್ಮ ಸಮಾಜದಲ್ಲಿ ಇನ್ನೂ ಆಳವಾಗಿ ಬೇರೂರಿರುವ ಜಾತಿ ವ್ಯವಸ್ಥೆಯನ್ನು, ಅದರ ಶೋಷಣೆಯ ಹಲವು ಮುಖಗಳನ್ನು ತೆರೆದಿಡುತ್ತದೆ. ಸಮಾನತೆ, ಸ್ವಾತಂತ್ರ್ಯಗಳು ದಲಿತ ಸಮುದಾಯದವರಿಗೆ ಇನ್ನೂ ಕೈಗೆಟುಕದವುಗಳಾಗಿಯೇ ಉಳಿದು ಅಂಬೇಡ್ಕರ್ ಅನುಭವಿಸಿದ ಅಪಮಾನಗಳನ್ನು ಇಂದಿಗೂ ಆ ಸಮುದಾಯ ಅನುಭವಿಸುತ್ತಲೇ ಇದೆ ಎಂದು ಹೇಳುತ್ತಲೇ, ಜಾತಿ ಹಿಂಸೆಯ ಕ್ರೌರ್ಯಗಳನ್ನು ಸಹಿಸಿಕೊಂಡು ಬದುಕುವುದಾದರೂ ಹೇಗೆ ಎಂದು ಪ್ರಶ್ನಿಸುತ್ತಿದೆ.

ನಿನ್ನ ಗೋಳಿನ ಹಾಡೆ ನನ್ನ ಬಾಳಿನ ಪಾಡು
ಎಂತು ಬದುಕಲಿ ತಂದೆ ಜೀವ ಹಿಡಿದು!
ಮೆಟ್ಟು ಮಾಡುವ ಕುಲದಲಿ ಹುಟ್ಟಿದರೆ ಏನಂತೆ!
ಅಟ್ಟುವರು ಗುಡಿಯಿಂದ ಕತ್ತುಹಿಡಿದು.[೨]

ಸಮಾಜದಲ್ಲಿ ಎಷ್ಟೆಲ್ಲಾ ಬದಲಾವಣೆಗಳು ಸಂಭವಿಸಿದಾಗ್ಯೂ ಜಾತಿವ್ಯವಸ್ಥೆಯಲ್ಲಿ ಇನ್ನೂ ಯಾವ ಸುಧಾರಣೆಗಳೂ ಆಗದಿರುವುದನ್ನು, ಅಂಬೇಡ್ಕರ್ ಬದುಕಿದ್ದ ಕಾಲದ ಸಾಮಾಜಿಕ ವಾತಾವರಣಕ್ಕೂ ಇಂದಿಗೂ ಯಾವ ವ್ಯತ್ಯಾಸವೂ ಇಲ್ಲದಿರುವುದನ್ನು, ಜಾತಿಯೇ ಸಮಾಜದ ಮುಖ್ಯ ನಿಯಂತ್ರಕ ಶಕ್ತಿಯಾಗಿರುವುದನ್ನೂ, ಅಸ್ಪೃಶ್ಯತಾಚರಣೆಯು ಇನ್ನೂ ಜೀವಂತವಾಗಿರುವುದನ್ನೂ ಕವಿತೆಯ ಸಾಲುಗಳು ಹಿಡಿದಿಡುತ್ತವೆ.

ಸ್ವಚ್ಛವಿದ್ದರೂ ತುಚ್ಚ ಹೊಲೆಯನೆಂದೂರಿರಿಸಿ
ಮಚ್ಚಿಬಿಡು ಜಾಗದಲ್ಲಿ ಕೂಡಿಸುವರು
ನಾವೇ ಸೀಳಿದ ಸೌದೆ ಒಲೆಯೊಳಗೆ ಒಯ್ದಿಕ್ಕಿ
ಚಿಪ್ಪಿನಲಿ ಚಹ ಎತ್ತಿ ಹಾಕುವರು

ಹಗಲಿರುಳು ದುಡಿದುಡಿದು ಹೆಗಲು ಬಾಯಿಸಿಕೊಂಡು
ಎತ್ತು ಸತ್ತರೆ ಹೊತ್ತು ಹಾಕುವರು ನಾವು
ಸುಲಿದು ತೊಗಲಿನ ಕಣ್ಣ ಹಲಿಗೆ ಮಿಣಿ ಬಾರುಕೋಲು
ಹೊಲಿದುಕೊಡದಿರೆ ನಮಗೆ ಹಸಿವೆ ಹಸಿವು.

ಸತ್ತವರಿಗತ್ತತ್ತು ಹೆಣ ಹೊತ್ತು ಸಾಗಿಸಲು
ಬಳಗದೂರಿಗೆ ಓಡಿ ಕರೆಯಬೇಕು
ಹೊಲೆಯಾಳು ನಾವಾಗಿ ಹಲಿಗೆ ಬಡಿಯುತ ಹೋಗಿ

> ಹೆಣದ ಹಾಸಿಗೆ ಅರಿವೆ ಪಡೆಯಬೇಕು [೩೩]

ಜಾತಿ ಶೋಷಣೆಯ ಅಮಾನವೀಯ ನಡೆಯನ್ನು ಈ ಕವಿತೆ ಅನಾವರಣ ಮಾಡುತ್ತಿದೆ. ಜಾತಿಹಿಂಸೆಯ ಜ್ವಾಲೆಗೆ ಸಿಲುಕಿ ಹಲವು ವಿಧದಲ್ಲಿ ನಲುಗಿ ಹೋಗುತ್ತಿರುವ ದಲಿತ ವರ್ಗ ಅದನ್ನು ಅತ್ಯಂತ ನೋವಿನಿಂದ ಹೀಗೆ ನಿವೇದಿಸಿಕೊಳ್ಳುತ್ತಿದೆ. 'ಚಿಪ್ಪಿನಲಿ ಚಹ ಎತ್ತಿ ಹಾಕುವರು', 'ಎತ್ತು ಸತ್ತರೆ ಹೊತ್ತು ಹಾಕುವರು ನಾವು', ಹೆಣದ ಹಾಸಿಗೆ ಅರಿವೆ ಪಡೆಯಬೇಕು' ಮುಂತಾದ ಸಾಲುಗಳು ಇನ್ನೂ ನಡೆಯುತ್ತಿರುವ ಅಸ್ಪೃಶ್ಯತಾಚರಣೆಯ ಕ್ರೂರ ಅನುಭವಗಳನ್ನು ಹಿಡಿದಿಟ್ಟಿವೆ. ಒಟ್ಟು ದಲಿತ ಸಮುದಾಯದ ಹತಾಶೆ ಮತ್ತು ಅಸಹಾಯಕತೆಯ ಅಭಿವ್ಯಕ್ತಿಗಳಿವು. ಜಾತಿ ವಿನಾಶದ, ದಲಿತೋದ್ಧಾರದ ಭಾಷಣಗಳಿಗಿಂತ, ತೋರಿಕೆಯ ಅನುಕಂಪಗಳಿಗಿಂತ ಅಂತರಂಗದಲ್ಲಿ ತಮ್ಮನ್ನು ಮನುಷ್ಯರೆಂದು ಒಪ್ಪಿಕೊಳ್ಳಬೇಕೆಂಬ ಹಕ್ಕೊತ್ತಾಯವನ್ನು ಈ ಕವಿತೆ ಮಾಡುತ್ತಿದೆ.

> ಅಂತರಂಗದಿ ಅಪ್ಪಿ ಒಪ್ಪಿಕೊಳ್ಳಿರೋ ನಮಗೆ
> ನಮ್ಮ ನಿಮ್ಮಲಿ ಯಾವ ಭೇದ ಉಂಟು?
> ವೇದಿಕೆಯ ಮೇಲ್ಕುಳಿತು ಬೋಧಿಸಿದರೇನಂತೆ
> ಉಣ್ಣುವೆಡೆಯಿರಲಿ ನಮಗೆ ನಂಟು.[೩೪]

ಅಸ್ಪೃಶ್ಯತೆಯ ನಿವಾರಣೆಯೆಂಬುದು ಕಾನೂನು, ಭಾಷಣ, ತೋರಿಕೆಯ ಸುಧಾರಣಾ ಕ್ರಮಗಳಿಂದಾಗುವಂತದ್ದಲ್ಲ. ಅದು ಮನುಷ್ಯನ ಅಂತರಂಗದ ಬದಲಾವಣೆಯಿಂದ ಮಾತ್ರ ಆಗುವಂತದ್ದು. ಹಾಗಾಗಿ ಅಸ್ಪೃಶ್ಯರನ್ನು ಮನುಷ್ಯರಂತೆ ಅಂತರಂಗದಲ್ಲಿ ಅಪ್ಪಿ ಒಪ್ಪಿಕೊಳ್ಳುವುದರಿಂದ, ಸಹಭೋಜನಗಳಿಂದ ಜಾತಿವಿನಾಶ ಮತ್ತು ಅಸ್ಪೃಶ್ಯತಾ ಆಚರಣೆಯನ್ನು ತೊಡೆದು ಹಾಕಲು ಸಾಧ್ಯ. "ಅಂತರ್ಜಾತೀಯ ವಿವಾಹ ಮಾತ್ರ ಜಾತಿ ವಿನಾಶಕ್ಕೆ ಸೂಕ್ತ ಕಾರ್ಯಕ್ರಮ. ರಕ್ತದ ಬೆರೆಯುವಿಕೆ ಮಾತ್ರ ತನ್ನವರೆಂಬ ಭಾವನೆ ಹುಟ್ಟು ಹಾಕಬಲ್ಲದು. ಛಿದ್ರಗೊಂಡ ಸಮಾಜದಲ್ಲಿ ವಿವಾಹ ಒಟ್ಟುಗೂಡಿಸುವ ಶಕ್ತಿಯಾಗಿ ಕೆಲಸ ಮಾಡುತ್ತದೆ. ಯಾಕೆಂದರೆ ಜಾತಿಯೆಂಬುದು ಒಂದು ಗೋಡೆಯಲ್ಲ, ಒಂದು ಮನೋಸ್ಥಿತಿ."[೩೫] ಅಂಬೇಡ್ಕರ್ ಕೂಡ ಅಸ್ಪೃಶ್ಯತೆಯ ನಿವಾರಣೆ ಅಂತರ್ಜಾತಿಯ ವಿವಾಹ ಮತ್ತು ಸಹಭೋಜನಗಳಿಂದ ಮಾತ್ರ ಸಾಧ್ಯ ಎಂದು ಪ್ರತಿಪಾದಿಸಿದ್ದರು. ಗೋಗೇರಿಯವರ ಈ ಕವನ ಅದನ್ನೆ ವರ್ತಮಾನದಲ್ಲಿ ಒತ್ತಾಯಿಸುತ್ತಿದೆ. ಚಂದ್ರಶೇಖರ ಪಾಟೀಲರ 'ನಿನ್ನೆಗಳ ನೆನಪು' ಕವಿತೆ ತಮಗೊಂದು ಅಸ್ತಿತ್ವವೇ ಇಲ್ಲದಂತೆ ಅಮಾನವೀಯವಾಗಿ ಬದುಕುತ್ತಿರುವ ಅಸ್ಪೃಶ್ಯರ ಚಿತ್ರಣವನ್ನು ಕಟ್ಟಿಕೊಡುತ್ತಲೇ ನಮ್ಮ ಕ್ರೂರ ಸಮಾಜದ ವಾಸ್ತವತೆಯನ್ನು ಬಿಚ್ಚಿಡುತ್ತದೆ.

> ಹೆಣ ಹೊತ್ತು ಹೆಣವಾದ ಮೈ
> ಸದಾ ಜೋಡಿಸಿದ ಕೈ
> ಬಗ್ಗಿದ ಸೊಂಟಕ್ಕೆ ತುಣಕು ಬಟ್ಟೆ
> ತಲೆ ಮೇಲೆ ಹೇಲಿನ ಬುಟ್ಟಿ
> ಗುಳಿ ಬಿದ್ದ ಕಣ್ಣಲ್ಲಿ ಧಗ ಧಗ ಬೆಂಕಿ,
> ಇವ
> ಹಿಂದಿಲ್ಲದ ಮುಂದಿಲ್ಲದ ಒಂದು ಹೆಸರು
> ಇಂದಿನ, ಈ ಕ್ಷಣದ ಒಂದು ನೆರಳು,
> ನಾಗ್ಯಾ, ಗುಡ್ಯಾ ಕಾಳ್ಯಾ [೩೬]

ಕೇವಲ ಒಂದು ಕ್ಷಣದ ನೆರಳಾಗಿ ಮಾತ್ರ ಉಳಿದು ಬಿಟ್ಟಿರುವ, ಚರಿತ್ರೆಯಲ್ಲಿ ಯಾವ ಅಸ್ತಿತ್ವವನ್ನೂ ಹೊಂದಿರದ ಅಸ್ಪೃಶ್ಯರ ಬದುಕನ್ನು ಕಟ್ಟಿಕೊಡುತ್ತಲೇ ಆ ಸ್ಥಿತಿಯಿಂದಲೇ ಸಿಡಿದೆದ್ದು ಚರಿತ್ರೆಯಲ್ಲಿ ಗಟ್ಟಿಯಾಗಿ ನಿಂತ ಅಂಬೇಡ್ಕರರನ್ನು ಮುಖಾಮುಖಿಯಾಗಿಸುತ್ತಾರೆ. ಇನ್ನೂ ಅಮಾನವೀಯವಾಗಿಯೇ ಬದುಕು ಸಾಗಿಸಬೇಕಾಗಿರುವ ದಲಿತ ಸಮೂದಾಯಕ್ಕೆ ಅಂಬೇಡ್ಕರ್ ಎಟುಕದ ಕೈಯಾಗಿದ್ದಾರೆ. ಅಂಬೇಡ್ಕರ್‌ರಿಗೆ ಎಲ್ಲ

ಶೋಷಣೆಗಳನ್ನು ಪ್ರತಿರೋಧಿಸಿ ನಿಲ್ಲಲು ಸಾಧ್ಯವಾದದ್ದು ಉಳಿದ ದಲಿತ ಸಮುದಾಯಕ್ಕೆ ಸಾಧ್ಯವಾಗದಿರುವುದಕ್ಕೆ ಕಾರಣಗಳು ಹಲವು. ಅದರ ಹಿಂದಿನ ಸಾಮಾಜಿಕ ವ್ಯವಸ್ಥೆಯ ರಾಜಕಾರಣಗಳು ಹಲವು. ಅವುಗಳನ್ನು ಬಯಲಿಗೆಳೆಯುವ ಪ್ರಯತ್ನ ಈ ಕವಿತೆಯಲ್ಲಿದೆ.

ತೊಳಲಾಡುವ ನೆರಳ ಬಸಿರೊಳಗಿಂದ
ಬಲಭೀಮ ಅಂಬೆಗಾಲಿಟ್ಟು ಹೊರಬರುವಾಗ
ಒಮ್ಮೊಮ್ಮೆ ಬೋಧಿವೃಕ್ಷಕ್ಕೆ ಬುದ್ಧನನ್ನು ನೇತಾಡಿಸಿದ
ಈ ದೇಶದ ನಿನ್ನೆಗಳ ನೆನಪಾಗುತ್ತದೆ. [೩೭]

ಸಮಾಜದ ಪುನಾರಚನೆಗೆ ಪ್ರಯತ್ನಿಸಿದ ಎಲ್ಲಾ ಮಹಾನ್ ಚೇತನಗಳನ್ನೂ ಮೂಲೆಗುಂಪುಮಾಡುವ ವ್ಯವಸ್ಥಿತ ಹುನ್ನಾರಗಳು ದೇಶದ ಪರಂಪರೆಯುದ್ದಕ್ಕೂ ನಡೆದು ಬಂದಿರುವುದನ್ನು ಕವಿತೆ ತೆರೆದಿಡುತ್ತದೆ. ದಲಿತರ ಇಂದಿನ ದುಸ್ಥಿತಿಯ ಹಿಂದೆ ಜಾತಿ ರಾಜಕಾರಣಗಳ ಹುನ್ನಾರಗಳು ನಿರಂತರವಾಗಿ ಕೆಲಸ ಮಾಡಿವೆ ಎಂಬುದನ್ನು 'ಒಮ್ಮೊಮ್ಮೆ ಭೋಧಿವೃಕ್ಷಕ್ಕೆ ಬುದ್ಧನನ್ನು ನೇತಾಡಿಸಿದ ಈ ದೇಶದ ನಿನ್ನೆಗಳ ನೆನಪಾಗುತ್ತದೆ' ಎನ್ನುವ ಸಾಲು ಸಮರ್ಥವಾಗಿ ಹಿಡಿದಿಡುತ್ತದೆ. ಸಮಾಜವನ್ನು ಬದಲಾಯಿಸಲು ಪ್ರಯತ್ನಿಸಿದ ಪ್ರತಿಯೊಬ್ಬರನ್ನೂ ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಿರುವ ಈ ದೇಶದ ಜನರ ಮನಸ್ಥಿತಿಯನ್ನೂ, ಪ್ರತಿಯೊಬ್ಬ ಸುಧಾರಕನೂ ಕೂಡ ಒಂದೊಂದು ಜಾತಿ ಸಮುದಾಯದ ಪ್ರತಿನಿಧಿಯಾಗಿ ಇಂದು ಬಿಂಬಿಸಲ್ಪಡುತ್ತಿರುವುದನ್ನು ಹೇಳುತ್ತಲೇ ಸರ್ವಸಮಾನತೆಯ ಹರಿಕಾರನಾಗಬೇಕಿದ್ದ ಅಂಬೇಡ್ಕರ್ ಕೂಡ ಇಂದು ದಲಿತ ಸಮುದಾಯದ ಆರಾಧ್ಯ ದೈವವಾಗಿಬಿಟ್ಟಿರುವುದನ್ನು ವಿಡಂಬನೆ ಮಾಡುತ್ತಿದ್ದಾರೆ.

ವ್ಯವಸ್ಥೆಯ ಬಗೆಗೆ ತೀವ್ರ ಹತಾಶೆ, ಮತ್ತು ಅನಾಥತೆಯ ಹಳಹಳಿಕೆಗಳು ಮೇಲಿಂದ ಮೇಲೆ ಕವನಗಳಲ್ಲಿ ವ್ಯಕ್ತವಾಗುವುದನ್ನು ಕಾಣಬಹುದು. ಇಷ್ಟೊಂದು ತೀವ್ರವಾಗಿ, ದೊಡ್ಡಮಟ್ಟದಲ್ಲಿ ಸಮುದಾಯವೊಂದು ತಮ್ಮ ನಾಯಕನೆದುರಿಗೆ ಆರ್ತತೆಯಿಂದ ಮೊರೆಯಿಡುತ್ತಿದೆಯೆಂದರೆ ಆ ಸಮಾಜದ ಕ್ರೌರ್ಯದ ಪರಾಕಾಷ್ಠೆ ಎಷ್ಟಿರಬಹುದು ಎಂಬುದು ಮನದಟ್ಟಾಗುತ್ತದೆ. ಯಾವ ಸಮಾಜದ ಹುಳುಕುಗಳನ್ನು ಅಂಬೇಡ್ಕರ್ ಹುಡುಕಿ ತೋರಿದರೋ ಆ ಹುಳುಕುಗಳು ಇನ್ನೂ ತೀವ್ರವಾಗಿ ನಾನಾ ಸ್ವರೂಪಗಳಲ್ಲಿ ಆವರಿಸಿಕೊಂಡು ಸಮಾಜವನ್ನು ಇನ್ನಷ್ಟು ಧಾರುಣವಾಗಿಸಿರುವುದನ್ನು ಕವಿತೆಗಳು ಅಭಿವ್ಯಕ್ತಿಸಿವೆ. ತಮ್ಮ ಈ ದುರಂತ ಸ್ಥಿತಿಯಿಂದ ಪಾರುಮಾಡುವಂತೆ ವಿನಮ್ರವಾಗಿ ಅಂಬೇಡ್ಕರರಲ್ಲಿ ಪ್ರಾರ್ಥಿಸುತ್ತಿದ್ದಾರೆ.

ಗುಡುಗಾಡೋ ಗುಡುಗಾಡೋ ನಾಯಕ! ನೀ
ಗುಡುಗಾಡಲೊಲ್ಲೇಕೋ ನಾಯಕ?
ಗುಡುಗುಡುಗಿ ಒಮ್ಮೆ ಮಿಂಚಾಗಿ ಬಾ
ಕತ್ತಲಿನ ಎದೆಯ ಸೀಳಾಕ
ಉರಿದೇಲೋ ಉರಿದೇಲೋ ನಾಯಕ ! ನೀ
ಉರಿದೇಳಲೊಲ್ಲೇಕೊ ನಾಯಕ?
ಉರಿಯುವ ಎದೆಯುರಿ ಎಂಥದೆಂಬುದು
ತೋರಿಸೋ ಸಿರಿವಂಥ ಜಗಕ [೩೮]

ಮೇಲಿನ ಕವಿತೆಯ ಸಾಲುಗಳು ತಮ್ಮ ನಾಯಕನನ್ನು ಹೋರಾಟಕ್ಕೆ ಹುರಿದುಂಬಿಸುವ ಪ್ರಯತ್ನಗಳಂತೆ ಕಂಡರೂ ಅದು ತಮ್ಮನ್ನೇ ತಾವು ಹುರಿದುಂಬಿಸಿಕೊಳ್ಳುವ, ಪ್ರತಿಭಟನೆಯ ಮಾನಸಿಕ ಸಿದ್ಧತೆಯ ನಡೆಗಳಾಗಿ ಕಂಡುಬರುತ್ತವೆ. ಜೊತೆಗೆ ತಮ್ಮ ಸ್ಥಿತಿಯ ಬಿಡುಗಡೆಗೆ ಉಳಿದಿರುವ ಏಕೈಕದಾರಿಯಾಗಿ ಅಂಬೇಡ್ಕರರನ್ನು ಎದುರು ನೋಡುತ್ತಿವೆ. ತಮ್ಮ ನಾಯಕನಿಂದ ಸಮುದಾಯವೊಂದು ಸ್ಫೂರ್ತಿಯನ್ನೂ, ಹೋರಾಟದ ಕೆಚ್ಚನ್ನು

ಪಡೆಯುವ ತುಡಿತ ವ್ಯಕ್ತವಾಗಿದೆ. ಪ್ರತಿಭಟನೆ, ಹೋರಾಟಗಳಿಲ್ಲದೆ ಸಿಟ್ಟು, ಆಕ್ರೋಶಗಳಿಲ್ಲದೆ ತಮ್ಮ ಮೇಲಿನ ಶೋಷಣೆಗಳಿಂದ ಬಿಡುಗಡೆ ಸಾಧ್ಯವಿಲ್ಲ ಎಂಬ ನಿಲುವಿಗೆ ಬಂದಿರುವುದನ್ನು ಈ ಕವನಗಳಲ್ಲಿ ಗುರುತಿಸಬಹುದು. ಸಹನೆ, ಸೌಮ್ಯತೆಗಳು ಶೋಷಣೆಗೆ ದಾರಿಗಳಾಗುತ್ತವೆ ಎಂದು ಹೇಳುತ್ತಾ ಅದನ್ನು ಬಿಟ್ಟುಕೊಟ್ಟಾಗಲೇ ತಮ್ಮ ಬಿಡುಗಡೆ ಸಾಧ್ಯ ಎಂಬ ಅರಿವು ಮೂಡಿರುವುದು ವ್ಯಕ್ತವಾಗುತ್ತಿದೆ.

ನಿನ್ನ ಬೋಳೆತನ ನೋಡಿ ನಾಯಕ
ಅವು ಒಳಗೊಳಗೆ ನುಂಗ್ಯಾರ ಗಪಕ
ನಿನ್ನ ಮೂತಿಗೆ ಅಂಗೈ ಮುಸ್ರೆ ಒರಸಿ
ತಿಂದನಂತ ತೋರಿಸ್ಯಾರ ಜಗಕ
ಉದ್ಧಾರ ವರದಿಯಲ್ಲಿ ನಾಯಕ
ತಾಳೆ ಗಿಡಧಾಂಗ ಬೆಳಸ್ಯಾರ ಉದ್ದಕ
ದೂರ ಉಳುದಾದೋ ಫಲದ ಮಾತು
ನೆರಳುಸೈತ ಇಲ್ಲ ಕುಂದುರಾಕ [೩೯]

ತಮ್ಮ ಮೇಲಿನ ನಿರಂತರ ಶೋಷಣೆಗೆ ತಮ್ಮ ಬದುಕಿನ ರೀತಿಯನ್ನೇ ಹೊಣೆಯಾಗಿಸಿಕೊಳ್ಳುವುದರ ಮೂಲಕ ತಮ್ಮ ಸ್ವಭಾವಗಳು ಬದಲಾಗಬೇಕಾಗಿರುವುದನ್ನು ಈ ಕವಿತೆ ಒತ್ತಿ ಹೇಳುತ್ತಿದೆ. ಅಜ್ಞಾನ, ಧೈನ್ಯತೆ, ಬೋಳೆತನಗಳು ತಮಗೇ ಮುಳ್ಳುಗಳಾಗಿರುವುದನ್ನು ಗುರುತಿಸುವ ಮೂಲಕ ತಮ್ಮ ಉದ್ಧಾರದ ಸಮಕಾಲೀನ ರಾಜಕಾರಣದ ಪಿತೂರಿಗಳನ್ನು ವಿಡಂಬಿಸುತ್ತಿದೆ. ಅಸ್ಪೃಶ್ಯತೆಯ ನಿವಾರಣೆ ಎಂಬುದೇ ರಾಜಕಾರಣದ ನಾಟಕವಾಗಿರುವುದನ್ನು, ತಮ್ಮನ್ನು ಉದ್ದರಿಸುವವರ ಉದ್ಧಾರದ ರಾಜಕಾರಣಗಳನ್ನು ಬಯಲು ಮಾಡುತ್ತಲೇ ತಮ್ಮ ಉದ್ಧಾರದ ಹಾದಿಯನ್ನು ತಾವೇ ಕಂಡುಕೊಳ್ಳಬೇಕಾದ, ತಾವು ಬದಲಾಗಬೇಕಾದ ಅವಶ್ಯಕತೆಯ ಕಡೆಗೆ ಗಮನ ಸೆಳೆಯುತ್ತದೆ. ಆ ಬದಲಾಗುವ ದಿನ ಬಂದಾಗಿದೆ ಎಂದು ಹೇಳುತ್ತಲೇ ಅಂಬೇಡ್ಕರರ ಕನಸನ್ನು ನನಸು ಮಾಡುವ ತೀವ್ರ ತುಡಿತ ವ್ಯಕ್ತವಾಗುತ್ತಿದೆ.

ಯಾಕಡೆ ನೋಡಿದ್ರಾಕಡೆ ನಾಯಕ ! ನಮ್
ಕೊಲೆ ಮಾಡೋದಾಗ್ಯಾದವು ಕಾಯಕ
ಸಾವು ಸುಮ್ಮನಿತ್ತು ಸಮಾಜ ಕೊಂದಿತ್ತು
ಜೀವಂತ ಸಾವಾಗಿ ನರನರಕ

ಬದಲಾಗೋ ಬದಲಾಗೊ ನಾಯಕ ! ನೀ
ಬದಲಾಗೋ ತಕ್ಕಂತ ಕಾಲಕ
ಕಣ್ ಕಿವಿ ಮೂಗು ಬಾಯಿ ಮುಚ್ಕೊಂಡು
ಏಸುದಿನ ಕುಂದುರುತಿದ್ದಿ ಸುಮ್ಮಕ

ದಿನ ಬಂತು ದಿನ ಬಂತು ನಾಯಕ
ಬದಲಾಗೋ ದಿನಬಂತು ನಾಯಕ
ಹದಗೊಂಡ ಭೂಮ್ಯಾಗ ಎದೆಬೀಜ ಬಿತ್ತಯ್ಯ
ಬಾಬಾನ ಕನಸು ನನಸಾಗಾಕ [೪೦]

ಕವನದ ಸಾಲುಗಳು ಅಸ್ಪೃಶ್ಯ ಸಮುದಾಯ ಬದಲಾಗುವ, ಬದಲಾಗಬೇಕಾದ ಅನಿವಾರ್ಯತೆಯನ್ನು ಒತ್ತಿ ಹೇಳುತ್ತಿದೆ. 'ಸಾವು ಸುಮ್ಮನಿತ್ತು ಸಮಾಜ ಕೊಂದಿತ್ತು ಜೀವಂತ ಸಾವಾಗಿ ನರನರಕ' ಎಂಬ ಮಾತುಗಳು ಜಾತಿ ಹೆಸರಲ್ಲಿ ಎಸಗುತ್ತಿರುವ ಪೈಶಾಚೀ ಕೃತ್ಯಗಳನ್ನು, ಅದೆಲ್ಲವನ್ನು ವಿಧೇಯತೆಯಿಂದ ಸಹಿಸಿಕೊಂಡು ಬಂದ ದಲಿತ ಸುಮದಾಯದ ಮನಸ್ಥಿತಿಯನ್ನು ಬಿಂಬಿಸುತ್ತವೆ. ಈ ಕ್ರೂರ ಅನುಭವಗಳಿಂದ ಬೇಸತ್ತು ಬದಲಾವಣೆಯ

ಅಗತ್ಯವನ್ನು ಒತ್ತಿ ಹೇಳುತ್ತಿದೆ. ಶೋಷಿತ ಸಮುದಾಯದ ಮನಸ್ಥಿತಿಯ ಬದಲಾವಣೆಯೊಂದೇ ಅವರ ಬಿಡುಗಡೆಗಿರುವ ಐಕ್ಯೈಕ ಮಾರ್ಗ ಎಂಬ ನಿಲುವನ್ನು ಈ ಕವಿತೆ ಪ್ರಕಟಿಸುತ್ತಿದೆ.

ಇನ್ನು ಜಾತಿ ಹೆಸರಲ್ಲಿ ನಡೆಯುತ್ತಿರುವ ಕೊಲೆ, ಸುಲಿಗೆ, ಅತ್ಯಾಚಾರ, ಅಮಾನವೀಯ ಕೃತ್ಯಗಳಿಗೆ ಲೆಕ್ಕವಿಲ್ಲ. ಮೇಲಿಂದ ಮೇಲೆ ನಡೆಯುತ್ತಿರುವ ಇಂತಹ ಕೃತ್ಯಗಳು ಮಾನವೀಯತೆಯನ್ನೇ ಅನುಮಾನಿಸುವಂತೆ ಮಾಡುತ್ತಿವೆ.

ಪಕ್ಕದಲ್ಲಿ ಹಚ್ಚ ಹಸುರು ಚಿಗುರು ಮರದ ನೆರಳಿನಲ್ಲಿ
ಮಲಗಿದ್ದಾಳೋ ಚಂದ ಹೊಲತಿ ಹೆಣ್ಣು ಮಗಳು :
ಬಣ್ಣದವರು ಬರಗಿ ಹಿಡಿದು ಭೀಮರಾಯನ ಕಟ್ಟೆ ಮೇಲೆ
ಕುಡಿದು ಹೋದರೂ ಅವಳ ಬೆಳದಿಂಗಳು [೪೧]

ಜಯರಾಮ ಹೆಗಡೆಯವರ ಈ ಕವನ ಅಂಬೇಡ್ಕರ್ ಪ್ರತಿಮೆಯ ಹಿಂದಿರುವ ಅನೇಕ ಅವ್ಯವಹಾರಗಳನ್ನು ಬಯಲಿಗೆಳೆಯುತ್ತದೆ. ಅಂಬೇಡ್ಕರ್ ಪ್ರತಿಮೆಯ ಕೆಳಗೇ ದಲಿತ ಹೆಣ್ಣುಮಗಳ ಮೇಲಾಗುತ್ತಿರುವ ಅತ್ಯಾಚಾರಗಳನ್ನು ಈ ಕವಿತೆ ವಿಡಂಬಿಸುತ್ತಿದೆ. ಜಾತಿ ಕಾರಣಕ್ಕಾಗಿ ಅಸ್ಪೃಶ್ಯ ಹೆಣ್ಣುಗಳ ಮೇಲೆ ಅತ್ಯಾಚಾರ ಎಸಗುತ್ತಿರುವ ಕ್ರೌರ್ಯಗಳನ್ನು, ಜಾತಿಯ ಕಾರಣಕ್ಕಾಗಿ ನಡೆಯುತ್ತಿರುವ ಅಪಮಾನ, ಹಿಂಸೆಗಳನ್ನು ಈ ಕವಿತೆ ಅತ್ಯಂತ ನೋವಿನಿಂದ ನಿವೇದಿಸಿಕೊಳ್ಳುತ್ತಿದೆ. ಅಂಬೇಡ್ಕರ್ ನೆನಪು, ಅಂಬೇಡ್ಕರ್ ಹೆಸರು ಈ ದೇಶದ ಶೋಷಣೆಯ ಪರಂಪರೆಗಳನ್ನು ಒಟ್ಟಿಗೇ ತೆರೆದಿಡುತ್ತದೆ. ಅಂಬೇಡ್ಕರ್ ಬಗೆಗೆ ಮಾತನಾಡುವುದೆಂದರೆ ಶೋಷಣೆಯ ಪರಂಪರೆಯೊಂದಿಗೆ ಸಂವಾದಿಸಿದಂತೆಯೇ ಸರಿ ಎಂಬಷ್ಟರ ಮಟ್ಟಿಗೆ ತಳುಕು ಹಾಕಿಕೊಂಡಿದೆ.

ಅಂಬೇಡ್ಕರ್ ಬಗ್ಗೆ ಮಾತನಾಡುವಾಗೆಲ್ಲ
ಕಣ್ಮುಂದೆ ನಿಲ್ಲುತ್ತಾನೆ ನನ್ನೂರ ರಥಬೀದಿಯ ಕೊರಗ
ಸಪ್ತೋತ್ಸವ ಲಕ್ಷದೀಪಗಳ ವೇಳೆ ನಮ್ಮ ಆಸ್ತಿಕ ಮಹಾಶಯರು
ಕೊರಗನಿಗೆ ಕೆಲಸ ಕೊಡುತ್ತಲೇ ಬಂದಿದ್ದಾರೆ.
ತಿಂಡಿ ಪೊಟ್ಟಣ ಹಣ್ಣಿನ ಸಿಪ್ಪೆ ಕಸಕಡ್ಡಿ ಮೂಲಕ
ಸಂಪಾದಿಸುತ್ತ ಬಂದಿದ್ದಾರೆ. ಒಂದು ಎರಡರ ಮೂಲಕ
ಕಸಬಾಚಿ ಭಾರ ಹೊತ್ತೇ ಕೊರಗ ನನ್ನ ಕಣ್ಮುಂದೆ
ಬಾಗು ಬೆನ್ನಾಗಿದ್ದಾನೆ. ಆನೆಕಾಲಿನ ಹೆಜ್ಜೆ ದಪ್‌ದಪ್ಪಂತ
ರಥ ಬೀದಿಯಲ್ಲಿ ಬಿದ್ದರೂ ಗುರುತು ಮೂಡಿದ್ದಿಲ್ಲ
ನನ್ನೆದೆ ಮೇಲೇ ಬಿದ್ದ ಪೆಟ್ಟು, ಏಕೆಂದರೆ
ನನಗೆ ಅಂಬೇಡ್ಕರ್ ಗೊತ್ತು. [೪೨]

ಈ ಕವನದಲ್ಲಿ ಕೊರಗ ಇಡೀ ದಲಿತ ಸಮುದಾಯದ ಪ್ರತಿನಿಧಿಯಾಗಿ ಕಂಡುಬರುತ್ತಾನೆ. ಕೊರಗನ ಆನೆಕಾಲು ರೋಗ ಇಡೀ ನಮ್ಮ ಸಮಾಜಕ್ಕೆ ಬಡಿದ ರೋಗವಾಗಿದೆ. ಮೇಲ್ಜಾತಿಯವರು ಮಾಡಿದ ಕಸ ಕೊಳೆಯನ್ನು ಬಳಿಯುವ ಕೊರಗ ಅವರ ಧರ್ಮ, ಜಾತಿಯ ಆಡಂಬರಕ್ಕೆ ನಲುಗಿ ಹೋಗಿದ್ದಾನೆ. ಯಾರದೋ ಕಸಬಳಿದು ರೋಗಕ್ಕೆ ತುತ್ತಾಗಿದ್ದಾನೆ. ಇದು ನಮ್ಮ ರೋಗಗ್ರಸ್ಥ ಸಮಾಜದ ಕನ್ನಡಿಯಾಗಿದೆ. ಹೀಗೆ ಇಂಥ ಹಲವು ದೃಶ್ಯಗಳು ಅಂಬೇಡ್ಕರ್ ನೆನಪನ್ನೂ, ಅಂಬೇಡ್ಕರ್ ನೆನಪು ಇಂಥ ನೂರಾರು ಶೋಷಿತರುಗಳನ್ನು ಒಟ್ಟಿಗೇ ನೆನಪಿಗೆ ತರುತ್ತದೆ. ಕೊರಗನ 'ಆನೆಕಾಲು' ರಥಬೀದಿಯಲ್ಲಿ ಬಿದ್ದರೂ ಆತನ ಹೆಜ್ಜೆಗುರುತು ಮಾತ್ರ ಮೂಡಲೇಯಿಲ್ಲ ಎಂಬ ಹತಾಶೆಯ ನುಡಿ ಅಸ್ಪೃಶ್ಯರನ್ನು ಚರಿತ್ರೆಯಿಂದ ಹೊರಗಿಡಲಾದ ಈ ದೇಶದ ಪರಂಪರೆಯನ್ನು ವ್ಯಂಗ್ಯವಾಡುತ್ತಿದೆ.

ಫರ್ಲಾಂಗು ದೂರ ಓಡಿದಾಗ ಅಂಬೇಡ್ಕರ್ ನೆನಪು
ತುಂಬ ಕಿರಿಕಿರಿಯುಂಟು ಮಾಡುತ್ತದೆ, ಹಾಗಾಗಿ
ಈಗೀಗ ಅಂಬೇಡ್ಕರ್ ಬಗ್ಗೆ ವಿಚಾರ ಮಾಡುವಾಗೆಲ್ಲ
ಮನಸ್ಸಿನ ತುಂಬ ಚಾಚಿಕೊಳ್ಳುತ್ತದೆ ಕೊರಗನ ಆನೆಕಾಲು [೪೩]

ಅಂಬೇಡ್ಕರ್ ನಮ್ಮ ಸಮಾಜದ ಅಂತರ್‌ಪ್ರಜ್ಞೆಯನ್ನು ಕಾಡುವ ಶಕ್ತಿಯಾಗಿದ್ದಾರೆ. ಹಾಗಾಗಿ ಕೊರಗನ ಮೂಲಕ, ಜಾತಿ ಶೋಷಣೆಯ ಕ್ರೌರ್ಯಗಳಿಂದ ನಲುಗಿಹೋದ ಈ ದೇಶದ ಹಲವಾರು ಘಟನೆಗಳ ಮೂಲಕ ನಮ್ಮ ಸಮಾಜದ ಆತ್ಮಸಾಕ್ಷಿಯನ್ನು ಕೆಣಕುವ ಪ್ರಯತ್ನ ಮಾಡಲಾಗಿದೆ. ನಮ್ಮ ಸಮಾಜದಲ್ಲಿ ನಿರಂತರವಾಗಿ ನಡೆಯುತ್ತಿರುವ ಜಾತಿಹಿಂಸೆಗಳ ಹಿಂದಿನ ಕ್ರೂರತೆಯನ್ನು ಮಾನವೀಯವಾಗಿ ಪ್ರತಿರೋಧಿಸುವ ಅರಿವು ನೀಡಿದವರು ಅಂಬೇಡ್ಕರ್ ಎಂಬುದನ್ನು ಈ ಕವಿತೆಯ ಕೊನೆಯ ಸಾಲು ಧ್ವನಿಸುತ್ತದೆ. ಅಂಬೇಡ್ಕರ್ ನೆನಪು ಈ ದೇಶದಲ್ಲಿ ನಡೆದ ಹಲವು ಬಗೆಯ ಜಾತಿ ಹಿಂಸೆಯ ಕೃತ್ಯಗಳನ್ನು ಒಟ್ಟಿಗೇ ನೆನಪಿಗೆ ತರುತ್ತದೆ.

ತೇಲಿಬಂದವು ನೆನಪಲ್ಲಿ ಆಗ ಕ್ಯೂನಿಂತ ಪಾಶಗಳಂತೆ
ಕಿಲ್ವನ್ ಮಣಿ, ಬೆಲ್ಚಿ, ಪಿಪ್ರಾ, ಪಾರಸ್ ಬಿಘಾ ಹರಿಜನರ
ಬೀಬತ್ಸ ಕಗ್ಗೊಲೆಯ ರುಂಡ ಮುಂಡಗಳು,
ಬುದ್ಧ ಗಯಾ, ನಾರಾಯಣಪುರ, ಸಾಧುಪುರ, ದೆವ್ಲೋಲಿ ಹರಿಜನರ
ತೊಡೆಮುರಿದ ತಲೆಯೊಡೆದ ಕೈಕಾಲು ಕಣ್ಣು ಕಳಕೊಂಡ ಹಾಹಾಕಾರ
ಭೀಕರಾಕೃತಿ ರಾಶಿ ರಾಶಿ
ಅಮಾನುಷ ಅತ್ಯಾಚಾರಗಳ ಗೋಳು ಸುಟ್ಟ ಗುಡಿಸಲುಗಳ ಸಾಲು ಸಾಲು
ತೇಲಿಬಂದರು ಆಗ ನೆನಪಲ್ಲಿ ನನ್ನೂರ
ಮುದಿಚೋಮ, ಕಟ್ಟಾಳು ಕೊರಗ, ಕನಸುಗಣ್ಣಿನ ತುಕ್ರ, ಚೀಂಕ್ರ
ಹೊಸಭೂಮಿ, ಹೊಸಬಾಳು ಹುಡುಕುತ್ತ ಹೊರಟ ವಲಸೆ ಹಕ್ಕಿಗಳು
ಮಣ್ಣಲ್ಲಿ ಮಣ್ಣಾಗಿ ಕೆಸರಲ್ಲಿ ಕೆಸರಾದ ಎರೆಹುಳುಗಳು [೪೪]

ಅಂಬೇಡ್ಕರ್ ಹೋರಾಡಿದ ನೆಲದಲ್ಲೇ ಇಂಥ ಸಾವಿರಾರು ಜಾತಿ ಶೋಷಣೆಯ ಅಮಾನುಷ ಕೃತ್ಯಗಳು ನಡೆದಿವೆ, ನಡೆಯುತ್ತಿವೆ. ಇವು ನಮ್ಮ ಜಾತಿ ಕೇಂದ್ರಿತ ಸಮಾಜದ ಕ್ರೂರ ಮುಖಗಳಾಗಿವೆ. ಇಂಥ ಹಲವು ಕೃತ್ಯಗಳನ್ನು ಅಂಬೇಡ್ಕರ್ ನೆನಪು ಒಟ್ಟಿಗೆ ನೆನಪಿಸುತ್ತದೆ. ಅಂಬೇಡ್ಕರರ ಚಿಂತನೆ, ಹೋರಾಟ, ಮಾನವೀಯ ಕಾಳಜಿಗಳು ಈ ಜಾತಿ ಕೇಂದ್ರಿತ ಸಮಾಜದ ಆತ್ಮಕ್ಕೆ ತಲುಪಲೇ ಇಲ್ಲ. ಅವು ಈ ಸಮಾಜದ ಮೇಲ್ಜಾತಿಯವರಲ್ಲಿ ಯಾವ ಮಾನವೀಯ ಪರಿವರ್ತನೆಯನ್ನೂ ತರಲೇ ಇಲ್ಲ ಎಂಬ ನೋವು, ಹತಾಶೆಗಳು ಇಲ್ಲಿ ವ್ಯಕ್ತವಾಗಿವೆ. ಅಷ್ಟರ ಮಟ್ಟಿಗೆ ಈ ಸಮಾಜ ಜಡಗೊಂಡಿದೆ ಎಂಬ ವಿಷಾದದ ಭಾವ ಕವಿತೆಗಳಲ್ಲಿದೆ.

ಈಗಲೂ
ಹಾಡಹಗಲಿನ ಎಲ್ಲ
ಕೊಲೆ ಸುಲಿಗೆ ಹಲ್ಲೆ ಸಂಕೋಲೆಗಳ ನಡುವೆ
ನರಳಿ
ನಿಟ್ಟುಸಿರೆಳೆವ ದಲಿತಪಡೆ – ಜೀವನಡೆ
ಕಟ್ಟೊಡೆಯಲಾರದ ಹೆಣ್ಣು ಬದುಕಿನಕ್ಕರೆ ಗಣ್ಣು
ಇಲ್ಲಿ ಚಲಿಸಲೆ ಇಲ್ಲ
ಜಡತೆಯೆ ಎಲ್ಲ ಆಗಿರುವಾಗ [೪೫]

ಜಾತಿಯ ಜಡತೆಯಿಂದಾಗಿ ಸಮಾಜ ಚಲನೆಯನ್ನು ಕಳೆದುಕೊಂಡಿದೆ. ಜಾತಿಯ ಕಾರಣಕ್ಕೆ ಹಾಡಹಗಲೇ ಹಿಂಸೆಗಳು ನಡೆಯುತ್ತಿದ್ದರೂ ಅದನ್ನು ಅಸಹಾಯಕವಾಗಿ ನೋಡಬೇಕಾದ ಪರಿಸ್ಥಿತಿ ಎದುರಾಗಿದೆ. ಸಾಮಾಜಿಕ ಚಲನೆಯೆಂಬುದು ದಲಿತರ ಬದುಕಿನಲ್ಲಿ ಇನ್ನೂ ಸಂಭವಿಸದೇ ಇರುವುದನ್ನು, ಇದರ ಹಿಂದೆ ಜಾತಿ ವ್ಯವಸ್ಥೆ ಪ್ರಬಲವಾಗಿ ಕೆಲಸಮಾಡುತ್ತಿರುವುದನ್ನು ಅಂಬೇಡ್ಕರ್ ವ್ಯಕ್ತಿತ್ವದೊಂದಿಗೆ ನಿವೇದಿಸಿಕೊಳ್ಳಲಾಗಿದೆ.

ಹೀಗೆ
ಹಾಡಲಾಗದ ದನಿಯ
ನೋಡಲಾಗದ ಕಣ್ಣ
ನನ್ನ ಅರೆಬರೆಗಿವುಡು ಈ
ಮೂಕ ನೋಟಕ ನಿಸ್ಸಹಾಯಕ ನಿಲುವಿಗೆ
ಉಂಟೆ ಕ್ಷಮೆ ಬಲಭೀಮನೆ ? [೪೬]

ಜಾತಿ ಶೋಷಣೆಯ ಕ್ರೌರ್ಯ ಎಲ್ಲರನ್ನೂ ನಿಸ್ಸಹಾಯಕರನ್ನಾಗಿ ಮಾಡಿದೆ. ಇದು ಜಾತಿಪ್ರಜ್ಞೆ ನಮ್ಮ ಸಮಾಜವನ್ನು ಎಷ್ಟು ಆಳವಾಗಿ ಆವರಿಸಿಕೊಂಡಿದೆ ಎಂಬುದರ ಸೂಚಕವಾಗಿದೆ. ಸಮಾಜದ ಕ್ರೂರ ವಾಸ್ತವವನ್ನು ಬಿಚ್ಚಿಡುತ್ತಲೇ ಅದನ್ನು ಅಸಹಾಯಕವಾಗಿ ನೋಡುತ್ತಿರುವ ತನಗೆ ಕ್ಷಮೆಯುಂಟೆ ಎಂದು ಒಳಗೊಳಗೇ ಪಾಪಪ್ರಜ್ಞೆಯಿಂದ ನಲುಗುವ ಹಾಗೆ ಹಾಗಿದೆ. ಹೀಗೆ ಅಂಬೇಡ್ಕರ್ ವ್ಯಕ್ತಿತ್ವದ ಎದುರಿಗೆ ತಮ್ಮ ಸಮಾಜದ ಜಾತಿಹಿಂಸೆಗಳ ಅಸ್ತಿತ್ವಕ್ಕೆ ತಮ್ಮ ಅಸಹಾಯಕ ನೋಟಗಳೂ ಕಾರಣವಾಗಿರುವುದನ್ನು ಈ ಕವಿತೆ ನಿವೇದಿಸಿಕೊಳ್ಳುತ್ತಿದೆ. ಹೀಗೆ ತಮ್ಮ ಅಸಹಾಯಕತೆಯ ನೋವುಗಳನ್ನು ಅಂಬೇಡ್ಕರರ ಎದುರಿಗೆ ನಿವೇದಿಸಿಕೊಳ್ಳಲಾಗುತ್ತಿದೆ.

ಸ್ವಾತಂತ್ರ್ಯ ಸಮಾನತೆ, ನೆಮ್ಮದಿಯ ಬಾಳು ಅಸ್ಪೃಶ್ಯ ಸಮುದಾಯಕ್ಕೆ ಇನ್ನೂ ಕನಸೇ ಆಗಿದೆ. ಆ ಕನಸಿನಲ್ಲೇ ಜೀವ ಹಿಡಿದು ಬದುಕುತ್ತಿರುವ ಆ ವರ್ಗ ಎಂದಾದರೊಂದು ದಿನ ಅಂಬೇಡ್ಕರ್ ಕಂಡ ಕನಸು ನನಸಾಗಬಹುದೆಂಬ ಆಸೆ ಹೊತ್ತು ಕೂತಿದ್ದಾರೆ.

ಮಳೆಗಾಲ ಬಂದಾಗ ನನ್ನೂರ
ಬಡಬಗ್ಗರೆಲ್ಲ
ಎದೆಗೂಡ ಬೆಂಕಿಗೆ ಕನಸುಗಳ
ಒಂದೊಂದೆ ಕೊಳ್ಳಿ ಇಡುತ್ತಾ
ಮನಸ ಕಾಯಿಸಿಕೊಳ್ಳುವರು
ಬೆಚ್ಚಗಾಗಬಹುದೆಂದು
ಅಂಬೇಡ್ಕರ್ ಆವರಿಸಬಹುದೆಂದು[೪೭]

ಅಂಬೇಡ್ಕರ್ ಈ ನೆಲದ ಅದೆಷ್ಟೋ ಶೋಷಿತರನ್ನು ಇನ್ನೂ ತಲುಪದೇ ಇರುವುದನ್ನು ಕವಿತೆ ಹೇಳುತ್ತಿದೆ. ತಮ್ಮ ಬದುಕಿನ ಬಿಡುಗಡೆಗಾಗಿ ಇನ್ನು ಕನಸು ಕಾಣುತ್ತಾ, ಬದಲಾವಣೆಯ ದಿನಗಳನ್ನು ನಿರೀಕ್ಷಿಸುತ್ತಾ ಕೂತಿರುವ ಸ್ಥಿತಿ ಅಮಾನವೀಯವಾದುದು. ಅಸ್ಪೃಶ್ಯರು ತಮ್ಮ ಬದುಕಿನ ಹಕ್ಕಿಗಾಗಿ, ನೆಮ್ಮದಿಯ ದಿನಗಳಿಗಾಗಿ ಕಾಣುತ್ತಿರುವ ಕನಸುಗಳಿಗೆ ಪರಂಪರೆಯೇ ಇದೆ. ಈ ಕನಸುಗಳಿಗೆ ಹೊಸ ಭರವಸೆಯನ್ನು ತುಂಬಿದ್ದು ಅಂಬೇಡ್ಕರ್. ಆ ಭರವಸೆಯಿಂದಲೇ ಪ್ರತಿ ಮಳೆಗಾಲವನ್ನು ಕಳೆಯುತ್ತಾ, ಬರುವ ಬಿಡುಗಡೆಯ ದಿನಗಳಿಗಾಗಿ ನಿರೀಕ್ಷಿಸುತ್ತಾ ಕೂರುವ ಸ್ಥಿತಿ ಅಸ್ಪೃಶ್ಯರದ್ದು ಎಂಬುದನ್ನು ಈ ಕವಿತೆ ಬಿಚ್ಚಿಡುತ್ತಿದೆ. ಇನ್ನು ಜಾತಿ ಹೆಸರಲ್ಲಿ ಅಸ್ಪೃಶ್ಯರ ಮೇಲೆ ನಡೆಸಲಾಗುತ್ತಿರುವ ದೌರ್ಜನ್ಯಗಳ ಸರಮಾಲೆಯನ್ನೇ ಹಲವು ಕವಿತೆಗಳು ತೆರೆದಿಡುತ್ತವೆ. ನಮ್ಮ ಸಮಾಜದ ಕರಾಳ ಮುಖಗಳನ್ನು ಇವು ಬಯಲು ಮಾಡುತ್ತವೆ.

ಅಲ್ಲಿ ಬೆಂಡಗೇರಿಯ ಮಲ
ಅಲ್ಲಲ್ಲಿ ವೇಷದಾರಿ ಕುದುರೆಮೋತಿಯ ಸ್ವಾಮಿ
ಇಲ್ಲಿ ಕೊಲೆ, ಅಲ್ಲಿ ಹೊಲೆ
ಸಾಗುವುದೆಲ್ಲಿಗೆ ಹೇಗೆ, ಬೆಳಕಿನೆಡೆಗೆ? [೪೮]

ಜಾತಿಯ ಕಾರಣಕ್ಕಾಗಿ ಮಲತಿನ್ನಿಸುವ, ಅತ್ಯಾಚಾರ ಎಸಗುವ, ಕೊಲೆ ಮಾಡುವ ಪ್ರಕರಣಗಳು ನಮ್ಮ ಸಮಾಜದಲ್ಲಿ ಸಾಮಾನ್ಯ ಎಂಬಷ್ಟರ ಮಟ್ಟಿಗೆ ನಡೆಯುತ್ತಿವೆ. ಜಾತಿ ವ್ಯವಸ್ಥೆ ಎಂಬುದು ಕೇವಲ ಶ್ರಮವಿಭಜನೆ

ಮಾತ್ರವಾಗಿರದೆ ಅದರ ಹಿಂದೆ ಸ್ಪೃಶ್ಯ-ಅಸ್ಪೃಶ್ಯ ಎಂಬ ತರತಮಗಳು ಗಾಢವಾಗಿ ಇರುವುದನ್ನು, ಅವು ಮೇಲ್ಜಾತಿಯವರಲ್ಲಿ ಕ್ರೌರ್ಯದ ಮನಸ್ಥಿತಿಯನ್ನು ಪೋಷಿಸುತ್ತಿರುವುದನ್ನು ಈ ಕವಿತೆ ತೆರೆದಿಟ್ಟಿದೆ. ಜಾತಿಯು ಹೀಗೆ ಅಮಾನವೀಯ ಹಿಂಸೆಗೆ ನಿರಂತರವಾಗಿ ಪ್ರಚೋದಿಸುತ್ತಿರುವ ಹಲವು ಉದಾಹರಣೆಗಳನ್ನು ಸಮಕಾಲೀನ ಸಮಾಜದಿಂದ ತೆಗೆದು ತೋರಿಸುವ ಮೂಲಕ ಅವುಗಳ ವಿರುದ್ಧ ಪ್ರತಿರೋಧವನ್ನು ವ್ಯಕ್ತಪಡಿಸಲಾಗಿದೆ. ಈ ಜಾತಿಹಿಂಸೆಗಳು ಹೀಗೇ ಮುಂದುವರಿದರೆ ಬೆಳಕಿನಡೆಗೆ ಸಾಗುವುದಾದರೂ ಹೇಗೆ? ಸಮಾನತೆಯ ಸಮಾಜ ನಿರ್ಮಾಣವಾಗುವುದಾದರೂ ಹೇಗೆ? ಎಂಬ ಅನುಮಾನ ವ್ಯಕವಾಗುತ್ತಿದೆ.

ಜಾತಿ ಹಿಂಸೆಯ ಕ್ರೌರ್ಯಗಳು ಹೆಚ್ಚಾಗಿ ಹೆಣ್ಣಿನ ಮೇಲೇ ನಡೆಯುತ್ತಿರುವ ಕೃತ್ಯಗಳನ್ನು ಹಲವು ಕವಿತೆಗಳು ತೆರೆದಿಡುತ್ತಲೇ ಅದರ ವಿರುದ್ಧ ಆಕ್ರೋಶವನ್ನು ವ್ಯಕ್ತಪಡಿಸುತ್ತವೆ. ಇಲ್ಲಿ ಹೆಣ್ಣು ಲಿಂಗ ತಾರತಮ್ಯದ ಜೊತೆಗೆ ಜಾತಿಹಿಂಸೆಗೂ ಒಳಗಾಗಬೇಕಾಗಿರುವ ನಮ್ಮ ಸಾಮಾಜಿಕ ವ್ಯವಸ್ಥೆಯ ಹಲವು ವಾಸ್ತವಗಳನ್ನು ಕವಿತೆಗಳು ಅಂಬೇಡ್ಕರ್ ಮೂಲಕ ತೆರೆದಿಟ್ಟಿವೆ.

ಒಂದು ಕಡೆ
ದುಮ್ಮಿಕ್ಕುವೆದೆಯ ಪೂಜಾಬೇಡಿ
ಇನ್ನೊಂದೆಡೆ
ಮ್ಲಾನವದನ ಮೈಕ್‌ಟೈಸನ್
ನಡುವೆ ಒಂದು ಹುಡುಗಿ
ಚೀರುತ್ತದೆ ಎದೆಯಲ್ಲಿ ಅಂಬೇಡ್ಕರ್ . . . .
ಎರಗಿದ್ದಾರೆ ಅವಳ ಮೇಲೆ
ಒಬ್ಬೊಬ್ಬರಾಗಿ
ಮೈಯಲ್ಲಿ ಪಿಶಾಚಿಹೊಕ್ಕಂತೆ
ಹರಿದು ತೂರಿದ್ದಾರೆ ಗಾಳಿಗೆ
ಅವಳ ಹೆಣ್ತನವ
ಆಕ್ರಂದನ, ಚೀತ್ಕಾರ
ಗಳ ನಡುವೆಯೇ
ಇವರ ಪೌರುಷದ ಅಗ್ನಿಕುಂಡಕ್ಕೆ
ಆಜ್ಯವಾದಳು ಹುಡುಗಿ [೪೯]

ಹೀಗೆ ಜಾತಿ ಕ್ರೌರ್ಯದಿಂದ ನಡೆಯುತ್ತಿರುವ ಅತ್ಯಾಚಾರಗಳು ಒಂದು ಕಡೆಯಾದರೆ ಮಲ ಹೊರಿಸುವ, ಮಲ ತಿನ್ನಿಸುವ ಇನ್ನೂ ಮುಂತಾದ ಅಮಾನವೀಯ ಕೃತ್ಯಗಳು ಈ ದೇಶದಲ್ಲಿ ನಡೆಯುತ್ತಿವೆ. ಆ ಎಲ್ಲಾ ನೆನಪುಗಳು ತೀವ್ರ ವಿಷಾದವನ್ನು ಹುಟ್ಟುಹಾಕಿವೆ.

ಮೊನ್ನೆ ಯುಗಾದಿಯ ದಿನ
ಘಮ ಘಮಿಸುವ ಸಿಹಿ ಹೂರಣ
ಬಾಯಲ್ಲಿಡುವಾಗ
ಮಲ ತಿನ್ನಿಸಿದ ಮೂರ್ಖರ ನೆನಪು
ಒಳಗೊಳಗೇ ಕುದ್ದು ಉಮ್ಮಳಿಸಿ
ನಿಂತವರ ನೆನೆಪು : ನೆಲದಿಂದ
ಪುಟಿವ ನೀರಿಗೆ ಬ್ರಾಹ್ಮಣಿಕೆ,
ಹೊಲೆತನದ ಗಬ್ಬು ಅಂಟಿಸುವ
ಕೆಲುಬರ ನೆನಪು
ಒಂದೇ . . . ಎರಡೇ . . [೫೦]

ಜಾತಿ ಕ್ರೌರ್ಯದ ಅತ್ಯಂತ ನೀಚ ಕೃತ್ಯಗಳನ್ನು ಮೇಲಿನ ಕವಿತೆ ಶಕ್ತವಾಗಿ ಹಿಡಿದಿಟ್ಟಿದೆ. ಜಾತಿ ಪ್ರಧಾನ ಸಮಾಜದ ಅವಮಾನ, ಹಿಂಸೆಗಳ ವಾಸ್ತವತೆಯನ್ನು, ಮರೆಮಾಚಲಾದ ನಮ್ಮ ಸಮಾಜದ ಕೊಳಕುಗಳನ್ನು ತೆರೆದಿಡುವ

ಕವಿತೆ ಆ ನೆನಪುಗಳನ್ನು ಮತ್ತೆ ಮತ್ತೆ ತಂದುಕೊಡುವ ಮೂಲಕ ಮಾನವೀಯತೆಯನ್ನು ಜಾಗೃತಗೊಳಿಸುವ ಕೆಲಸ ಮಾಡುತ್ತದೆ. ಇವೆಲ್ಲವೂ ಯಾವುದೋ ಕಾಲದಲ್ಲಿ ನಡೆದು ಹೋದ ಘಟನೆಗಳಾಗಿರದೆ, ಇಂದಿಗೂ ನಡೆಯುತ್ತಿರುವ ವಾಸ್ತವ ಎಂಬುದನ್ನು ಆಕ್ರೋಶದ ದನಿಯೊಂದಿಗೆ ಅಭಿವ್ಯಕ್ತಿಸಲಾಗುತ್ತಿದೆ.

ನೀರಿನ ಗುಳ್ಳೆ ಊದಿದಂತೆ
ಉಪಗ್ರಹಗಳನ್ನು ಆಗಸಕ್ಕೆ
ಹಾರಿಬಿಡುವ ಈ ಯುಗದಲ್ಲಿ
ಇದೇನು ಮಹಾ ಅಚ್ಚರಿ ? [೫೧]

ಇಲ್ಲಿನ ವ್ಯಂಗ್ಯದ ಮೊನಚನ್ನು ಗಮನಿಸಬೇಕು. ಉಪಗ್ರಹಗಳನ್ನು ಆಗಸಕ್ಕೆ ಹಾರಿಸಿದ್ದರೂ ಮಲ ಹೊರುವ, ಮಲ ತಿನ್ನಿಸುವ ಕೃತ್ಯಗಳು ಇನ್ನೂ ಜೀವಂತ. ವಿಜ್ಞಾನದಲ್ಲಿ ಎಷ್ಟೇ ಪ್ರಗತಿ ಹೊಂದಿದ್ದರೂ ನಮ್ಮ ಸಮಾಜದ ಮನಸ್ಥಿತಿಗಳು ಬದಲಾಗಿಲ್ಲ. ಮನುಷ್ಯನಲ್ಲಿ ಮಾನವೀಯತೆ ಮೂಡಿ ಬರಲಿಲ್ಲ ಎಂಬ ವ್ಯಂಗ್ಯ, ವಿಷಾದ ಇಲ್ಲಿದೆ. ಇದಕ್ಕಿಂತಲೂ ಆಶ್ಚರ್ಯ ಪಡುವ ಸಂಗತಿಗಳೆಂದರೆ ಈ ಎಲ್ಲಾ ಕೃತ್ಯಗಳ ಬಗೆಗಿನ ಈ ಸಮಾಜದ ಮೇಲ್ಜಾತಿಯ, ಅಧಿಕಾರಸ್ಥರ ದಿವ್ಯಮೌನ ಹಾಗೂ ಕೇವಲ ಅನುಕಂಪಗಳು.

ಆದರೆ
ಅಚ್ಚರಿ ಪಡುವ ಸಂಗತಿಗಳು
ಇವೆ ಈ ದೇಶದಲ್ಲಿ
ಪಶ್ಚಿಮದ ಹಾಳ್ಗಡಲಲ್ಲಿ
ಕ್ರಮೇಣ ಮುಳುಗುವ
ಕೆಂಪನೆ ಸೂರ್ಯ
ಒಂದಿಷ್ಟೂ ಕೂಗದೆ, ಕಿರುಚದೆ
ಕೈಕಾಲು ಕೂಡ ಬಡಿಯದೆ
ಅಸುನೀಗುತ್ತಾನೆ.
ಈ ಮೌನದ ಹಿಂದೆ
ಈ ಸಾವಿನ ಹಿಂದೆ
ಏನದು ವಿಷಾದ ? [೫೨]

ಇಷ್ಟೆಲ್ಲಾ ಕ್ರೌರ್ಯಗಳು ನಡೆಯುತ್ತಿದ್ದರೂ ಅವುಗಳ ಬಗೆಗೆ ಯಾಕೆ ಮೌನ ಆವರಿಸಿದೆ ಎಂಬುದೇ ಅಚ್ಚರಿ. ಇಲ್ಲಿ ಯಾಕೆ ದೊಡ್ಡ ಮಟ್ಟದ ಪ್ರತಿಭಟನೆ, ಆಕ್ರೋಶ, ಕ್ರಾಂತಿಗಳು ಸಂಭವಿಸುತ್ತಿಲ್ಲ? ದಲಿತರ ಸಹನೆಯ ಹಿಂದೆ, ಮೇಲ್ಜಾತಿಯವರ ಮೌನದ ಹಿಂದೆ, ಅಧಿಕಾರಸ್ಥರ ಕೇವಲ ವಿಷಾದದ ಹಿಂದೆ ಯಾವ ಶಕ್ತಿ ಕೆಲಸ ಮಾಡುತ್ತಿದೆ ಎಂಬ ಪ್ರಶ್ನೆಯನ್ನು ಈ ಕವಿತೆ ಎತ್ತುತ್ತಿದೆ.

ಬಡತನ ಹಸಿವು ಜೀತ, ಅವಮಾನಗಳು ಅಸ್ಪೃಶ್ಯರ ಬದುಕಿನ ಸಾಮಾನ್ಯ ಸಂಗತಿಗಳೇ ಆಗಿವೆ. ಅಸ್ಪೃಶ್ಯರನ್ನು ಹಸಿವು, ಬಡತನದಲ್ಲಿರಿಸುವ ಮೂಲಕ ನಿರಂತರವಾಗಿ ಜೀತದಾಳುಗಳನ್ನಾಗಿ ದುಡಿಸಿಕೊಳ್ಳುವ, ಹಿಂಸಿಸುವ ಪ್ರವೃತ್ತಿಗಳು ಶತಶತಮಾನಗಳಿಂದಲೂ ನಡೆಯುತ್ತಿವೆ. ಅಂಬೇಡ್ಕರರನ್ನು ಸ್ಮರಿಸುವುದರೊಂದಿಗೆ ತಾವು ಅನುಭವಿಸುತ್ತಿರುವ ಹಿಂಸೆಗಳನ್ನು ಅವರಲ್ಲಿ ನಿವೇದಿಸಿಕೊಂಡು ಸಮಾಧಾನ ಹೊಂದುವ, ತಮ್ಮ ಅಸಹನೆ, ರೋಷ, ಆಕ್ರೋಶಗಳನ್ನು ವ್ಯಕ್ತಪಡಿಸುವ ಭಾವಗಳು ವ್ಯಕ್ತವಾಗಿವೆ.

ಮುರುಕು ಚಪ್ಪರದಡಿ ಇಲ್ಲ ಅಡರಿದ
ತೇಪೆ ಜುಬ್ಬ ತೊಟ್ಟ ನನ್ನಪ್ಪನ ಕಪ್ಪು ದೇಹಕೆ
ಎಳೆದ ಕುಳದ ಬರೆ
ಕೆಂಪು ನೆತ್ತರ ತುಂಬಿ

ಕೀವು ಪಿಟಿಪಿಟಿಸಿದಾಗ, ಗತಕಾಲದ ಇತಿಹಾಸ
ತನ್ನ ಒಂದೊಂದು ಪುಟ ಬಿಚ್ಚುತ್ತದೆ. [೫೩]

ಈ ಕವನ ಎಲ್ಲಾ ಬಗೆಯ ಕ್ರೌರ್ಯಗಳ ಹಿಂದೆ ಜಾತಿ ಮನಸ್ಥಿತಿಗಳು ಕೆಲಸಮಾಡಿರುವುದನ್ನು, ಇದಕ್ಕೆ ಗತಕಾಲದ ಇತಿಹಾಸವಿರುವುದನ್ನು ಗುರುತಿಸುತ್ತದೆ. ಆದರೆ ನೋವು ತಿಂದ ಜೀವಗಳು ಮಾತ್ರ ನೋವನ್ನು, ಸಿಟ್ಟನ್ನು ಒಳಗೊಳಗೇ ಕುದಿದು ಅನುಭವಿಸುತ್ತಿವೆ. ಜಾತಿ ಮತ್ತು ಜೀತಕ್ಕೂ ಇರುವ ನಂಟನ್ನು, ಅದರ ಶೋಷಣೆಯ ಹಲವು ನೆಲೆಗಳನ್ನು ತಮ್ಮ ನಾಯಕನೆದುರಿಗೆ ಮತ್ತೆ ಮತ್ತೆ ನಿವೇದಿಸಿಕೊಳ್ಳುವಿಕೆ ಕವಿತೆಗಳಲ್ಲಿ ಕಂಡುಬರುತ್ತದೆ.

ಮುಂಗಾರು ಚಳಿ ಬೀಸಿ
ದೇಹ ಗುಗ್ಗರಿಗಟ್ಟಿ ತಂಡಿ
ತಡೆಯದೇ ಗದಗದ ನಡುಗಿ, ಉಂಡ ನೋವು
ನೆನಪಾಗಿ ಹಲ್ಲು ಕಟಕಟ್
ಎಂದು ಸದ್ದು ಮಾಡುತ್ತವೆ. [೫೪]

ಇಲ್ಲಿ 'ಹಲ್ಲು ಕಟಕಟ್ ಎಂದು ಸದ್ದು ಮಾಡುತ್ತದೆ' ಎನ್ನುವ ಸಾಲು ದಲಿತರ ನೋವನ್ನೂ, ಅದಕ್ಕೆ ಅವರು ಒಡ್ಡುತ್ತಿರುವ ಪ್ರತಿರೋಧದ ವಿಧಾನವನ್ನೂ ಹಿಡಿದಿಡುತ್ತದೆ. ದಲಿತರು ಸಿಟ್ಟನ್ನು ಹೊರಹಾಕುವ, ಪ್ರತಿಭಟಿಸಿ ನಿಲ್ಲುವ, ಸ್ವಾಭಿಮಾನವನ್ನು ಮೆರೆಯುವ ಚೈತನ್ಯವನ್ನೇ ಜಾತಿ ವ್ಯವಸ್ಥೆ ನಿಯಂತ್ರಿಸಿದೆ. ಇದು ಜೀತದ ನೋವುಂಡವರು ತಮ್ಮ ಸಿಟ್ಟನ್ನು ತೀರಿಸಿಕೊಳ್ಳಲಾಗದೆ ಅನುಭವಿಸುತ್ತಿರುವ ಅಸಹಾಯಕತೆಯನ್ನು, ಹೀಗೆ ಅವರನ್ನು ಅಸಹಾಯಕರನ್ನಾಗಿಸಿದ ಸಮಾಜದ ನಿಯಂತ್ರಕ ಶಕ್ತಿಗಳ ಕ್ರೌರ್ಯ, ಅಧಿಕಾರಗಳನ್ನು ಧ್ವನಿಸುತ್ತದೆ.

ಹೊಟ್ಟೆ ಗೊರಗೊರ ಎಂದು ಅನ್ನಕ್ಕಲುಬಿದ ಕೊರಗು
ಚಕಮುಖಿಕೆ ಚಕ್ಕೆಂದು ಹತ್ತಿದ ಬೆಂಕಿ
ಚಿಲುಮೆಗೇರಿಸಿದಾಗ ಚಟ್ ಚಟ್ . . . .
ಸಿಡಿದ ಕಿಡಿ . . . . ನನ್ನಪ್ಪ ನಿಟ್ಟಿಸಿದ
ಆಸೆಗಣ್ಣಿಗೆ ಸಮಾಧಾನ ಹೇಳುತ್ತಿವೆ. [೫೫]

ಸಹಿಸಲಾಗದ ಅಸಹಾಯಕತೆಯ ಒದ್ದಾಟದ ಪರಮಾವಧಿ ಇದು. ಹಸಿವು, ಅಪಮಾನಗಳ ಉರಿಯೇ ಅವರಿಗೆ ಸಮಾಧಾನ ಹೇಳಬೇಕಾಗಿದೆ. ಮನದಾಳದ ಬಿಡುಗಡೆಯ ಆಸೆಗಳು ಎಂದೆಂದೂ ನನಸಾಗದವು ಎಂಬುದನ್ನು 'ನನ್ನಪ್ಪ ನಿಟ್ಟಿಸಿದ ಆಸೆಗಣ್ಣಿಗೆ ಸಮಾಧಾನ ಹೇಳುತ್ತಿವೆ' ಎಂಬ ಸಾಲು ಸ್ಪಷ್ಟಪಡಿಸುತ್ತಿದೆ. ಆದರೆ ಇಂದು ಅವಮಾನ, ಹಿಂಸೆಗಳನ್ನು ತಮ್ಮ ಕರ್ಮವೆಂದು ಸಹಿಸುವ ಮನಸ್ಥಿತಿಗಳು ಬದಲಾಗಿ ಪ್ರತಿರೋಧ ಒಡ್ಡುವ, ಆಕ್ರೋಶವನ್ನು ಹೊರಹಾಕುವ ಸ್ವಾಭಿಮಾನದ ಸೂಚನೆಗಳು ಕಂಡುಬರುತ್ತಿವೆ. ಈ ಸ್ವಾಭಿಮಾನವನ್ನು ಶೋಷಿತರಲ್ಲಿ ಹುಟ್ಟುಹಾಕಿದವರು ಅಂಬೇಡ್ಕರ್.

ನೋಡು ! ಬಾಬಾ ಸಾಹೇಬ
ನಿನ್ನ ಕನ್ನಡಕದ ಹಿಂದೊಮ್ಮೆ
ಕಪ್ಪು ಕಣಿವೆಯಲೆದ್ದ
ಬೆಂಕಿ ಜ್ವಾಲೆ ನನ್ನಪ್ಪನ ಅಥವಾ ಅವನಂತವರ
ಎದೆಯಲ್ಲಿ ನಾಲಿಗೆ ಚಾಚುತ್ತಿದೆ. [೫೬]

ಎನ್ನುವುದು ಅಂಬೇಡ್ಕರರ ಪ್ರಯತ್ನ ಸಂಪೂರ್ಣವಾಗಿ ವಿಫಲವಾಗಿಲ್ಲ. ಅದು ಶೋಷಿತ ಸಮುದಾಯದಲ್ಲಿ ಎಚ್ಚರವನ್ನೂ, ಸ್ವಾಭಿಮಾನವನ್ನೂ ಹುಟ್ಟುಹಾಕಿದೆ. ಅದು ಮುಂದೊಂದು ದಿನ ಸ್ಫೋಟಗೊಂಡು ಸಾಮಾಜಿಕ ನ್ಯಾಯವನ್ನು ಪಡೆಯಬಹುದು ಎಂಬ ನಂಬಿಕೆಯನ್ನು ವ್ಯಕ್ತಪಡಿಸುತ್ತಿದೆ.

ಕವಿತೆಗಳು ಜಾತಿ ಹಿಂಸೆ ಮತ್ತು ಶೋಷಣೆಗಳನ್ನು ಎದುರಿಸುವ ಶಕ್ತಿಯನ್ನು, ಛಲವನ್ನು ನೀಡೆಂದು ಅಂಬೇಡ್ಕರರಲ್ಲಿ ಪ್ರಾರ್ಥಿಸುವ ರೀತಿ ವಿಶಿಷ್ಟ ಅಭಿವ್ಯಕ್ತಿಗಳಾಗಿ ಕಂಡುಬರುತ್ತವೆ. ಈ ದೈನ್ಯತೆ, ಆರ್ತತೆಗಳು ನಮ್ಮ ಸಮಾಜದ ಜಾತಿ ಹಿಂಸೆಯ ಹಲವು ನೆಲೆಗಳನ್ನು ದರ್ಶಿಸುತ್ತವೆ.

ಕುಟುಕುವ ಮಾತ ತಾಳುವ
ಬೆಟ್ಟದೆದೆ ತಾಕತ್ತು ನೀಡಯ್ಯ
ಉಪಕಾರದ ಕೆಂಡದುಂಡೆ
ತಿಂದು ಕರಗಿಸುವ ಶಕ್ತಿ ನೀಡಯ್ಯ
ಕೊಟ್ಟನೆಂಬ ಕೊಡುವನೆಂಬ
ಹುಂಬ ಕೋಡಂಗಿ ದಬ್ಬಾಳಿಕೆ
ಎದುರಿಸುವ ಛಲವ ನೀಡಯ್ಯ [೫೭]

ಅಸ್ಪೃಶ್ಯರ ಬೆವರಿನ ಫಲವನ್ನು ಉಣ್ಣುವ ಧನಿಕರು, ಮೇಲ್ಜಾತಿಯ ಜನರು ಅವರಿಗೆ ನೀಡುವ ಅಲ್ಪ ಕೂಲಿಯನ್ನೇ ಉಪಕಾರವೆಂಬಂತೆ ಬಿಂಬಿಸಿಕೊಳ್ಳುತ್ತಿರುವ ಹುಂಬತನಗಳನ್ನು ಈ ಕವಿತೆ ವಿಡಂಬಿಸುತ್ತಿದೆ. ಇದೆಲ್ಲವನ್ನೂ ಎದುರಿಸುವ, ಸಹಿಸುವ ಶಕ್ತಿಯನ್ನು ನೀಡೆಂದು ತಮ್ಮ ನಾಯಕನಲ್ಲಿ ಮೊರೆಯಿಡುತ್ತಿರುವುದು ಅಸ್ಪೃಶ್ಯರ ಸ್ವಾಭಿಮಾನದ ಪ್ರತಿಬಿಂಬವಾಗಿದೆ.

ತುತ್ತುಗಳ ನೀಡಿ ಕುತ್ತುಗಳ ತೋಡುವ
ಹೆಜ್ಜೆ ಹೆಜ್ಜೆಗೂ ಕೈ ಹಿಡಿದ, ಹೇಡಿ ಮಾಟ
ದಾಟುವ ದಾರಿ ತೋರಯ್ಯ [೫೮]

ಮೇಲ್ಜಾತಿಯುವರ ಬೋಳೆ ಅನುಕಂಪ, ಉಪಕಾರದ ಸೋಗುಗಳನ್ನು ನಯವಂಚಕತನಗಳನ್ನು ನಿರಾಕರಿಸುತ್ತಾ, ತಮ್ಮ ಸ್ವಾತಂತ್ರ್ಯವನ್ನು ಪಡೆದುಕೊಳ್ಳಬಹುದಾದ ದಾರಿಗಾಗಿ ಅಂಬೇಡ್ಕರರಲ್ಲಿ ಪ್ರಾರ್ಥಿಸುತ್ತಿರುವುದನ್ನು ಇಲ್ಲಿ ಕಾಣಬಹುದು. ತಮ್ಮ ಬೆವರಿನ ಫಲವನ್ನುಂಡು ತಮಗೇ ಉಪಕಾರದ ಋಣದ ಹೊರೆಯನ್ನು ಹೊರಿಸುವ ಜಾತಿ ಶೋಷಣೆಯ ಸೂಕ್ಷ್ಮ ಎಳೆಗಳನ್ನು ಈ ಕವಿತೆ ಭೇದಿಸುತ್ತಿದೆ.

ಹೀಗೆ ತಮ್ಮ ಬದುಕಿನ ದಾರುಣ ಸ್ಥಿತಿಯ ಬಗೆಗೆ ಅರಿವನ್ನು, ಅದರ ವಿರುದ್ಧ ಸಿಡಿದೆದ್ದು ಸ್ವಾಭಿಮಾನ, ಸ್ವಾತಂತ್ರ್ಯ ಸಮಾನತೆಗಳನ್ನು ಪಡೆದುಕೊಳ್ಳಬೇಕಾದ ಛಲವನ್ನು ಮೂಡಿಸಿದ, ತಮಗಾಗಿ ಹೋರಾಡಿದ ನಾಯಕನೆದುರಿಗೆ ಸಮುದಾಯವೊಂದು ಮುಕ್ತವಾಗಿ ಮಾತನಾಡಿರುವುದು, ಪ್ರಾರ್ಥಿಸಿರುವುದು, ನಿವೇದಿಸಿಕೊಂಡಿರುವುದು ಆ ನಾಯಕನ ಹೋರಾಟದ ಪ್ರಾಮಾಣಿಕತೆ, ಮಾನವೀಯತೆ, ತಾಯ್ತನದ ಕಳಕಳಿಗಳನ್ನು ಧ್ವನಿಸುತ್ತದೆ. ಮೇಲ್ಜಾತಿಯ ಅಧಿಕಾರಶಾಹೀ ಶಕ್ತಿಗಳು ಕಡೆಗಣಿಸಿದ್ದ, ಮರೆಮಾಚಿದ್ದ ಅನೇಕ ಅಮಾನವೀಯ ಸಾಮಾಜಿಕ ಮತ್ತು ಚಾರಿತ್ರಿಕ ವಾಸ್ತವಗಳು ಇಲ್ಲಿ ಅನಾವರಣಗೊಂಡಿವೆ. ಆ ಮೂಲಕ ಸಮಕಾಲೀನ ಸಮಾಜಕ್ಕೆ ಕನ್ನಡಿ ಹಿಡಿಯುವುದರೊಂದಿಗೆ ಸಮಕಾಲೀನ ಚರಿತ್ರೆಯ ದಾಖಲೀಕರಣವನ್ನು ಮಾಡುತ್ತಿವೆ. ತಾವು ಬದುಕುತ್ತಿರುವ ಸಮಾಜದ ಜಾತಿ ಶೋಷಣೆಯ ನೆಲೆಗಳನ್ನೂ ಅದರ ವಿರುದ್ಧ ನಡೆದು ಬಂದಿರುವ ಹೋರಾಟಗಳನ್ನೂ, ಹೋರಾಡಿದ ನಾಯಕನನ್ನು, ವರ್ತಮಾನದ ಅಸ್ಪೃಶ್ಯರ ಸ್ಥಿತಿಯನ್ನೂ ಒಟ್ಟಿಗೇ ಮುಖಾಮುಖಿಯಾಗುವ ಕವಿತೆಗಳು ಶೋಷಣೆಯ ಪರಂಪರೆಗಳನ್ನು, ಅದರ ಹಿಂದಿನ ವ್ಯವಸ್ಥೆಯ ನಿಯಂತ್ರಕ ಶಕ್ತಿಗಳ ಕ್ರೌರ್ಯವನ್ನು ಒಟ್ಟಿಗೇ ವಿಮರ್ಶೆಗೆ ಒಳಪಡಿಸಿವೆ. ನಮ್ಮ ಸಮಾಜ, ಚರಿತ್ರೆ ಮುಂತಾದ ಜ್ಞಾನಶಿಸ್ತುಗಳ ಏಕಮುಖದ ರಚನಾ ಕ್ರಮಗಳನ್ನು ವಿರೋಧಿಸುವುದರೊಂದಿಗೆ ಅದಕ್ಕೆ ತಳಸಮುದಾಯದ ದೃಷ್ಟಿಕೋನಗಳನ್ನು

ಒದಗಿಸಿಕೊಡುವ ಪ್ರಯತ್ನಗಳಾಗಿ ಈ ಕವಿತೆಗಳು ಮೂಡಿಬಂದಿವೆ. ಸಮುದಾಯದ ಬದುಕಿನ ಪ್ರತಿಬಿಂಬಗಳಾದ ಈ ಕವಿತೆಗಳು ಇಷ್ಟೊಂದು ದೊಡ್ಡ ಮಟ್ಟದಲ್ಲಿ ತಮ್ಮ ನಾಯಕನೊಂದಿಗೆ ತಮ್ಮ ಗೋಳನ್ನು ತೋಡಿಕೊಂಡಿವೆ, ಸಂವಾದಿಸಿವೆ ಎಂಬುದು ನಾವು ಬದುಕುತ್ತಿರುವ ಸಾಂಸ್ಕೃತಿಕ ಪರಿಸರದ ಬಹುದೊಡ್ಡ ಹುಳುಕುಗಳನ್ನು ತೋರಿಸುತ್ತಿವೆ ಎಂದೇ ಅರ್ಥ. ಆ ಅರಿವನ್ನು, ಸಿಡಿದೇಳುವ ಸ್ವಾಭಿಮಾನವನ್ನು ಅಸ್ಪೃಶ್ಯರಲ್ಲಿ ಮೂಡಿಸಿದ ಅಂಬೇಡ್ಕರ್ ಆ ಸಮುದಾಯದ ಗೆಳೆಯ, ನಾಯಕ, ದೇವರು, ಗುರು, ತಂದೆ, ತಾಯಿ, ಬೆಳಕಾಗಿ ಕಂಡುಬಂದಿರುವುದು ಸಹಜವೇ ಆಗಿದೆ.

### ೩. ರಾಜಕೀಯ ವಿಡಂಬನೆ/ ಪ್ರತಿರೋಧದ ಚೈತನ್ಯವಾಗಿ

ಅಂಬೇಡ್ಕರ್ ವ್ಯಕ್ತಿತ್ವದೊಂದಿಗೆ ಸಂವಾದಿಸುವ ಕವಿತೆಗಳು ಆ ವ್ಯಕ್ತಿತ್ವವನ್ನು ಶೋಧನೆಗೆ ಒಳಪಡಿಸಿರುವ ಇನ್ನೊಂದು ಬಹುಮುಖ್ಯವಾದ ನೆಲೆ ಎಂದರೆ ರಾಜಕೀಯ ವಿಡಂಬನೆ. ಅಂಬೇಡ್ಕರ್ ವ್ಯಕ್ತಿತ್ವ, ದಲಿತರ ಸ್ಥಿತಿ, ಸಮಕಾಲೀನ ರಾಜಕಾರಣಗಳ ನಡುವೆ ನೇರವಾದ ಸಂಬಂಧಗಳಿವೆ. ಅಂಬೇಡ್ಕರ್ ಮತ್ತು ದಲಿತರು ಸಮಕಾಲೀನ ರಾಜಕಾರಣದ ದಾಳಗಳಾಗಿ ಬಳಕೆಯಾಗುತ್ತಿದ್ದಾರೆ. ಅಂಬೇಡ್ಕರ್ ಹೋರಾಟ, ಚಿಂತನೆ, ವ್ಯಕ್ತಿತ್ವಗಳು ಅಪವ್ಯಾಖ್ಯಾನಗಳಿಗೆ ಒಳಗಾಗುತ್ತಿವೆ. ದಲಿತೋದ್ಧಾರದ ಯೋಜನೆಗಳು, ಮಾತುಗಳು, ಮೋಸಗೊಳಿಸುವ ತಂತ್ರಗಳಾಗುತ್ತಿವೆ. ದಲಿತರ ಬಡತನ, ಅಜ್ಞಾನ, ಅಸಹಾಯಕತೆಗಳು ರಾಜಕೀಯ ಲಾಭಕ್ಕೆ ಬಳಕೆಯಾಗುತ್ತಿವೆ. ಅಂಬೇಡ್ಕರ್ ಹೆಸರಲ್ಲಿ ದಲಿತರನ್ನೇ ವಂಚಿಸುವ, ದಾರಿ ತಪ್ಪಿಸುವ ಹುನ್ನಾರಗಳು ಮೇಲಿಂದ ಮೇಲೆ ನಡೆಯುತ್ತಿವೆ. ಅಂಬೇಡ್ಕರ್ ಪ್ರತಿಮೆಯ ಹಿಂದೆ ಬಿದ್ದು ಅದನ್ನೇ ದಲಿತ ಕಾಳಜಿಯೆಂಬಂತೆ ಬಿಂಬಿಸಲಾಗುತ್ತಿದೆ. ದಲಿತರಲ್ಲಿ ಬಡತನ, ಅಜ್ಞಾನ, ಅಸಹಾಯಕತೆಗಳನ್ನು ಪೋಷಿಸುತ್ತಾ ತಮ್ಮ ಮತಬ್ಯಾಂಕುಗಳನ್ನಾಗಿ ಪರಿವರ್ತಿಸಿಕೊಳ್ಳುವ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಿವೆ. ಇಷ್ಟೆಲ್ಲಾ ರಾಜಕೀಯ ತಂತ್ರಗಾರಿಕೆಗಳ ನಡುವೆ ನಲುಗಿ ಹೋಗಿರುವ ಅಸ್ಪೃಶ್ಯ ಸಮುದಾಯದ ಸ್ಥಿತಿಯನ್ನೂ, ಅಂಬೇಡ್ಕರ್ ಸ್ಥಿತಿಯನ್ನೂ ಅದಕ್ಕೆ ಕಾರಣವಾಗಿರುವ ಸಮಕಾಲೀನ ರಾಜಕಾರಣವನ್ನು, ಮೇಲ್ಜಾತಿಯ-ಅಧಿಕಾರಶಾಹಿಯ ಹುನ್ನಾರಗಳನ್ನು ವಿಮರ್ಶೆಗೆ ಒಳಪಡಿಸುವ ಕೆಲಸವನ್ನು ಅಂಬೇಡ್ಕರ್ ಕುರಿತ ಕವಿತೆಗಳು ಮಾಡಿವೆ. ಈ ದೇಶದ ಅಸ್ಪೃಶ್ಯಾಚರಣೆಯ ನೆಲೆಗಳನ್ನು, ಅದನ್ನು ಪೋಷಿಸುತ್ತಿರುವ ರಾಜಕಾರಣಗಳನ್ನು ತಮ್ಮ ನಾಯಕನ ವ್ಯಕ್ತಿತ್ವದೊಂದಿಗೆ ಸಂವಾದಿಸುವ ಮೂಲಕ ಹುಡುಕುವ ಪ್ರಯತ್ನವನ್ನೂ ಮಾಡಿವೆ. ಸಮಕಾಲೀನ ಜಾತಿ ರಾಜಕಾರಣಗಳ ಬಿಕ್ಕಟ್ಟು, ಸವಾಲುಗಳ ನಡುವೆ ತಮ್ಮ ನಾಯಕನ ವ್ಯಕ್ತಿತ್ವವನ್ನು ಅರಿಯುವ ವಿಶಿಷ್ಟ ಪ್ರಯತ್ನಗಳಾಗಿಯೂ ಈ ಬಗೆಯ ಕವಿತೆಗಳು ಮಹತ್ವಪಡೆದಿವೆ. ಇಲ್ಲಿ ಎಲ್ಲ ಬಗೆಯ ರಾಜಕೀಯ ವಿಡಂಬನೆಯ ಹಿಂದಿನ ಸ್ಫೂರ್ತಿ ಶಕ್ತಿಯಾಗಿ ಅಂಬೇಡ್ಕರ್ ವ್ಯಕ್ತಿತ್ವ ಬಳಕೆಯಾಗಿದೆ.

ಅಂಬೇಡ್ಕರ್ ಜಾತಿ ವಿನಾಶಕ್ಕೆ, ಅಸ್ಪೃಶ್ಯತೆಯ ಆಚರಣೆಯ ನಿರ್ಮೂಲನೆಗೆ, ದಲಿತರ ಉದ್ಧಾರಕ್ಕೆ, ರಾಷ್ಟ್ರದ ರಾಜಕೀಯ-ಆರ್ಥಿಕ-ಸಾಮಾಜಿಕ ಏಳ್ಗೆಗೆ ಯಾವುದು ಸೂಕ್ತವಾದ ಮಾರ್ಗ ಎಂಬುದನ್ನು ಹಲವು ನೆಲೆಗಳಲ್ಲಿ ಚಿಂತಿಸಿ ಸೂಕ್ತ ಪರಿಹಾರೋಪಾಯಗಳನ್ನು ಕಂಡುಕೊಂಡಿದ್ದರು. ಅದಕ್ಕಾಗಿ ಸಂವಿಧಾನಿಕ ಕಾನೂನುಗಳನ್ನು ರೂಪಿಸಿಕೊಟ್ಟರು. ಆದರೆ ಈ ದೇಶದ ರಾಜಕಾರಣ ಅಂಬೇಡ್ಕರರ ಸಾಮಾಜಿಕ, ಆರ್ಥಿಕ, ರಾಜಕೀಯ ಚಿಂತನೆಗಳನ್ನು ಬಳಸಿಕೊಂಡು ದಲಿತರ ಏಳ್ಗೆಗಾಗಿ, ಜಾತಿ ವಿನಾಶಕ್ಕಾಗಿ ರಚನಾತ್ಮಕ

ಯೋಜನೆಗಳನ್ನು ರೂಪಿಸುವುದಕ್ಕೆ ಬದಲಾಗಿ ಕೇವಲ ಪ್ರಚಾರದ, ಕಣ್ಣೊರೆಸುವ ತಂತ್ರಗಳನ್ನಷ್ಟೇ ಮಾಡುತ್ತಾ ಬಂದಿದೆ. ಇದರಿಂದ ದಲಿತರ ಸಮಸ್ಯೆ ಮತ್ತಷ್ಟು ಬಿಗಡಾಯಿಸುತ್ತಾ ಸಾಗಿದೆ. ದಲಿತರನ್ನು ಮತಗಳಿಕೆಯ ಸಾಧನಗಳನ್ನಾಗಿ ಬಳಸುವ, ದಲಿತರಲ್ಲೇ ಒಡಕು ಉಂಟುಮಾಡುವ, ಅಂಬೇಡ್ಕರ್ ವಿಚಾರಗಳನ್ನು ತಿರುಚುವ, ಅಂಬೇಡ್ಕರ್ ಪ್ರತಿಮೆಯ ಹಿಂದೆ ಬಿದ್ದಿರುವ ರಾಜಕಾರಣದ ವಿಭಿನ್ನ ಮುಖಗಳನ್ನು ವಿಡಂಬಿಸುವ ಕೆಲಸವನ್ನು ಈ ಕವಿತೆಗಳು ಮಾಡಿವೆ. ಈ ನಿಟ್ಟಿನಲ್ಲಿ ಅಂಬೇಡ್ಕರ್ ಕುರಿತ ಕವಿತೆಗಳು ನಡೆಸುವ ರಾಜಕೀಯ ವಿಡಂಬನೆಯ ನೆಲೆಗಳನ್ನು, ಅವು ಅನಾವರಣಗೊಳಿಸುವ ಜಾತಿ ರಾಜಕಾರಣದ ಬೇರೆ ಬೇರೆ ಬಗೆಗಳನ್ನು, ಆ ರಾಜಕಾರಣದ ಸ್ವರೂಪವನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಸ್ವಾತಂತ್ರ್ಯಾ ನಂತರದ ರಾಜಕಾರಣದಲ್ಲಿ ಯಾವ ಸರ್ಕಾರಗಳೂ ಅಸ್ಪೃಶ್ಯತೆಯ ನಿವಾರಣೆ ಮತ್ತು ದಲಿತೋದ್ಧಾರದ ಕೆಲಸಗಳನ್ನು ಗಂಭೀರವಾಗಿ ಹಾಗೂ ಕ್ರಾಂತಿಕಾರಿಯಾಗಿ ನಿರ್ವಹಿಸುವ ಕಾರ್ಯ ಯೋಜನೆಗಳನ್ನೂ ರೂಪಿಸಿಲ್ಲ. ಅಂಬೇಡ್ಕರ್ ಚಿಂತನೆ ಮತ್ತು ಹೋರಾಟಗಳೂ ಕೂಡ ಅಸ್ಪೃಶ್ಯರ ಪಾಲಿಗೆ ಅಲ್ಪ ಅವಕಾಶಗಳನ್ನಷ್ಟೇ ಒದಗಿಸಲು ಸಾಧ್ಯವಾಯಿತು. ಸರ್ಕಾರಗಳು ದಲಿತೋದ್ದಾರದ ಕಾಳಜಿಗಳನ್ನು ಕೇವಲ ಜನಪ್ರಿಯತೆಗಾಗಿ ಬಳಸಿಕೊಂಡು ಬರುತ್ತಿವೆ. ಹಾಗಾಗಿಯೇ ದಲಿತರಿಗೆ ಇವೆಲ್ಲವೂ ಕ್ಷಣಿಕ ಖುಷಿಗಳಾಗಿ ಕಂಡವೇ ಹೊರತು ಶಾಶ್ವತ ಪರಿಹಾರಗಳಾಗಲಿಲ್ಲ. ಏಕೆಂದರೆ ಯಾವ ಸರ್ಕಾರಗಳಿಗೂ ಅಸ್ಪೃಶ್ಯತೆಯ ನಿವಾರಣೆ ಗಂಭೀರವಾಗಿ ಪರಿಗಣಿಸಬೇಕಾದ ಸಮಸ್ಯೆಯಾಗಿ ಕಂಡಂತೆ ಕಾಣುವುದಿಲ್ಲ. ಬದಲಾಗಿ ಅವರನ್ನು ಕ್ಷಣಿಕವಾಗಿ ತೃಪ್ತಿ ಪಡಿಸುವ ಯೋಜನೆಗಳನ್ನೇ ದಲಿತ ಕಾಳಜಿಗಳನ್ನಾಗಿ ಬಿಂಬಿಸಲಾಗುತ್ತಿದೆ. ಇದು ಅಸ್ಪೃಶ್ಯತೆಯನ್ನು ಮುಂದುವರಿಸಿಕೊಂಡು ಹೋಗುವ ಮೇಲ್ಜಾತಿ ರಾಜಕಾರಣದ ಹುನ್ನಾರಗಳು ಪ್ರಬಲವಾಗಿ ಕೆಲಸ ಮಾಡುತ್ತಿರುವುದರ ಪರಿಣಾಮವೇ ಆಗಿದೆ.

ಕತ್ತಲೆಯ ಇಣುಕಿನ ಬೆಳಕಿಗೆ
ಕನಸುಗಳ ಸರಮಾಲೆ ಹೊದ್ದ ಕ್ಷಣ
ಮೋಡಗಟ್ಟಿದ ಉಂಡೆಯಲ್ಲಿ ಗುಡುಗುಡು ಶಬ್ದ
ಧಾರಾಕಾರ ಹನಿಗಳು ಅಂಗಳದ ತುಂಬ
ಚಲ್ಲಿದ ಹನಿಗಳಲ್ಲಿ ಆಲಿಕಲ್ಲುಗಳ ಹುಡುಕಾಟ
ಬೆರಳು ತಾಕುವ ಮುನ್ನ ಕಲ್ಲು ಕರಗಿದ ನಿರಾಶೆ
ಬರಬಹುದು ಮತ್ತೆ ಉರುಳುರುಳಿ ಆಲಿಕಲ್ಲು
ಹಿಡಿದಿಡಬಹುದೆ? ಬಾಚಿ ತಬ್ಬಬಹುದೆ ಕ್ಷಣಿಕ ಖುಷಿಗೆ? [೨೯]

ಅಂಬೇಡ್ಕರ್ ರೂಪಿಸಿದ ಹೋರಾಟವೂ ಒಳಗೊಂಡಂತೆ ಈವರೆಗಿನ ಎಲ್ಲಾ ದಲಿತೋದ್ದಾರದ, ಅಸ್ಪೃಶ್ಯತಾ ನಿರ್ಮೂಲನೆಯ ಯೋಜನೆಗಳೂ ಸಹ ದಲಿತರ ಪಾಲಿಗೆ ನಿರಾಶೆಯನ್ನೇ ಉಂಟುಮಾಡಿವೆ ಎಂಬುದನ್ನು 'ಬೆರಳು ತಾಕುವ ಮುನ್ನ ಕಲ್ಲು ಕರಗಿದ ನಿರಾಶೆ' ಎಂಬ ಸಾಲು ಧ್ವನಿಸುತ್ತದೆ. ಹಾಗೆಯೇ ಇದನ್ನು ವ್ಯವಸ್ಥಿತವಾಗಿ ನಿರ್ವಹಿಸಿಕೊಂಡು ಬಂದಿರುವ ಮೇಲ್ಜಾತಿ ರಾಜಕಾರಣದ ತಂತ್ರಗಳನ್ನೂ ಈ ಕವಿತೆ ವಿಡಂಬನೆಗೆ ಒಳಪಡಿಸಿದೆ.

ದಲಿತ ಸಮುದಾಯದವರು ಇನ್ನೂ ಬಡತನ, ಹಸಿವು, ಅಜ್ಞಾನ ಅನಕ್ಷರತೆ ಜಾತಿ ಹಿಂಸೆ, ಧೈನ್ಯತೆಯ ಸ್ಥಿತಿಯಲ್ಲಿಯೇ ಬದುಕುತ್ತಿದ್ದರೂ ಸರ್ಕಾರಗಳು ಮಾತ್ರ ದಲಿತ ನಾಯಕನ ಪ್ರತಿಮೆಗಳನ್ನು ನಿಲ್ಲಿಸುವ ಕಾರ್ಯಗಳಲ್ಲಿ ತೊಡಗಿವೆ. ಅಂಬೇಡ್ಕರ್ ಪ್ರತಿಮೆಯ ಬಗೆಗೆ ಇರುವ ಕಾಳಜಿ, ಶ್ರದ್ಧೆಗಳು ಅಂಬೇಡ್ಕರ್ ಪ್ರತಿನಿಧಿಸುವ ಆ ವರ್ಗದವರ ಮೇಲೆ ಇಲ್ಲದಾಗಿರುವುದು ಶೋಚನೀಯ. ಅಂಬೇಡ್ಕರ್ ಕಂಡ ಕನಸುಗಳನ್ನು ನನಸಾಗಿಸುವ

ರಚನಾತ್ಮಕ ಕಾರ್ಯಕ್ರಮಗಳಿಗಿಂತ ಅವರ ಪ್ರತಿಮೆ ನಿಲ್ಲಿಸಿ ಅವರು ಪ್ರತಿನಿಧಿಸುವ ಸಮುದಾಯವನ್ನು ಓಲೈಸುವ ರಾಜಕಾರಣಗಳಲ್ಲಿ ಸರ್ಕಾರಗಳು ತೊಡಗಿವೆ. ಇದು ಹಲವು ಪ್ರಶ್ನೆ, ಅನುಮಾನ, ಗೊಂದಲಗಳಿಗೆ ಕಾರಣವಾಗಿದೆ. ಇದು ಅಂಬೇಡ್ಕರ್ ವಿಚಾರಗಳನ್ನು, ವ್ಯಕ್ತಿತ್ವವನ್ನು ಗೌರವಿಸುವ, ವಿಸ್ತರಿಸುವ ಕ್ರಮವೋ?, ಅವರ ವಿಚಾರಗಳನ್ನು ಪ್ರತಿಮೆಗೊಳಿಸುವ ಹುನ್ನಾರವೋ? ಅಥವಾ ನಮ್ಮ ರಾಜಕಾರಣ ತಲುಪಿರುವ ಅತ್ಯಂತ ದುರಂತ ಸ್ಥಿತಿಯ ಪ್ರತಿಬಿಂಬವೋ? ಈ ಹಲವು ಪ್ರಶ್ನೆಗಳು ಕಾಡುವುದು ಸಹಜ. ರಾಜಕಾರಣದ ನಡೆಯನ್ನು ವ್ಯಕ್ತಿಚಿತ್ರ ಕವಿತೆಗಳು ತೀವ್ರವಾಗಿ ವಿಡಂಬಿಸಿವೆ.

ಜಿ. ಎಸ್. ಉಬರಡ್ಕ ಅವರ 'ಅಂಬೇಡ್ಕರ್ ನೆನಪಿಗೆ' ಕವಿತೆ ಅಂಬೇಡ್ಕರ್ ಪ್ರತಿಮೆಗಳನ್ನು ಪ್ರತಿಷ್ಠಾಪಿಸುತ್ತಿರುವುದರ ಹಿಂದಿನ ಒಳರಾಜಕಾರಣಗಳನ್ನೂ, ಅದರ ಹಿಂದಿನ ದಲಿತರ ಓಲೈಕೆಯ ಹುನ್ನಾರಗಳನ್ನೂ ಬಯಲಿಗೆಳೆಯುತ್ತದೆ.

ಕಳೆ ತೊಳೆವ ಛಲತೊಟ್ಟ ಧೀಮಂತ
ದಲಿತರ ಸೂರ್ಯ ಉರಿದುರಿದು
ಕಪ್ಪಾಗಿ ನಿಂತನೇ ಹೀಗೆ? ಅಥವಾ
ಕಪ್ಪು ಜನರ ಬಾಳಪಲ್ಲವಿಗೆ ಇದು ಸಾಕ್ಷಿಯೇ ಹೇಗೆ? [೬೦]

ಅಂಬೇಡ್ಕರ್ 'ಕಪ್ಪು ಪ್ರತಿಮೆ' ಯಾವುದಕ್ಕೆ ಸಂಕೇತವಾಗಿದೆ ಎಂಬ ಮೂಲಭೂತವಾದ ಪ್ರಶ್ನೆಯನ್ನು ಕವಿತೆ ಎತ್ತುತ್ತಿದೆ. ಈ ದೇಶದ ಜಾತಿ ಹಿಂಸೆಯ ಉರಿಗೆ ಸಿಲುಕಿ ಉರಿದುರಿದು ಹೀಗೆ ಕಪ್ಪಾಗಿರಬಹುದೇ? ತನ್ನ ವಿಚಾರಗಳನ್ನು ಹೀಗೆ ವಿಧಾನಸೌಧದ 'ಹೊರಗೆ' ಪ್ರತಿಮೆಗೊಳಿಸಿರುವುದನ್ನು ಕಂಡು ಉರಿದುರಿದು ಕಪ್ಪಾದನೇ? ಅಥವಾ ಈ ದೇಶದ ಶೋಷಿತ ಸಮುದಾಯದ ಬಾಳಪಲ್ಲವಿಯ ಸಾಕ್ಷಿಯಾಗಿರಬಹುದೇ? ಇಂಥ ಹಲವು ಪ್ರಶ್ನೆಗಳನ್ನು ಅಂಬೇಡ್ಕರ್ ಪ್ರತಿಮೆಯ ರಾಜಕಾರಣದ ವಿರುದ್ಧ ಕವಿತೆ ಎತ್ತುತ್ತಿದೆ. ಅಸ್ಪೃಶ್ಯ ಸಮುದಾಯದ ಬದುಕಿನ ಸಾಕ್ಷಿರೂಪವಾದ ಈ ಪ್ರತಿಮೆ ತಂದುಕೊಡುವ ಜಾತಿ ಹಿಂಸೆಯ ಕ್ರೂರ ನೆನಪುಗಳು ಹಲವು. ಜಾತಿ ಹಿಂಸೆಯ ಹಸಿಹಸಿ ಉದಾರಣೆಗಳ ನಡುವೆಯೇ ಇಂಥ ಪ್ರತಿಮೆಗಳು ನಿರಂತರವಾಗಿ ತಲೆ ಎತ್ತಿ ನಿಲ್ಲುತ್ತಿವೆ. ಇಲ್ಲಿ ಹಿಂಸೆಗೊಳಗಾಗುತ್ತಿರುವ ಜೀವಗಳಿಗಿಂತ 'ಪ್ರತಿಮೆ' ಮುಖ್ಯವಾಗುತ್ತಿರುವುದನ್ನು ಕವಿತೆ ಪ್ರಶ್ನಿಸುತ್ತಿದೆ. ನಮ್ಮ ಸರ್ಕಾರಗಳ ಇಂಥ 'ದಲಿತ ಕಾಳಜಿ'ಗಳನ್ನು, ಅಂಬೇಡ್ಕರರ ಬಗೆಗಿರುವ ಗೌರವದ ಸಾಚಾತನವನ್ನು ತೀವ್ರವಾಗಿ ವಿಡಂಬಿಸುವ ಮೂಲಕ ಕ್ಷುದ್ರ ರಾಜಕಾರಣದ ಮುಖಗಳನ್ನು ಬೆತ್ತಲುಗೊಳಿಸುವ ಪ್ರಯತ್ನವನ್ನು ಕವಿತೆ ಮಾಡಿದೆ.

ತೇಲಿಬಂದವು ನೆನಪಲ್ಲಿ ಆಗ ಕ್ಯೂ ನಿಂತ ಪಾಶಗಳಂತೆ
ಕಿಲ್ವಿನ್ ಮಣಿ, ಬೆಲ್ಚಿ, ಪಿಪ್ರಾ ತಾರಸ್ ಬಿಷಾ ಹರಿಜನರ
ಬೀಭತ್ಸ ಕಗ್ಗೊಲೆಯ ರುಂಡ ಮುಂಡಗಳು :
ಬುದ್ಧ ಗಯಾ, ನಾರಾಯಣಪುರ, ಸಾಧುಪುರ, ದವೋಲಿ ಹರಿಜನರ
ತೊಡೆಮುರಿದ ತಲೆಯೊಡೆದ ಕೈಕಾಲು ಕಣ್ಣು ಕಳಕೊಂಡ ಹಾಹಾಕಾರ
ಭೀಕರಾಕೃತಿ ರಾಶಿ ರಾಶಿ
ಅಮಾನುಷ ಅತ್ಯಾಚಾರಗಳ ಗೋಳುಸುಟ್ಟ ಗುಡಿಸಲುಗಳ
ಸಾಲು ಸಾಲು
. . . . . . .
ಅಂಬೇಡ್ಕರ್ ನಾಮಫಲಕದ ಕೆಳಗೆ ಆಚೀಚೆ
ಉರುಳುತ್ತ ನರಳುವವರು

ಅಂಬೇಡ್ಕರ್ ಪ್ರತಿಮೆಗೆ ಇವರು ಸಾಕ್ಷಿಯೇ? ಅಥವಾ
ಇವರಿಗೆ ಅಂಬೇಡ್ಕರ್ ಪ್ರತಿಮೆ ಸಾಕ್ಷಿಯೇ? [೬೧]

ಅಂಬೇಡ್ಕರ್ ಪ್ರತಿಮೆ ನಿರ್ಮಾಣದ ಹಿಂದಿನ ರಾಜಕಾರಣಗಳನ್ನು ಮೇಲಿನ ಕವಿತೆ ವಿಡಂಬಿಸಿದೆ. ಈ ಪ್ರತಿಮೆ ಯಾವುದರ ಪ್ರತೀಕ? ದೇಶದ ಅಮಾನವೀಯ ಶೋಷಣೆಯ ಪರಂಪರೆಗೆ ಸಂಕೇತವೋ ಅಥವಾ ಅಸ್ಪೃಶ್ಯರಿಗೆ ಘನತೆಯ ಬದುಕನ್ನು ಕಲ್ಪಿಸಿದ ಸಾಧನೆಯ ಸಂಕೇತವೋ ಎಂಬ ಪ್ರಶ್ನೆಯ ಹಿಂದಿರುವ ವ್ಯಂಗ್ಯ, ವಿಷಾಧಗಳು ಅಂಬೇಡ್ಕರ್ ಪ್ರತಿಮೆಯನ್ನು ನೆಪವನ್ನಾಗಿಸಿಕೊಂಡು ನಡೆಸುತ್ತಿರುವ ಕೀಳು ರಾಜಕಾರಣವನ್ನು ಗುರಿಯಾಗಿರಿಸಿಕೊಂಡವುಗಳಾಗಿವೆ. ಅಂಬೇಡ್ಕರರ ಚಿಂತನೆ, ಕನಸುಗಳಿಗೆ ಇಲ್ಲದ ಬೆಲೆ ಅವರ ಪ್ರತಿಮೆಗೆ ದೊರಕುತ್ತಿದೆ. ಜೀವಗಳಿಗಿಂತ ನಿರ್ಜೀವ ಪ್ರತಿಮೆ ಮುಖ್ಯವಾಗುತ್ತಿದೆ. ದೇಶದಲ್ಲಿ ಅಸ್ಪೃಶ್ಯತಾಚರಣೆ, ಜಾತಿಶೋಷಣೆ– ಹಿಂಸೆಗಳ ಹಲವು ಕ್ರೂರ ಘಟನೆಗಳು ಹಸಿಹಸಿಯಾಗಿ ಇರುವ ಸಂದರ್ಭದಲ್ಲೇ, ರಾಜಕಾರಣ ಅಂಬೇಡ್ಕರ್ ಪ್ರತಿಮೆಯ ಹಿಂದೆ ಬಿದ್ದಿರುವುದು ದುರಂತದ ಸಂಗತಿಯಾಗಿದೆ. ಅಸ್ಪೃಶ್ಯರ ಉದ್ಧಾರದ ಆಶ್ವಾಸನೆಗಳು, ಕಾರ್ಯಯೋಜನೆಗಳು ಕೇವಲ ಮೋಸಗೊಳಿಸುವ ತಂತ್ರಗಳಾಗಿ ಬಳಕೆಯಾಗುತ್ತಿರುವುದನ್ನು ಕವಿತೆಗಳು ತೀವ್ರವಾಗಿ ವಿಡಂಬಿಸಿವೆ. ದಲಿತರ ವಿಶ್ವಾಸವನ್ನು ಗಳಿಸುವ ಸಲುವಾಗಿ ಅಂಬೇಡ್ಕರ್ ಪ್ರತಿಮೆ ನಿಲ್ಲಿಸುವ ಈ ಪ್ರಯತ್ನಗಳು ಮುಂದೊಂದು ದಿನ ಅಂಬೇಡ್ಕರರನ್ನು ದೇವರಾಗಿಸಿ ಆ ಸಮುದಾಯದಿಂದ ದೂರವಾಗಿಸಿದರೂ ಆಶ್ಚರ್ಯಪಡಬೇಕಾಗಿಲ್ಲ ಎಂಬ ಆತಂಕಗಳೂ ವ್ಯಕ್ತವಾಗಿವೆ. ರಾಜಕಾರಣದಲ್ಲಿ ಭರವಸೆಯನ್ನು ಕಳೆದುಕೊಂಡ ಅಸ್ಪೃಶ್ಯ ಸಮೂದಾಯ 'ಎಪ್ಪಾ ಅಂಬೇಡ್ಕರ ನೀ ಏನಾರಾ ಆಗು ದೇವರು ಮಾತ್ರ ಆಗಬೇಡ' ಎಂದು ಬೇಡಿಕೊಳ್ಳುವ ಸ್ಥಿತಿಗೆ ಇಳಿಯಬೇಕಾಗಿದೆ. ಸಾಮಾಜಿಕ ಪರಿವರ್ತನೆಗಾಗಿ ಹೋರಾಡಿದ ಎಲ್ಲಾ ಚಾರಿತ್ರಿಕ ವ್ಯಕ್ತಿತ್ವಗಳನ್ನೂ ದೈವೀಕರಿಸಿಬಿಡುವ ಈ ದೇಶದ ಸಾಮಾಜಿಕ, ರಾಜಕೀಯ ವ್ಯವಸ್ಥೆಯ ವಿಡಂಬನೆಯನ್ನು ಕವಿತೆಗಳು ಮಾಡಿದೆ. ಅಂಬೇಡ್ಕರರನ್ನು ದೇವರಾಗಿಸುವ ಪ್ರಯತ್ನಗಳು ಅವರನ್ನು ದಲಿತ ಸಮುದಾಯದಿಂದ ಬೇರ್ಪಡಿಸುವ ಹಾಗೂ ದಲಿತರನ್ನು ಅಜ್ಞಾನ, ಮೌಢ್ಯಗಳಲ್ಲಿಯೇ ಉಳಿಯುವ ಹಾಗೆ ಮಾಡುವ ಕಾರ್ಯತಂತ್ರಗಳಾಗಿ ಕಂಡುಬರುತ್ತವೆ. ಅವುಗಳ ಬಗೆಗೆ ಆತಂಕ, ವಿಷಾಧ, ನೋವು ವ್ಯಕ್ತವಾಗಿದೆ. ಈಗ ಅಂಬೇಡ್ಕರರನ್ನು ದೇವರಾಗಿಸಲು ಹೊರಟಿರುವ ರಾಜಕೀಯ ವ್ಯವಸ್ಥೆ ಅವರು ಬದುಕಿದ್ದಾಗ ಅವರ ಚಿಂತನೆ, ಹೋರಾಟ, ರಾಷ್ಟ್ರದ ಬಗೆಗಿನ ಕಳಕಳಿಯನ್ನು ಗುರುತಿಸಲೇ ಇಲ್ಲ. ಅವರು ಈ ದೇಶಕ್ಕೆ ಮಾಡಿದ ಮಹಾನ್ ಕಾರ್ಯಗಳನ್ನು ನೆನೆಯಲೇ ಇಲ್ಲ. ಅವರನ್ನು ಕೇವಲ ಅಸ್ಪೃಶ್ಯರ ನಾಯಕರೆಂದೇ ಬಿಂಬಿಸಲಾಯಿತು. ಅಸ್ಪೃಶ್ಯರನ್ನು ಹೊರತುಪಡಿಸಿ ಈ ದೇಶಕ್ಕೆ ಅವರ ಕೊಡುಗೆ ಏನು ಎಂಬುದನ್ನು ಸರಿಯಾಗಿ ತಲುಪಿಸುವ ಕೆಲಸವನ್ನು ಕೂಡ ಮಾಡಲಿಲ್ಲ. ಏಕೆಂದರೆ ರಾಜಕಾರಣದ ಅಧಿಕಾರ ಸ್ಥಾನದಲ್ಲಿದ್ದವರು ಮೇಲ್ವರ್ಗದವರೇ ಆಗಿದ್ದರು. ಹಾಗಾಗಿ ಅಂಬೇಡ್ಕರ್ ಅವರ ನಿಜವಾದ ಕಾಳಜಿ ಮತ್ತು ಚಿಂತನೆಗಳನ್ನು ಜನತೆಗೆ ತಲುಪಿಸುವಲ್ಲಿ ದೊಡ್ಡ ರಾಜಕಾರಣವೇ ನಡೆದಿದೆ. ಅದನ್ನು ಗುರುತಿಸುವ ಕೆಲಸವನ್ನು ವ್ಯಕ್ತಿಚಿತ್ರ ಕವಿತೆಗಳು ಮಾಡಿವೆ.

ನೀನು ಬದುಕಿದ್ದಾಗ
ಪದ್ಮಶ್ರೀ
ಪದ್ಮಭೂಷಣ
ಪದ್ಮ ವಿಭೂಷಣ ಸಿಗಲಿಲ್ಲ
ಈ ಪದ್ಮನಾಭರ ನಾಡಿನಲ್ಲಿ! . . . .
ಗೊತ್ತಿಲ್ಲ ಅವರಿಗೆ ನೀನು ಇತಿಹಾಸದಲ್ಲಿ
ನಾಗರ ಹೆಡೆಯ ಮೇಲಿರುವ ಮಾಣಿಕ್ಯರತ್ನವೆಂಬುದು. [೬೨]

ಒಬ್ಬ ರಾಷ್ಟ್ರನಾಯಕನ ನಿಜ ವ್ಯಕ್ತಿತ್ವವನ್ನು, ಸಾಧನೆಯನ್ನು ಗುರುತಿಸಿ ಗೌರವಿಸುವುದನ್ನು ಹೇಗೆ ಜಾತಿ ರಾಜಕಾರಣಗಳು ನಿಯಂತ್ರಿಸುತ್ತಿರುತ್ತವೆ ಎಂಬುದನ್ನು ಈ ಕವಿತೆ ವಿಮರ್ಶೆಗೆ ಒಡ್ಡುತ್ತಿದೆ.

ಅಂಬೇಡ್ಕರರನ್ನು ಪ್ರತಿಮೆಯಾಗಿಸುವ ರಾಜಕಾರಣವನ್ನು ವಿಡಂಬಿಸುತ್ತಾ ಈ ದೇಶದ ಎರಡು ವೈರುಧ್ಯಗಳನ್ನು ಕವಿತೆಗಳು ಬಿಚ್ಚಿಡುತ್ತವೆ. ಒಂದು ಕಡೆ ಅಂಬೇಡ್ಕರರನ್ನು ಅಸ್ಪೃಶ್ಯರ ನಾಯಕರೆಂದು ಪ್ರತಿಮೆ ಮಾಡಿ ನಿಲ್ಲಿಸಿ ಇನ್ನಿಲ್ಲದ ಗೌರವ ಸಮರ್ಪಣೆಗಳು ನಡೆಯುತ್ತಿದ್ದರೆ; ಅದೇ ಸಂದರ್ಭದಲ್ಲಿ ಅವರು ಪ್ರತಿನಿಧಿಸುವ ಸಮುದಾಯ ಅತ್ಯಂತ ಶೋಚನೀಯ ಸ್ಥಿತಿಯಲ್ಲಿ ಬದುಕುತ್ತಿದೆ ಎಂಬುದನ್ನು ತೆರೆದು ತೋರಿಸಿವೆ. ಜೀವವಿರುವ ಮನುಷ್ಯರಿಗಿಲ್ಲದ ಬೆಲೆ, ಗೌರವ ಕೇವಲ ಪ್ರತಿಮೆಗೆ ಸಲ್ಲುತ್ತಿರುವುದು, ಆ ಗೌರವವೂ ಕೇವಲ ತೋರಿಕೆಯ, ಓಲೈಕೆಯ ರಾಜಕಾರಣಗಳಿಂದ ಕೂಡಿರುವುದು ನಮ್ಮ ರಾಜಕೀಯ ವ್ಯವಸ್ಥೆ ತಲುಪಿರುವ ದುಸ್ಥಿತಿಯನ್ನು, ಅದರ ವಿಕೃತ ಮುಖಗಳನ್ನು ದರ್ಶಿಸುತ್ತದೆ.

ಬಾಬಾ ಸಾಹೇಬ
ರಾಜಧಾನಿಯಲ್ಲಿ ನಿಮ್ಮ ಪ್ರತಿಮೆ
ನಿಲ್ಲಿಸಿದ ಸುದ್ದಿ ಪತ್ರಿಕೆಯಲ್ಲಿ ಬಂದಾಗ
ಹಟ್ಟಿಯ ನಮ್ಮ ಪರತ
ಗೌಡರ ಕೊಟಿಗೆಯ ತಡಿಕೆಗೊರಗಿ
ಕೂಳು ಕಾಯುತ್ತಾ ಕುಂಡಿ ತುರಿಸಿಕೊಂಡು
ಕುಕ್ಕರು ಬಡಿದಿದ್ದ [೬೩]

ಇಲ್ಲಿನ ವೈರುಧ್ಯ ಸನ್ನಿವೇಶದ ಮುಖಾಮುಖಿಯನ್ನು ಗಮನಿಸಬೇಕು. ಒಂದು ಕಡೆ ಅಂಬೇಡ್ಕರ್ ಪ್ರತಿಮೆ ಅನಾವರಣ, ಮತ್ತೊಂದೆಡೆ ಜೀತ ಪದ್ಧತಿಯ ಆಚರಣೆ. ಹಸಿವು, ಬಡತನ, ಜಾತಿ ಶೋಷಣೆ, ಜೀತ ಮುಂತಾದವುಗಳಲ್ಲೇ ತಮ್ಮ ಬದುಕು ಸವೆಸುತ್ತಿರುವ ದಲಿತರ ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸುವ, ಜಾತಿ ನಿರ್ಮೂಲನೆ ಮಾಡುವುದರ ಬದಲಾಗಿ ಅಂಬೇಡ್ಕರ್ ಪ್ರತಿಮೆಯ ಹಿಂದೆ ಬಿದ್ದಿರುವ 'ಪ್ರತಿಮಾ ರಾಜಕಾರಣ'ವನ್ನು ಸಮರ್ಥವಾಗಿ ವಿಡಂಬಿಸಲಾಗಿದೆ. ಮುಂದುವರಿದು ಇದೇ ಸಂದರ್ಭದಲ್ಲಿ ಜಾತಿ ಹೆಸರಲ್ಲಿ ನಡೆಸಲಾಗುತ್ತಿರುವ ಹಿಂಸೆಯ ರಾಜಕಾರಣದ ಪರಾಕಾಷ್ಠೆಯನ್ನು ಈ ಕವಿತೆ ಅನಾವರಣಮಾಡುತ್ತಿದೆ.

ಪುಟ ತಿರುಗಿಸಿದೆ
ಬಿಹಾರದ ಕೊಂಪೆಯಲ್ಲಿ ಗುಂಡು ರಕ್ತ ಕಂಡು
ಬೆಂಕಿ ಕೆನ್ನಾಲಿಗೆಯ ಚಾಚಿತ್ತು. ದೆವ್ವ ಕುಣಿದಿತ್ತು
ಊರಾಚೆಯ ತಿಪ್ಪೆಯ ಕೊಚ್ಚೆಗಿಂತಲೂ
ಹೆಚ್ಚಿನ ಗುಚ್ಚು ಮೂಗಿಗಡರಿದಂತೆ . . .
ಮತ್ತೊಂದು ಪುಟ ತಿರುಗಿಸಿದೆ
ಮೀನಾಕ್ಷಿ ಪುರದಲ್ಲಿ ರಾಮರಹೀಮನಾಗಿದ್ದ
ಅನಾವರಣವಾಗಿತ್ತು.[೬೪]

ನಮ್ಮ ಜಾತಿ ರಾಜಕಾರಣದ ಹಲವು ಮುಖಗಳನ್ನೇ ಇದು ಅನಾವರಣ ಮಾಡುತ್ತಿದೆ. ನಮ್ಮ ರಾಜಕಾರಣದ ಹಲವು ವೈರುಧ್ಯಗಳನ್ನು ಬಿಚ್ಚಿಡುತ್ತಲೇ ವಿಮರ್ಶೆಗೆ ಒಳಪಡಿಸುತ್ತಿದೆ. ಒಂದೇ 'ವರ್ತಮಾನ ಪತ್ರಿಕೆ'ಯಲ್ಲಿ ಅನಾವರಣಗೊಳ್ಳುತ್ತಿರುವ ವ್ಯಕ್ತಿಪೂಜೆ ಮತ್ತು ವ್ಯಕ್ತಿವಧೆ ಎರಡನ್ನು ಈ ಕವಿತೆ ಎಡಂಬನೆಗೆ ಒಳಪಡಿಸಿದೆ.

ಅಂಬೇಡ್ಕರ್ ಪ್ರತಿಮೆ ಅನಾವರಣವೆಂಬ ಓಲೈಕೆಯ ರಾಜಕಾರಣ ಒಂದು ಕಡೆಯಾದರೆ ಆ ಪ್ರತಿಮೆ ಹೆಸರಲ್ಲಿ ನಡೆಯುವ ಭ್ರಷ್ಟಾಚಾರ, ಅನಾಚಾರ, ಸೋಗಲಾಡಿತನಗಳನ್ನು ಕೆಲವು ಕವಿತೆಗಳು ಬಯಲಿಗೆಳೆಯುವ ಪ್ರಯತ್ನವನ್ನೂ ಮಾಡಿವೆ. ಅಂಬೇಡ್ಕರ್ ಪ್ರತಿಮೆ ಅನಾವರಣದ ಹಿಂದೆ ಹಣ, ಅಧಿಕಾರ, ಪ್ರಚಾರದ ದೊಡ್ಡ

ದಂದೆಯೇ ಕೆಲಸಮಾಡುತ್ತಿರುವದನ್ನು ತೀವ್ರವಾಗಿ ವಿಡಂಬಿಸಲಾಗಿದೆ. ಅಂಬೇಡ್ಕರ್ ಪ್ರತಿಮೆ ನಿರ್ಮಾಣದ ಹಿಂದೆ ಬಿದ್ದಿರುವವರು ರಾಜಕೀಯಾಧಿಕಾರದ ದಾಹಿಗಳೇ ಆಗಿದ್ದಾರೆ. ಸುಳ್ಳು, ಮೋಸ, ಅನ್ಯಾಯ, ಭ್ರಷ್ಟತೆಯಲ್ಲಿ ತೊಡಗಿರುವವರೆ ಅಂಬೇಡ್ಕರ್ 'ಪ್ರತಿಮೆ ರಾಜಕಾರಣ'ದಲ್ಲಿ ಮುಳುಗಿದ್ದಾರೆ. ಸಮಕಾಲೀನ ರಾಜಕಾರಣದಲ್ಲಿ ವ್ಯಕ್ತವಾಗುತ್ತಿರುವ ದಲಿತ ಕಾಳಜಿ ಬಗೆಗೆ ವ್ಯಂಗ್ಯ ವಿಡಂಬನೆ ಕವಿತೆಗಳಲ್ಲಿ ವ್ಯಕ್ತವಾಗಿದೆ. ಸ್ವತಹ ಅಂಬೇಡ್ಕರ್ ಪ್ರತಿಮೆಯೇ ಭ್ರಷ್ಟರನ್ನು ಬೆರಳು ಮಾಡಿ ತೋರಿಸುವಂತೆ ಪ್ರತಿಮೆ ಕಾಣುತ್ತಿರುವುದು ರಾಜಕೀಯ ವಿಡಂಬನೆಯ ಸಂಕೇತದಂತಿದೆ..

ಕೈಯೆತ್ತಿ ತೋರುತ್ತಾನೆ ಬಾಬಾ ಸಾಹೇಬ ಬೆರಳು
ಕೊಳ್ಳೆ ಹೊಡೆವ ಮಂದಿ ಇಲ್ಲಿ ಕೂಡಿದ್ದಾವು
ಕಳ್ಳ ಸಾಗಣೆಯಲ್ಲಿ ಮಾಮೂಲಿ ಬಂದ ದುಡ್ಡು
ಮೂರ್ತಿ ಮಾಡಿದ ಮಾರಾಯಗೆ ನೀಡಿದಾರು
ಬಾಬಾ ಸಾಹೇಬನಿಗೆ ಹಾರುವ ಮುಖ್ಯನಿಂದ
ಹಾರಾ ಹಾಕಿಸಿ ಮಂತ್ರ ಹೇಳಿದಾರು [೬೫]

ಈ ದೇಶದಲ್ಲಿ ಅಂಬೇಡ್ಕರ್ ಚಿಂತನೆಗೆ ಏನೆಲ್ಲಾ ಪರಿಸ್ಥಿತಿ ಬಂದೊದಗಿದೆ, ರಾಜಕಾರಣ ಅಂಬೇಡ್ಕರರನ್ನು ಹೇಗೆಲ್ಲಾ ನಡೆಸಿಕೊಳ್ಳುತ್ತಿದೆ ಎಂಬುದರ ವಿಡಂಬನೆ ಇಲ್ಲಿದೆ. ಅಂಬೇಡ್ಕರ್ ಕನಸುಗಳಿಗೆ ವಿರುದ್ಧವಾಗಿ ಚಲಿಸುತ್ತಿರುವ ದೇಶದ ರಾಜಕಾರಣ ಮತ್ತು ಸಾಂಸ್ಕೃತಿಕ ಬದುಕಿನ ಅಪಾಯಕಾರಿ ನಡೆಯ ಬಗೆಗೆ ದಿಗ್ಭ್ರಮೆ ವ್ಯಕ್ತವಾಗುತ್ತಿದೆ. ಅಂಬೇಡ್ಕರ್ ಭ್ರಷ್ಟಾಚಾರ ಮತ್ತು ವೈದಿಕಶಾಹಿಯ ಪೋಷಣೆಗೆ ಬಳಕೆಯಾಗುತ್ತಿರುವುದು ವರ್ತಮಾನದ ಸಾಮಾಜಿಕ ಮತ್ತು ರಾಜಕೀಯ ದುರಂತವಾಗಿದೆ. ಅಂಬೇಡ್ಕರ್ ಪ್ರತಿಮೆ ಎಂದಿಗೂ ದಲಿತರ ಪ್ರತಿನಿಧಿಯಾಗಲು ಸಾಧ್ಯವಿಲ್ಲ. ಪ್ರತಿಮೆ ದಲಿತರ ನೋವಿಗೆ ಸ್ಪಂದಿಸಲಾರದು ಏಕೆಂದರೆ ಅದು ಪ್ರಚಾರಕ್ಕಾಗಿ, ಆಚರಣೆಗಾಗಿ ಹುಟ್ಟಿದ್ದು, ಅದು ದಲಿತರ ಮೇಲಿನ ಕಾಳಜಿಯಿಂದ ಹುಟ್ಟಿದ್ದಲ್ಲ. ಹಾಗಾಗಿ ಅದು 'ಅಂಬೇಡ್ಕರ್' ಅಲ್ಲ, ಕೇವಲ ಪ್ರತಿಮೆ. ಅದಕ್ಕೆ ಅಂಬೇಡ್ಕರರ ವ್ಯಕ್ತಿತ್ವವನ್ನು ದರ್ಶಿಸುವ ಶಕ್ತಿಯಿಲ್ಲ. ಹಾಗಾಗಿ ಪ್ರತಿಮೆಗಳು ಕಳಕಳಿಯಿಂದ ಯಾರನ್ನೂ ಮೇಲೆತ್ತಲಾರವು. ಏಕೆಂದರೆ ಅದು ಕೇವಲ ಪ್ರಚಾರ ರಾಜಕಾರಣದ ಕೂಸು. ಬರಗೂರು ರಾಮಚಂದ್ರಪ್ಪ ಅವರ 'ಕರಿಯ ಪ್ರತಿಮೆ' ಕವಿತೆ ಇದನ್ನು ವಿಡಂಬಿಸುತ್ತದೆ.

ಕರಿಯ ಮೈ ಕಲ್ಲಾಗಿ ನಿಂತಿರುವ
ಅಂಬೇಡ್ಕರ್ ಪ್ರತಿಮೆ ಕಂಡ ಕರಿಯ ಅಂಬೆಗಾಲಿಡುತ್ತ ಹತ್ತಿರ ಬಂದ
ತನಗೇ ಕೋಟು ಬೂಟು ಹಾಕಿ
ಕಲ್ಲು ನಿಲ್ಲಿಸಿದಂತೆ ಕಂಡು
ದೊಪ್ಪನೆ ಮೂರ್ಛೆಗೆ ಸಂದ !
ಅಂಬೇಡ್ಕರ್ ಕೈ ಕೆಳಗಿಳಿಯಲಿಲ್ಲ.
ಕರಿಯನ ಮೈ ಸವರಲಿಲ್ಲ!
ಮೂರ್ಛೆಯೊಂದಿಗೆ ಮಾತಾಡಲಿಲ್ಲ
ಯಾಂಕೆಂದರೆ ಅದು ಸರ್ಕಾರಿ ಪ್ರತಿಮೆ
ಆಚರಣೆಗೆ ಹುಟ್ಟಿದ ಹದಿನಾಲ್ಕರ ಒಲುಮೆ [೬೬]

ನಮ್ಮ ನಡುವಿದ್ದ ಚಾರಿತ್ರಿಕ ನಾಯಕರನ್ನು, ಅವರು ಪ್ರತಿನಿಧಿಸುವ ಸಮುದಾಯವನ್ನು ನಿರ್ಜೀವಗೊಳಿಸುವ ರಾಜಕೀಯ ಹುನ್ನಾರಗಳನ್ನು ಈ ಕವಿತೆ ತೆರೆದಿಡುತ್ತಿದೆ. ಅಂಬೇಡ್ಕರ್ ವ್ಯಕ್ತಿತ್ವ ಚಿಂತನೆಗಳನ್ನು ಜನಸಮುದಾಯದಿಂದ ದೂರವಾಗಿಸುವ ಮತ್ತು ಜನಸಾಮಾನ್ಯರ ಮುಗ್ಧತೆಯನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ರಾಜಕಾರಣದ ಹಲವು ತಂತ್ರಗಾರಿಕೆಗಳನ್ನು ಈ ಕವಿತೆ ವಿಮರ್ಶೆಗೆ ಒಳಪಡಿಸಿದೆ. ಜಾತಿ

ವಿನಾಶದ ರಚನಾತ್ಮಕ ಕಾರ್ಯಗಳಲ್ಲಿ, ರಾಜಕೀಯದ ಪ್ರತಿಯೊಂದು ನಡೆಯಲ್ಲಿ ಜೀವಂತವಾಗಿರಬೇಕಾಗಿದ್ದ ಅಂಬೇಡ್ಕರ್ ಕೇವಲ 'ಪ್ರತಿಮೆ'ಯಾಗಿ ಉಳಿಯುವಂತೆ ನೋಡಿಕೊಳ್ಳುತ್ತಿರುವ ರಾಜಕಾರಣವನ್ನು ಇದು ಬಯಲಿಗೆಳೆಯುತ್ತಿದೆ. ಅಂಬೇಡ್ಕರರನ್ನು ಕೇವಲ ಪ್ರತಿಮೆಯನ್ನಾಗಿಸುವ ರಾಜಕಾರಣದ ಇಂಥ ಪ್ರಯತ್ನಗಳ ಅಪಾಯಗಳು ಹಲವು. ಅವು ಅಂಬೇಡ್ಕರರನ್ನು ಒಂದು ಸೀಮಿತ ನೆಲೆಯಲ್ಲಿ ಬಂಧಿಸಿಡುವ ಪ್ರಯತ್ನಗಳಷ್ಟೇ ಅಲ್ಲದೆ ವ್ಯವಸ್ಥಿತವಾಗಿ ಇಲ್ಲವಾಗಿಸುವ ಪ್ರಯತ್ನಗಳೂ ಹೌದು. ಈ ರೀತಿಯ ಅನುಮಾನವೊಂದನ್ನು ಕವಿತೆಗಳು ವ್ಯಕ್ತಪಡಿಸಿವೆ.

ಅಂತರಂಗದಲ್ಲಿ ನಿನ್ನ ಅಸ್ಪೃಶ್ಯನನ್ನಾಗಿಸಿ
ಬಹಿರಂಗದಲ್ಲಿ ರಂಗು ರಂಗಿನ
ಕಲ್ಲು ಮೂರುತಿ ಮಾಡಿಸಿ
ನಿನ್ನ ಬಾಹುಗಳಲಿ ಬಂಧಿಸಿ ಪುಡಿಪುಡಿ ಮಾಡುವ
ಧೃತರಾಷ್ಟ್ರರೆನಿತಿದ್ದಾರೆ ! [೬೭]

ಅಂಬೇಡ್ಕರ್ ಮೇಲಿನ ಗೌರವ ಪ್ರದರ್ಶನಗಳ ಹಿಂದಿನ ಸಾಚಾತನಗಳನ್ನೇ ಪ್ರಶ್ನಿಸುವ ಈ ಕವಿತೆ ಅದರ ಅಪಾಯಗಳನ್ನೂ ಸೂಚಿಸುತ್ತದೆ. ಅಂಬೇಡ್ಕರರನ್ನು ಅಂತರಂಗದಲ್ಲಿ ಅಸ್ಪೃಶ್ಯರನ್ನಾಗಿಯೇ ಇರಿಸಿಕೊಂಡು ಬಹಿರಂಗದಲ್ಲಿ ಪೂಜಿಸುತ್ತಿರುವುದರ ಹಿಂದಿರುವ ಹುನ್ನಾರಗಳನ್ನು ಅರ್ಥಮಾಡಿಕೊಳ್ಳುವ ಅಗತ್ಯದ ಬಗೆಗೆ ಕವಿತೆ ಗಮನಸೆಳೆಯುತ್ತದೆ. ಮುಂದುವರಿದು; ಅಂಬೇಡ್ಕರ್ ಪ್ರತಿಮೆ ನಿರ್ಮಾಣ ಮತ್ತು ವ್ಯಕ್ತಿಪೂಜೆಯಂತ ಪ್ರಯತ್ನಗಳು ಮುಂದೊಂದು ದಿನ ಅವರನ್ನೂ ಅವತಾರ ಪುರುಷರ ಸಾಲಿಗೆ ಸೇರಿಸಿ, ಅವರನ್ನೂ ವೈದಿಕೀಕರಣಗೊಳಿಸಿಬಿಡಬಹುದಾದ, ಅವರ ಚಿಂತನೆಗಳನ್ನು ಸಮಾಧಿಮಾಡಬಹುದಾದ ಸಾಧ್ಯತೆಗಳ ಬಗೆಗೆ ಕವಿತೆ ಗಮನ ಸೆಳೆಯುತ್ತದೆ. ಅಂಬೇಡ್ಕರರನ್ನು ದಲಿತರಿಂದ ಬೇರ್ಪಡಿಸುವ ಹಾಗೂ ದಲಿತರ ಬದುಕಿನ ಚಹರೆಗಳ ಮೇಲೆ ಆಕ್ರಮಣ ಮಾಡಬಹುದಾದ ಅಪಾಯಗಳನ್ನು ಬಹಳ ಸೂಕ್ಷ್ಮವಾಗಿ ಕವಿತೆ ಪ್ರಸ್ತಾಪಿಸಿದೆ.

ಸಮಕಾಲೀನ ರಾಜಕಾರಣದ ಆಕ್ರಮಣಕಾರಿ ಮತ್ತು ರಾಕ್ಷಸಿ ನಡವಳಿಕೆಗಳನ್ನು ಅಧಿಕಾರದಾಹಿ ಪ್ರವೃತ್ತಿಗಳನ್ನು ಎಲ್. ಹನುಮಂತಯ್ಯ ಅವರ 'ಬಾಬಾ ಸಾಹೇಬ್' ಕವಿತೆ ವಿಡಂಬನೆಗೆ ಒಳಪಡಿಸಿದೆ. ಅಂಬೇಡ್ಕರ್ ರಾಜಕಾರಣದ ದಾಳವಾಗಿ ಬಳಕೆಯಾಗುತ್ತಿರುವುದನ್ನು ಈ ಕವಿತೆ ವಿಡಂಬಿಸಿದೆ. ರಾಜಕಾರಣಕ್ಕೆ ಎಂತವರನ್ನೂ ತನ್ನ ಸ್ವಾರ್ಥಕ್ಕಾಗಿ, ಅಧಿಕಾರ ಪೋಷಣೆಗಾಗಿ ಬಳಸಿಕೊಳ್ಳುವ ವಿಚಿತ್ರ ಶಕ್ತಿಯಿರುವುದನ್ನು ಗುರುತಿಸುತ್ತದೆ. ರಾಜಕಾರಣದ ಮುಖವಾಡಗಳ ನಡುವೆ ಅಂಬೇಡ್ಕರ್ ಮುಖ ಕಾಣೆಯಾಗಿರುವುದರ ಬಗೆಗೆ ತೀವ್ರ ವಿಷಾಧವನ್ನು ವ್ಯಕ್ತಪಡಿಸುತ್ತಲೇ ಆ ಬಗೆಯ ರಾಜಕಾರಣಗಳನ್ನು ಪ್ರತಿರೋಧಿಸುವ ಕೆಲಸವನ್ನು ಮಾಡಿದೆ.

ನಿನ್ನ ಹೆಸರಿನ ಸುತ್ತ
ನೂರಾರು ಕುರ್ಚಿಗಳು
ಎಲ್ಲೆಲ್ಲಿ ಹುಡುಕಿದರು
ನಿನ್ನ ಮುಖವಿಲ್ಲ.

ಮುಖವಿಲ್ಲದವರೆಲ್ಲ
ಮುಖವಾಡ ಧರಿಸಿಹರು
ನಿನ್ನ ಕನಸಿನ ಸುತ್ತ
ಗೋಪುರಗಳ ಕಟ್ಟಿಹರು [೬೮]

ಕುರ್ಚಿ ರಾಜಕಾರಣ ಅಂಬೇಡ್ಕರ್ ಮತ್ತು ದಲಿತರನ್ನು ಬಳಸಿಕೊಳ್ಳುತ್ತಿರುವುದರ ವಿಡಂಬನೆ ಇಲ್ಲಿದೆ. ಅಂಬೇಡ್ಕರ್ ಮತ್ತು ದಲಿತರ ಹೆಸರು ಹೇಳಿಕೊಂಡು ಅಧಿಕಾರ ಹಿಡಿದವರೇ ಅವರನ್ನು ಮರೆತು ವ್ಯವಸ್ಥೆಯ ಭಾಗವಾಗಿದ್ದಾರೆ. ಭರವಸೆಗಳನ್ನು ಕಳೆದುಕೊಂಡ ದಲಿತ ಸಮುದಾಯ ನಿಜವಾದ ಅಂಬೇಡ್ಕರ್‌ಗಾಗಿ, ಆತ ಕಂಡ ಕನಸಿಗಾಗಿ ನಿರೀಕ್ಷಿಸುತ್ತಲೇ ಇರಬೇಕಾಗಿದೆ. ಅಂಬೇಡ್ಕರ್ ಹೆಸರಿನಲ್ಲಿ ಅಧಿಕಾರಗಿಟ್ಟಿಸಿಕೊಂಡು ಬಡವರು, ದಲಿತರ ವಿರೋಧಿ ಆಡಳಿತವನ್ನು ನಡೆಸುವ ರಾಜಕಾರಣದ ವಿರುದ್ಧ ಈ ಕವಿತೆ ಧ್ವನಿ ಎತ್ತುತ್ತಿದೆ. ಅಂಬೇಡ್ಕರ್ ಮತ್ತು ದಲಿತರು ರಾಜಕಾರಣದ ಸರಕುಗಳಾಗುತ್ತಿರುವುದು ಈ ದೇಶದ ಅಪಾಯಕಾರಿ ರಾಜಕಾರಣದ ನಡೆಯನ್ನು ಸೂಚಿಸುತ್ತದೆ.

ನಿಮ್ಮ ನಡೆ ನುಡಿ ವಿಚಾರ
ಗಾಂಭೀರ್ಯಗಳ ಉದಾಹರಣೆ ಇತಿಹಾಸ ಸಂಪುಟದಲ್ಲಿ
ಮಾಸತೊಡಗಿದೆ. ನಿಮ್ಮ ಹೆಸರಲ್ಲಿ ಕೊಳಲನ್ನೂಡೆದು
ಅಪಸ್ವರದ ತಾರಕಕ್ಕೇರಿ ಚೀರುತ್ತಲಿರುವವರು
ಸ್ವತಃ ವಿಗ್ರಹವಾಗಲಿಷ್ಟಪಡದಂಥವರು
ನಿಮ್ಮನ್ನೇ ಕಲ್ಲಾಗಿ ಮಾಡಿ ವಿಗ್ರಹ ಕೆತ್ತಿ ಗುಡಿಕಟ್ಟಿ
ಬುದ್ಧನನ್ನೆಂತೋ ಗಾಂಧಿಯನ್ನೆಂತೋ ಅಂತೆಯೇ
ಒಳಗಿಟ್ಟು ಮುಗಿಸುತ್ತಾರೆ ಕತ್ತಲಲ್ಲಿ[೭೯]

ರಾಜಕಾರಣದ ವಿಕೃತ ಮುಖಗಳ ದರ್ಶನ ಇಲ್ಲಿದೆ. ಅಂಬೇಡ್ಕರ್‌ರನ್ನು ಸಮಕಾಲೀನ ಚರಿತ್ರೆಯಲ್ಲಿ ಇಲ್ಲವಾಗಿಸುವ ಪ್ರಯತ್ನದ ಜೊತೆಗೇ ಅವರ ಹೆಸರಲ್ಲಿ ಇಲ್ಲಿನ ಸಾಮಾಜಿಕ ಪರಿಸರವನ್ನು ಒಡೆಯುವ ಪ್ರಯತ್ನಗಳೂ ನಡೆಯುತ್ತಿವೆ. ಈ ಮಹಾತ್ಮರ ವಿಚಾರಗಳ ಬೆಳಕಿಲ್ಲದ ಈ ದೇಶದ ರಾಜಕಾರಣ ಸಾಗುತ್ತಿರುವ ಬಗೆಗೆ ವಿಷಾದ ವ್ಯಕ್ತವಾಗಿದೆ.

ತೊಳಲಾಡುವ ನೆಳಲಬಸಿರೊಳಗಿಂದ
ಬಲಭೀಮ ಅಂಬೇಗಾಲಿಟ್ಟು ಹೊರಬರುವಾಗ
ಒಮ್ಮೊಮ್ಮೆ ಭೋಧಿವೃಕ್ಷಕ್ಕೆ ಬುದ್ಧನನ್ನು ನೇತಾಡಿಸಿದ
ಈ ದೇಶದ ನಿನ್ನೆಗಳ ನೆನಪಾಗುತ್ತದೆ.[೨೦]

ಸಮಾನತೆ, ಸಹಬಾಳ್ವೆ, ಸೋದರತೆ, ಸಮೃದ್ಧತೆ, ವೈಚಾರಿಕತೆ ಈ ದೇಶದ ನೆಲಕ್ಕೆ ಒಗ್ಗುವುದೆಲ್ಲವೇನೋ? ಇವುಗಳನ್ನು ಪ್ರತಿಪಾದಿಸುತ್ತಾ, ಈ ನೆಲದ ಬದುಕನ್ನು ಬದಲಾಯಿಸ ಹೊರಟವರನ್ನೆಲ್ಲಾ ಚರಿತ್ರೆ ತಿರಸ್ಕರಿಸುತ್ತಾ ಬಂದಿದೆ. ಇಲ್ಲವಾದಲ್ಲಿ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಬದುಕಿದ, ಹೋರಾಡಿದ ಈ ನಾಡು ಹೇಗಿರಬಹುದಿತ್ತು? ಯಾವ ವೈಚಾರಿಕ ಸಂದೇಶಗಳನ್ನು ಜಗತ್ತಿಗೆ ನೀಡಬಹುದಿತ್ತು? ಎಂಬುದನ್ನು ಊಹಿಸಿಕೊಳ್ಳಬಹುದು. ಆದರೆ ಈ ದೇಶದ ನಿನ್ನೆಗಳನ್ನು ಎಲ್ಲವನ್ನೂ ಅಳಿಸಿವೆ, ತಿರುಚಿವೆ, ಕತ್ತಲದಾರಿಯನ್ನೇ ಆಯ್ಕೆ ಮಾಡಿಕೊಂಡು ಮುಂದುವರೆದಿವೆ. ಇದಕ್ಕೆ ಮೇಲ್ಜಾತಿಯ ರಾಜಕಾರಣ ಎಷ್ಟು ಕಾರಣವೋ ಅಷ್ಟೇ ಜನರ ಮೌಢ್ಯಗಳೂ, ಅಜ್ಞಾನಗಳೂ ಕಾರಣ ಎಂಬುದನ್ನು ಕವಿತೆಗಳು ಚರ್ಚಿಸಿವೆ. ಬುದ್ಧ, ಬಸವ ಗಾಂಧಿ, ಅಂಬೇಡ್ಕರರನ್ನು ದೈವೀಕರಿಸುವ ರಾಜಕಾರಣಗಳ ಬಗೆಗಿನ ನಮ್ಮ ಎಚ್ಚರಗೇಡಿತನಗಳೇ ಇಂದಿಗೂ ಅಸಮಾನತೆ, ಹಿಂಸೆ, ಶೋಷಣೆ, ಅಸ್ಪೃಶ್ಯತೆಗಳು ಜೀವಂತವಾಗಿರಲು ಕಾರಣ. ಎಲ್ಲಿಯವರೆಗೆ ಇವರ ವಿಚಾರಗಳು ಬಡವರ, ಶೋಷಿತರ ಬದುಕಿನ ಭಾಗವಾಗಿರುವುದಿಲ್ಲವೋ, ಎಲ್ಲಿಯವರೆಗೆ ಜನತೆ ಎಚ್ಚರಗೊಳ್ಳುವುದಿಲ್ಲವೋ ಅಲ್ಲಿಯ ವರೆಗೆ ಯಾರೇ ಮಹಾತ್ಮರು ಇಲ್ಲಿ ಜನಿಸಿ ಬಂದರೂ ಅವರನ್ನು ಮೂರ್ತಿಯಾಗಿಸಿ, ದೇವರಾಗಿಸಿ ಅವತಾರಗಳ ಪುರಾಣಗಳನ್ನೇ ಹೆಣೆದುಬಿಡುತ್ತಾರೆ. ಇದು ಜನಸಾಮಾನ್ಯರಿಂದ ಮಹಾನ್ ವ್ಯಕ್ತಿಗಳನ್ನು ದೂರವಾಗಿಸುವ ಪ್ರಯತ್ನ. ಜನರನ್ನು ಅಜ್ಞಾನದಲ್ಲಿಟ್ಟು ಶೋಷಿಸುವ ತಂತ್ರಗಾರಿಕೆಗಳು. ಬುದ್ಧ-ಬಸವನಿಗೆ ಒದಗಿದ ಗತಿ, ಗಾಂಧಿ-

ಅಂಬೇಡ್ಕರರಿಗೂ ಒದಗಿರುವುದರ ಬಗೆಗೆ ಕವಿತೆಗಳು ಆತಂಕ ವ್ಯಕ್ತಪಡಿಸಿವೆ. ಸಾಮಾಜಿಕ ಬದಲಾವಣೆಗಾಗಿ ಹೋರಾಡಿದ ಎಲ್ಲಾ ನಾಯಕರುಗಳನ್ನೂ 'ಕೃಷ್ಣ ಕಿರೀಟದ ಪುಚ್ಚ'ವಾಗಿಸುವ ಈ ದೇಶದ ಮನಸ್ಥಿತಿಗಳನ್ನು ವಿಡಂಬಿಸಲಾಗಿದೆ.

ಹೀಗೆ ಅಂಬೇಡ್ಕರ್ ಕುರಿತ ಕವಿತೆಗಳು ಸಮಕಾಲೀನ ರಾಜಕಾರಣದ ಹಲವು ಅಪಾಯಕಾರಿ ನಡೆಗಳನ್ನು ಅಂಬೇಡ್ಕರ್ ವ್ಯಕಿತ್ವದೊಂದಿಗೆ ಮುಖಾಮುಖಿಯಾಗಿಸಿ ಅರ್ಥಮಾಡಿಕೊಳ್ಳುವ ಪ್ರಯತ್ನಮಾಡಿವೆ. ಪ್ರತಿಭಾಶಾಲಿ ಚಿಂತಕ, ಹೋರಾಟಗಾರ ಹಾಗೂ ಮಾನವೀಯ ಅಂತಃಕರಣವುಳ್ಳ ಅಂಬೇಡ್ಕರ್ ವಿಚಾರಗಳು ಹಾಗೂ ವ್ಯಕ್ತಿತ್ವ ಇಂದು ಬೇಡವಾಗಿವೆ. ಅಂಬೇಡ್ಕರರನ್ನು ಇಂದು ಕೇವಲ ಅಧಿಕಾರ ಮತ್ತು ಸವಲತ್ತುಗಳನ್ನು ಪಡೆದುಕೊಳ್ಳುವ ರಾಜಕಾರಣಕ್ಕೆ ಮಾತ್ರ ಬಳಸಿಕೊಳ್ಳಲಾಗುತ್ತಿದೆ. ಅಂಬೇಡ್ಕರ್ ಮತ್ತು ದಲಿತರು ಕೇವಲ ರಾಜಕೀಯ ದಾಳಗಳಾಗಿ ಬಳಕೆಯಾಗುತ್ತಿರುವ ದುರಂತವನ್ನು ಹಿಡಿದಿಡುತ್ತಲೇ ಸಮಕಾಲೀನ ಚರಿತ್ರೆಯಲ್ಲಿ ಇವರಿಬ್ಬರನ್ನೂ ಇಲ್ಲವಾಗಿಸುವ ಪ್ರಯತ್ನಗಳು ನಡೆಯುತ್ತಿವೆ ಎಂಬುದನ್ನು ಕವಿತೆಗಳು ಗಂಭೀರವಾಗಿ ಚರ್ಚಿಸಿವೆ. ಅಂಬೇಡ್ಕರ್ ವ್ಯಕ್ತಿತ್ವದ ನೈತಿಕ ಮತ್ತು ವೈಚಾರಿಕ ಶಕ್ತಿಯೊಂದಿಗೆ ಸಮಕಾಲೀನ ರಾಜಕಾರಣದ ಹುನ್ನಾರಗಳನ್ನು ಮುಖಾಮುಖಿಯಾಗುವ ಪ್ರಯತ್ನ ಮಾಡಿವೆ. ಆ ಮೂಲಕ ಈ ನೆಲದ ಜಾತಿ ರಾಜಕಾರಣದ ಹಲವು ನೆಲೆಗಳನ್ನು, ಅದರ ಇತಿಹಾಸವನ್ನು ಹಿಡಿದಿಡುತ್ತಲೆ ದಲಿತರಿಗೆ ಮುಂದಿನ ರಾಜಕಾರಣದ ದಾರಿಯಾವುದಾಗಬೇಕು ಎಂಬುದರ ಬಗೆಗೂ ಗಂಭೀರವಾದ ಆಲೋಚನೆಗಳು ನಡೆದಿವೆ. ತಮ್ಮ ನಾಯಕನೊಂದಿಗೆ ಸಮಕಾಲೀನ ರಾಜಕಾರಣವನ್ನು ಎದುರಾಗಿಸಿ ತಮ್ಮನ್ನೂ ತಾವು ಬದುಕುತ್ತಿರುವ ವ್ಯವಸ್ಥೆಯನ್ನೂ ಪ್ರಾಮಾಣಿಕವಾಗಿ ನೋಡಿಕೊಳ್ಳುವ, ಅದರ ಹುಳುಕುಗಳಿಗೆ ಪರಿಹಾರಗಳನ್ನು ಹುಡುಕಬಹುದಾದ ಇಂಥ ಪ್ರಯತ್ನಗಳು ಸಮಕಾಲೀನ ಸಾಂಸ್ಕೃತಿಕ ಚರಿತ್ರೆಯ ವಿಶಿಷ್ಟ ರಚನಾ ಮಾದರಿಗಳಾಗಿ ಕಂಡುಬರುತ್ತವೆ. ಒಂದು ಕಡೆ ರಾಜಕಾರಣ ತಮ್ಮ ನಾಯಕನನ್ನು 'ಪ್ರತಿಮೆ'ಗೊಳಿಸಲು ಪ್ರಯತ್ನಿಸುತ್ತಿದ್ದರೆ ಈ ಕವಿತೆಗಳು ಅದೇ ಸಂದರ್ಭದಲ್ಲಿ ದೊಡ್ಡ ಪ್ರತಿರೋಧ ಒಡ್ಡುವ ಮೂಲಕ ತಮ್ಮ ನಾಯಕನ ವ್ಯಕ್ತಿತ್ವವನ್ನು ಮುನ್ನೆಲೆಗೆ ತರುವ ಪ್ರಯತ್ನ ಮಾಡುತ್ತಿವೆ.

### ೪. ಸಮಾನತೆಯ ಕನಸುಗಾರಿಕೆಯ ಹಿಂದಿನ ಕಣ್ಣಾಗಿ

ಸಮಾನತೆ ಎಂಬುದು ಒಂದು ದೊಡ್ಡ ಆದರ್ಶ. ಅದೊಂದು ಸುಂದರವಾದ ಕನಸು. ಮಾನವ ತನ್ನ ನಾಗರೀಕತೆಯುದ್ದಕ್ಕೂ ಇಂಥದೊಂದು ಕನಸು ಕಾಣುತ್ತಾ ಬಂದಿದ್ದಾನೆ. ಅನೇಕ ಮಹಾನ್ ಚೇತನಗಳು ಮಾನವ ನಾಗರೀಕತೆಯುದ್ದಕ್ಕೂ ಸಮಾನತೆಯನ್ನು ಸಾಧಿಸುವುದಕ್ಕಾಗಿ ಚಿಂತಿಸಿದ್ದಾರೆ, ಹೋರಾಡಿದ್ದಾರೆ, ಕನಸುಕಂಡಿದ್ದಾರೆ. ಆದರೆ ಮನುಷ್ಯ ನಾಗರೀಕತೆಯ ಯಾವ ಕಾಲಘಟ್ಟದಲ್ಲಿಯೂ ಇದು ಸಿದ್ಧಿಸಿರುವುದು ಕಂಡುಬಂದ ಉದಾಹರಣೆಗಳಿಲ್ಲ. ಹಾಗೆಂದ ಮಾತ್ರಕ್ಕೆ ಆ ನಿಟ್ಟಿನಲ್ಲಿ ಪ್ರಯತ್ನಗಳೇನೂ ನಿಂತಿಲ್ಲ. ಅಸಮಾನತೆಗೆ ಕಾರಣಗಳು ಹಲವು. ಅಸಮಾನತೆಯನ್ನು ಸೃಷ್ಟಿಸುತ್ತಿರುವ ಹಾಗೂ ನಿಯಂತ್ರಿಸುತ್ತಿರುವ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ವ್ಯವಸ್ಥೆಯ ಹಿಂದಿನ ಶಕ್ತಿಗಳು ಹಲವು. ಅವುಗಳ ಕಾರ್ಯಮಾದರಿಗಳೂ ಹಲವು. ಭಾರತದಂತಹ ಸಂಕೀರ್ಣ ಸಮಾಜದಲ್ಲಿ ಜಾತಿ, ಲಿಂಗ, ಅಧಿಕಾರ, ಸಂಪತ್ತು, ಧರ್ಮ, ವಿದ್ಯೆ, ಭಾಷೆ, ಮುಂತಾದವು ಅಸಮಾನತೆಯನ್ನು ಪೋಷಿಸುತ್ತಿರುವ ಬಹುಮುಖ್ಯ ಶಕ್ತಿಕೇಂದ್ರಗಳಾಗಿವೆ. ಇವು ಕೇವಲ ಭೌತಿಕ

ನೆಲೆಯಲ್ಲಿ ಮಾತ್ರ ಅಸಮಾನತೆಯನ್ನುಂಟು ಮಾಡದೆ ಮಾನಸಿಕ ಸ್ಥರಗಳಿಗೂ, ಬದುಕಿನ ಎಲ್ಲಾ ಆಯಾಮಗಳಿಗೂ ವಿಸ್ತರಣೆಯಾಗಿರುವಂತದ್ದಾಗಿದೆ. ಅಸಮಾನತೆಯ ಕಾರ್ಯಮಾದರಿಗಳ ಉದ್ದೇಶ ಆಳುವುದು, ಶೋಷಿಸುವುದೇ ಆಗಿದೆ. ಇನ್ನೂ ಮುಂದುವರೆದು ಕ್ರೌರ್ಯ ಎಸಗುವುದು ಎಂದೂ ಕರೆಯಬಹುದು. ಅಸಮಾನ ಸಾಂಸ್ಕೃತಿಕ ವಾತಾವರಣವೊಂದು ಹಲವು ಹಿಂಸೆ-ದೌರ್ಜನ್ಯ, ಸಂಘರ್ಷಗಳಿಗೆ ದಾರಿಮಾಡಿಕೊಡುತ್ತದೆ. ಇಲ್ಲಿ ಶೋಷಣೆಗೆ ಒಳಗಾದವರ ಬದುಕು ಅಸಹನೀಯ ಮತ್ತು ಅಮಾನವೀಯವಾಗಿರುತ್ತದೆ. ಸಾಮಾಜಿಕ ಮತ್ತು ಮಾನವೀಯ ಸಂಬಂಧಗಳು ಕಡಿದುಬಿದ್ದಿರುತ್ತವೆ. ಇಂತಹ ಅಸಮಾನ ಸಂಕೀರ್ಣ ಸಾಂಸ್ಕೃತಿಕ ವಾತಾವರಣವನ್ನು ಪರಿವರ್ತಿಸಲು ಆ ಪರಿಸರದಿಂದಲೇ ಹುಟ್ಟಬಂದ ಮಹಾನ್ ನಾಯಕರುಗಳು ಪ್ರಯತ್ನಿಸಿದ್ದಾರೆ. ಸ್ವತಹ ತಾವು ಅನುಭವಿಸಿದ, ತನ್ನ ಕಣ್ಣೆದುರಿಗೆ ಕಾಣುತ್ತಿರುವ ಅಮಾನವೀಯತೆಯನ್ನು, ಹಿಂಸೆ, ದೌರ್ಜನ್ಯಗಳನ್ನು ಕಂಡು, ಅವುಗಳಿಂದ ಜನರನ್ನು ಮುಕ್ತರನ್ನಾಗಿ ಮಾಡಲು ಹೋರಾಡಿದ್ದಾರೆ. ಅಸಮಾನತೆಯ ಮೂಲಕಾರಣಗಳನ್ನು, ಅದರ ನಿಯಂತ್ರಕ ಶಕ್ತಿಗಳನ್ನೂ, ಅದರ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳಲು ಗಂಭೀರವಾಗಿ ಚಿಂತಿಸಿದ್ದಾರೆ. ಅವುಗಳನ್ನು ತೊಡೆದು ಹಾಕಲು ಕ್ರಾಂತಿಕಾರಿ ಹೋರಾಟಗಳನ್ನೇ ಮಾಡಿದ್ದಾರೆ. ಅಲ್ಲಲ್ಲಿ ತಾತ್ಕಾಲಿಕ ನೆಮ್ಮದಿಯನ್ನೂ, ಪರಿಹಾರಗಳನ್ನೂ ನೀಡಿದ್ದಾರೆ. ಭಾರತದಲ್ಲಿ ಬುದ್ಧನಿಂದ ಆರಂಭವಾದ ಈ ಅಸಮಾನತೆಯ ವಿರುದ್ಧದ ಹೋರಾಟ ಅಂಬೇಡ್ಕರರವರೆಗೂ ಮುಂದುವರೆದುಕೊಂಡು ಬಂದಿರುವುದನ್ನು ಕಾಣಬಹುದು. ಇಷ್ಟು ಶತಮಾನಗಳಷ್ಟು ದೀರ್ಘವಾದ ಈ ಹೋರಾಟಗಳ ನಡುವೆ ಅಸಮಾನತೆ ಎಂಬುದು ಜೀವಂತವಾಗಿದೆ. ಇದು ಅಸಮಾನತೆಯನ್ನು ಸೃಷ್ಟಿಸುತ್ತಿರುವ ಶಕ್ತಿಗಳ ಪ್ರಾಬಲ್ಯವನ್ನು, ಅದರ ನಿರಂತರ ಅಸ್ತಿತ್ವವನ್ನು ತಿಳಿಸುತ್ತದೆ.

ಸಮಾನತೆ ಎಂಬುದು ಹಾಗೆ ಸುಮ್ಮನೆ ಸಿಗುವಂತದ್ದಲ್ಲ. ಅದು ನಿರಂತರ ಹೋರಾಟ, ತ್ಯಾಗ, ಬಲಿದಾನಗಳಿಂದ ದೊರಕುವಂತದ್ದು. ಹೀಗೆ ದೊರೆತರೂ ಅದನ್ನು ಅನುಭವಿಸಲು ಹೋರಾಡಿದವರು ಇರುತ್ತಾರೆ ಎಂದು ಹೇಳಲು ಬರುವುದಿಲ್ಲ. ಅದು ಪೂರ್ಣ ಪ್ರಮಾಣದಲ್ಲಿ ದೊರಕುವಂಥದ್ದೂ ಅಲ್ಲ. ಒಮ್ಮೆ ದೊರಕಿದ ಮೇಲೆ ಸ್ಥಿರವಾಗಿ ನಿಲ್ಲುವಂಥದ್ದೂ ಅಲ್ಲ. ಇದನ್ನು ಚರಿತ್ರೆ ನಮಗೆ ಮನದಟ್ಟು ಮಾಡಿಕೊಟ್ಟಿದೆ.

ಹಾಗೆ ಮೂಡುವ ಹಗಲೆ
ಸಹನೆಯಿಂದ
ನಿರಂತರ ಕಾಯುತ್ತೇನೆ
ಸೆಣಸುತ್ತೇನೆ ನಿನಗಾಗಿ
ಹಾಗೆ ಮಾಡುವ ಹೆಗಲೆ
ನಿನ್ನ ಕಾಣಲು ನಾನಿರಲಿಕ್ಕಿಲ್ಲ
ಆದರೆ ಹಾಗೆ ಮಾಡುವ ಹೆಗಲೆ
ನನ್ನಂಥವರ ರಕ್ತದುಷೆಯಲ್ಲಿ
ನೀನು ಬರುತ್ತಿ.[೭೧]

ಸಮಾನತೆಯೆಂಬುದು ದೊಡ್ಡ ಕ್ರಾಂತಿ, ಬದಲಿದಾನಗಳಿಂದಲೇ ಅರಳುವಂಥದ್ದು. ಇದಕ್ಕಾಗಿ ನಿರಂತರ ಹೋರಾಡಬೇಕಾಗುತ್ತದೆ. ಇಂಥ ನಿರಂತರ ಹೋರಾಟಗಳು ಚರಿತ್ರೆಯುದ್ದಕ್ಕೂ ನಡೆದಿವೆ. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಈ ನಿಟ್ಟಿನಲ್ಲಿ ಹೋರಾಡಿದ, ಚಿಂತಿಸಿದ ತಮ್ಮ ಬದುಕನ್ನೇ ಸವೆಸಿದ ಮಹಾನ್ ಚೇತನಗಳು. ಇಂಥ ಚೇತನಗಳ ಪ್ರಯತ್ನಗಳೂ ವಿಫಲವಾಗಿವೆ. ಹೋರಾಡಲು ಅವರೂ ಇಲ್ಲ. ಅಂದ ಮಾತ್ರಕ್ಕೆ

ಆ ಬಗೆಯ ಕನಸುಗಾರಿಕೆ ಮತ್ತು ಹೋರಾಟಗಳು ನಿಂತಿಲ್ಲ. ಇಂಥ ಮಹಾನ್ ಚೇತನಗಳು ತೋರಿಸಿದ ಬೆಳಕಲ್ಲಿ ನಡೆಯುವ, ಹೋರಾಡುವ ಪ್ರಯತ್ನಗಳನ್ನು ಮಾನವೀಯ ಮನಸ್ಸುಗಳು ಮುಂದುವರೆಸುತ್ತಿರುತ್ತವೆ. ಮಾನವತೆಯ ಉಳಿವಿಗಾಗಿ, ನೆಮ್ಮದಿಯ ಬದುಕಿಗಾಗಿ ಹೋರಾಡಿದ ಮಹಾತ್ಮರನ್ನು ವರ್ತಮಾನದಲ್ಲಿ ಜೀವಂತವಾಗಿರಿಸಿಕೊಳ್ಳುವ, ಅವರ ಚಿಂತನೆ, ಹೋರಾಟ, ವ್ಯಕ್ತಿತ್ವಗಳನ್ನು ಮುನ್ನೆಲೆಗೆ ತರುವ ಪ್ರಯತ್ನಗಳನ್ನು ಸಮಾಜದ ಸೃಜನಶೀಲ ಮನಸ್ಸುಗಳು ಮಾಡುತ್ತಿರುತ್ತವೆ. ಹೋರಾಟವನ್ನು ರೂಪಿಸುವ, ಜನರಲ್ಲಿ ಜಾಗೃತಿಯನ್ನು ಮೂಡಿಸುವ ಕೆಲಸ ಮಾಡುತ್ತಿರುತ್ತವೆ. ಈ ಹಿನ್ನೆಲೆಯಲ್ಲಿ ಮಹಾನ್ ಚೇತನಗಳನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳು ಬಿತ್ತುತ್ತಿರುವ ಸಮಾನತೆಯ ಕನಸುಗಾರಿಕೆಯನ್ನು ನೋಡಬಹುದು.

ಅಂಬೇಡ್ಕರ್ ಅವರನ್ನು ಕುರಿತ ವ್ಯಕ್ತಿಚಿತ್ರ ಕವಿತೆಗಳು ಈ ದೃಷ್ಟಿಯಿಂದ ಮಹತ್ವಪೂರ್ಣ ರಚನೆಗಳಾಗಿವೆ. ಅಂಬೇಡ್ಕರರನ್ನು ಅವರ ವ್ಯಕ್ತಿತ್ವ, ಚಿಂತನೆ, ಹೋರಾಟಗಳನ್ನು ತಿರುಚುವ, ಇಲ್ಲವಾಗಿಸುವ ರಾಜಕಾರಣಗಳು ಮೇಲಿಂದ ಮೇಲೆ ನಡೆಯುತ್ತಿದ್ದರೆ; ಅದಕ್ಕೆ ವಿರುದ್ಧವಾಗಿ ಸೃಜನಶೀಲ ಮನಸ್ಸುಗಳನ್ನು ಅದನ್ನು ವಿರೋಧಿಸುತ್ತಲೇ ಅಂಬೇಡ್ಕರರನ್ನು ಮುನ್ನೆಲೆಗೆ ತರುವ ಪ್ರಯತ್ನವನ್ನು ಮಾಡಿವೆ. ಅವರ ಮರುಹುಟ್ಟಿಗಾಗಿ ಹಂಬಲಿಸುವ, ಅವರ ವ್ಯಕ್ತಿತ್ವದ ಹಿರಿಮೆಯನ್ನು ಕೀರ್ತಿಸುವ, ತಮ್ಮ ನೋವುಗಳನ್ನು ನಿವೇದಿಸಿಕೊಳ್ಳುವ, ಅನ್ಯಾಯ, ಅಸಮಾನತೆ, ಹಿಂಸೆ, ದೌರ್ಜನ್ಯಗಳ ವಿರುದ್ಧ ಸಿಡಿದೇಳುವ ಮೂಲಕ ಅಂಬೇಡ್ಕರರನ್ನು ಜೀವಂತವಾಗಿರಿಸಿಕೊಳ್ಳುವ ಹಾಗೂ ಅವರ ಹೋರಾಟಗಳನ್ನು ಮುಂದುವರೆಸುವ ವಿಶಿಷ್ಟ ಪ್ರಯತ್ನಗಳನ್ನು ಮಾಡಿವೆ. ಅಂಬೇಡ್ಕರ್ ಕಂಡ ಸಮಾನತೆಯ ಕನಸನ್ನು ಸಾಧಿಸಿಕೊಳ್ಳುವ ನಿಟ್ಟಿನಲ್ಲಿ ಹೆಜ್ಜೆ ಇಡುತ್ತಲೇ, ಅದು ಬಹುದೂರವಿದೆ ಎಂಬ ಅರಿವಿದ್ದೂ ಎಲ್ಲ ಅಸಮಾನತೆ, ದೌರ್ಜನ್ಯ, ಶೋಷಣೆಗಳ ವಿರುದ್ಧ ಪ್ರತಿಭಟಿಸುತ್ತ  ತಮ್ಮ ಅಸಮಧಾನವನ್ನು ವ್ಯಕ್ತಪಡಿಸಿವೆ. ಬರುವ ನೆಮ್ಮದಿಯ ನಾಳೆಗಾಗಿ ನಿರೀಕ್ಷಿಸುತ್ತಾ ತಮ್ಮ ನಾಯಕನೊಂದಿಗೆ ಸಂವಾದಿಸಿವೆ. ಅಂಬೇಡ್ಕರರನ್ನು ಹಾಗೂ ಅವರ ಚಿಂತನೆಗಳನ್ನು ಜೀವಂತವಾಗಿರಿಸಿಕೊಳ್ಳುವ ಛಲವನ್ನು ಪ್ರಕಟಿಸುತ್ತಲೇ ಆತನಿಂದ ಸ್ಫೂರ್ತಿ ಪಡೆದು ಅವರ ಕನಸುಗಳನ್ನು ನನಸಾಗಿಸುವ ಫಣ ತೊಡುತ್ತಿರುವುದನ್ನು ಕಾಣಬಹುದು. ಚರಿತ್ರೆ ಅಂಬೇಡ್ಕರ್ ಗತಿಸಿಹೋಗಿದ್ದಾನೆ ಎಂದು ಹೇಳಿದರೆ ನೋವುಂಡ ಸಮುದಾಯ ಅದನ್ನು ಒಪ್ಪಲು ತಯಾರಿಲ್ಲ. ಎಲ್ಲ ಅಸಮಾನತೆಗಳ ಅಗ್ನಿಕುಂಡದ ನಡುವೆ ಸಿಡಿದೇಳುವ ಪ್ರತಿಯೊಬ್ಬ ಹೋರಾಟಗಾರರಲ್ಲೂ ಅಂಬೇಡ್ಕರ್ ಇದ್ದಾರೆ. ಅವನ ಕಣ್ಣುಗಳಲ್ಲಿ ಅಂಬೇಡ್ಕರ್ ಕೊಟ್ಟ ಬೆಳಕಿದೆ, ಛಲವಿದೆ, ಕನಸಿದೆ ಎಂಬ ಆಶಾವಾದ ಕವಿತೆಗಳಲ್ಲಿ ವ್ಯಕ್ತವಾಗಿದೆ.

ದೂರದ ಹಟ್ಟಿಯಲ್ಲಿ ಯೌವನಿಗ ಹುಡುಗರ ಮೆರವಣಿಗೆ
ಕಾಯಿಸಿದ ಹಲಗೆಗಿಷ್ಟು ದುಡಿಮೆ
ಕೂಗು ಕೇಕೆ ಘೋಷಣೆ, ಕರಪತ್ರ
ಜನ ಸಾಗರಕೆ ಕಿವಿ ಕಣ್ಣುಗಳ ಅಳತೆ
ಸಾಗಿ ಬಂದಿದೆ ಮೆರವಣಿಗೆಯಲ್ಲಿ
ಕನಸುಕೊಟ್ಟವನ ಚಿತ್ರ
ಉಳ್ಳವರ ಎದೆ ನಡುಗಿಸಿದ ಭಿತ್ತಿ ಚಿತ್ರ [೮]

ದುಡಿಯುವವರ ಕಣ್ಣುಗಳ ಉರಿಯಲ್ಲಿ ಅಂಬೇಡ್ಕರ್ ಜೀವಂತವಾಗಿದ್ದಾರೆ. ಆ ಉರಿ ಅಂಬೇಡ್ಕರ್ ಕನಸನ್ನು ನನಸಾಗಿಸುವ ದಾರಿಯಲ್ಲಿ ಸಾಗುತ್ತಿದೆ. ಅಸಮಾನತೆಯ ಸೃಷ್ಟಿಶಕ್ತಿಗಳನ್ನು ನಡುಗಿಸುವ ಶಕ್ತಿ ಅದಕ್ಕಿದೆ. ಏಕೆಂದರೆ ಅವರ ಕೈಯಲ್ಲಿ ಕನಸುಕೊಟ್ಟವನ ಚಿತ್ರವಿದೆ. ಇಂಥದೊಂದು ಹೋರಾಟ ಯಶಸ್ಸು ಕಾಣಬೇಕೆಂದರೆ ಮೊದಲು

ಶೋಷಿತರಲ್ಲೇ ಇರುವ ಒಡಕುಗಳನ್ನು ಸರಿಪಡಿಸಿಕೊಳ್ಳುವ ಅವಶ್ಯಕತೆಯಿದೆ. ಈ ಒಡಕು ಭಾವನೆಗಳು ಹೋರಾಟದ ವಿಫಲತೆಗೆ ಕಾರಣವಾಗಿವೆ. ಹಾಗಾಗಿ ತಮ್ಮಲ್ಲಿರುವ ಒಡಕನ್ನು ನಿವಾರಿಸಿ ಶೋಷಿತರಿಗೆ ನ್ಯಾಯ ದೊರಕಿಸಿಕೊಡುವ ಹೋರಾಟವನ್ನು ರೂಪಿಸಲು ಅಂಬೇಡ್ಕರರಿಂದ ಸ್ಫೂರ್ತಿ ಪಡೆಯುವ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಿವೆ.

ನಮ್ಮ ಜನಗಳ ಮಧ್ಯೆ ಕಟ್ಟಿದ ಕೋಟೆಗೋಡೆಯನೊಡೆಯಲು
ಹಾರಿಯಾಗಿ ನಮ್ಮ ಕೈಗೆ ಬಾರೋ ಬಾಬಾ ಹೊಡೆಯಲು
ನಿನ್ನ ಭೀಮ ಶಕ್ತಿ ನೀಡು ನಮ್ಮ ಜನತೆಯನೆತ್ತಲು
ಸಿಡಿಲಾಗಿ ಸೇರು ಎದೆಯಲಿ ಸಿಂಹದಂತೆ ಗುಡುಗಲು [೭೩]

ಅಂಬೇಡ್ಕರ್ ಆರಂಭಿಸಿದ ಹೋರಾಟವನ್ನು ಮುಂದುವರಿಸುವ ಛಲವನ್ನು ಪ್ರಕಟಿಸುತ್ತಲೇ ಅದರ ವಿಫಲತೆಯ ಕಾರಣಗಲ್ಲೊಂದಾದ ದಲಿತ ಸಮುದಾಯಗಳಲ್ಲಿನ ಒಡಕುಗಳನ್ನು ಸರಿಪಡಿಸಿಕೊಳ್ಳಬೇಕಾದ ಅಗತ್ಯವನ್ನು ಕವಿತೆ ಒತ್ತಿ ಹೇಳುತ್ತಿದೆ. ತಮ್ಮಲ್ಲಿನ ಒಡಕುಗಳನ್ನು ಮರೆತು ಒಂದಾದಲ್ಲಿ ಮಾತ್ರ ಹೋರಾಟದಲ್ಲಿ ಯಶಸ್ಸು ಕಾಣಲು ಸಾಧ್ಯ. ತಮ್ಮಲ್ಲಿನ ಒಡಕುಗಳು ಶೋಷಕ ಶಕ್ತಿಗಳಿಗೆ ವರವಾಗದ ಹಾಗೆ ನೋಡಿಕೊಳ್ಳುವ ಅಗತ್ಯವಿದೆ. ಹಾಗಾಗಿ ಆ ಒಡಕನ್ನು ನಿವಾರಿಸುವ ಹಾಗೂ ಶತೃಗಳನ್ನು ಎದುರಿಸುವ 'ಭೀಮಶಕ್ತಿ'ಯಾಗಿ ಅಂಬೇಡ್ಕರ್ ದಲಿತರ ಕೈಗೆ ಬಂದಾಗ ಮಾತ್ರ ಸಮಾನತೆಯ ಕನಸು ನನಸಾಗಲು ಸಾಧ್ಯ ಎಂಬ ನಿಲುವು ಪ್ರಕಟಗೊಳ್ಳುತ್ತಿದೆ. ಎಲ್ಲಿಯವರೆಗೆ ದಲಿತ ಸಮುದಾಯದ ಮೈಮನಗಳಲ್ಲಿ ಅಂಬೇಡ್ಕರ್ ಆವರಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅಂಬೇಡ್ಕರ್ ಕಂಡ ಸಮಾನತೆಯ ಕನಸು ನನಸಾಗದು. ಶೋಷಿತ ಸಮುದಾಯಗಳ ಬಿಡುಗಡೆಗೆ ಅಂಬೇಡ್ಕರ್‌ರನ್ನು ತಮ್ಮೊಳಗೆ ಜೀವಂತವಾಗಿಸಿರಿಕೊಳ್ಳುವುದೊಂದೇ ದಾರಿ. ಹಾಗಾಗಿ ಶೋಷಿತ ಸಮುದಾಯ ಕೇವಲ ಅಂಬೇಡ್ಕರರನ್ನು ನೆನೆಯುತ್ತಾ ಕೂರದೆ ಅವರು ರೂಪಿಸಿದ ಹೋರಾಟವನ್ನು ಮುಂದುವರೆಸುವ ಅಗತ್ಯವಿದೆ. ಆಗ ಮಾತ್ರ ಅಂಬೇಡ್ಕರ್ ಕಂಡ ಸಮಾನತೆಯ ಕನಸು ನನಸಾಗಲು ಸಾಧ್ಯ.

ಬದಲಾದ ಕಾಲಕ್ಕೆ ತಕ್ಕಂತೆ ಜಾತಿ ಶೋಷಣೆಯ ಸ್ವರೂಪಗಳೂ ಬದಲಾಗುತ್ತಿವೆ. ಇಂಥ ಸಂದರ್ಭದಲ್ಲಿ ಅಸಮಾನತೆಯ ನೆಲೆಗಳೂ ಹಾಗೂ ಅವುಗಳ ನಿಯಂತ್ರಕ ಶಕ್ತಿಗಳೂ ಬದಲಾಗುತ್ತಿರುತ್ತವೆ. ಹಾಗಾಗಿ ಶೋಷಿತ ಸಮುದಾಯದವರ ಹೋರಾಟಗಳೂ ಬದಲಾಗಬೇಕಾದ ಅಗತ್ಯವಿದೆ. ಅಸಮಾನತೆಯ ಸ್ವರೂಪ ಮತ್ತು ಅದರ ಸೃಷ್ಟಿಶಕ್ತಿಗಳನ್ನು ಗುರುತಿಸಿಕೊಂಡು ಅದಕ್ಕನುಗುಣವಾದ ಹೋರಾಟವನ್ನು ರೂಪಿಸಿಕೊಂಡಾಗ ಮಾತ್ರ ಅಂಬೇಡ್ಕರ್ ಕಂಡ ಸಮಾನತೆಯ ಕನಸು ನನಸಾಗಲು ಸಾಧ್ಯ ಎಂಬ ಆಲೋಚನೆಗಳು ಮೂಡಿಬರುತ್ತಿವೆ.

ದಿನ ಬಂತು ದಿನ ಬಂತು ನಾಯಕ
ಬದಲಾಗೋ ದಿನ ಬಂತು ನಾಯಕ
ಹದಹೊಂಡ ಭೂಮ್ಯಾಗ ಎದೆಬೀಜ ಬಿತ್ತಯ್ಯ
ಬಾಬಾನ ಕನಸು ನನಸಾಗಾಕ [೭೪]

'ಹದಗೊಂಡ ಭೂಮ್ಯಾಗ ಎದೆಬೀಜ ಬಿತ್ತಯ್ಯ' ಎಂಬ ಸಾಲು ಸಮಾನತೆಯನ್ನು ಸಾಧಿಸುವಲ್ಲಿ ಹೋರಾಟಗಳನ್ನು ಹೇಗೆ ರೂಪಿಸಿಕೊಳ್ಳಬೇಕು ಎಂಬುದನ್ನು ಧ್ವನಿಸುತ್ತಿದೆ. ಇಲ್ಲಿ 'ಹದಗೊಳ್ಳುವುದು' ಮತ್ತು 'ಎದೆ ಬೀಜ ಬಿತ್ತುವುದು' ಅತ್ಯಂತ ಮುಖ್ಯ ಏಕೆಂದರೆ ಅಸಮಾನತೆ ಮತ್ತು ಶೋಷಣೆಗಳು ಮಾನವ ನಾಗರೀಕತೆಯುದ್ದಕ್ಕೂ ಎಲ್ಲ ಬಗೆಯ ಪ್ರತಿರೋಧಗಳನ್ನು ಜೀರ್ಣಿಸಿಕೊಂಡೆ ಉಳಿದು ಬಂದಿವೆ. ಹಾಗಾಗಿ

ಹೋರಾಟಗಳು ವಿಫಲವಾಗದ ಹಾಗೆ ಕಾರ್ಯತಂತ್ರಗಳನ್ನು ರೂಪಿಸಿಕೊಳ್ಳುವ ಅಗತ್ಯವಿದೆ. ಅದಕ್ಕಾಗಿ ಹೋರಾಟಗಳ ಸ್ವರೂಪಗಳೂ ಬದಲಾಗಬೇಕಾಗಿರುವುದರ ಬಗೆಗೆ ಈ ಕವಿತೆ ಮಾತನಾಡುತ್ತದೆ.

ಅಂಬೇಡ್ಕರ್ ಕಂಡ ಸಮಾನತೆಯ ಕನಸನ್ನು ನನಸಾಗಿಸುವ ಪ್ರಾಮಾಣಿಕ ತುಡಿತವನ್ನು ವ್ಯಕ್ತಪಡಿಸುವ ಕವಿತೆಗಳು ತಮ್ಮ ನಾಯಕನೊಂದಿಗೆ ಸಂವಾದಿಸುತ್ತಿರುವ ರೀತಿಯಲ್ಲಿ ಹಲವು ನೆಲೆಗಳಿವೆ. ಅಂಬೇಡ್ಕರ್ ಮರುಹುಟ್ಟಿಗಾಗಿ ಹಂಬಲಿಸುವಿಕೆ, ಹೋರಾಟದ ಸ್ವರೂಪಗಳ ವಿಮರ್ಶೆ, ಅಂಬೇಡ್ಕರರನ್ನು ತಮ್ಮಲ್ಲಿ ಕಂಡುಕೊಳ್ಳುವ ಪ್ರಯತ್ನ, ತಮ್ಮ ದೌರ್ಬಲ್ಯಗಳ ಪ್ರಾಮಾಣಿಕ ಪರೀಕ್ಷೆ ಈ ಮುಂತಾದ ನೆಲೆಗಳನ್ನು ಕಾಣಬಹುದು.

ಇಲ್ಲಿ ಕೇಳಬೇಕು ಪ್ರತಿಯೊಂದು ಹೊಂಗೆ ನೆರಳಲ್ಲಿ
ಹಾಲುಂಡ ಕಂದನ ಕಿಲಕಿಲ ಕೇಕೆ, ಕೂಗು
ಇಲ್ಲಿ ಹುಟ್ಟಬೇಕು ಮತ್ತೊಬ್ಬ ದೂತ
ಮತ್ತೊಬ್ಬ ಕ್ರಿಸ್ತ, ಮತ್ತೊಬ್ಬ ಮಹಮದ್
ಅಂತಹವನೇ ಬಸವ
ನಿನ್ನಂತಹವನೇ ಬೆಳಕಿನ ಮೊಳಕೆ ಕಾಳ
ಅಂಗೈಯಲ್ಲಿಡಿದ ಪ್ರಿಯ ಅಂಬೇಡ್ಕರ್ [೭೫]

ಈ ಕವಿತೆಯಲ್ಲಿ ಸಮಾನತೆಯ ಸಮಾಜ, ನೆಮ್ಮದಿಯ ಬದುಕು ನಿರ್ಮಾಣವಾಗಲು ಅದಕ್ಕಾಗಿ ಹೋರಾಡಿದ ಮಹಾತ್ಮರು ಇಲ್ಲಿ ಮತ್ತೊಮ್ಮೆ ಹುಟ್ಟಿಬರಬೇಕೆಂಬ ಹಂಬಲ ವ್ಯಕ್ತವಾಗುತ್ತಿದೆ. ಅಸಮಾನತೆಯ ನಿಯಂತ್ರಕ ಶಕ್ತಿಗಳು ಮಹಾನ್ ದೂತರ ಪ್ರಯತ್ನಗಳನ್ನೇ ಮೆಟ್ಟಿನಿಂತಿರುವಾಗ ಸಾಮಾನ್ಯ ಜನರ ಹೋರಾಟಗಳಿಂದ ಸಮಾನತೆಯ ಕನಸು ನನಸಾಗುವುದರ ಬಗೆಗೆ ಅನುಮಾನವಿದೆ. ಅದಕ್ಕಾಗಿ ಮಹಾನ್ ದೂತರ ಹುಟ್ಟು ಇಲ್ಲಿ ಆಗಬೇಕಿದೆ. ಈ ಕವಿತೆ 'ಪ್ರತಿಯೊಂದು ಹೊಂಗೆ ನೆರಳಲ್ಲಿ ಹಾಲುಂಡ ಕಂದನ ಕಿಲಕಿಲ ಕೇಕೆ' ಕೇಳುವ ಕನಸು ಕಾಣುತ್ತಲೇ ಅದು ಸಿದ್ಧಿಸುವುದಕ್ಕೆ ಬುದ್ಧ, ಕ್ರಿಸ್ತ, ಮಹಮದ್, ಬಸವ, ಅಂಬೇಡ್ಕರರಂಥ ಮಾನವತಾವಾದಿಗಳೇ ಹುಟ್ಟಿಬರಬೇಕು ಎಂಬ ಹಂಬಲವನ್ನು ವ್ಯಕ್ತಪಡಿಸುತ್ತಿದೆ. ಹಾಗೆಯೇ ಅದು ಸಾಧ್ಯವಾಗುವುದರ ಬಗೆಗೆ ಅನುಮಾನವನ್ನು ವ್ಯಕ್ತಪಡಿಸುತ್ತಿದೆ. ಇಂಥ ಅಸಹಾಯಕತೆಯ ನಡುವೆಯೇ ತಮ್ಮೆದುರಿನ ಶೋಷಣೆ, ನೋವು, ಅಸಮಾನತೆಗಳನ್ನು ನಿವಾರಿಸುವ ಮಾರ್ಗಗಳನ್ನು ಕಂಡುಕೊಳ್ಳುವ ಪ್ರಯತ್ನಗಳೂ ನಡೆಯುತ್ತಿವೆ. ಇದಕ್ಕಾಗಿ ಮಹಾನ್ ಚೇತನಗಳ ಹುಟ್ಟಿಗಾಗಿ ನಿರೀಕ್ಷಿಸುತ್ತಾ, ಹಂಬಲಿಸುತ್ತಾ ಕೂರದೆ ನೊಂದವರ ನೋವಿನಲ್ಲಿ ತಮ್ಮನ್ನೂ ಪ್ರಮಾಣಿಕವಾಗಿ ಬೆರೆಸಿಕೊಳ್ಳುವ ಮೂಲಕ ಅವರ ಕನಸನ್ನು ಸ್ವಲ್ಪ ಮಟ್ಟಿಗಾದರೂ ನನಸಾಗಿಸುವ ಕಾಳಜಿಯನ್ನು ವ್ಯಕ್ತಪಡಿಸುತ್ತಾರೆ.

ಆದ್ದರಿಂದಲೇ ನಿನ್ನ ತಿಳಿಯುವುದು
ನಿನ್ನ ನೋವಿನಲಿ; ಸಾಹಸದಲಿ ಒಂದಾಗುವುದು
ಕವಿತೆ ಬರೆಯುವುದರಿಂದಲ್ಲ;
ನಿನ್ನವರ ನೋವಿನ ಮಧ್ಯೆ, ಸೋಲಿನ ಮಧ್ಯೆ
ನಿನ್ನ ಜನಗಳ ಮಧ್ಯೆ ನನ್ನನ್ನು ತೂರಿಕೊಳ್ಳುವುದರಿಂದ
ಯುಗಯುಗದ ಕ್ರೌರ್ಯದ ಮೊತ್ತಕ್ಕೆ
ಪ್ರತೀಕಾರ ತೋರುವುದು ಕೇವಲ ಧ್ವಜ ಎತ್ತುವುವರಿಂದಲ್ಲ
ರಕ್ತ ಸಂಬಂಧದ ಕೆಂಪು ಸಿಂಪಡಿಸಿಕೊಳ್ಳುವುದರಿಂದ
ಮತ್ತು ಹೇಳಿದ್ದು ಬೂಟಾಟಿಕೆ ಆಗದ ಹಾಗೆ ಸದಾ
ಎಚ್ಚರ ಇರುವುದರಿಂದ [೭೬]

ಸಮಾನತೆಯ ಪರವಾದ ಕಾಳಜಿ ಮತ್ತು ಹೋರಾಟಗಳ ಪ್ರಾಮಾಣಿಕತೆಯನ್ನೇ ಅನುಮಾನಿಸುತ್ತಿರುವ ಕವಿತೆ; ಅಸಮಾನತೆ ಇನ್ನೂ ಜೀವಂತವಾಗಿರುವುದರ ಹಿಂದಿನ ಕಾರಣಗಳನ್ನು ತೋರಿಸುವ ಕೆಲಸ ಮಾಡುತ್ತಿದೆ. ಶೋಷಿತರ ಬಗೆಗಿನ ಅನುಕಂಪದಲ್ಲಿನ ಪೊಳ್ಳುತನ, ಹೋರಾಟದ ಅಪ್ರಾಮಾಣಿಕತೆ, ಮಾತಿಗೂ ಕೃತಿಗೂ ಇರುವ ಅಂತರಗಳು ಇವು ಅಸಮಾನತೆ, ಶೋಷಣೆಗಳನ್ನು ಮುಂದುವರೆಸುತ್ತಿವೆ. ಶೋಷಿತರ ನೋವಿನಲ್ಲೂ ಪ್ರಾಮಾಣಿಕವಾಗಿ ಒಂದಾಗುವ ಮನಸ್ಥಿತಿ ಇದ್ದಾಗ ಮಾತ್ರ ಅದು ಸಾಧ್ಯ. 'ರಕ್ತ ಸಂಬಂಧದ ಕೆಂಪು ಸಿಂಪಡಿಸಕೊಳ್ಳುವುದರಿಂದ' ಎಂಬ ಸಾಲು ದಲಿತರ, ಶೋಷಿತರ ಪರವಾದ ಎಲ್ಲ ಬಗೆಯ ಕಾಳಜಿ ಅನುಕಂಪಗಳ ಹಿಂದಿನ ಅಪ್ರಾಮಾಣಿಕತೆ, ಬೂಟಾಟಿಕೆಗಳನ್ನು ವಿರೋಧಿಸುತ್ತಲೇ ಸಮಾನತೆಯ ಸಮಾಜ ನಿರ್ಮಾಣದ ಕೆಲಸ ನಿಜವಾಗಿ ಎಲ್ಲಿ ಮತ್ತು ಹೇಗೆ ಆಗಬೇಕಿದೆ ಎಂಬುದನ್ನು ಸೂಚಿಸುತ್ತಿದೆ. ಅಂಬೇಡ್ಕರ್ ಹೇಳಿದಂತೆ ರಕ್ತ ಸಂಬಂಧವೊಂದೇ ಈ ದೇಶದ ಅಸಮಾನತೆಯ ಮೂಲವಾದ ಜಾತಿ ಮನಸ್ಥಿತಿಯನ್ನು ತೊಡೆದು ಹಾಕುವ ಮಾರ್ಗ ಎಂಬುದನ್ನು ಕಾರ್ಯರೂಪಕ್ಕೆ ತರಬೇಕಾದ ಅಗತ್ಯವನ್ನು ಒತ್ತಿ ಹೇಳುತ್ತಿದೆ.

ಅಂಬೇಡ್ಕರ್ ಇಲ್ಲದ ಈ ಹೊತ್ತಿನಲ್ಲಿ ಅವರಿಂದ ಸ್ಫೂರ್ತಿ ಪಡೆದು, ಅವರು ತೋರಿದ ಬೆಳಕಿನಲ್ಲಿ ತಮ್ಮ ನೋವುಗಳಿಗೆ ಬಿಡುಗಡೆಯನ್ನು ಕಂಡುಕೊಳ್ಳುವ ಛಲ ವ್ಯಕ್ತವಾಗುತ್ತಿರುವುದನ್ನು ಕವಿತೆಗಳಲ್ಲಿ ಕಾಣಬಹುದು. ಅಂಬೇಡ್ಕರರನ್ನು ತಮ್ಮೊಳಗಿನ ಅಂತರ್‌ಶಕ್ತಿಯನ್ನಾಗಿಸಿಕೊಳ್ಳುವ ಮೂಲಕ 'ತಾವೇ ಅಂಬೇಡ್ಕರ್' ಆದಾಗ ಮಾತ್ರ ತಾವು ಅನುಭವಿಸುತ್ತಿರುವ ಶೋಷಣೆ, ಅಪಮಾನಗಳಿಂದ ಮುಕ್ತಿಪಡೆಯಲು ಸಾಧ್ಯ, ಅಂಬೇಡ್ಕರ್ ಕಂಡ ಕನಸು ನನಸಾಗಲು ಸಾಧ್ಯ ಎಂಬ ಗಾಢ ನಂಬಿಕೆಯೊಂದಿಗೆ ಪ್ರಯತ್ನಶೀಲರಾಗುವ ಇಚ್ಛಾಶಕ್ತಿ ಪ್ರಕಟಗೊಳ್ಳುತ್ತಿದೆ. ಸಮಾನತೆಯ ಬದುಕನ್ನ ತಂದುಕೊಡುವ ಮತ್ತೊಬ್ಬ ಅಂಬೇಡ್ಕರ್ ಹುಟ್ಟಿಬರುವುದನ್ನು ಕಾಯುತ್ತಾ ಕೂರದೆ ಅಂಥ ಅಂಬೇಡ್ಕರ್ ತನ್ನಲ್ಲೇ ತಲೆಯೆತ್ತಿ ನಿಂತಾಗ ಮಾತ್ರ ತಾವು ಅನುಭವಿಸುತ್ತಿರುವ ಕಷ್ಟಗಳಿಂದ ಬಿಡುಗಡೆಯನ್ನು ಪಡೆಯಲು ಸಾಧ್ಯ. ಹಾಗಾಗಿ ಅಂಬೇಡ್ಕರ್ ಕೊಟ್ಟ ಬೆಳಕಿನಲ್ಲೇ ಸಾಗಿ ತಮ್ಮ ಬದುಕಿನ ಬಂಧನಗಳಿಂದ ತಾವೇ ಬಿಡುಗಡೆಯನ್ನು ಪಡೆಯುವ ದಿಟ್ಟತನ ಪ್ರಕಟಿಸುತ್ತಿರುವುದನ್ನು ಕಾಣಬಹುದು.

ನೀ ಚೆಲ್ಲಿದ ಮುಳ್ಳುಹಾದಿಗಳಲಿ
ನಾ ನಡೆವ, ನಿನ್ನೆಂಜಲ ನಿಗಿನಿಗಿ
ಕೆಂಡದುಂಡೆಗಳ ತುಳಿದೇ
ನನ್ನ ಗುರಿ ನಾ ಪಡೆವೆ [೭೭]

ಕಠಿಣದ ಹಾದಿಯಾದರೂ ಅದನ್ನೆ ತುಳಿದು ಸಾಧಿಸುವ ಧೈರ್ಯ, ಸ್ವಾಭಿಮಾನಗಳು ಇಲ್ಲಿ ವ್ಯಕ್ತವಾಗುತ್ತಿವೆ. ಇದರ ಹಿಂದೆ ಅಂಬೇಡ್ಕರ್ ವ್ಯಕ್ತಿತ್ವದ ಪ್ರಭಾವವಿದೆ. ಅವರ ಕನಸನ್ನು ನನಸು ಮಾಡುವ ಛಲವಿದೆ. ಅನ್ಯಾಯ, ಅಪಮಾನ, ಅಸಮಾನತೆಗಳನ್ನು ಸಹಿಸದ ಪ್ರಾಮಾಣಿಕ ಸಿಟ್ಟಿದೆ.

ಒಟ್ಟಾರೆಯಾಗಿ ಅಂಬೇಡ್ಕರ್ ಅವರನ್ನು ಕುರಿತ ಕವಿತೆಗಳು ವರ್ತಮಾನದಲ್ಲಿ ಶೋಷಿತ ಸಮುದಾಯಗಳು ಅನುಭವಿಸುತ್ತಿರುವ ನೋವು, ಅಪಮಾನ, ಶೋಷಣೆ, ಅಸಮಾನತೆ, ಬಡತನ, ಹಸಿವು ಮುಂತಾದ ಸಮಸ್ಯೆಗಳ ನಡುವೆ ಅಂಬೇಡ್ಕರ್ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಲೇ ಅಂಬೇಡ್ಕರ್ ಕಂಡ ಕನಸನ್ನು ನನಸಾಗಿಸುವ ಪ್ರಾಮಾಣಿಕ ತುಡಿತವನ್ನು ವ್ಯಕ್ತಪಡಿಸುತ್ತಿವೆ. ಸಮಾನತೆಯ ಸಮಾಜ ನಿರ್ಮಾಣದ ಕನಸು ಕಾಣುತ್ತಲೇ ಅದಕ್ಕೆ ಅಡ್ಡಿಯಾಗಿರುವ ಶೋಷಕ ಶಕ್ತಿಗಳ ನೆಲೆಗಳನ್ನು ಗುರುತಿಸಿಕೊಳ್ಳುವ

ಹಾಗೂ ತಮ್ಮ ದೌರ್ಬಲ್ಯಗಳನ್ನು ಪರೀಕ್ಷಿಸಿಕೊಳ್ಳುವ ಪ್ರಾಮಾಣಿಕತೆಯನ್ನು ಮೆರೆದಿವೆ. ತಮ್ಮ ಮುಂದಿರುವ ಸವಾಲುಗಳನ್ನು ಎದುರಿಸುವ ದಿಟ್ಟತನವನ್ನು ಮೆರೆಯುವ ಮೂಲಕ ಅನ್ಯಾಯ ಅಸಮಾನತೆಗಳ ವಿರುದ್ಧದ ತಮ್ಮ ಅಸಮಾಧಾನವನ್ನು ಹೊರಹಾಕುತ್ತಿದ್ದಾರೆ. ಅಂಬೇಡ್ಕರ್ ವ್ಯಕ್ತಿತ್ವದ ಬೆಳಕಲ್ಲಿ ತಾವು ಬದುಕುತ್ತಿರುವ ಸಾಂಸ್ಕೃತಿಕ ಪರಿಸರವನ್ನೂ, ತಮ್ಮನ್ನೂ ಪ್ರಾಮಾಣಿಕವಾಗಿ ವಿಮರ್ಶಿಸಿಕೊಳ್ಳುವ ಹಾಗೂ ಎಲ್ಲಾ ಬಗೆಯ ಅಸಮಾನತೆ, ಜಾತಿಹಿಂಸೆ, ರಾಜಕಾರಣಗಳನ್ನು ಪ್ರತಿರೋಧಿಸುವ ಪ್ರಯತ್ನವನ್ನು ಶಕ್ತವಾಗಿ ಮಾಡಲಾಗಿದೆ.

## ಕೊನೆ ಟಿಪ್ಪಣಿ

೧. ಡಾ. ಬಿ.ಆರ್.ಅಂಬೇಡ್ಕರ್– ವರ್ತಮಾನದೊಂದಿಗೆ ಮುಖಾಮುಖಿ, (ಸಂ) ಬಿ. ಯು. ಸುಮಾ ಪು. ಸಂ. ೨
೨. ಸಾಮಾಜಿಕ ಕ್ರಾಂತಿ ಸೂರ್ಯ ಡಾ. ಬಾಬಾಸಾಹೇಬ್ ಅಂಬೇಡ್ಕರ್, ದತ್ತೋಪಂತ ಠೇಂಗಡಿ, ಅನು : ಚಂದ್ರಶೇಖರ ಭಂಡಾರಿ, ಪು, ಸಂ. ೧೦೧
೩. ಅದೇ, ಪು. ಸಂ. ೮೯
೪. ಅದೇ ಪು. ಸಂ ೧೦೨
೫. ಅದೇ, ಪು. ಸಂ. ೧೦೭
೬. ಅದೇ, ಪು. ಸಂ. ೧೦೪
೭. ಅದೇ, ಪು. ಸಂ. ೧೦೫
೮. ನನ್ನ ಜನಗಳು ಮತ್ತು ಇತರ ಕವಿತೆಗಳು, ಸಿದ್ಧಲಿಂಗಯ್ಯ, ಪು. ಸಂ. ೨೭
೯. ಅದೇ, ಪು. ಸಂ. ೨೭
೧೦.ಅಂಬೇಡ್ಕರ್ ಕವಿತೆಗಳು, (ಸಂ), ಎಲ್. ಹನುಮಂತಯ್ಯ, ಕಂಬನಿಯ ಹಾಡು, ಎಂ. ಡಿ ಗೋಗೇರಿ, ಪು. ಸಂ. ೨೩
೧೧.ಅದೇ, ಸೂರ್ಯ, ಅರವಿಂದ ಮಾಲಗತ್ತಿ, ಪು. ಸಂ. ೧
೧೨.ಸಮಗ್ರ ಕಾವ್ಯ, ಸಂಪುಟ ೧, ಗೋಪಾಲಕೃಷ್ಣ ಅಡಿಗ, ಪು. ಸಂ. ೪೨೨
೧೩.ಅದೇ, ಪು. ಸಂ. ೪೨೨
೧೪.ಅದೇ, ಪು. ಸಂ. ೪೨೩
೧೫.ಅಂಬೇಡ್ಕರ್ ಕವಿತೆಗಳು, (ಸಂ.) ಎಲ್ ಹನುಮಂತಯ್ಯ, ಮುನ್ನುಡಿ, ಪು. ಸಂ. ೧೧
೧೬.ಸಮಗ್ರ ಕಾವ್ಯ, ಸಂಪುಟ ೧, ಗೋಪಾಲಕೃಷ್ಣ ಅಡಿಗ, ಪು. ಸಂ. ೪೨೨
೧೭.ಕರುಣಾಳು, ಸವಿತಾ ನಾಗಭೂಷಣ, ಪು. ಸಂ. ೩೫
೧೮. ಅದೇ, ಪು. ಸಂ. ೩೫
೧೯.ಅಂಬೇಡ್ಕರ್ ಕವಿತೆಗಳು, (ಸಂ.) ಎಲ್ ಹನುಮಂತಯ್ಯ, ದೀಪದ ಕುಡಿಗೊಂದು ಆತ್ಮ, ಆರ್.ಜಿ.ಹಳ್ಳಿ ನಾಗರಾಜ ಪು. ಸಂ. ೪
೨೦.ಅದೇ, ಚಲನೆ, ಕಾಳೇಗೌಡ ನಾಗವಾರ, ಪು. ಸಂ. ೧೧
೨೧.ಅದೇ, ಚಲನೆ, ಕಾಳೇಗೌಡ ನಾಗವಾರ, ಪು. ಸಂ. ೧೨
೨೨.ಅದೇ. ಅಂಬೇಡಕರ್ ಅವರಿಗೆ, ಗವಿಸಿದ್ಧ. ಎನ್. ಬಳ್ಳಾರಿ, ಪು. ಸಂ. ೧೬
೨೩.ಅದೇ, ಬಾಬಾ ಸಾಹೇಬ್, ಎಲ್. ಹನುಂತಯ್ಯ, ಪು. ಸಂ. ೧೧೦
೨೪.ಅದೇ. ಅಂಬೇಡಕರರು ಇವರು, ಚಂದ್ರಶೇಖರ ಕಂಬಾರ, ಪು. ಸಂ. ೩೧
೨೫.ಅದೇ, ಬಾಬಾ ಸಾಹೇಬ್, ಎಲ್. ಹನುಂತಯ್ಯ, ಪು. ಸಂ. ೧೧೦
೨೬.ಅದೇ, ಸೂರ್ಯ, ಅರವಿಂದ ಮಾಲಗತ್ತಿ, ಪು. ಸಂ. ೨
೨೭.ನನ್ನ ಜನಗಳು ಮತ್ತು ಇತರ ಕವಿತೆಗಳು, ಸಿದ್ಧಲಿಂಗಯ್ಯ, ಪು. ಸಂ. ೨೭
೨೮.ಅದೇ ಪು. ಸಂ. ೨೮
೨೯.ಅಂಬೇಡ್ಕರ್ ಕವಿತೆಗಳು, (ಸಂ.) ಎಲ್ ಹನುಮಂತಯ್ಯ, ಕರಿಯ ಮಣ್ಣಿನಲ್ಲಿ ನಟ್ಟ ಕೆಂಪು ಬೀಜ, ಸೂಗಯ್ಯ ಹಿರೇಮಠ, ಪು. ಸಂ. ೧೦೫
೩೦.ಸಾಮಾಜಿಕ ಕ್ರಾಂತಿ ಸೂರ್ಯ ಡಾ. ಬಾಬಾಸಾಹೇಬ್ ಅಂಬೇಡ್ಕರ್, ದತ್ತೋಪಂತ ಠೇಂಗಡಿ, ಅನು– ಚಂದ್ರಶೇಖರ ಭಂಡಾರಿ, ಪು. ಸಂ. ೩೧೨
೩೧.ಅಂಬೇಡ್ಕರ್ ಕವಿತೆಗಳು, (ಸಂ.) ಎಲ್ ಹನುಮಂತಯ್ಯ, ಅಂಬೇಡ್ಕರ್‌ಗೆ– ಸತೀಶ್ ಕುಲಕರ್ಣಿ ಪು. ಸಂ. ೯೫
೩೨.ಅದೇ, ಕಂಬನಿಯ ಹಾಡು. ಎಂ. ಡಿ. ಗೋಗೇರಿ. ಪು. ಸಂ. ೨೩
೩೩.ಅದೇ, ಪು. ಸಂ. ೨೩
೩೪.ಅದೇ, ಪು. ಸಂ. ೨೪
೩೫.ಅಂಬೇಡ್ಕರ್‌ವಾದ ಎಂದರೇನು?, (ಸಂ.) ಕೃಷ್ಣಮೂರ್ತಿ ಚಮರಂ, ಪು. ಸಂ. ೨೭೧
೩೬.ಅಂಬೇಡ್ಕರ್ ಕವಿತೆಗಳು, ಸಂ. ಎಲ್ ಹನುಮಂತಯ್ಯ, ನಿನ್ನೆಗಳ ನೆನಪು, ಚಂಪಾ, ಪು. ಸಂ. ೨೯

೩೭.ಅದೇ, ಪು. ಸಂ. ೩೦
೩೮.ಅದೇ, ಮೂಕ ನಾಯಕನಿಗೆ, ಜಂಬಣ್ಣ ಅಮರಚಿಂತ, ಪು. ಸಂ. ೪೪
೩೯.ಅದೇ, ಪು. ಸಂ. ೪೫
೪೦.ಅದೇ, ಪು. ಸಂ. ೪೫
೪೧.ಅದೇ, ಅಂಬೇಡ್ಕರ್ ಪ್ರತಿಮೆ ಕೆಳಗೆ, ಜಯರಾಮ ಹೆಗಡೆ, ಪು. ಸಂ. ೪೬
೪೨.ಅದೇ, ಅಂಬೇಡ್ಕರ್ ಮತ್ತು ನನ್ನೂರ ಕೊರಗನ ಆನೆಕಾಲು, ಆರ್ಕೆ ಮಣಿಪಾಲ್, ಪು. ಸಂ ೦೬
೪೩.ಅದೇ, ಪು. ಸಂ ೦೮
೪೪.ಅದೇ, ಅಂಬೇಡ್ಕರ್ ನೆನಪಿಗೆ – ಜಿ. ಎಸ್. ಉಬರಡ್ಕ ಪು. ಸಂ.೦೯
೪೫.ಅದೇ, ಚಲನೆ, ಕಾಳೇಗೌಡ ನಾಗವಾರ, ಪು. ಸಂ. ೧೧
೪೬.ಅದೇ, ಪು. ಸಂ. ೧೨
೪೭.ಅದೇ, ಮತ್ತೆ ಮಳೆ ಬರುವ ಮುನ್ನ, ಬಿ. ಚಿನ್ನಸ್ವಾಮಿ ಪು. ಸಂ. ೩೭
೪೮.ಅದೇ, ಹೊನ್ನ ಬೆಳಕಿನ ಹೊಳಪು, ಹೆಚ್. ಎಲ್. ಪುಷ್ಪ, ಪು. ಸಂ. ೫೨
೪೯.ಅದೇ, ಮಲದ ರಂಗೋಲಿಯ ನಡುವೆ, ಬಿ. ಎಸ್. ಮಧುಮತಿ, ಪು. ಸಂ. ೫೮
೫೦.ಅದೇ, ಪು. ಸಂ. ೫೮
೫೧.ಅದೇ, ಪು. ಸಂ. ೫೯
೫೨.ಅದೇ, ಪು. ಸಂ. ೫೯
೫೩.ಅದೇ, ನಾಲಗೆ ಚಾಚುತ್ತವೆ, ಶಂಕರ ಕಟಗಿ, ಪು. ಸಂ. ೯೩
೫೪.ಅದೇ, ಪು. ಸಂ. ೯೩
೫೫.ಅದೇ, ಪು. ಸಂ. ೯೩
೫೬.ಅದೇ, ಪು. ಸಂ. ೯೪
೫೭.ಅದೇ, ಅಂಬೇಡ್ಕರರಿಗೆ, ಸತೀಶ ಕುಲಕರ್ಣಿ, ಪು. ಸಂ. ೯೫
೫೮.ಅದೇ, ಪು. ಸಂ. ೯೫
೫೯.ಅದೇ, ದೀಪದಕುಡಿಗೊಂದು ಆತ್ಮ, ಆರ್. ಜಿ. ಹಳ್ಳಿ ನಾಗರಾಜ್, ಪು. ಸಂ. ೦೪
೬೦.ಅದೇ, ಅಂಬೇಡ್ಕರ್ ನೆನಪಿಗೆ ಜಿ. ಎಸ್. ಉಬರಡ್ಕ, ಪು. ಸಂ. ೦೯
೬೧.ಅದೇ, ಪು. ಸಂ. ೦೯
೬೨.ಅದೇ, ಅಂಬೇಡ್ಕರ್ ಅವರಿಗೆ, ಗವಿಸಿದ್ಧ ಎನ್. ಬಳ್ಳಾರಿ, ಪು. ಸಂ. ೧೭
೬೩.ಅದೇ, ಅನಾವರಣ, ಕೆ.ಆರ್. ಗಂಗಾಧರಯ್ಯ, ಪು. ಸಂ. ೨೧
೬೪.ಅದೇ, ಪು. ಸಂ. ೨೨
೬೫.ಅದೇ. ಅಂಬೇಡ್ಕರ್ ಪ್ರತಿಮೆ ಕೆಳಗೆ, ಜಯರಾಮ ಹೆಗಡೆ, ಪು. ಸಂ. ೪೬
೬೬.ಅದೇ, ಕರಿಯ ಪ್ರತಿಮೆ, ಬರಗೂರು ರಾಮಚಂದ್ರಪ್ಪ, ಪು. ಸಂ. ೫೬
೬೭.ಅದೇ. ಅಂಬೇಡ್ಕರ್ : ಒಂದು ಅನುಮಾನ, ಮುದುಕಪ್ಪ ಅಡ್ನೂರ, ಪು. ಸಂ. ೬೩
೬೮.ಅದೇ. ಬಾಬಾ ಸಾಹೇಬ್, ಎಲ್ ಹನುಮಂತಯ್ಯ, ಪು. ಸಂ. ೧೧೧
೬೯.ಸಮಗ್ರ ಕಾವ್ಯ, ಸಂಪುಟ ೧ , ಎಂ ಗೋಪಾಲಕೃಷ್ಣ ಅಡಿಗ, ಪು. ಸಂ. ೪೨೪
೭೦.ಅಂಬೇಡ್ಕರ್ ಕವಿತೆಗಳು, (ಸಂ.) ಎಲ್. ಹನುಮಂತಯ್ಯ, ನೆನ್ನೆಗಳ ನೆನಪು, ಚಂದ್ರಶೇಖರ ಪಾಟೀಲ, ಪು. ಸಂ. ೩೦
೭೧.ಕವಿತೆ–೨೦೦೬, ಸಂ. ಶ್ರೀಧರ ಪಿಸ್ಸೆ, ಹಾಗೆ ಮೂಡುವ ಹಗಲೆ, ಎಸ್.ಎಸ್.ಹಿರೇಮಠ ಪು. ಸಂ. ೪೬
೭೨.ಅದೇ, ದೀಪದ ಕುಡಿಗೊಂದು ಆತ್ಮ, ಆರ್.ಜಿ ಹಳ್ಳಿ ನಾಗರಾಜ್ ಪು. ಸಂ. ೫
೭೩.ಅದೇ, ಕಪ್ಪು ಜನತೆಯ ಸೂರ್ಯನಿಗೆ, ಚೆನ್ನಣ್ಣ ವಾಲಿಕಾರ, ಪು. ಸಂ. ೪೦
೭೪.ಅದೇ, ಮೂಕ ನಾಯಕನಿಗೆ, ಜಂಬಣ್ಣ ಅಮರಚಿಂತ, ಪು. ಸಂ.೪೫
೭೫.ಅದೇ, ಹೊನ್ನ ಬೆಳಕಿನ ಹೊಳಪು, ಎಚ್.ಎಲ್, ಪುಷ್ಪ ಪು. ಸಂ. ೫೨
೭೬.ಅದೇ. ನಿನ್ನ ನೆನಪಿಗೆ, ಆರ್. ವಿ. ಭಂಡಾರಿ, ಪು. ಸಂ. ೫೭
೭೭.ಅದೇ, ಅಂಬೇಡ್ಕರ್‌ಗೆ, ಸತೀಶ್ ಕುಲಕರ್ಣಿ ಪು. ಸಂ. ೯೬

# ಅಧ್ಯಾಯ – ೮

# ಸಮಾರೋಪ

## ಅಧ್ಯಯನದ ಫಲಿತಗಳು – ಮಿತಿಗಳು ಮತ್ತು ಸಾಧ್ಯತೆಗಳು

ಅಸಂಖ್ಯ ವಸ್ತುಗಳನ್ನು ಸೂಕ್ಷ್ಮವಾಗಿ ವಿವೇಚಿಸುವ ಕಾವ್ಯದ ಅಧ್ಯಯನ ಒಂದು ಸವಾಲೆ ಸರಿ. ಕಾವ್ಯ ಎಂಬುದು ಮೇಲು ನೋಟಕ್ಕೆ ಯಾವುದೋ ಒಂದು ವಸ್ತುವನ್ನು ಪರಿಶೀಲಿಸುತ್ತಿದೆ ಎಂದು ಕಂಡುಬಂದರೂ ಸೂಕ್ಷ್ಮವಾಗಿ ನೋಡಿದಾಗ ಅದರ ಕಾಲಾತೀತ, ಅಮೂರ್ತ, ವೈವಿಧ್ಯಮಯ ವಸ್ತು ವಿವೇಚನೆಯ ಹೆಣಿಗೆಗಳು ತೆರೆದುಕೊಳ್ಳುತ್ತಾ ಹೋಗುತ್ತವೆ. ಇದು ಕಾವ್ಯದ ಸಾಂಸ್ಕೃತಿಕ ವಿವೇಚನಾ ಶಕ್ತಿ ಹಾಗೂ ಹೊಣೆಗಾರಿಕೆಯನ್ನು ತಿಳಿಸುತ್ತದೆ. ಹಾಗಾಗಿ ಕಾವ್ಯದ ವಸ್ತುವಿನ ಅಧ್ಯಯನಕ್ಕೆ ಸಾಂಸ್ಕೃತಿಕ ಆಯಾಮವೂ ಇರುತ್ತದೆ. ಹೊಸಗನ್ನಡ ಕಾವ್ಯ ಹಲವು ಪ್ರಭಾವ, ಪ್ರೇರಣೆಗಳನ್ನು ಸ್ವೀಕರಿಸಿಯೆ ಸಮೃದ್ಧವಾಗಿ, ಚಲನಶೀಲವಾಗಿ ಸಾಗುತ್ತಿದೆ. ಈ ಕಾವ್ಯ ಪರಂಪರೆಗೆ ಹಲವು ಮುಖ್ಯ ಕಾಳಜಿಗಳಿವೆ. ಅವುಗಳಲ್ಲಿ ವ್ಯಕ್ತಿಗಳ ವ್ಯಕ್ತಿತ್ವವನ್ನು ಕುರಿತ ವಿವೇಚನೆಯೂ ಒಂದು. ಆಧುನಿಕ ಕನ್ನಡ ಕಾವ್ಯದಲ್ಲಿ ವ್ಯಕ್ತಿಚಿತ್ರ ಕವಿತೆಗಳ ರಚನೆ ವೈವಿಧ್ಯವೂ, ವಿಶಾಲವೂ, ಗಂಭೀರವೂ ಆದುದಾಗಿದೆ. ಈ ಬಗೆಯ ಕವಿತೆಗಳ ಮೂಲಕ ಕನ್ನಡದ ಮನಸ್ಸುಗಳು ನಮ್ಮ ಪರಂಪರೆಯ ಹಾಗೂ ಸಮಕಾಲೀನ ವ್ಯಕ್ತಿತ್ವಗಳನ್ನು ಕುರಿತು ಸೂಕ್ಷ್ಮವಾಗಿ ವಿವೇಚಿಸಿವೆ. ಇಂತಹ ವ್ಯಕ್ತಿಚಿತ್ರ ಕವಿತೆಗಳಲ್ಲಿ ಚಾರಿತ್ರಿಕವಾಗಿ, ಸಾಂಸ್ಕೃತಿಕವಾಗಿ ಮಹತ್ವ ಪಡೆದ ವ್ಯಕ್ತಿಗಳ ಬಗೆಗಿನ ಕವಿತೆಗಳ ಅಧ್ಯಯನ ಹಲವು ದೃಷ್ಟಿಗಳಿಂದ ಮಹತ್ವ ಪಡೆದಿದೆ. ಪ್ರಸ್ತುತ ಸಂಶೋಧನಾ ಪ್ರಬಂಧದಲ್ಲಿ ಹೊಸಗನ್ನಡ ಕಾವ್ಯದಲ್ಲಿ ರಚನೆಯಾಗಿರುವ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಕುರಿತ ವ್ಯಕ್ತಿಚಿತ್ರ ಕವಿತೆಗಳನ್ನು ಅವು ವ್ಯಕ್ತಿತ್ವಗಳನ್ನು ಗ್ರಹಿಸಿರುವ, ಕಟ್ಟಿಕೊಟ್ಟಿರುವ, ಮರುನಿರೂಪಿಸಿರುವ ಬಗೆಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವುಳ್ಳ ಈ ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸಿರುವ ನೆಲೆಗಳನ್ನು ಮತ್ತು ಅಂತಹ ನೆಲೆಗಳನ್ನು ನಿಯಂತ್ರಿಸುತ್ತಿರುವ ಸಾಂಸ್ಕೃತಿಕ ರಾಜಕಾರಣಗಳನ್ನು ಮತ್ತು ಸಾಮಾಜಿಕ, ಸಾಂಸ್ಥಿಕ ನಿಯಂತ್ರಕ ಶಕ್ತಿಗಳನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಆಧುನಿಕ ಕನ್ನಡ ಕಾವ್ಯದಲ್ಲಿನ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಕುರಿತ ಕವಿತೆಗಳು ಕೇವಲ ವ್ಯಕ್ತಿ ನೆಲೆಯವಾಗಿರದೆ; ಆ ವ್ಯಕ್ತಿತ್ವಗಳನ್ನು ನೆಪವಾಗಿಸಿಕೊಂಡು ಸಮಕಾಲೀನ ಸಾಂಸ್ಕೃತಿಕ ಬದುಕಿನ ಸಂದಿಗ್ಧತೆಗಳಿಗೆ ಪ್ರತಿಕ್ರಿಯೆಗಳಾಗಿಯೂ, ವಿಡಂಬನೆ, ವಿಮರ್ಶೆ, ವಿರೋಧಗಳಾಗಿಯೂ ಇರುವುದನ್ನು ಕಾಣಬಹುದು. ಈ ವ್ಯಕ್ತಿತ್ವಗಳ ನೈತಿಕ ಪ್ರೇರಣೆ ಹಾಗೂ ವಿಚಾರಗಳ ಚೈತನ್ಯಗಳನ್ನು ಸಾಧನವಾಗಿಸಿಕೊಂಡು ಸಮಕಾಲೀನ

ವಾತಾವರಣವನ್ನು ಸರಿಪಡಿಸುವ ತುಡಿತ, ಮಾನವೀಯ ಸಮಾಜ ನಿರ್ಮಾಣದ ಕನಸುಗಳನ್ನು ಬಿತ್ತರಿಸುವ ಪ್ರಯತ್ನಗಳನ್ನು ಮಾಡಲಾಗಿದೆ. ಕವಿಗಳು ಇಲ್ಲಿ ಕನಸುಗಾರರೂ, ಕ್ರಾಂತಿಕಾರಿಯೂ, ಮಾನವತಾವಾದಿಯೂ ಆಗಿ ತಮ್ಮ ಪಾತ್ರವನ್ನು ನಿರ್ವಹಿಸಿದ್ದಾರೆ. ಇಲ್ಲಿ ಪರಂಪರೆಯ ತಪ್ಪು ಹೆಜ್ಜೆಗಳು ಹಾಗೂ ಚರಿತ್ರೆಯ ಕೊಳಕುಗಳು ವರ್ತಮಾನದಲ್ಲಿ ಮುಂದುವರಿಯದ ಹಾಗೆ ನೋಡಿಕೊಳ್ಳುವ ತವಕವಿದೆ. ತಮ್ಮನ್ನು ತಮ್ಮ ಸುತ್ತಲ ಸಮಾಜವನ್ನು ಈ ಉನ್ನತ ವ್ಯಕ್ತಿತ್ವಗಳ ಎದುರು ಶೋಧಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನವಿದೆ. ಈ ವ್ಯಕ್ತಿತ್ವಗಳ ಕನಸು, ಆದರ್ಶ, ವಿಚಾರಗಳನ್ನು ಜೀವಂತವಾಗಿರಿಸಿಕೊಳ್ಳಬೇಕಾದ ತುರ್ತನ್ನು ಪ್ರಕಟಿಸಿವೆ. ಈ ಎಲ್ಲಾ ನೆಲೆಯಲ್ಲಿ ಅಭಿವ್ಯಕ್ತಿ ಪಡೆದಿರುವ ಕಾವ್ಯ ಸಾಂಸ್ಕೃತಿಕ ಮಹತ್ವವುಳ್ಳದ್ದಾಗಿದೆ. ಹಾಗಾಗಿ ವ್ಯಕ್ತಿಚಿತ್ರ ಕವಿತೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಸಾಂಸ್ಕೃತಿಕ ಅಧ್ಯಯನ ವಿಧಾನದ ಮೂಲಕ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಇವರು ಚಾರಿತ್ರಿಕ ವ್ಯಕ್ತಿಗಳಾಗಿದ್ದು ಕೇವಲ ಚರಿತ್ರೆಯ ಕಾಲಘಟ್ಟಗಳಿಗೆ ಸೀಮಿತವಾಗಿರದೆ ಕಾಲಾತೀತ ಸಾಂಸ್ಕೃತಿಕ ಬದುಕಿನ ಎಲ್ಲಾ ಆಯಾಮಗಳನ್ನೂ ಪ್ರಭಾವಿಸುತ್ತಾ ಬಂದಿರುವ ವ್ಯಕ್ತಿತ್ವಗಳಾಗಿದ್ದಾರೆ. ಎಲ್ಲಾ ಮಾನವೀಯ, ಜೀವಪರ ಚಟುವಟಿಕೆಗಳ ಕೇಂದ್ರ ತತ್ವಗಳಾಗಿರುವ ಈ ವ್ಯಕ್ತಿತ್ವಗಳು ಸೃಜನಶೀಲ ಮಾಧ್ಯಮಗಳಲ್ಲಿ ಅಭಿವ್ಯಕ್ತಗೊಳ್ಳುತ್ತಿರುವ ಸ್ವರೂಪ ಕುತೂಹಲಕಾರಿ. ಸಾಹಿತ್ಯ ಚಾರಿತ್ರಿಕ ವ್ಯಕ್ತಿತ್ವಗಳನ್ನು ರೂಪಿಸಿಕೊಳ್ಳುತ್ತಿರುವ ಬಗೆ, ಈ ರೂಪಣ ಕ್ರಿಯೆಯ ಹಿಂದಿನ ಒತ್ತಡಗಳು ಒಂದು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಬಲ್ಲವು. ಶೋಷಿತ, ಅಲಕ್ಷಿತ, ಜನಸಾಮಾನ್ಯರ ಕಾಳಜಿಯಿಂದ ಸಮಾನತೆ, ಮಾನವೀಯತೆಯ ದೃಷ್ಟಿಕೋನಗಳಿಂದ ಚರಿತ್ರೆಯನ್ನು ಕಟ್ಟುವ, ಚರಿತ್ರೆಯ ನಾಯಕರುಗಳನ್ನು ಶೋಧಿಸಿ ನೋಡುವ ಕ್ರಮ ವಿಶಿಷ್ಟವಾದುದು. ಹಾಗಾಗಿ ಕವಿತೆಗಳನ್ನು ಸಾಂಸ್ಕೃತಿಕ ಚರಿತ್ರೆಯ ಪುನರ್ರಚನೆಯ ಪ್ರಕ್ರಿಯೆಯ ಭಾಗವಾಗಿಯೂ ಪ್ರಸ್ತುತ ಅಧ್ಯಯನದಲ್ಲಿ ನೋಡಲಾಗಿದೆ.      ವ್ಯಕ್ತಿಚಿತ್ರ ಕವಿತೆಗಳು ಕೇವಲ ವ್ಯಕ್ತಿಗಳ ವ್ಯಕ್ತಿತ್ವವನ್ನು ಕುರಿತ ವಿವೇಚನೆ ಮಾತ್ರವಾಗಿರದೆ ಸಮಕಾಲೀನ ಸಾಂಸ್ಕೃತಿಕ ಬದುಕಿಗೆ ತೋರಿದ ಸೃಜನಶೀಲ ಪ್ರತಿಕ್ರಿಯೆಗಳೂ ಆಗಿವೆ. ವರ್ತಮಾನದ ದೇಶದ ಹಲವು ಸಮಸ್ಯೆ ಸವಾಲುಗಳನ್ನು ಬಿಚ್ಚಿಡುವ ಹಾಗೂ ಅವುಗಳಿಗೆ ಪರಿಹಾರಗಳನ್ನು ಹುಡುಕುವ ಗಂಭೀರ ಪ್ರಯತ್ನಗಳನ್ನು ಕವಿತೆಗಳು ಮಾಡಿವೆ. ಸಮಕಾಲೀನ ಸಮಾಜದ ವ್ಯಕ್ತಿತ್ವಗಳನ್ನು ಸುಧಾರಿಸುವ, ರೂಪಿಸಿಕೊಳ್ಳುವ ವಿಶಿಷ್ಟ ಕಾಳಜಿಯನ್ನು ವ್ಯಕ್ತಪಡಿಸುತ್ತಲೇ; ಶ್ರೇಷ್ಠ ವ್ಯಕ್ತಿತ್ವದ ಮಾದರಿಗಳನ್ನು ನಮ್ಮ ಪರಂಪರೆಯಿಂದ ಶೋಧಿಸಿಕೊಡುವ ಪ್ರಯತ್ನವನ್ನು ಮಾಡಿವೆ. ಸಮಕಾಲೀನ ಸಮಸ್ಯೆಗಳೊಂದಿಗೆ ಪರಂಪರೆಯ ವ್ಯಕ್ತಿತ್ವಗಳನ್ನು ಮುಖಾಮುಖಿಯಾಗಿಸುವುದರ ಮೂಲಕ 'ವ್ಯಕ್ತಿತ್ವ'ಗಳನ್ನೂ, ತಾವು ಬದುಕುತ್ತಿರುವ ಸಾಂಸ್ಕೃತಿಕ ವಾತಾವರಣವನ್ನು ಅರಿಯುವ ವಿಶಿಷ್ಟ ಪ್ರಯತ್ನಗಳನ್ನು ಮಾಡಿವೆ. ಈ ದೃಷ್ಟಿಯಿಂದ ಕನ್ನಡದ ವ್ಯಕ್ತಿಚಿತ್ರ ಕವಿತೆಗಳಿಗೆ ಸಾಂಸ್ಕೃತಿಕ ಮಹತ್ವವಿದೆ. ಇವು ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸಿರುವ ಕ್ರಮಗಳೇ ವಿಶಿಷ್ಟವಾದವುಗಳು. ಕವಿತೆಗಳು ಬಿಚ್ಚಿಡುವ ನಮ್ಮ ಸಾಂಸ್ಕೃತಿಕ ಬದುಕಿನ ವಾಸ್ತವಗಳು ಹಲವು. ಇವುಗಳು ನಿಭಾಯಿಸುತ್ತಿರುವ ಸಾಮಾಜಿಕ ಹೊಣೆಗಾರಿಕೆಗಳು ಹಲವು. ಇವು ಪರಂಪರೆಯ ಉನ್ನತ ವ್ಯಕ್ತಿತ್ವಗಳ ಮೂಲಕ ಸಮಕಾಲೀನ ಸಾಂಸ್ಕೃತಿಕ ಚರಿತ್ರೆಯನ್ನು ಶೋಧಿಸಿಕೊಳ್ಳುವ ಹಾಗೂ ರೂಪಿಸಿಕೊಳ್ಳುವ ಪ್ರಯತ್ನವನ್ನು ಮಾಡಿವೆ. ಹಾಗಾಗಿ ಪ್ರಸ್ತುತ ಸಂಶೋಧನೆಯಿಂದ ಕಂಡುಕೊಂಡ ಫಲಿತಗಳನ್ನು ಮುಂದಿನಂತೆ ಗುರುತಿಸಿಕೊಳ್ಳಲಾಗಿದೆ.

Continued on next page

**ಫಲಿತಗಳು :**

೧. ಭಾರತದಂತಹ ಸಂಕೀರ್ಣ ಸಾಂಸ್ಕೃತಿಕ ಬದುಕು ಹುಟ್ಟುಹಾಕಿರುವ ಮೇರು ವ್ಯಕ್ತಿತ್ವಗಳು ಅನೇಕ. ಸಾಮಾಜಿಕ, ಧಾರ್ಮಿಕ, ರಾಜಕೀಯ, ಅನುಭಾವಿಕ ಕ್ಷೇತ್ರದಲ್ಲಿ ದೊಡ್ಡ ಸಾಧನೆ ಮಾಡಿದ, ಸಾಂಸ್ಕೃತಿಕ ಬದುಕಿನಲ್ಲಿ ದೊಡ್ಡ ಪಲ್ಲಟಗಳಿಗೆ ಕಾರಣರಾದ ವ್ಯಕ್ತಿಗಳು ಇಲ್ಲಿ ಆಗಿಹೋಗಿದ್ದಾರೆ. ತಮ್ಮ ಕಾಲದ ಬದುಕನ್ನು ಆದಷ್ಟೂ ಜೀವಪರವಾಗಿ ರೂಪಿಸಿಕೊಳ್ಳುವ ಕಾಳಜಿಯನ್ನು ವ್ಯಕ್ತಪಡಿಸಿದ, ಅದಕ್ಕಾಗಿ ಹೋರಾಡಿದ ಅನೇಕ ವ್ಯಕ್ತಿಗಳನ್ನು ಕಾಣಬಹುದು. ಆಯಾ ಕಾಲ, ದೇಶಗಳ ಸಾಂಸ್ಕೃತಿಕ ಬದುಕಿನ ಅವ್ಯವಸ್ಥೆ, ಅಸಮಾನತೆ, ಅಮಾನವೀಯ ಸ್ಥಿತಿಗಳೆ ಅದರೊಡಲಿನಿಂದ ಸಾಂಸ್ಕೃತಿಕ ಬದುಕಿನ ಸುಧಾರಣೆಗಾಗಿ ಸುಧಾರಕ ವ್ಯಕ್ತಿತ್ವಗಳನ್ನು ಹುಟ್ಟುಹಾಕುತ್ತಿರುತ್ತವೆ. ಇಂಥ ವ್ಯಕ್ತಿತ್ವಗಳು ರೂಪುಗೊಳ್ಳುವಿಕೆಗೆ ಕಾರಣವಾದ ಸಾಂಸ್ಕೃತಿಕ ಬದುಕಿನ ಸಂಕೀರ್ಣತೆಯನ್ನು, ಅದರ ಅತ್ಯಂತ ವಿಕ್ಷಿಪ್ತ ಸ್ಥಿತಿಯನ್ನು, ಆಂತರಿಕ ಒತ್ತಡಗಳ ಸ್ವರೂಪವನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲು ಸಾಧ್ಯವಾಯಿತು.

೨. ಭಾರತೀಯ ವೈಚಾರಿಕತೆಗೆ ನಿರಂತರವಾಗಿ ಪ್ರವಹಿಸುವಿಕೆಯ ಪರಂಪರೆಯಿದೆ. ಅದು ಮಾನವೀಯವೂ, ಜೀವಪರವೂ, ವೈದಿಕ ವಿರೋಧಿಯೂ ಆದುದು. ಇದು ಮೊದಲು ಆರಂಭವಾದುದು ಬುದ್ಧನಿಂದ, ಬುದ್ಧನ ಪ್ರತಿಪಾದನೆಗಳು ಭಾರತೀಯ ಸಾಂಸ್ಕೃತಿಕ ಬದುಕಿನ ಸುಪ್ತಪ್ರಜ್ಞೆಯಲ್ಲಿ ನಿರಂತರವಾಗಿ ಪ್ರವಹಿಸುತ್ತಾ ಬಂದಿವೆ. ಇದನ್ನು ಬುದ್ಧನಿಂದ ಅಂಬೇಡ್ಕರ್‌ವರೆಗಿನ ಎಲ್ಲಾ ಸಾಮಾಜಿಕ, ರಾಜಕೀಯ, ಧಾರ್ಮಿಕ, ಅನುಭಾವಿಕ ಹೋರಾಟಗಾರರಲ್ಲೂ ಗುರುತಿಸಲು ಸಾಧ್ಯವಿದೆ. ಹೀಗೆ ಸಮಾನತೆಯ ಆಶಯವನ್ನು ಹೊಂದಿರುವ ಭಾರತೀಯ ವೈಚಾರಿಕತೆಯನ್ನು, ಅದರ ಹೋರಾಟದ ಪರಂಪರೆಯನ್ನು ವ್ಯಕ್ತಿಚಿತ್ರ ಕವಿತೆಗಳು ಸೂಕ್ಷ್ಮವಾಗಿ ಹಿಡಿದಿಟ್ಟಿರುವ ಬಗೆಯನ್ನು ಕಂಡುಕೊಳ್ಳಲು ಪ್ರಸ್ತುತ ಅಧ್ಯಯನದಿಂದ ಸಾಧ್ಯವಾಯಿತು.

೩. ಕಾವ್ಯಕ್ಕೆ ರಸಾಸ್ವಾದನೆಯೊಂದೆ ಮುಖ್ಯ ಕಾಳಜಿಯಲ್ಲ. ಅದಕ್ಕೆ ಸಾಂಸ್ಕೃತಿಕ ಹೊಣೆಗಾರಿಕೆಗಳೂ ಇರುತ್ತವೆ. ಹೊಣೆಗಾರಿಕೆಯನ್ನು ಮರೆತ ಕಾವ್ಯ ತನ್ನ ಲೋಲುಪತೆಯಲ್ಲಿಯೇ ನರಳಬೇಕಾಗುತ್ತದೆ. ತನ್ನ ಕಾಲದ ಸಾಂಸ್ಕೃತಿಕ ಬದುಕನ್ನು ಆದಷ್ಟು ಜೀವಪರವಾಗಿಟ್ಟುಕೊಳ್ಳಲು ತವಕಿಸುವ ಸಾಹಿತ್ಯ ತನ್ನ ಸಮಾಜದ ವ್ಯಕ್ತಿತ್ವಗಳನ್ನು ರೂಪಿಸುವ ಕೆಲಸದಲ್ಲಿ ತೊಡಗಿರುತ್ತದೆ. ತನ್ನ ಕಾಲದ ನೋವು, ಹಿಂಸೆ, ಶೋಷಣೆ, ಅಸಮಾನತೆ, ಪ್ರಕ್ಷುಬ್ಧತೆಗಳನ್ನು ಹಸಿಹಸಿಯಾಗಿಯೇ ಅಭಿವ್ಯಕ್ತಿಸುತ್ತಾ, ಅದರ ವಿರುದ್ಧ ಧ್ವನಿ ಎತ್ತುತ್ತದೆ. ಹೊಸಗನ್ನಡ ಕಾವ್ಯ ಇಂಥ ಸಂದರ್ಭದಲ್ಲಿ ಅವುಗಳ ವಿರುದ್ಧ ಹೋರಾಡಿದ, ಮಾನವತೆಯ ಉಳಿವಿಗಾಗಿ ಚಿಂತಿಸಿದ ಶ್ರೇಷ್ಠ ವ್ಯಕ್ತಿತ್ವಗಳನ್ನು ಸಮಕಾಲೀನ ಇಕ್ಕಟ್ಟು - ಬಿಕ್ಕಟ್ಟುಗಳ ನಡುವೆ ಇಟ್ಟು ಒರೆಗೆ ಹಚ್ಚುವ ಕೆಲಸಮಾಡಿದೆ. ಸಮಕಾಲೀನ ಸಮಸ್ಯೆಗಳನ್ನು ಎದುರಿಸುವ ನೈತಿಕ ಶಕ್ತಿಯನ್ನು ಪರಂಪರೆಯ ಶ್ರೇಷ್ಠ ವ್ಯಕ್ತಿತ್ವಗಳಿಂದ ಪಡೆಯುವ ಪ್ರಯತ್ನ ಮಾಡಲಾಗಿದೆ. ಏಕಕಾಲದಲ್ಲಿ ಸಮಕಾಲೀನ ಸಮಾಜಗಳ ಸಂಕೀರ್ಣತೆಯನ್ನೂ, ಪರಂಪರೆಯ ಶ್ರೇಷ್ಠ ವ್ಯಕ್ತಿತ್ವಗಳ ಪ್ರಸ್ತುತತೆಯನ್ನು ವಿವೇಚಿಸುತ್ತಿರುವ ಕನ್ನಡ ಕಾವ್ಯದ ಶಕ್ತಿಯನ್ನು ಅರಿಯಲು ಪ್ರಸ್ತುತ ಅಧ್ಯಯನದಿಂದ ಸಾಧ್ಯವಾಯಿತು.

೪. 'ವ್ಯಕ್ತಿತ್ವವನ್ನು ಕುರಿತು ಮಾನವಿಕ ಹಾಗೂ ಇತರ ಜ್ಞಾನಶಾಖೆಗಳು ತಮ್ಮದೇ ಆದ ನೆಲೆಯಲ್ಲಿ ವಿವೇಚಿಸುತ್ತಿವೆ. ಇಂಥ ಸಂದರ್ಭದಲ್ಲಿ ಸಾಹಿತ್ಯ ಕ್ಷೇತ್ರ, ಅದರಲ್ಲೂ ಕಾವ್ಯ ಪ್ರಕಾರವೊಂದು ವಿವೇಚಿಸುವ ಬಗೆ

ಯಾವುದು? ವ್ಯಕ್ತಿತ್ವವನ್ನು ಕುರಿತ ನಿರ್ವಚನ ಯಾವ ಬಗೆಯದು ಎಂಬುದು ಕುತೂಹಲದ ಸಂಗತಿ. ಕನ್ನಡ ಕಾವ್ಯ ತನ್ನ ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ಸಮಕಾಲೀನ ಪ್ರಜ್ಞೆಯೊಂದಿಗೆ ಹಾಗೂ ಸಮಕಾಲೀನ ಸಾಂಸ್ಕೃತಿಕ ಬದುಕನ್ನು ಪರಂಪರೆಯ ಶ್ರೇಷ್ಠ ಮೌಲ್ಯಗಳೊಂದಿಗೆ ಮುಖಾಮುಖಿಯಾಗಿಸುವ ಮೂಲಕ ಅರಿಯುವ ವಿಶಿಷ್ಟ ಪ್ರಯತ್ನವನ್ನು ಮಾಡಿದೆ. ಕನ್ನಡ ಕಾವ್ಯದ ಈ ವಿಶಿಷ್ಟವಾದ ತಂತ್ರವನ್ನು, ಅದರ ಸಾಹಿತ್ಯಿಕ ಮತ್ತು ಸಾಂಸ್ಕೃತಿಕವಾದ ಇತ್ಯಾತ್ಮಕ ಪರಿಣಾಮ- ಸಾಧ್ಯತೆಗಳನ್ನು ಕಂಡುಕೊಳ್ಳಲು ಪ್ರಸ್ತುತ ಅಧ್ಯಯನದಿಂದ ಸಾಧ್ಯವಾಯಿತು.

೫. ವಸಾಹತುಶಾಹಿ ಪ್ರಜ್ಞೆ ನಮ್ಮಲ್ಲಿ ಚರಿತ್ರೆಯ ಬಗೆಗೆ ಬೆಳೆಸಿರುವ ಪಶ್ಚಿಮದ ದೃಷ್ಟಿಕೋನವು ಏಕಮುಖಿ ಹಾಗೂ ಘಟನಾಧಾರಿತವಾದುದಾಗಿದೆ. ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆಯಿಲ್ಲ ಎಂಬ ಟೀಕೆಯೊಂದಿಗೆ ಅವರು ನಮ್ಮಲ್ಲಿ ಬೆಳೆಸಿದ ಪಶ್ಚಿಮದ ತರತಮ ಧೋರಣೆಯಿಂದ ಕೂಡಿದ ಚಾರಿತ್ರಿಕ ಪ್ರಜ್ಞೆಗಿಂತ ಭಿನ್ನವಾದ ಚಾರಿತ್ರಿಕ ಪ್ರಜ್ಞೆ ಭಾರತೀಯರದ್ದು. ಘಟನೆ, ಕಾಲ ಹಾಗೂ ರಾಜರ ವೈಭವದ ಬದುಕಿನ ಏಳುಬೀಳುಗಳ ಚಿತ್ರಣಗಳಿಗಿಂತ ಭಿನ್ನವಾಗಿ ಚರಿತ್ರೆಯೆಂದರೆ ಒಂದು ನಿರ್ದಿಷ್ಟ ಕಾಲ ಮತ್ತು ಪ್ರದೇಶದ ಮಾನವ ಬದುಕು ಕಂಡುಕೊಂಡ ಜ್ಞಾನ ಎಂಬ ನೆಲೆಯ ಪ್ರಜ್ಞೆಯನ್ನು ಬೆಳೆಸಿಕೊಂಡು ಬಂದಿದೆ. ಮಾನವ ನಾಗರಿಕತೆಯು ತನ್ನ ಪರಿಸರದೊಂದಿಗಿನ ಒಡನಾಟಗಳಿಂದ ಕಂಡುಕೊಂಡ ಜ್ಞಾನವನ್ನು ಮೌಖಿಕ ಪರಂಪರೆಯಲ್ಲಿ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ ಸಾಹಿತ್ಯ ಕಟ್ಟಿಕೊಡುವ ಚರಿತ್ರೆಯ ಸ್ವರೂಪವು ಭಿನ್ನವಾಗಿರುತ್ತದೆ. ಪ್ರತಿಯೊಂದು ಕಾಲಘಟ್ಟದಲ್ಲೂ ಸಾಹಿತ್ಯ ಕೃತಿಯೊಂದು ತನ್ನ ಕಾಲದ ಸಾಂಸ್ಕೃತಿಕ ಚರಿತ್ರೆಯನ್ನು ಪುನಾರಚಿಸುವ ಪ್ರಕ್ರಿಯೆಯಲ್ಲಿ ತೊಡಗಿರುತ್ತದೆ. ವ್ಯಕ್ತಿಚಿತ್ರ ಕವಿತೆಗಳ ಮೂಲಕ ಕನ್ನಡ ಕಾವ್ಯ ಕಟ್ಟಿಕೊಡುತ್ತಿರುವ ಸಾಂಸ್ಕೃತಿಕ ಚರಿತ್ರೆಯ ಸ್ವರೂಪ ಯಾವ ಬಗೆಯದು ಎಂಬುದನ್ನು ಪ್ರಸ್ತುತ ಸಂಶೋಧನಾ ಅಧ್ಯಯನದಿಂದ ಕಂಡುಕೊಳ್ಳಲು ಸಾಧ್ಯವಾಗಿದೆ. ವ್ಯಕ್ತಿಚಿತ್ರ ಕವಿತೆಗಳು ಸಾಮಾಜಿಕ ಬದಲಾವಣೆಗಾಗಿ ಹೋರಾಡಿದ ವ್ಯಕ್ತಿತ್ವಗಳ ಮೂಲಕ ನಮ್ಮ ಪರಂಪರೆ ಮತ್ತು ವರ್ತಮಾನವನ್ನು ಮುಖಾಮುಖಿಯಾಗಿಸಿ ಸಾಮಾಜಿಕ ವಾಸ್ತವಗಳನ್ನು ಅರಿಯುವ ಪ್ರಯತ್ನವನ್ನು ಮಾಡಿವೆ. ಇವು ಕಟ್ಟಿಕೊಟ್ಟಿರುವ ಚಾರಿತ್ರಿಕ ವಾಸ್ತವಗಳು, ಪರಂಪರೆಯೊಂದಿಗೆ ಎತ್ತುವ ಪ್ರಶ್ನೆಗಳು ನಮ್ಮ ಸಾಂಸ್ಕೃತಿಕ ಚರಿತ್ರೆಯನ್ನು, ಅದರ ಸಂಕೀರ್ಣತೆಯನ್ನು ಅರಿಯುವಲ್ಲಿ ಹೊಸ ದೃಷ್ಟಿಕೋನವನ್ನು ಒದಗಿಸಿವೆ.

೬. ಬುದ್ಧ, ಬಸವಣ್ಣ, ಗಾಂಧಿ, ಅಂಬೇಡ್ಕರ್ ಈ ನಾಲ್ಕೂ ವ್ಯಕ್ತಿತ್ವಗಳನ್ನು ಹೊಸಗನ್ನಡ ಕಾವ್ಯ ತನ್ನ ಶಕ್ತಿ ಹಾಗೂ ಪರಿಮಿತಿಯಲ್ಲಿ ಹೇಗೆ ಗ್ರಹಿಸಿದೆ ಎಂಬುದು ಕುತೂಹಲದ ಸಂಗತಿ. ವ್ಯಕ್ತಿಗಳ ಬದುಕು, ಹೋರಾಟ, ಸಾಧನೆ, ಚಿಂತನೆಗಳನ್ನು ಸಾಹಿತ್ಯದ ಬೇರೆ ಬೇರೆ ಪ್ರಕಾರಗಳು ವಿವೇಚಿಸಿವೆ. ಇಲ್ಲಿ ವ್ಯಕ್ತಿಗಳ ಬದುಕನ್ನು ಸಮಗ್ರವಾಗಿ, ವಿಮರ್ಶಾತ್ಮಕವಾಗಿ ಹಾಗೂ ವಿಶ್ಲೇಷಣಾತ್ಮಕವಾಗಿ ಚರ್ಚಿಸಲು ವಿಪುಲ ಅವಕಾಶಗಳಿರುತ್ತವೆ. ಆದರೆ ಕಾವ್ಯವೆಂಬ ಪ್ರಕಾರ ವ್ಯಕ್ತಿಗಳ ವ್ಯಕ್ತಿತ್ವವನ್ನು ಹೇಗೆ ಹಿಡಿದಿಡುತ್ತದೆ, ವ್ಯಕ್ತಿತ್ವದ ಯಾವ ಗುಣ, ಧೋರಣೆಗಳಿಗೆ ಒತ್ತನ್ನು ನೀಡುತ್ತದೆ ಎಂಬುದನ್ನು ಅರಿಯಲು ಸಾಧ್ಯವಾಯಿತು. ಕಾವ್ಯ ಪ್ರತಿಮೆ, ರೂಪಕ ಮತ್ತು ಧ್ವನಿಶಕ್ತಿಯ ಮೂಲಕ ಕಟ್ಟಿಕೊಡುವ ವ್ಯಕ್ತಿತ್ವದ ಚಹರೆಗಳು ಉಳಿದ ಸಾಹಿತ್ಯ ಪ್ರಕಾರಗಳು ಕಟ್ಟಿಕೊಡುವುದಕ್ಕಿಂತ ಭಿನ್ನವಾಗಿರುವುದನ್ನು ಗುರುತಿಸಿಕೊಳ್ಳಲು ಪ್ರಸ್ತುತ ಅಧ್ಯಯನದಿಂದ ಸಾಧ್ಯವಾಯಿತು.

೭. ಈ ನಾಲ್ಕು ವ್ಯಕ್ತಿತ್ವಗಳು ಹೊಂದಿರುವ ಸಮಾನತೆ ಹಾಗೂ ಭಿನ್ನತೆಗಳಾವುವು? ಕವಿತೆಗಳು ಇವುಗಳನ್ನು ಹೇಗೆ ಗ್ರಹಿಸಿವೆ? ಎಂಬುದು ಮುಖ್ಯವಾದ ಪ್ರಶ್ನೆ. ಇವರ ಚಿಂತನೆ, ಹೋರಾಟದ ಸ್ವರೂಪದಲ್ಲಿ ಭಿನ್ನತೆ,

ಸಾಮ್ಯತೆಗಳಿದ್ದಾಗ್ಯೂ ಕವಿತೆಗಳು ಅವರ ಒಟ್ಟು ವ್ಯಕ್ತಿತ್ವವನ್ನು ಸಾಮಾಜಿಕ ಪರಿಣಾಮದ ನೆಲೆಯಲ್ಲಿ ಗ್ರಹಿಸಿವೆ. ಹಾಗಾಗಿ ವ್ಯಕ್ತಿಗಳ ಮಾನವೀಯ, ಜೀವಪರ ಸ್ವಭಾವಗಳು ಹೆಚ್ಚು ಚಿತ್ರಣಗೊಂಡಿವೆ. ನೊಂದವರಿಗಾಗಿ, ಸಮಾನತೆಗಾಗಿ, ಮಾನವೀಯ ಮೌಲ್ಯಗಳ ಉಳಿವಿಗಾಗಿ, ಸಾಮಾಜಿಕ-ಧಾರ್ಮಿಕ ಬದಲಾವಣೆಗಾಗಿ ಹೋರಾಡಿದ ವ್ಯಕ್ತಿತ್ವಗಳನ್ನು ಸಮಾಕಾಲೀನ ಬದುಕಿನಲ್ಲಿ ಹಾಗೂ ಚರಿತ್ರೆಯಲ್ಲಿ ಜೀವಂತವಾಗಿರಿಸಿಕೊಳ್ಳುವ ತುಡಿತವನ್ನು ಕವಿತೆಗಳು ವ್ಯಕ್ತಪಡಿಸಿವೆ. ಹೀಗೆ ವ್ಯಕ್ತಿತ್ವಗಳನ್ನು ಮಾನವೀಯ ನೆಲೆಯಲ್ಲಿ ಗ್ರಹಿಸಿ ಚಿತ್ರಿಸಿರುವ ವಿಶಿಷ್ಟತೆಯನ್ನು ಗುರುತಿಸಿಕೊಳ್ಳಲು ಸಾಧ್ಯವಾಯಿತು.

೮. ಹೊಸಗನ್ನಡ ಕಾವ್ಯದಲ್ಲಿ ವ್ಯಕ್ತಿ ಚಿತ್ರಣಗಳು ಹಲವು ನೆಲೆಗಳಲ್ಲಿ ಮೂಡಿಬಂದಿವೆ. ಇವುಗಳಲ್ಲಿ ಆರಾಧನೆ, ವೈಭವೀಕರಣ, ಅನನ್ಯತೆಯ ಶೋಧ, ಸಂಘರ್ಷದ ನೆಲೆಗಳನ್ನು ಕಾಣಬಹುದು. ಅನನ್ಯತೆ ಮತ್ತು ಸಂಘರ್ಷದ ನೆಲೆಗಳಿಗಿಂತ ಆರಾಧನೆ, ವೈಭವೀಕರಣದ ರಚನೆಗಳೇ ಹೆಚ್ಚಾಗಿ ಕಂಡುಬಂದಿವೆ. ಕನ್ನಡ ಸಾಹಿತ್ಯ ಚರಿತ್ರೆಯುದ್ದಕ್ಕೂ ಈ ಪ್ರಜ್ಞೆಯನ್ನು ಗುರುತಿಸಬಹುದು. ವ್ಯಕ್ತಿ ಆರಾಧನೆ ಮತ್ತು ವೈಭವೀಕರಣಗಳ ಹಿಂದೆ ನಮ್ಮ ಸಾಮಾಜಿಕ ವ್ಯವಸ್ಥೆಯ ಒತ್ತಡಗಳಿರುವುದನ್ನು ಕಾಣಬಹುದು. ವೈಭವೀಕರಣ ಮತ್ತು ಕೀರ್ತಿಸುವಿಕೆಯ ಪ್ರಜ್ಞೆ ಕನ್ನಡದ ಸಾಂಸ್ಕೃತಿಕ ಸುಪ್ತ ಮನಸ್ಸಿನಲ್ಲಿ ಆಳವಾಗಿ ಬೇರೂರಿರುವ ಹಾಗೆ ಕಾಣುತ್ತದೆ. ಹೀಗಿದ್ದರೂ ಸೂಕ್ಷ್ಮ ವೈಚಾರಿಕ ಒಳನೋಟಗಳೂ ಇಲ್ಲದಿಲ್ಲ. ಆದರೆ ಇದು ಪ್ರಧಾನ ವಿವೇಚನೆಯಾಗಿ ಕಂಡುಬಂದಿರುವುದು ವ್ಯಕ್ತಿತ್ವ ಗ್ರಹಿಕೆಯ ಮಿತಿಯೂ ಹೌದು. ಹಾಗೆಯೆ ವ್ಯಕ್ತಿತ್ವಗಳ ಅನನ್ಯತೆಯನ್ನೂ, ಅದನ್ನು ಗುರುತಿಸಿಕೊಳ್ಳುವ ಧೋರಣೆಯ ಹಿಂದಿನ ಪ್ರಭಾವಗಳನ್ನು ಅರಿಯಲು ಪ್ರಸ್ತುತ ಅಧ್ಯಯದಿಂದ ಸಾಧ್ಯವಾಯಿತು. ವ್ಯಕ್ತಿತ್ವ ಶೋಧನೆಯ ಪ್ರಕ್ರಿಯೆಯು ಸಾಂಸ್ಕೃತಿಕ ಶೋಧವೂ, ಚಾರಿತ್ರಿಕ ಶೋಧವೂ ಆಗಬಹುದಾದ ನೆಲೆಗಳನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಯಿತು.

೯. ವ್ಯಕ್ತಿಚಿತ್ರ ಕವಿತೆಗಳು ನಮ್ಮ ಪರಂಪರೆಯ ಶ್ರೇಷ್ಠ ವ್ಯಕ್ತಿತ್ವಗಳನ್ನು ಸಮಕಾಲೀನ ಸಾಂಸ್ಕೃತಿಕ ಸಮಸ್ಯೆಗಳು ಮತ್ತು ಸವಾಲುಗಳ ನಡುವೆ ಇಟ್ಟು ನೋಡುವ ಮೂಲಕ ವ್ಯಕ್ತಿತ್ವಗಳ ಮಹತ್ವವನ್ನು, ಪ್ರಸ್ತುತತೆಯನ್ನು ಅರಿಯುವ ಪ್ರಯತ್ನ ಮಾಡಿವೆ. ಈ ಪ್ರಯತ್ನಗಳು ವರ್ತಮಾನದ ಸಮಸ್ಯೆಗಳಿಗೆ ಪರಂಪರೆಯ ವ್ಯಕ್ತಿತ್ವಗಳಿಂದ ಪರಿಹಾರವನ್ನು ಕಂಡುಕೊಳ್ಳುವ ಆಶಯವಾಗಿಯೂ, ಆ ವ್ಯಕ್ತಿತ್ವಗಳನ್ನು ಹೀಗೆ ಮುಖಾಮುಖಿಯಾಗಿಯೇ ಅರಿಯಬೇಕಾದ ಅಗತ್ಯತೆಯ ಪ್ರತಿಪಾದನೆಯಾಗಿಯೂ ಕಂಡುಬರುತ್ತವೆ. ಇಂಥ ಸಂದರ್ಭದಲ್ಲಿ ವ್ಯಕ್ತಿತ್ವಗಳು ಪಡೆದುಕೊಳ್ಳುತ್ತಿರುವ ವಿಸ್ತಾರತೆ – ಸಂಕುಚಿತತೆಗಳ ಸ್ವರೂಪ ವಿಶಿಷ್ಟವಾಗಿರುತ್ತದೆ. ಹೀಗೆ ವ್ಯಕ್ತಿತ್ವಗಳನ್ನು ಅರಿಯುವ ವಿಶಿಷ್ಟ ಕ್ರಮಗಳನ್ನು ವ್ಯಕ್ತಿಚಿತ್ರ ಕವಿತೆಗಳು ತೋರಿಸಿಕೊಟ್ಟಿವೆ. ಸಮಕಾಲೀನ ಬದುಕನ್ನು, ಮನುಷ್ಯ ಸ್ವಭಾವಗಳನ್ನು ಅರಿಯುವ, ತಿದ್ದುವ ವಿಶಿಷ್ಟ ಪ್ರಯತ್ನಗಳೂ ಹೌದು. ಹಾಗಾಗಿ ಇವು ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಮಹತ್ವದ ಒಳನೋಟಗಳಾಗಿವೆ. ಈ ಎಲ್ಲಾ ಅಂಶಗಳನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಯಿತು.

೧೦. ವಸ್ತುವಿನ ದೃಷ್ಟಿಯಿಂದ ಕಾವ್ಯ ಪ್ರಕಾರದಲ್ಲೇ ವಿಶಿಷ್ಟ ಬಗೆಯಾಗಿ ತೋರುವ ವ್ಯಕ್ತಿಚಿತ್ರ ಕವಿತೆಗಳ ಸ್ವರೂಪ, ಅಭಿವ್ಯಕ್ತಿ ಕ್ರಮ, ಅದರ ಸಾಧ್ಯತೆಗಳು- ಮಿತಿಗಳು, ಚರಿತ್ರೆಯ ಪುನರ್‌ರಚನೆಯ ಪ್ರಕ್ರಿಯೆಯಲ್ಲಿ ಅದರ ಪಾತ್ರ ಮುಂತಾದವುಗಳನ್ನು ಗುರುತಿಸಿಕೊಳ್ಳಲು ಸಾಧ್ಯವಾಯಿತು. ವ್ಯಕ್ತಿಚಿತ್ರ ಕವಿತೆಗಳ ಸಾಧ್ಯತೆಯ ದೃಷ್ಟಿಯಿಂದ ಕನ್ನಡದ ವ್ಯಕ್ತಿಚಿತ್ರ ಕವಿತೆಗಳು ಈ ನಿಟ್ಟಿನಲ್ಲಿ ಸಾಕಷ್ಟು ಯಶಸ್ಸು ಕಂಡಿವೆ. ಕವಿತೆಗಳು ಮಿತಿ, ದೌರ್ಬಲ್ಯಗಳ

ನಡುವೆಯೂ ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸಿರುವ ಕ್ರಮಗಳು ವಿಶಿಷ್ಟವಾದವಾಗಿವೆ. ಈ ಪ್ರಕ್ರಿಯೆಗಳನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲು ಸಾಧ್ಯವಾಯಿತು.

೧೧. ನಾಗರೀಕತೆಯ ಗುರಿ ಮಾನವ ವ್ಯಕ್ತಿತ್ವಗಳನ್ನು ಮಾನವೀಯ ಮೌಲ್ಯಗಳ ನೆಲೆಯಲ್ಲಿ ಉನ್ನತೀಕರಣಗೊಳಿಸುವುದು. ನಾಗರೀಕತೆಯ ಯಶಸ್ಸು ಅದು ಹೊಂದಿರುವ ವ್ಯಕ್ತಿತ್ವಗಳ ಸ್ವರೂಪವನ್ನು ಅವಲಂಬಿಸಿರುತ್ತದೆ. ಮಾನವೀಯ ಕಾಳಜಿಯಿರುವ ಸಾಹಿತ್ಯ ತನ್ನ ಸಮಾಜದ ವ್ಯಕ್ತಿತ್ವಗಳನ್ನು ರೂಪಿಸುವ ಜವಾಬ್ದಾರಿಯನ್ನು ನಿರ್ವಹಿಸುತ್ತಿರುತ್ತದೆ. ಉನ್ನತ ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸುವ ಮೂಲಕ ತನ್ನ ಸಮಾಜಕ್ಕೆ ಶ್ರೇಷ್ಠ ವ್ಯಕ್ತಿತ್ವದ ಮಾದರಿಗಳನ್ನು ಕಟ್ಟಿಕೊಡುತ್ತಿರುತ್ತದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಕನ್ನಡ ಕಾವ್ಯ ರೂಪಿಸಿಕೊಡುತ್ತಿರುವ ಶ್ರೇಷ್ಠ ವ್ಯಕ್ತಿತ್ವದ ಮಾದರಿಗಳನ್ನು ತಿಳಿಯಲು ಸಹಕಾರಿಯಾಗಿದೆ.

೧೨. ವ್ಯಕ್ತಿಚಿತ್ರ ಕವಿತೆಗಳ ಮೂಲಕ ಕವಿಗಳು ಸಾಮಾಜಿಕ ಮತ್ತು ರಾಜಕೀಯ ವಿಡಂಬನೆಯನ್ನು ಮಾಡಿದ್ದಾರೆ. ಆ ಮೂಲಕ ತಮ್ಮ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಗಳನ್ನು ಸುಧಾರಿಸುವ ವಿಶಿಷ್ಟ ಕಾಳಜಿಗಳನ್ನು ವ್ಯಕ್ತಪಡಿಸಿದ್ದಾರೆ. ಸಮಾಜದ ವ್ಯಕ್ತಿತ್ವಗಳ ಸುಧಾರಣೆಯನ್ನು ಮಾಡುವ ಕಾವ್ಯದ ಕಾಳಜಿ ಸಾಹಿತ್ಯದ ಸಾಮಾಜಿಕ ಜವಾಬ್ದಾರಿಯನ್ನು ಬಿಂಬಿಸುತ್ತದೆ. ಪ್ರಸ್ತುತ ಅಧ್ಯಯನವು ಸಾಹಿತ್ಯದ ಸಾಮಾಜಿಕ ಹೊಣೆಗಾರಿಕೆಯನ್ನು ಅರಿಯಲು ಸಹಕಾರಿಯಾಯಿತು.

೧೩. ಕವಿಗಳು ತಮ್ಮನ್ನು, ತಾವು ಬದುಕುತ್ತಿರುವ ವ್ಯವಸ್ಥೆಯನ್ನು ಆತ್ಮಾವಲೋಕನ ಹಾಗು ವಿಮರ್ಶೆ ಮಾಡಿಕೊಳ್ಳುವ ಮೂಲಕ ನೈತಿಕತೆಯನ್ನು, ಮಾನವೀಯ ಮೌಲ್ಯಗಳನ್ನು ಸಮಕಾಲೀನ ಜನತೆಯಲ್ಲಿ ಜಾಗೃತಗೊಳಿಸುವ ಪ್ರಕ್ರಿಯೆಯಲ್ಲಿ ತೊಡಗಿದ್ದಾರೆ. ವ್ಯಕ್ತಿಚಿತ್ರ ಕವಿತೆಗಳಲ್ಲಿ ಇದು ಭಿನ್ನವಾಗಿ ವ್ಯಕ್ತವಾಗಿರುವುದನ್ನು ಕಾಣಬಹುದು. ಪರಂಪರೆಯ ಉನ್ನತ ವ್ಯಕ್ತಿತ್ವಗಳನ್ನು ಸಾಕ್ಷಿಪ್ರಜ್ಞೆಯಾಗಿಟ್ಟುಕೊಂಡು ತಮ್ಮನ್ನೂ, ತಮ್ಮ ಎದುರಿನ ಸಾಮಾಜವನ್ನೂ ಪ್ರಾಮಾಣಿಕವಾಗಿ ವಿಮರ್ಶೆಗೆ ಒಳಪಡಿಸುವ ಕೆಲಸವನ್ನು ಮಾಡಿವೆ. ವ್ಯಕ್ತಿಚಿತ್ರ ಕವಿತೆಗಳ ಈ ವಿಶಿಷ್ಟ ಕಾಳಜಿ ಮತ್ತು ಅಭಿವ್ಯಕ್ತಿಯ ಸಾಧ್ಯತೆಗಳನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲು ಸಾಧ್ಯವಾಯಿತು.

೧೪. ಜಾಗತೀಕರಣ, ಯುದ್ಧ, ಜಾತಿ ಶೋಷಣೆ, ಅಸಮಾನತೆ, ಭ್ರಷ್ಟಾಚಾರ, ನೈತಿಕತೆಯ ಅಧಃಪತನ, ಭಯೋತ್ಪಾದನೆ ಮುಂತಾದ ಸಮಸ್ಯೆಗಳ ನಡುವೆ ನಲುಗುತ್ತಿರುವ ಜಗತ್ತನ್ನು ಮುಕ್ತಗೊಳಿಸಲು ನಮ್ಮ ಪರಂಪರೆಯ ಉಜ್ವಲ ವ್ಯಕ್ತಿತ್ವಗಳಲ್ಲಿ ಉತ್ತರಗಳನ್ನು ಹುಡುಕುವ, ಅವರ ಮರುಹುಟ್ಟಿಗಾಗಿ ಹಂಬಲಿಸುವ, ಅವರ ಚಿಂತನೆ– ಹೋರಾಟಗಳ ಪ್ರಸ್ತುತತೆಯನ್ನು ಒತ್ತಿ ಹೇಳುತ್ತಿರುವ ಕವಿಗಳ ಮಾನವೀಯ ಕಾಳಜಿಗಳನ್ನು, ಸಾಮಾಜಿಕ ಹೊಣೆಗಾರಿಕೆಗಳನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲು ಸಾಧ್ಯವಾಯಿತು.

೧೫. ವ್ಯಕ್ತಿಚಿತ್ರ ಕವಿತೆಗಳು ಕೇವಲ ವ್ಯಕ್ತಿಯ ಉನ್ನತ ಗುಣಗಳ ಬಣ್ಣನೆಗಳು ಮಾತ್ರವಾಗಿರದೆ ಆ ವ್ಯಕ್ತಿತ್ವಗಳನ್ನು ನೆಪವಾಗಿರಿಸಿಕೊಂಡು ಹಾಗೂ ನೈತಿಕ ಅಸ್ತ್ರವಾಗಿ ಬಳಸಿಕೊಂಡು ಸಮಕಾಲೀನ ಸಾಂಸ್ಕೃತಿಕ ಬದುಕಿನ ಜೀವವಿರೋಧಿ ಧೋರಣೆಗಳಿಗೆ ಒಡ್ಡಿದ ಪ್ರಬಲ ಪ್ರತಿರೋಧಗಳಾಗಿವೆ. ಕನ್ನಡ ಕಾವ್ಯದ ಪ್ರತಿರೋಧದ ನೆಲೆಗಳನ್ನು ಅರಿಯಲು ಪಸ್ತುತ ಅಧ್ಯಯನದಿಂದ ಸಾಧ್ಯವಾಯಿತು.

೧೬. ಕವಿಗಳು ಪರಂಪರೆಯ ಶ್ರೇಷ್ಠ ವ್ಯಕ್ತಿತ್ವಗಳನ್ನು ವರ್ತಮಾನದ ಅಗತ್ಯಗಳಿಗೆ ತಕ್ಕಂತೆ ಶೋಧಿಸಿಕೊಳ್ಳುವ ಮೂಲಕ ವ್ಯಕ್ತಿತ್ವಗಳಲ್ಲಿ 'ತಾಯ್ತನ'ದ ಮೌಲ್ಯಗಳ ಹುಡುಕಾಟದಲ್ಲಿ ತೊಡಗಿದ್ದಾರೆ. ಹಾಗಾಗಿಯೇ ಆ ವ್ಯಕ್ತಿತ್ವಗಳ ಎದುರಿಗೆ ತಮ್ಮೆಲ್ಲಾ ನೋವು, ಹತಾಶೆ, ಆಕ್ರೋಶ, ಕನಸು, ಸಿಟ್ಟು, ಹಂಬಲಗಳನ್ನು ತೋಡಿಕೊಳ್ಳುವ ಪ್ರಯತ್ನ

ಮಾಡಿದ್ದಾರೆ. ಅವರ ಮರುಹುಟ್ಟಿಗಾಗಿ ಹಂಬಲಿಸಿದ್ದಾರೆ. ವ್ಯವಸ್ಥೆಯ ಸುಧಾರಣೆಗಾಗಿ ಹಪಹಪಿಸಿದ್ದಾರೆ. ಇವೆಲ್ಲವು ಕನ್ನಡದ ವ್ಯಕ್ತಿಚಿತ್ರ ಕವಿತೆಗಳ ವಿಶಿಷ್ಟ ಸ್ವರೂಪವನ್ನು, ಅವುಗಳ ಕಾಳಜಿಗಳನ್ನು ತಿಳಿಸುತ್ತವೆ. ಇವು ವ್ಯಕ್ತಿಚಿತ್ರ ಕವಿತೆಗಳ ಸಾಧ್ಯತೆಗಳೂ ಹೌದು. ಇವೆಲ್ಲವನ್ನು ಕಂಡುಕೊಳ್ಳಲು ಪ್ರಸ್ತುತ ಅಧ್ಯಯನದಿಂದ ಸಾಧ್ಯವಾಯಿತು.

**ಅಧ್ಯಯನದ ಸಾಧ್ಯತೆ ಮತ್ತು ಸವಾಲುಗಳು :**

೧. ಪ್ರಸ್ತುತ ಸಂಶೋಧನಾ ಪ್ರಬಂಧವು ಬುದ್ಧ, ಬಸವಣ್ಣ, ಗಾಂಧಿ ಹಾಗೂ ಅಂಬೇಡ್ಕರ್ ಈ ನಾಲ್ಕೂ ವ್ಯಕ್ತಿಗಳ ಬಗೆಗೆ ರಚನೆಗೊಂಡಿರುವ ವ್ಯಕ್ತಿಚಿತ್ರ ಕವಿತೆಗಳು ನಡೆಸುವ ವ್ಯಕ್ತಿತ್ವ ಶೋಧ ಪ್ರಕ್ರಿಯೆಯ ನೆಲೆಗಳನ್ನು ವಿಮರ್ಶೆಗೆ ಒಳಪಡಿಸಿದೆ. ಹೊಸಗನ್ನಡ ಕಾವ್ಯದಲ್ಲಿ ಹಲವಾರು ವ್ಯಕ್ತಿಗಳ ಬಗೆಗೆ ವ್ಯಕ್ತಿಚಿತ್ರ ಕವಿತೆಗಳು ರಚನೆಗೊಂಡಿದ್ದರೂ ಈ ನಾಲ್ಕು ಜನ ವ್ಯಕ್ತಿಗಳಿಗೆ ಪ್ರಸ್ತುತ ಅಧ್ಯಯನವನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ತಾತ್ವಿಕತೆಯನ್ನು ರೂಪಿಸಿಕೊಳ್ಳುವಾಗ ಒಟ್ಟು ವ್ಯಕ್ತಿಚಿತ್ರ ಕವಿತೆಗಳನ್ನು, ಅವು ನಡೆಸುವ ವ್ಯಕ್ತಿತ್ವ ಶೋಧದ ನೆಲೆಗಳ ಹಿನ್ನೆಲೆಯಲ್ಲಿ ವಿವೇಚಿಸಿದ್ದರೂ ಅಧ್ಯಯನದ ವ್ಯಾಪ್ತಿ ವಿಸ್ತೃತವಾಗುವ ಕಾರಣಕ್ಕೆ ಈ ನಾಲ್ಕು ಜನರಿಗೆ ಮಿತಿಗೊಳಿಸಿಕೊಳ್ಳಲಾಗಿದೆ. ಇದು ಈ ಅಧ್ಯಯನದ ಪರಿಮಿತಿಯಾದರೂ ಈ ಹಿನ್ನೆಲೆಯಲ್ಲಿಯೇ ಬೇರೆ ಬೇರೆ ಕ್ಷೇತ್ರ ಸಮೂದಾಯ, ತಾತ್ವಿಕತೆಯ ವ್ಯಕ್ತಿತ್ವಗಳ ಶೋಧ ಪ್ರಕ್ರಿಯೆಯನ್ನು ಕನ್ನಡ ಕಾವ್ಯ ಹೇಗೆ ನಡೆಸಿದೆ ಎಂಬುದನ್ನು ಇನ್ನಷ್ಟು ವಿಶಾಲ ವ್ಯಾಪ್ತಿಯಲ್ಲಿ ನಡೆಸಲು ಸಾಧ್ಯವಿದೆ. ಶೋಷಣೆಗೆ ಒಳಗಾದ, ಅಲಕ್ಷಿತ ಸಮುದಾಯದ, ತನ್ನ ಮಟ್ಟಿಗೆ ವಿಶಿಷ್ಟವಾಗಿ ಬದುಕಿದ, ಸಮುದಾಯಕ್ಕಾಗಿ ಹೋರಾಡಿದ, ಚಾರಿತ್ರಿಕ, ಪೌರಾಣಿಕ ಮುಂತಾದ ಕ್ಷೇತ್ರಗಳಿಗೆ ಸಂಬಂಧಿಸಿದ ವಿಭಿನ್ನ ವ್ಯಕ್ತಿತ್ವಗಳ ಹುಡುಕಾಟ ಹಾಗೂ ಚಿತ್ರಣವನ್ನು ಸಾಂಸ್ಕೃತಿಕ, ಚಾರಿತ್ರಿಕ ದೃಷ್ಟಿಯಿಂದ ಅಧ್ಯಯನ ಮಾಡಲು ಸಾಕಷ್ಟು ಅವಕಾಶಗಳಿವೆ.

೨. ಹೊಸಗನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳೂ ನೇರವಾಗಿಯೋ ಅಥವಾ ಅಮೂರ್ತವಾಗಿಯೋ ಈ ನಾಲ್ಕು ವೈಚಾರಿಕ ಆಕೃತಿಗಳನ್ನು ಎದುರಾಗಿವೆ. ಅಸಮಾನತೆ, ಶೋಷಣೆ, ಕೌರ್ಯದ ವಿರುದ್ಧ ಮಾತನಾಡುವಾಗೆಲ್ಲಾ ಹಾಗೂ ಮಾನವೀಯವಾಗಿ, ಪ್ರಗತಿಪರವಾಗಿ ವಿವೇಚಿಸುವಾಗೆಲ್ಲಾ ಈ ನಾಲ್ಕೂ ವ್ಯಕ್ತಿತ್ವಗಳನ್ನು ಎಡತಾಕಲೇಬೇಕಾಗುತ್ತದೆ. ಹಾಗಾಗಿ ಒಟ್ಟು ಕನ್ನಡದ ವಿವೇಚನೆ ಈ ನಾಲ್ಕೂ ಜನರನ್ನು ಗ್ರಹಿಸಿರುವ, ರೂಪಿಸಿಕೊಡುತ್ತಿರುವ ಬಗೆಯನ್ನು ಅತ್ಯಂತ ಖಚಿತ ಹಾಗೂ ಸಮಗ್ರವಾಗಿ ತಿಳಿಯಬೇಕಾದರೆ ಸಾಹಿತ್ಯದ ಎಲ್ಲಾ ಪ್ರಕಾರಗಳ ಸಮಗ್ರ ಗ್ರಹಿಕೆ ಬೇಕಾಗುತ್ತದೆ. ಈ ಅಧ್ಯಯನ ಕೇವಲ ಹೊಸಗನ್ನಡ ಕಾವ್ಯಕ್ಕೆ, ಅದರಲ್ಲೂ ವ್ಯಕ್ತಿಚಿತ್ರ ಕವಿತೆಗಳಿಗೆ ಸೀಮಿತವಾಗಿದೆ. ಒಟ್ಟು ಹೊಸಗನ್ನಡ ಸಾಹಿತ್ಯವನ್ನು ಸಮಗ್ರವಾಗಿ ಈ ನಾಲ್ಕು ಜನರ ವ್ಯಕ್ತಿತ್ವ ಶೋಧದ ಹಿನ್ನೆಲೆಯಲ್ಲಿ ನೋಡಿದಾಗ ಕನ್ನಡದ ಮನಸ್ಸು ಇವರನ್ನು ಎದುರಾದ, ಅರಗಿಸಿಕೊಂಡ ಸಮಗ್ರ ನೋಟ ಸಿಗುತ್ತದೆ. ಈ ನೆಲೆಯಲ್ಲಿ ಅಧ್ಯಯನ ಕೈಗೊಳ್ಳುವವರಿಗೆ ಸಾಕಷ್ಟು ಅವಕಾಶಗಳಿವೆ.

೩. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಇವರು ಈ ಹೊತ್ತಿನಲ್ಲಿ ನಮಗೆ ಕಾಣಿಸಿಕೊಳ್ಳುತ್ತಿರುವುದು ವ್ಯಕ್ತಿಗಳಾಗಿ ಅಲ್ಲ, ಬದಲಾಗಿ ತಾತ್ವಿಕ ಆಕೃತಿಗಳಾಗಿ. ಪ್ರತಿಯೊಬ್ಬ ಲೇಖಕರೂ ತಮ್ಮದೇ ಆದ ತಾತ್ವಿಕ ಆಕೃತಿಗಳಿಂದ ಪ್ರಭಾವಿಸಲ್ಪಟ್ಟಿರುತ್ತಾರೆ. ಏಕ ಕಾಲದಲ್ಲಿ ಲೇಖಕರುಗಳು ಹಲವು ತಾತ್ವಿಕ ಆಕೃತಿಗಳ ಪ್ರಭಾವಕ್ಕೆ ಒಳಗಾಗಿರಲೂ ಸಾಧ್ಯವಿದೆ. ಹಾಗೂ ಕಾಲದಿಂದ ಕಾಲಕ್ಕೆ ತನ್ನ ತಾತ್ವಿಕ ನಿಲುವುಗಳನ್ನು

ಬದಲಾಯಿಸಿಕೊಳ್ಳುತ್ತಲೂ ಇರುತ್ತಾರೆ. ಈ ನಿಟ್ಟಿನಲ್ಲಿ ಈ ನಾಲ್ಕೂ ತಾತ್ವಿಕ ಆಕೃತಿಗಳು ಕನ್ನಡದ ಲೇಖಕರನ್ನು ಹೇಗೆ ಮತ್ತು ಯಾವ ಪ್ರಮಾಣದಲ್ಲಿ ಪ್ರಭಾವಿಸಿದ್ದಾರೆ ಎಂಬುದು ಮಹತ್ವದ ಪ್ರಶ್ನೆಯಾಗಿದೆ. ಲೇಖಕರ ಸಾಹಿತ್ಯಾಭಿವ್ಯಕ್ತಿಯ ಹಿಂದಿನ ವೈಚಾರಿಕ, ತಾತ್ವಿಕ ಪ್ರಭಾವಗಳ ಅರಿವು ಅವರ ಸಾಹಿತ್ಯದ ವಿವೇಚನೆಗೆ ನೆರವು ನೀಡಬಲ್ಲದು. ಈ ನಿಟ್ಟಿನಲ್ಲಿ ಕೇವಲ ವ್ಯಕ್ತಿಚಿತ್ರ ಕವಿತೆಗಳ ಮೂಲಕವೇ ಕವಿಯ ತಾತ್ವಿಕ ಪ್ರಭಾವಗಳನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ. ಈ ನಾಲ್ಕು ಜನರ ಬಗೆಗೆ ಕವಿತೆ ಬರೆಯದವರೂ, ನೇರವಾಗಿ ಲೇಖನ, ವಿಚಾರ ಮಂಡನೆ ಮಾಡದವರೂ ತಮ್ಮ ಸಾಹಿತ್ಯದ ಒಟ್ಟು ಆಶಯದಲ್ಲಿ ಅವರ ತಾತ್ವಿಕ ನಿಲುವುಗಳನ್ನು ಮುಖಾಮುಖಿಯಾಗಿರುವುದನ್ನು ಕಾಣಬಹುದು. ಉದಾಹರಣೆಗೆ; ಕುವೆಂಪು ವಚನ ಚಳುವಳಿಯ ಬಗೆಗೆ, ಅಂಬೇಡ್ಕರ್ ಬಗೆಗೆ ಎಲ್ಲೂ ಗಂಭೀರವಾಗಿ ಮಾತನಾಡದಿದ್ದರೂ ಅವರ ಒಟ್ಟು ಸಾಹಿತ್ಯದ ಆಶಯಗಳು ಆ ನೆಲೆಯವೇ ಆಗಿರುವುದನ್ನು ಕಾಣಬಹುದು. ಹಾಗಾಗಿ ವ್ಯಕ್ತಿಗಳ ಬಗೆಗೆ ಕವಿತೆ ರಚಿಸದ ಮಾತ್ರಕ್ಕೆ ಆ ವ್ಯಕ್ತಿಯ ಬಗೆಗೆ, ಚಿಂತನೆಗಳ ಬಗೆಗೆ ವಿರೋಧವಿದೆ ಎಂದಾಗಲೀ, ಅಲಕ್ಷಿಸಲಾಗಿದೆ ಎಂದಾಗಲೀ ಅಲ್ಲ. ಇದನ್ನು ಒಟ್ಟು ಸಾಹಿತ್ಯದ ಆಶಯಗಳ ನೆಲೆಯಿಂದ ನೋಡಿ ಗ್ರಹಿಸಬೇಕಾಗಿರುತ್ತದೆ. ಹಾಗಾಗಿ ಈ ಅಧ್ಯಯನ ಲೇಖಕರ ಮೇಲಿನ ತಾತ್ವಿಕ ಪ್ರಭಾವಗಳನ್ನು ಅವರ ಸಾಹಿತ್ಯದ ಆಶಯಗಳ ಮೂಲಕವೇ ಗ್ರಹಿಸಬೇಕಾದುದನ್ನು ತಿಳಿಸುತ್ತದೆ. ಈ ದೃಷ್ಟಿಯಿಂದ ಸಾಹಿತ್ಯ ಕೃತಿಗಳ ಆಶಯಗಳ ಮೂಲಕ ನಡೆಸಲಾಗುವ ವ್ಯಕ್ತಿತ್ವ ಶೋಧದ ನೆಲೆಗಳನ್ನು ಅಧ್ಯಯನ ಮಾಡಲು ಅವಕಾಶವಿದೆ. ಉದಾಹರಣೆಗೆ ಎಚ್.ನಾಗವೇಣಿಯವರ 'ಗಾಂಧಿ ಬಂದ', ಕುವೆಂಪುರವರ 'ಕಾನೂರು ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು', 'ಜಲಗಾರ', 'ಶ್ಮಶಾನ ಕುರುಕ್ಷೇತ್ರ' ಲಂಕೇಶ್‌ರವರ 'ಸಂಕ್ರಾಂತಿ', ಗಿರೀಶ್ ಕಾರ್ನಾಡರ 'ತಲೆದಂಡ', ಹೆಚ್.ಎಸ್. ಶಿವಪ್ರಕಾಶರ 'ಶಿವರಾತ್ರಿ', 'ಮಹಾಚೈತ್ರ', ಮುಂತಾದ ಕೃತಿಗಳನ್ನು ಬುದ್ಧ, ಬಸವಣ್ಣ, ಗಾಂಧಿ, ಅಂಬೇಡ್ಕರ್ ಅವರ ಚಿಂತನೆಗಳ ಹಿನ್ನೆಲೆಯಲ್ಲಿ ವಿವೇಚಿಸಲು ಸಾಧ್ಯವಿದೆ.

೪. ಕವಿತೆಗಳು ತಮ್ಮ ಮಿತಿ ಮತ್ತು ಶಕ್ತಿಯ ಒಳಗೆ ಈ ವ್ಯಕ್ತಿತ್ವಗಳ ಕೆಲವು ಆಯಾಮಗಳನ್ನು ಮಾತ್ರ ವಿವೇಚಿಸಿವೆ. ವ್ಯಕ್ತಿತ್ವಗಳ ಸಮಗ್ರ ನೋಟ ಇಲ್ಲಿ ಸಿಗಲಾರದು. ವ್ಯಕ್ತಿಗಳ ಸಮಗ್ರ ಚಿಂತನೆ, ಹೋರಾಟಗಳ ಸ್ವರೂಪವನ್ನು, ಅವುಗಳ ಪ್ರಸ್ತುತತೆಯನ್ನು ಅರಿಯಲು ಕವಿತೆಗಳ ಅಧ್ಯಯನದಲ್ಲಿ ಮಿತಿಯಿದೆ. ಈ ದೃಷ್ಟಿಯಿಂದ ವ್ಯಕ್ತಿಗಳ ವ್ಯಕ್ತಿತ್ವದ ಸಮಗ್ರ ತಿಳಿವಳಿಕೆಗಾಗಿ ಇತರ ಸಾಹಿತ್ಯ ಹಾಗೂ ಶಾಸ್ತ್ರಗ್ರಂಥಗಳ ತೌಲನಿಕ ಅಧ್ಯಯನ ಅವಶ್ಯಕವಾಗಿದೆ. ಈ ನಿಟ್ಟಿನಲ್ಲಿ ಅಧ್ಯಯನ ಮುಂದುವರೆಸಲು ಸಾಧ್ಯವಿದೆ.

೫. ವ್ಯಕ್ತಿತ್ವವನ್ನು ವೈಜ್ಞಾನಿಕ ಮತ್ತು ಶಾಸ್ತ್ರೀಯವಾಗಿ ವಿವೇಚಿಸುವ ಬಹುಮುಖ್ಯ ಜ್ಞಾನಶಾಖೆ ಮನಶಾಸ್ತ್ರ. ವ್ಯಕ್ತಿತ್ವವನ್ನು ಪ್ರಭಾವಿಸುವ ಅಂಶಗಳು, ಅದರ ಸ್ವರೂಪ, ವ್ಯಕ್ತಿತ್ವದ ಬಗೆಗಳ ಬಗ್ಗೆ ಮನಶಾಸ್ತ್ರದ ವಿವೇಚನೆಗಳನ್ನು ಬಳಸಿಕೊಂಡು ಸಾರ್ವಜನಿಕ ಕ್ಷೇತ್ರದ ಮತ್ತು ಉದಾತ್ತ ವ್ಯಕ್ತಿತ್ವಗಳ ವಿಕಾಸ ಪಥವನ್ನು ವಿವೇಚಿಸಲು ಸಾಧ್ಯವಿದೆ. ವ್ಯಕ್ತಿ ತನ್ನ ವೈಯಕ್ತಿಕತೆಯನ್ನು ಮೀರಿ ಸಮುದಾಯದ ಉದ್ಧಾರಕ್ಕೆ, ಪರಿವರ್ತನೆಗೆ ತನ್ನನ್ನು ತಾನು ತೆತ್ತುಕೊಳ್ಳುವ ದೃಢನಿಲುವುಗಳ ಹಿಂದಿನ ಪ್ರಭಾವ ಪ್ರೇರಣೆಗಳ, ಮಾನಸಿಕ ವ್ಯಾಪಾರಗಳ ಅಧ್ಯಯನ ಬಹಳ ಅರ್ಥಪೂರ್ಣ ಅಧ್ಯಯನವಾಗಬಲ್ಲದು. ವ್ಯಕ್ತಿಯ ಕುಟುಂಬ, ಸಾಮಾಜಿಕ ಮತ್ತು ಕೌಟುಂಬಿಕ ಪರಿಸರ, ಬದುಕಿನ ಅನುಭವಗಳು ಅವರ ವ್ಯಕ್ತಿತ್ವವನ್ನು ಗಾಢವಾಗಿ ಪ್ರಭಾವಿಸಿರುತ್ತವೆ ಎಂದು ಪ್ರತಿಪಾದಿಸುವ ಮನಶಾಸ್ತ್ರದ ನಿಲುವುಗಳ ಮೂಲಕ ಗಾಂಧಿ, ಅಂಬೇಡ್ಕರ್ ವ್ಯಕ್ತಿತ್ವಗಳನ್ನು ವಿವೇಚಿಸಿದಾಗ ಆ ವ್ಯಕ್ತಿತ್ವದಲ್ಲಿನ ದೊಡ್ಡ

ಪರಿವರ್ತನೆ ಮತ್ತು ಬೆಳವಣಿಗೆಗಳ ಹಿಂದೆ 'ಅವಮಾನದ' 'ಹತಾಶೆಯ' ಅನುಭವಗಳಿವೆ ಎಂಬುದು ಗೋಚರವಾಗುತ್ತದೆ. ಹಾಗೆಯೇ ಬುದ್ಧ ಮತ್ತು ಬಸವಣ್ಣನ ವೈಚಾರಿಕ ವ್ಯಕ್ತಿತ್ವದ ಹಿಂದೆ ವೈದಿಕ ಧರ್ಮದ ಅರ್ಥಹೀನ ಕೊಳಕು ಆಚರಣೆಗಳ, ಶೋಷಣೆಯ, ಜೀವಹಿಂಸೆಗಳ ಕ್ರೂರ ಅನುಭವಗಳಿವೆ. ಹಾಗಾಗಿ ಈ ನಿಟ್ಟಿನಲ್ಲಿ ಅಧ್ಯಯನ ಮುಂದುವರೆಸಲು ಸಾಧ್ಯತೆಗಳಿವೆ.

೬. ಈ ಅಧ್ಯಯನದ ಮೂಲಕ ಸಾಹಿತ್ಯ ಕ್ಷೇತ್ರ ಮೆರೆಯುವ ಚಾರಿತ್ರಿಕ ಪ್ರಜ್ಞೆಯ ಸ್ವರೂಪವನ್ನು ಸೂಕ್ಷ್ಮವಾಗಿ ಗುರುತಿಸಲಾಗಿದೆ. ಒಟ್ಟು ಕನ್ನಡದ ವ್ಯಕ್ತಿಚಿತ್ರ ಕವಿತೆಗಳನ್ನು ಸಮಗ್ರವಾಗಿ ವಿವೇಚನೆಗೆ ಒಳಪಡಿಸಿದಾಗ ಕನ್ನಡದ ಸೂಕ್ಷ್ಮ ಮನಸ್ಸುಗಳು ಕಟ್ಟಿಕೊಡುತ್ತಿರುವ ಸಾಂಸ್ಕೃತಿಕ ಚರಿತ್ರೆಯ ಸ್ವರೂಪವನ್ನು ಅರಿಯಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಅಧ್ಯಯನವನ್ನು ಮುಂದುವರಿಸಲು ಸಾಧ್ಯವಿದೆ.

೭. ವ್ಯಕ್ತಿಚಿತ್ರ ಕವಿತೆಗಳಲ್ಲಿ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಈ ನಾಲ್ಕು ವ್ಯಕ್ತಿತ್ವಗಳನ್ನು ಕುರಿತ ಕವಿತೆಗಳಿಗೆ ಪ್ರಸ್ತುತ ಅಧ್ಯಯನವನ್ನು ಮಿತಿಗೊಳಿಸಿಕೊಳ್ಳಲಾಗಿದೆ. ಈ ನಾಲ್ಕೂ ಜನರ ಬಗೆಗೆ ಕವಿತೆ ರಚಿಸದ ಕವಿಯೇ ಇಲ್ಲವೇನೋ ಎಂಬಷ್ಟರ ಮಟ್ಟಿಗೆ ಕವಿತೆಗಳು ಬಂದಿವೆ. ಆಧುನಿಕ ಕನ್ನಡ ಕಾವ್ಯ ಈ ವ್ಯಕ್ತಿತ್ವಗಳನ್ನು ಶೋಧನೆಗೆ ಒಳಪಡಿಸಿರುವ ನೆಲೆಗಳನ್ನು ಅರ್ಥೈಸಿಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಹಾಗಾಗಿ ವ್ಯಕ್ತಿತ್ವ ಶೋಧನೆಯ ನೆಲೆಗಳನ್ನು ವಿಶ್ಲೇಷಣೆ ಮಾಡುವಾಗ ಪ್ರಾತಿನಿಧಿಕವಾಗಿ ಕೆಲವು ಕವಿತೆಗಳನ್ನು ಮಾತ್ರ ಬಳಸಿಕೊಳ್ಳಲಾಗಿದೆ. ಉಳಿದ ಅನೇಕ ಕವಿತೆಗಳು ವಿಶ್ಲೇಷಣೆಯಿಂದ ಹೊರಗೇ ಉಳಿಯುತ್ತವೆ. ಬಿಡಿ ಕವನಗಳ ಅಧ್ಯಯನ ಮಾಡಿದರೆ ಅಧ್ಯಯನ ವಿಸ್ತಾರವಾಗುವುದರ ಜೊತೆಗೆ ಸ್ಪಷ್ಟತೆ ಸಿಗಲಾರದಂತಾಗುತ್ತದೆ. ಹಾಗಾಗಿ ಅನೇಕ ಕವಿತೆಗಳು ಇಲ್ಲಿ ಚರ್ಚಿತವಾಗದೇ ಇದ್ದರೂ ಒಟ್ಟಾರೆಯಾಗಿ ಕನ್ನಡ ಕಾವ್ಯದ ವ್ಯಕ್ತಿತ್ವ ಶೋಧದ ನೆಲೆಗಳನ್ನು ಸಮಗ್ರವಾಗಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

## ಆಕರ ಗ್ರಂಥಗಳು


1. ಅಕಬರ ಅಲಿ ಎಂ, ಅಕಬರ ಅಲಿ ಸಮಗ್ರ ಕಾವ್ಯ,ವೈದ್ಯವಾರ್ತಾ ಪ್ರಕಾಶನ,ಮೈಸೂರು,೨೦೦೬.
2. ಅನುಪಮಾ ಎಚ್.ಎಸ್. (ಸಂ) ಕಾವ್ಯ ಬೋಧಿ -೨೦೧೪, ಕವಿ ಪ್ರಕಾಶನ, ಹೊನ್ನಾವರ ೨೦೧೫
3. ಅನಂತಮೂರ್ತಿ ಯು.ಆರ್. ಹದಿನೈದು ಪದ್ಯಗಳು, ಅಕ್ಷರ ಪ್ರಕಾಶನ, ಸಾಗರ. ೧೯೭೦
4. ಅರವಿಂದ ಮಾಲಗತ್ತಿ, ವಿಶ್ವತೋಮುಖ ಹೂ ಬಲು ಭಾರ, ಸಿರಾ ಪಬ್ಲಿಸಿಂಗ್ ಹೌಸ್, ಮೈಸೂರು, ೨೦೧೦
5. ಆನಂದ ಲಕ್ಕೂರು, ಇತಿ ನಿನ್ನ ವಿಧೇಯನು, ಕಣ್ವ ಪ್ರಕಾಶನ, ಬೆಂಗಳೂರು, ೨೦೧೦
6. ಉಷಾ ಸ. ಹವಳದ ಹಾಡು, ಸಂವಾದ ಪ್ರಕಾಶನ, ಚಿತ್ರದುರ್ಗ. ೨೦೧೫
7. ಎಕ್ಕುಂಡಿ ಸು.ರಂ, ಕಥನ ಕವನಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫
8. ಎಕ್ಕುಂಡಿ ಸು.ರಂ., ಸಮಗ್ರ ಕಾವ್ಯ ಸಂಚಯ, ಬೆಂಗಳೂರು, ೨೦೦೮
9. ಕೃಷ್ಣಕುಮಾರ್ ಸಿ.ಪಿ., ಸಿಪಿಕೆ ಸಮಗ್ರ ಕವಿತೆ, ಸಂವಹನ, ಮೈಸೂರು, ೨೦೦೦
10. ಗೊಗೇರಿ ಎಂ.ಡಿ. ನಿನಾದ ವಿನೋದ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೦೦
11. ಗೋಪಾಲಕೃಷ್ಣ ಅಡಿಗ ಎಂ. ಸಮಗ್ರ ಕಾವ್ಯ ಸಂಪುಟ -೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೦
12. ಗಂಗಾಧರ ಚಿತ್ತಾಲ, ಸಮಗ್ರ ಕಾವ್ಯ, ಗೀತಾ ಬುಕ್ ಹೌಸ್, ಮೈಸೂರು.೧೯೮೫
13. ಗಂಗಾಧರ ಚಿತ್ತಾಲ, ಎಪ್ಪತ್ತೆರಡು ಕವಿತೆಗಳು, ಪ್ರಿಸಮ್ ಬುಕ್ ಪ್ರೈ.ಲಿ. ಬೆಂಗಳೂರು, ೨೦೦೨
14. ಚೆನ್ನಣ್ಣ ವಾಲೀಕಾರ, ಕಥನ ಕವನಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೦.
15. ಚೆನ್ನವೀರ ಕಣವಿ, ಸಮಗ್ರ ಕಾವ್ಯ, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ೧೯೯೬
16. ಚಂದ್ರಶೇಖರ ತಾಳ್ಯ, ಡಾ. ಕುಂಸಿ ಉಮೇಶ್(ಸಂ) ನೆಲದ ತಳಮಳ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೨೦೧೫
17. ಚಂದ್ರಶೇಖರ ಪಾಟೀಲ, ಗಾಂಧೀಸ್ಮರಣೆ, ಮುಂಗಾರು ಪ್ರಕಾಶನ, ಬೆಂಗಳೂರು, ೧೯೭೬
18. ಚಂದ್ರಶೇಖರ ಪಾಟೀಲ, ಹೂವು ಹೆಣ್ಣು ತಾರೆ, ಸಂಕ್ರಮಣ ಪ್ರಕಾಶನ ಧಾರವಾಡ, ೧೯೮೨
19. ಚಂದ್ರಶೇಖರ ಪಾಟೀಲ, ಶಶಿಕಲಾ ವೀರಯ್ಯಸ್ವಾಮಿ (ಸಂ), ಗಾಂಧಿ ಎಂಬುವ ಹೆಸರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. ೧೯೯೮,
20. ಜಯದೇವಿ ತಾಯಿ ಲಿಗಾಡೆ, ತಾಯಿಯ ಪದಗಳು, ವಿಶ್ವ ಕನ್ನಡ ಸಮ್ಮೇಳನ, ಬೆಂಗಳೂರು, ೧೯೮೨
21. ಜಯಪ್ರಕಾಶ್ ಬಂಜಗೆರೆ, ಕಳೆದ ಕಾಲದ ಪ್ರೇಯಸಿಯರಿಗೆ, ರೂಪ ಪ್ರಕಾಶನ ಮೈಸೂರು, ೨೦೦೪
22. ದೊಡ್ಡರಂಗೇಗೌಡ, ಹೊಸಹೊನಲು, ಸಾಹಿತ್ಯ ಸುಗಿ ಪ್ರಕಾಶನ ಬೆಂಗಳೂರು, ೨೦೦೯
23. ನರಸಿಂಹಸ್ವಾಮಿ ಕೆ.ಎಸ್., ಮಲ್ಲಿಗೆಯ ಮಾಲೆ, ಲಿಪಿ ಮುದ್ರಣ, ಬೆಂಗಳೂರು,
24. ನರಸಿಂಹಾಚಾರ್ ಪು.ತಿ, ಸಮಗ್ರ ಕವನಗಳು, ಲಿಪಿ ಪ್ರಕಾಶನ, ಬೆಂಗಳೂರು, ೧೯೮೮
25. ನಾಗಭೂಷಣಸ್ವಾಮಿ ಓ. ಎಲ್., ಕನ್ನಡಕ್ಕೆ ಬಂದ ಕವಿತೆ, ನೆಲಮನೆ ಪ್ರಕಾಶನ, ಬೆಂಗಳೂರು, ೨೦೦೦
26. ನಿಸಾರ್ ಅಹಮದ್ ಕೆ.ಎಸ್., ಸಮಗ್ರ ಕಾವ್ಯ, ಶ್ರೀಯುತ ತರಳಬಾಳು ಜಗದ್ಗುರು ಬೃಹನ್ಮಠ, ಚಿತ್ರದುರ್ಗ, ೧೯೯೧
27. ನಿಸಾರ್ ಅಹಮದ್ ಕೆ.ಎಸ್. ವ್ಯಕ್ತಿಪರ ಕವನಗಳು, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೩
28. ನೇಮಿಚಂದ್ರ (ಸಂ) ಬೆಳೆಗೆರೆ ಜಾನಕಮ್ಮ, ಕರ್ನಾಟಕ ಲೇಖಕಿಯರ ಸಂಘ, ೧೯೮೮
29. ಪಾವನ ಎಸ್. ಅಲೆಮಾರಿ ಮೀರ, ಭೂಮಿ ಪ್ರಕಾಶನ, ಬೆಂಗಳೂರು, ೨೦೧೬
30. ಪುಷ್ಪ ಎಚ್.ಎಲ್., ಅಮೃತಮತಿ ಸ್ವಗತ, ವಿಶ್ರುತ ಮುದ್ರಣಾಲಯ, ಬೆಂಗಳೂರು. ೧೯೯೨
31. ಪುಷ್ಪ ಎಚ್.ಎಲ್., ಗಾಜುಗೋಳ, ಶಕ್ತಿ ಮುದ್ರಣಾಲಯ, ಬೆಂಗಳೂರು. ೧೯೯೯
32. ಪ್ರತಿಭಾ ನಂದಕುಮಾರ್, ಮುನ್ನುಡಿ ಬೆನ್ನುಡಿಗಳ ನಡುವೆ, ಮಹಿಳಾ ಸಾಹಿತ್ಯಿಕ, ಹುಬ್ಬಳ್ಳಿ , ೨೦೦೬
33. ಬರಗೂರು ರಾಮಚಂದ್ರಪ್ಪ (ಸಂ), ಬಂಡಾಯ ಕಾವ್ಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೯೦
34. ಬರಗೂರು ರಾಮಚಂದ್ರಪ್ಪ, ಕಾಂಟೆಸಾದಲ್ಲಿ ಕಾವ್ಯ, ಅಂಕಿತ ಪ್ರಕಾಶನ, ಬೆಂಗಳೂರು,೨೦೦೧
35. ಬೈರಪ್ಪ ಎಂ. ಕುಪ್ನಳ್ಳಿ, ಪುಷ್ಪಲತಾ ಎಚ್. ಎನ್.,(ಸಂ) ಬುದ್ಧನಗೆಯ ತಾಯಿನದಿ, ಉಷಾ ಪ್ರಕಾಶನ, ಮೈಸೂರು ೨೦೦೮
36. ಭಟ್ಟ ವಿ.ಜಿ., ಮರಳಿ ಬಂದ ಕವಿತೆ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೫
37. ಮರುಳಯ್ಯ ಸಾ.ಶಿ. ಸಮಗ್ರ ಕಾವ್ಯ, ಸಪ್ನ ಬುಕ್ ಹೌಸ್, ಬೆಂಗಳೂರು, ೧೯೮೫

